# ನಾಗಾಭಿನಂದನ

(ಶ್ರೀ ಎಂ.ಜಿ. ನಾಗರಾಜ್ ಅವರಿಗೆ ಅರ್ಪಿಸಿದ ಅಭಿನಂದನ ಗ್ರಂಥ)



ಸಂಪಾದಕರು

ಡಾ|| ಎಚ್. ಎಸ್. ಗೋಪಾಲರಾವ್

ಪ್ರಕಾಶಕರು

ಎಂ.ಜಿ. ನಾಗರಾಜ್ ಅಭಿನಂದನ ಸಮಿತಿ

ಬೆಂಗಳೂರು

NAGABHINANDANA

A Felicitation Volume Presented to Sri M. G. Nagaraj

First Edition : May 1994,
Pages : xvi + 344 + 16 page photoes
Price : Rs. 100-00

Edited by : Dr. H. S. Gopala Rao

Published by : Sri M. G. Nagaraj Felicitation Commitee
798, 'Keerthi', 6th Cross, IV Main
Hanumanthanagara, Bangalore-560 019



ಮೊದಲನೆಯ ಮುದ್ರಣ : ೧೯೯೪

**ಬೆಲೆ : ರೂ. ೧೦೦-೦೦**

ಮುದ್ರಣ :
**ಲಕ್ಷ್ಮಿ ಮುದ್ರಣಾಲಯ**
ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮
ದೂರವಾಣಿ : ೬೬೧೩೧೨೩




## ಶ್ರೀ ಎಂ. ಜಿ. ನಾಗರಾಜ್ ಅಭಿನಂದನ ಸಮಿತಿ

ಅಧ್ಯಕ್ಷರು : **ಡಾ|| ಸೂರ್ಯನಾಥ ಕಾಮತ್**

ಉಪಾಧ್ಯಕ್ಷರು : **ಡಾ|| ಡಿ. ವಿ. ದೇವರಾಜ್**
**ಶ್ರೀ ಅಶೋಕ್ ಕುಮಾರ್**

ಕೋಶಾಧಿಕಾರಿ : **ಶ್ರೀ ಎಂ. ಬಿ. ಪಾಟೀಲ್**

ಕಾರ್ಯದರ್ಶಿಗಳು : **ಶ್ರೀ ಶಿ. ವೀ. ಮನ್ನಾಚಾರ್**
**ಶ್ರೀ ಬೈರಮಂಗಲ ರಾಮೇಗೌಡ**

'ನಾಗಾಭಿನಂದನ' ಸಂಪಾದಕ : **ಡಾ|| ಎಚ್. ಎಸ್. ಗೋಪಾಲರಾವ್**

### ಸಮಿತಿಯ ಸದಸ್ಯರುಗಳು

ಡಾ|| ಎಸ್. ಎಲ್. ತಿಮ್ಮಯ್ಯ
ಡಾ|| ಎಂ. ಎಸ್. ಕೃಷ್ಣಮೂರ್ತಿ
ಶ್ರೀ ಅಲ್ಲ ಚಿರಂಜೀವಿ
ಶ್ರೀ ಕೆ. ಬಿ. ಶಿವತಾರಕ್
ಡಾ|| ದೇವರಕೊಂಡಾರೆಡ್ಡಿ
ಶ್ರೀ ಜಿ. ವಿ. ಶಿವಸ್ವಾಮಿ
ಶ್ರೀಮತಿ ನಾ. ನಂಜಮ್ಮ
ಡಾ|| ಎಂ. ಜಿ. ಚಂದ್ರಕಾಂತ್
ಡಾ|| ಎಚ್. ಆರ್. ರಘುನಾಥ ಭಟ್
ಡಾ|| ರು. ಮ. ಷಡಕ್ಷರಯ್ಯ
ಡಾ|| ಬಿ. ನಂಜುಂಡಸ್ವಾಮಿ
ಶ್ರೀ ಬಿ. ರಾಜಶೇಖರಪ್ಪ
ಶ್ರೀ ಎಲ್. ನರಸಿಂಹಯ್ಯ
ಶ್ರೀ ಲಕ್ಷ್ಮಣ್ ತೆಲಗಾವಿ
ಶ್ರೀ ತಾ. ನಂ. ಕುಮಾರಸ್ವಾಮಿ
ಶ್ರೀಮತಿ ಶಾಂತಾಬಾಯಿ





# ಮುನ್ನುಡಿ

ಮಿತ್ರರಾದ ಎಂ. ಜಿ. ನಾಗರಾಜರ ಪರಿಚಯು ನನಗೆ ಕಾಲು ಶತಮಾನ ಗಳಷ್ಟು ಹಳೆಯದು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ, ಮುಖ್ಯವಾಗಿ ಶಾಸನ ತರಗತಿ ಗಳಿಗೆ ಸಂಬಂಧಿಸಿ ಅವರ ಪರಿಚಯುವಾಯಿತು. ಅವರು ಪದವಿ ಪೂರ್ವ ಕಾಲೇಜಿನ ಗಣಿತದ ಅಧ್ಯಾಪಕರು ಎಂದು ನನಗೆ ತಿಳಿದೇ ಇರಲಿಲ್ಲ. ಮತ್ತು ಉತ್ತಮ ಅಧ್ಯಾಪಕರೆಂಬ ಕೀರ್ತಿಯು ಪ್ರಚಾರವೂ ಗೊತ್ತಿರಲಿಲ್ಲ. ಅಲ್ಲದೆ ಗಣಿತದ ಅಧ್ಯಾಪಕ ರಾಗಿ ಮನೆಪಾಠಗಳನ್ನು ನಡೆಸಿ ಲಕ್ಷಾಂತರ ಹಣ ಸಂಪಾದಿಸುವ ಅವಕಾಶ ಕೈಬಿಟ್ಟು, ಸಾಹಿತ್ಯ, ಕನ್ನಡದ ಕೆಲಸ, ಶಾಸನಗಳ ಅಧ್ಯಯನ, ಇತಿಹಾಸ ಶೋಧನೆಯುಲ್ಲಿ ತೊಡಗಿರುವುದಂತೂ ಅಚ್ಚರಿಯ ವಿಷಯ. ವರ್ಗಾವಣೆ ಹೊಂದುತ್ತ ಇರುವ ಸರಕಾರೀ ನೌಕರಿಯಲ್ಲಿ ಇದ್ದ ಅವರು ಹೋದಲ್ಲೆಲ್ಲ ಕನ್ನಡ ಸಾಹಿತ್ಯಿಕ ಚಟುವಟಿಕೆ, ಶಾಸನ ಅಧ್ಯಯನ, ಸ್ಥಳೀಯ ಇತಿಹಾಸದ ಬಗ್ಗೆ ಅಧ್ಯಯನ ನಡೆಸುತ್ತಿರುವುದು ಹೆಮ್ಮೆಯ, ಅಭಿಮಾನದ ವಿಷಯ. ಕೊಡಗು, ರಾಮನಗರಗಳಲ್ಲಿ ಅವರು ದೀರ್ಘ ಕಾಲ ಇದ್ದರು. ಅಲ್ಲಂತೂ ಅವರು ಮಾಡಿದ ಕೆಲಸ ಅಪಾರ. ಕೊಡಗಿನ ಜಿಲ್ಲಾ ಗ್ಯಾಝೆಟಿಯರ್, ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಝೆಟಿಯರ್‌ಗಳ ರಚನೆ ಯಲ್ಲಿ ಅವರು ಮಾಡಿದ ಹೊಸ ಶೋಧನೆಗಳನ್ನು ನಾವು ಬಳಸಿಕೊಂಡಿದ್ದೇವೆ.

ಈ ಜ್ಞಾನದಾಹ, ಜ್ಞಾನ ಪ್ರಸಾರೋತ್ಸಾಹ, ಕನ್ನಡ ಪ್ರೇಮ ಅಪೂರ್ವ ವಾದದ್ದು. ಕೊಡಗಿನ ಒಂದು ಊರಲ್ಲಿ ಅವರು ಇದ್ದಾಗ ಸ್ಥಾಪಿಸಿದ ಕನ್ನಡ ಸಂಘ ಇಂದೂ ಉತ್ಸಾಹದಿಂದ ಕೆಲಸ ಮಾಡುತ್ತಿದೆ ಎಂದು ಒಬ್ಬ ವೈದ್ಯರು ಆ ಊರಿನಿಂದ ಅಭಿಮಾನ ಪೂರ್ವಕ ಬರೆದಿದ್ದಾರೆ. ಬೆಂಗಳೂರು, ಕೊಡಗು ಜಿಲ್ಲಾ ಸಾಹಿತ್ಯ ಪರಿಷತ್ತುಗಳ ಪದಾಧಿಕಾರಿಯಾಗಿ ದುಡಿದ ಅವರು ಈಗ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳು. ನಾವು ಹೊಸದಾಗಿ ಕರ್ನಾಟಕ ಇತಿಹಾಸ ಅಕಾದೆಮಿ ಆರಂಭಿಸಿದಾಗ ತಮ್ಮ ಶಾಸನ ತರಗತಿಯ ಶಿಷ್ಯ ವೃಂದದೊಂದಿಗೆ ಅಕಾದೆಮಿಗೆ ಬಲ ಒದಗಿಸಿದರು. ಒಮ್ಮೆ ಅಕಾದೆಮಿಯ ಪ್ರಧಾನ ಕಾರ್ಯದರ್ಶಿಗಳಾದರು. ಈಗ ಉಪಾಧ್ಯಕ್ಷರಾಗಿದ್ದಾರೆ. ಶ್ರೀ ಶೈಲ ನಿಡುಮಾಮಿಡಿ ಪೀಠದ ಭಕ್ತರಾಗಿ 'ಮಾಮಿಡಿ' ನಿಯತಕಾಲಿಕದ ಸಂಪಾದಕರಾಗಿ ಗುರು ಸೇವೆ, ಜ್ಞಾನದಾಸೋಹ ಎರಡೂ ಕಾಯಕ ನಡೆಸುತ್ತಿದ್ದಾರೆ.

ತಮ್ಮ ಸಂಶೋಧನೆ, ಬರವಣಿಗೆ, ಜ್ಞಾನ ಪ್ರಸಾರಗಳನ್ನು ಅವರು ನಿಷ್ಠೆ ಯಿಂದ ಮಾಡಿಕೊಂಡು ಬಂದಿದ್ದಾರೆ. ಅದಕ್ಕಾಗಿ ತಮ್ಮ ಜೇಬಿನಿಂದಲೇ ಖರ್ಚು ಮಾಡಿದ್ದಾರೆ. ಬೇರೆಯವರ ಜೇಬಿನ ಕಡೆ ಅವರ ಗಮನ ಇರದು. ಇಂಥ ಪ್ರಾಮಾಣಿಕತೆ ಅಪರೂಪದ್ದು. ಹೀಗಾಗಿ ಅವರನ್ನು ಜನ ನಂಬಿದ್ದಾರೆ. ವಿಶ್ವಾಸ ಇಟ್ಟುಕೊಂಡಿದ್ದಾರೆ. ಅವರಿಗೆ ಸ್ನೇಹಿತರೂ ಅಪಾರ ಸಂಖ್ಯೆಯಲ್ಲಿ ಇದ್ದಾರೆ. ಅವರುಗಳ ಉತ್ಸಾಹ ಸಹಕಾರದಿಂದಲೇ ಈ ಅಭಿನಂದನ ಗ್ರಂಥ ಹೊರ ಬರುತ್ತಿದೆ. ಸತ್ಕಾರ ಸಮಾರಂಭ ನಡೆಯುತ್ತಿದೆ. ಈ ಬಗ್ಗೆ ಕೃತಜ್ಞತೆಯನ್ನು ಸಮಿತಿಯ ಅಧ್ಯಕ್ಷನಾಗಿ ಯಾರಿಗೂ ಸಲ್ಲಿಸಲು ನಾನು ಸಿದ್ಧನಿಲ್ಲ. ಏಕೆಂದರೆ ತಮ್ಮ ಕೆಲಸ ವೆಂದು ಈ ಕಾರ್ಯವನ್ನು ವಿಶ್ವಾಸದಿಂದ ಮಾಡಿದ, ಲೇಖನಗಳನ್ನಿತ್ತ, ಧನಸಹಾಯ ಮಾಡಿದವರಿಗೆ ಇರುವ ಮಮತೆಗೆ ಮಾತಿನಿಂದ ಬೆಲೆ ಕಟ್ಟಲಾರೆ. ನಾನು ಅಧ್ಯಕ್ಷ ನೆಪಮಾತ್ರಕ್ಕೆ. ಬಂಡಿ ತಾನೇ ಓಡಿತು. ಚಾಲಕನ ಸ್ಥಾನದಲ್ಲಿ ಒಬ್ಬರಿರ ಬೇಕೆಂದು ನಾನು ಸುಮ್ಮನೆ ಕೂತಿದ್ದೆ. ಕೆಲಸ ತಾನಾಗಿ ಆಯಿತು. ಬಂಡಿ ಗುರಿ ಮುಟ್ಟಿದೆ.

ಪ್ರಿಯ ಎಂ. ಜಿ. ನಾಗರಾಜರ ಬಗ್ಗೆ ಇರುವ ಅವರ ಮಿತ್ರರ, ವಿದ್ವಾಂಸರ ಪ್ರೀತಿ ಇಲ್ಲಿ ಸ್ವಲ್ಪ ಪ್ರಮಾಣದಲ್ಲಿ ಈ ಪ್ರಕಟಣೆಯ ರೂಪದಲ್ಲಿ ಬೆಳಕು ಕಂಡಿದೆ. ಬಂಡಿಯ ಚಾಲಕನೆಂಬ ಅಲಂಕಾರ ನನಗೆ ಸಲ್ಲಲು ಕಾರಣರಾದವರಿಗೆ ಬಂಡಿ ಎಳೆದ ವರಿಗೆ ಈ ಗೌರವ ನನಗೆ ಸಲ್ಲುವಂತಾದ ಬಗ್ಗೆ ನನ್ನ ಕೃತಜ್ಞತೆ.

೧೪–೫–೧೯೯೪ —ಸೂರ್ಯನಾಥ ಕಾಮತ್

# ಸಂಪಾದಕರ ನುಡಿ

ಶ್ರೀ ಎಂ. ಜಿ. ನಾಗರಾಜ್ ಅವರ ಪರಿಚಯ ನನಗೆ ಸುಮಾರು ಇಪ್ಪತ್ತು ವರ್ಷಗಳಷ್ಟು ಹಳೆಯದು. ಶ್ರೀಯುತರು ಬೆಂಗಳೂರು ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿದ್ದಾಗ ಅವರೊಟ್ಟಿಗೆ ಜಿಲ್ಲಾ ಸಮಿತಿಯಲ್ಲಿದ್ದು, ಹಲವಾರು ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸಿದ ನೆನಪಿದೆ. ಅವರೊಡನೆ ಕೆಲಸ ಮಾಡುವುದು ಹೆಮ್ಮೆಯ ವಿಷಯ. ನಾನು ಪರಿಚಯವಾದಾಗ ಅವರು ರಾಮನಗರದ ಕಿರಿಯ ಕಾಲೇಜಿನಲ್ಲಿ ಗಣಿತಶಾಸ್ತ್ರದ ಉಪನ್ಯಾಸಕರಾಗಿದ್ದರು. ಉಪನ್ಯಾಸಕ ವೃತ್ತಿಗೂ ಹಾನಿ ಬರದಂತೆ ಸೇವೆ ಸಲ್ಲಿಸುತ್ತಾ ಕನ್ನಡ ಸಾಹಿತ್ಯ ಪರಿಷತ್ತಿನ ಬೆಂಗಳೂರು ಜಿಲ್ಲಾ ಸಮಿತಿಯ ಮೂಲಕ ಸಾಹಿತ್ಯ ಸೇವೆಯನ್ನೂ ಸಾರ್ಥಕವಾಗಿಯೇ ಮಾಡಿದರು.

ಕನ್ನಡ ಸಾಹಿತ್ಯ ಪರಿಷತ್ತು ಆರಂಭಿಸಿದ ಶಾಸನಶಾಸ್ತ್ರ ತರಗತಿಗಳಲ್ಲಿ ಶ್ರೀಯುತರು ನನ್ನ ಸಹಪಾಠಿಗಳೂ ಆದರು. ಅನಂತರವಂತೂ ನನ್ನ ಆಪ್ತ ವಲಯದಲ್ಲಿ ಅವರೂ ಒಬ್ಬರಾದರು. ನನ್ನಂತಹ ಆಪ್ತರು ಅವರಿಗೆ ನೂರಾರು ಜನ. ಉಪನ್ಯಾಸಕರಾಗಿ ಹಲವಾರು ಶಿಷ್ಯರ ಅಚ್ಚುಮೆಚ್ಚಿನವರಾಗಿದ್ದುದು ಸಹಜವೇ ಆಗಿತ್ತು. ಅನೇಕ ಶಿಷ್ಯರ ಪ್ರೀತಿಯ ಉಪಾಧ್ಯಾಯರಾಗಿ, ಹಲವಾರು ಸಂಘ–ಸಂಸ್ಥೆಗಳ ಮೂಲಕ ಸಂಘಟಕರಾಗಿ ನೂರಾರು ಜನ ಆತ್ಮೀಯ ಸ್ನೇಹಿತರನ್ನು ಪಡೆದ ಸಜ್ಜನರಾಗಿ, ಶಾಸನಶಾಸ್ತ್ರದ ಅಧ್ಯಯನದಿಂದ ಉತ್ತಮ ಸಂಶೋಧಕರಾಗಿ ಜೊತೆಗೆ ಕವಿಯಾಗಿ, ವಿಮರ್ಶಕರಾಗಿ ಹೆಸರು ಮಾಡಿರುವ ಶ್ರೀ ಎಂ. ಜಿ. ನಾಗರಾಜ್ ಅವರನ್ನು ಅಭಿನಂದಿಸಿ, ಆ ಸಂಬಂಧ ಒಂದು ಅಭಿನಂದನಾ ಗ್ರಂಥವನ್ನು ಪ್ರಕಟಿಸಬೇಕೆಂಬ ಉದ್ದೇಶ ಅವರ ಹಲವಾರು ಮಿತ್ರರಿಗೆ ಬಹಳ ದಿನಗಳಿಂದಲೂ ಇತ್ತು. ೧೯೮೦ರ ಆರಂಭದಲ್ಲೇ ಆ ಸಂಬಂಧವಾಗಿ ಒಂದು ಅಭಿನಂದನ ಸಮಿತಿಯ ರಚನೆಯೂ ಆಗಿ, ಅಭಿನಂದನಾ ಗ್ರಂಥ 'ನಾಗಾಭಿನಂದನ'ದ ಸಂಪಾದಕತ್ವದ ಹೊಣೆಯನ್ನು ನನಗೆ ವಹಿಸಲಾಯಿತು. ಅತ್ಯಂತ ಸಂತೋಷದಿಂದ ಒಪ್ಪಿಕೊಂಡ ಸಂಪಾದಕತ್ವದ ಹೊಣೆಗಾರಿಕೆಯನ್ನು ವಿಳಂಬವಾಗಿಯಾದರೂ ಪೂರ್ಣಗೊಳಿಸಿದ ತೃಪ್ತಿ ನನ್ನ ಪಾಲಿಗಿದೆ. ಈ ಮಾತಿಗೊಂದು ಹಿನ್ನೆಲೆಯಿದೆ. ಈ ಮೊದಲೇ ಹೇಳಿದಂತೆ ಶ್ರೀ ಎಂ. ಜಿ. ನಾಗರಾಜ್ ಅಭಿನಂದನ ಸಮಿತಿ ೧೯೮೦ರಲ್ಲೇ ರೂಪು

ಗೊಂಡರೂ, ಸಂಪಾದಕನ ಕಾರ್ಯ ಆ ತರುಣದಲ್ಲೇ ಆರಂಭವಾದರೂ, ಅಭಿನಂದನ ಸಮಿತಿ ಪ್ರಮುಖವಾದ ಕೆಲವು ಬದಲಾವಣೆಗಳೊಂದಿಗೆ ಚುರುಕಾದದ್ದು ೧೯೯೩ರ ಕೊನೆಯ ಭಾಗದಲ್ಲಿ ; ಆರಂಭದಲ್ಲಿ ಹುರುಪಿನಿಂದ ನೇತೃತ್ವವಹಿಸಿದ, ಅಭಿನಂದನೆಯ ಕಲ್ಪನೆಯನ್ನು ಕೇವಲ ಮಾತುಗಳಲ್ಲಿ ಬಂಧಿಸಿಡಲು ಪ್ರಯತ್ನಿಸಿದ ಮಿತ್ರರು ನಂತರ ತಮ್ಮದೇ ಆದ ಸಬೂಬುಗಳೊಂದಿಗೆ ಕೈಚೆಲ್ಲಿ ದೂರವಾದರು. ಆದರೆ ಸಂಪಾದಕನ ಜವಾಬ್ದಾರಿ ಹೊತ್ತಿದ್ದ ನಾನು ಮಿತ್ರರ ಮಾತನ್ನು ನಂಬಿ, ಹಲವಾರು ವಿದ್ವಾಂಸರಿಗೆ ಲೇಖನಗಳಿಗಾಗಿ ಪತ್ರ ಬರೆದಿದ್ದೆ. ಅನೇಕರು ವಿಶ್ವಾಸದಿಂದ ನಿಗದಿತ ಅವಧಿಗೆ ಮೊದಲೇ ಲೇಖನಗಳನ್ನೂ ಕಳುಹಿಸಿದ್ದರು. ಹಾಗೆ ಇಪ್ಪತ್ತಕ್ಕೂ ಹೆಚ್ಚು ಲೇಖನಗಳು ಸಂಗ್ರಹವಾಗಿದ್ದುವು. 'ನಾಗಾಭಿನಂದನ'ದ ಪ್ರಕಟಣ ಕಾರ್ಯ ವಿಳಂಬವಾಯಿತು. ಲೇಖನಗಳನ್ನು ಕಳುಹಿಸಿದ್ದ ಕೆಲವು ವಿದ್ವಾಂಸರು, ಭೇಟಿಯಾದಾಗ ಗ್ರಂಥ ಪ್ರಕಟಣೆ ಮತ್ತೂ ವಿಳಂಬವಾಗುವುದಾದರೆ ಲೇಖನಗಳನ್ನು ಹಿಂದಿರುಗಿಸುವಂತೆ ಕೋರಿದರು. ಅಭಿನಂದನ ಸಮಿತಿಯ ನೇತಾರರಾಗಿ ಸ್ವಯಂ ಪ್ರೇರಿತರಾಗಿ ಮುಂದೆ ಬಂದಿದ್ದ ಮಿತ್ರರನ್ನು ಸಂಪರ್ಕಿಸುವ ಪ್ರಯತ್ನ ನಡೆಯಿತು. ಅವರು ಅದಕ್ಕೆ ಹಾರ್ದಿಕವಾಗಿ ಸ್ಪಂದಿಸಲಿಲ್ಲ. ಹೇಗಾದರೂ 'ನಾಗಾಭಿನಂದನ'ದ ಪ್ರಕಟಣೆ ಮತ್ತು ಅಭಿನಂದನಾ ಕಾರ್ಯ ನಡೆಯಲೇಬೇಕೆಂದು ಸಮಿತಿಯಲ್ಲಿ ಉಳಿದಿದ್ದ ಇನ್ನಿಬ್ಬರು ಗೆಳೆಯರ ಜೊತೆ ಚರ್ಚಿಸಿ, ಡಾ|| ಸೂರ್ಯನಾಥ ಕಾಮತ್ ಅವರನ್ನು ಅಭಿನಂದನಾ ಸಮಿತಿಯ ಅಧ್ಯಕ್ಷರಾಗಿರಲು ಕೋರಲಾಯಿತು. ಅಧ್ಯಕ್ಷರಾಗಿರಲು ಸಂತೋಷದಿಂದ ಒಪ್ಪಿದ ಡಾ|| ಕಾಮತ್ ಅವರು ಸಮಿತಿಯ ಕೆಲಸಗಳನ್ನು ಯಶಸ್ವಿಗೊಳಿಸಿದ್ದಾರೆ. ಕೈ ಹಾಕಿದ ಯಾವುದೇ ಕೆಲಸ ಅರ್ಧಾಂತರವಾಗಬಾರದೆಂಬುದು ಅವರ ನಿರೀಕ್ಷೆ. ಅವರ ನಿರೀಕ್ಷೆ ಸುಳ್ಳಾಗಲಿಲ್ಲ. ಅವರ ಅಧ್ಯಕ್ಷತೆ ಮತ್ತು ಮಾರ್ಗದರ್ಶನದಲ್ಲಿ ಚುರುಕಾಗಿ ಕೆಲಸ ನಡೆದು 'ನಾಗಾಭಿನಂದನ' ನಿಮ್ಮ ಕೈ ತಲುಪಿದೆ.

ನಾಗಾಭಿನಂದನದಲ್ಲಿ ಮೂವತ್ತೊಂದು ಲೇಖನಗಳಿವೆ. ಇವುಗಳಲ್ಲಿ ಇಪ್ಪತ್ತಕ್ಕೂ ಹೆಚ್ಚು ಲೇಖನಗಳು ನನ್ನ ಕೈ ತಲುಪಿ ಸುಮಾರು ಮೂರು ವರ್ಷಗಳಾಗಿವೆ. ಲೇಖಕರು ಬೇರೆಲ್ಲೂ ಈ ಲೇಖನಗಳನ್ನು ಪ್ರಕಟಣೆಗೆ ನೀಡದೆ 'ನಾಗಾಭಿನಂದನ'ಕ್ಕಾಗಿ ನೀಡಿ ಸಹಕರಿಸಿದ್ದಾರೆ. ಅವರೆಲ್ಲರಿಗೂ ನಾನು ಋಣಿಯಾಗಿದ್ದೇನೆ. ಕೊನೆಯ ಹಂತದಲ್ಲಿ ಸಕಾಲಕ್ಕೆ ಲೇಖನಗಳನ್ನು ಕಳುಹಿಸಿ ಸಹಕರಿಸಿದ ವಿದ್ವಾಂಸರೆಲ್ಲರಿಗೂ ಆಭಾರಿಯಾಗಿದ್ದೇನೆ. ಕೆಲವು ಗೆಳೆಯರು ಕಳುಹಿಸಿದ ಲೇಖನ ವಿಳಂಬವಾಗಿ ನನ್ನ ಕೈಸೇರಿದ್ದರಿಂದ ಮತ್ತು ಆ ವೇಳೆಗೆ ಮುದ್ರಣ ಕಾರ್ಯ ತೀವ್ರಗತಿಯಲ್ಲಿ ಮುನ್ನಡೆದಿದ್ದರಿಂದ ಲೇಖನಗಳ ವರ್ಗೀಕರಣಕ್ಕೆ ತೊಂದರೆಯಾಯಿತಾದರೂ, ಓದುಗರು ಅದಕ್ಕಾಗಿ ನನ್ನನ್ನು ಕ್ಷಮಿಸಬೇಕೆಂದು ಕೋರುತ್ತೇನೆ.

ಪ್ರಾಗಿತಿಹಾಸ ಕಾಲದ ಅಧ್ಯಯನದಿಂದ (ಶ್ರೀ ಕೆ. ಬಿ. ಶಿವತಾರಕ್), ಚಳ್ಳಕೆರೆ ತಾಲ್ಲೂಕಿನ ಹಸ್ತಪ್ರತಿ ದಾಖಲೆಯೊಂದರವರೆಗೆ (ಶ್ರೀ ಲಕ್ಷ್ಮಣ್ ತೆಲಗಾವಿ) ಐತಿಹಾಸಿಕ ಅಂಶಗಳ ವಿಶ್ಲೇಷಣೆ ನಡೆದಿದೆ. ಋಗ್ವೇದ ಕಾಲದ ಆರ್ಥಿಕ ವ್ಯವಸ್ಥೆ (ಶ್ರೀ ಅಳ್ಲ ಚಿರಂಜೀವಿ) ಯನ್ನು ಕುರಿತ ಲೇಖನವೂ ಇಲ್ಲಿ ಸೇರ್ಪಡೆಯಾಗಿದೆ. ಶ್ರೀ ಎಂ. ಜಿ. ನಾಗರಾಜರಿಗೆ ಪ್ರಿಯವಾದ ಶಾಸನಶಾಸ್ತ್ರಕ್ಕೆ ಸಂಬಂಧಿಸಿದಂತೆ ಈ ಅಭಿನಂದನ ಗ್ರಂಥದಲ್ಲಿ ಹೆಚ್ಚಿನ ಸಂಖ್ಯೆಯ ಲೇಖನಗಳಿವೆ. ವಾಸ್ತು ಮತ್ತು ಶಿಲ್ಪಗಳಿಗೆ ಸಂಬಂಧಿಸಿದ ಸುದೀರ್ಘ ಲೇಖನಗಳಿಲ್ಲಿವೆ. ಕೋಟೆ–ಕೊತ್ತಲಗಳಿಗೆ ಸಂಬಂಧಿಸಿದ ಲೇಖನವನ್ನು ಡಾ|| ರು. ಮ. ಷಡಕ್ಷರಯ್ಯ ಒದಗಿಸಿದ್ದಾರೆ. ಜಾನಪದವನ್ನು ಕುರಿತ ಮೂರು ಉತ್ತಮ ಲೇಖನಗಳನ್ನು ನೀಡಿದ ವಿದ್ವಾಂಸರು ತಾಳ್ಮೆಯಿಂದ ನನ್ನೊಡನೆ ಸಹಕರಿಸಿದ್ದಾರೆ. ಹರಿದಾಸ ಸಾಹಿತ್ಯ ಮತ್ತು ಪ್ರೇಮ ಕಾವ್ಯಗಳೂ ಈ ಸಂಪುಟದಲ್ಲಿ ವಿಶ್ಲೇಷಣೆಗೆ ಒಳಗಾಗಿವೆ. ವಿಜಯನಗರಕ್ಕೆ ಸಂಬಂಧಿಸಿದ ಮೂರು ಬಹು ಮುಖ್ಯ ಲೇಖನಗಳು ಈ ಸಂಪುಟದಲ್ಲಿವೆ. ನಾಗಾಭಿ ನಂದನಕ್ಕೆ ಕಾರಣಕರ್ತರಾದ ಶ್ರೀ ಎಂ. ಜಿ. ನಾಗರಾಜ್ ಅವರನ್ನು ಕುರಿತ ಮೂರು ಲೇಖನಗಳು ಇಲ್ಲಿವೆ. ಇವುಗಳಲ್ಲಿ 'ನಾ ಕಂಡ ನಾಗರಾಜ್' ಲೇಖನದ ಕರ್ತೃ, ಕೊಡಗಿನ ಶ್ರೀ ಜಿ. ಯದುಮಣಿ ಈಗ ಇಲ್ಲ. 'ನಾಗಾಭಿನಂದನ'ದ ಬಗೆಗೆ ಅತ್ಯಂತ ಪ್ರೀತಿ ಇಟ್ಟಿದ್ದ ಶ್ರೀ ಜಿ. ಯದುಮಣಿ ಅವರಿಗೆ ಅತ್ಯಂತ ಕೃತಜ್ಞತೆಯಿಂದ ನಮನ ಸಲ್ಲಿಸುತ್ತೇನೆ.

ನಾಡಿನ ಹಿರಿಯ ವಿದ್ವಾಂಸರಾದ ಡಾ|| ಜಿ. ಎಸ್. ದೀಕ್ಷಿತ್, ಡಾ|| ಬಾ. ರಾ. ಗೋಪಾಲ್, ಡಾ|| ಸೂರ್ಯನಾಥ ಕಾಮತ್ ಮುಂತಾದವರು ಲೇಖನಗಳನ್ನು ನೀಡಿ 'ನಾಗಾಭಿನಂದನ'ದ ಮೌಲ್ಯವನ್ನು ಹೆಚ್ಚಿಸಿದ್ದಾರೆ. ಅವರೆಲ್ಲರಿಗೂ ಗೌರವ ಸಲ್ಲಿಸುವುದು ನನ್ನ ಕರ್ತವ್ಯವಾಗಿದೆ.

ಶ್ರೀ ಎಂ. ಜಿ. ನಾಗರಾಜ್ ಅಭಿನಂದನ ಸಮಿತಿಯಲ್ಲಿ ಮೊದಲಿನಿಂದಲೂ ನನ್ನೊಡನಿರುವ ಶ್ರೀ ಅಶೋಕ್ ಕುಮಾರ್, ಶ್ರೀ ಶಿ. ವೀ. ಮನ್ವಾಚಾರ್ ಮತ್ತು ಬೈರಮಂಗಲ ರಾಮೇಗೌಡ ಅವರುಗಳು ಅಭಿನಂದನ ಕಾರ್ಯ ನಿಲ್ಲದಿರಲು ನೆರವು ನೀಡಿದ್ದಾರೆ.

'ನಾಗಾಭಿನಂದನ'ಕ್ಕೆ ಲೇಖನಗಳನ್ನು ನೀಡಿ ಸಹಕರಿಸುತ್ತಿರುವ ಎಲ್ಲ ವಿದ್ವಾಂಸರಿಗೆ ಮತ್ತು ಮಿತ್ರರಿಗೆ ನಾನು ಕೃತಜ್ಞನಾಗಿದ್ದೇನೆ. ಅಭಿನಂದನ ಸಮಿತಿಯ ಉಪಾಧ್ಯಕ್ಷರಲ್ಲಿ ಒಬ್ಬರಾಗಿದ್ದು, 'ನಾಗಾಭಿನಂದನ'ದ ಕಾರ್ಯದಲ್ಲಿ ಅತ್ಯಂತ ಪ್ರೀತಿ ಮತ್ತು ವಿಶ್ವಾಸಗಳಿಂದ, ವ್ಯವಹಾರವನ್ನು ದೂರವಾಗಿಟ್ಟು

ಜವಾಬ್ದಾರಿಯುತವಾಗಿ ನೆರವಾಗಿರುವ ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ್ ಕುಮಾರ್ ಅವರಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ. ಅವರ ಒತ್ತಾಸೆಯಿಲ್ಲದಿದ್ದರೆ ಬಹುತೇಕ 'ನಾಗಾಭಿನಂದನ' ಹೊರಬರುತ್ತಿರಲಿಲ್ಲ. ಲಕ್ಷ್ಮಿ ಮುದ್ರಣಾಲಯದ ಸಿಬ್ಬಂದಿಯಂತೂ 'ನಾಗಾಭಿನಂದನ' ತಮ್ಮ ಸ್ವಂತದ್ದೆನ್ನುವಂತೆ ಕಾರ್ಯನಿರ್ವಹಿಸಿದ್ದಾರೆ. ಆ ನಿಟ್ಟಿನಲ್ಲಿ ಮುದ್ರಣಾಲಯದ ವ್ಯವಸ್ಥಾಪಕರಾದ ಶ್ರೀ ವೆಂಕಟೇಶ್ ಅವರ ಪಾತ್ರ ಮೆಚ್ಚುವಂತಹುದು.

ಶ್ರೀ ಎಂ. ಜಿ. ನಾಗರಾಜ್ ಅಭಿನಂದನ ಸಮಿತಿಯ ಎಲ್ಲಾ ಸದಸ್ಯರೂ 'ನಾಗಾಭಿನಂದನ'ಕ್ಕಾಗಿ ವಿಶೇಷವಾಗಿ ಶ್ರಮಿಸಿದ್ದಾರೆ. ಅವರಲ್ಲಿ ರಾಮನಗರದ ಖ್ಯಾತ ವೈದ್ಯರಾದ ಶ್ರೀ ಎಸ್. ಎಲ್. ತಿಮ್ಮಯ್ಯ ಅವರನ್ನು ವಿಶೇಷವಾಗಿ ನೆನೆಯಬೇಕಾಗಿದೆ. 'ನಾಗಾಭಿನಂದನ'ದ ಮುದ್ರಣ ಅಂತಿಮ ಹಂತದಲ್ಲಿದ್ದಾಗ ನೆರವಿಗೆ ಬಂದ ಹಲವಾರು ಮಹನೀಯರು, 'ನಾಗಾಭಿನಂದನ'ವನ್ನು ಪ್ರಕಟಣಪೂರ್ವ ಖರೀದಿಸಿದ ವಿಶ್ವಾಸಿಗಳಿಗೆ, ಶ್ರೀ ಜಿ. ಎಸ್. ಕುಮಾರಸ್ವಾಮಿ, ಶ್ರೀ ಚಿಕ್ಕಪ್ಪಾಜಿ, ಡಾ|| ಎಂ. ಜಿ. ಚಂದ್ರಕಾಂತ್ ಮುಂತಾದ ಉದಾರಿಗಳಿಗೆ ಗೌರವಪೂರ್ವಕ ಧನ್ಯವಾದಗಳನ್ನು ಸಲ್ಲಿಸುವುದು ನನ್ನ ಕರ್ತವ್ಯವಾಗಿದೆ.

ನಮ್ಮ ಎಲ್ಲಾ ಕೆಲಸಗಳಿಗೂ ಆಶೀರ್ವದಿಸಿದ ಸಿದ್ದವನಹಳ್ಳಿ ಸಂಸ್ಥಾನದ ಪೂಜ್ಯ ಸ್ವಾಮೀಜಿದ್ವಯರಿಗೆ ಮತ್ತು ಸಮಿತಿಯ ಅಧ್ಯಕ್ಷತೆ ವಹಿಸಿ ಕಾರ್ಯವನ್ನು ಸುಸೂತ್ರವಾಗಿ ಈಡೇರಿಸಿದ ಡಾ|| ಸೂರ್ಯನಾಥ ಕಾಮತ್ ಅವರಿಗೆ ಹೃತ್ಪೂರ್ವಕ ನಮನಗಳು.

'ನಾಗಾಭಿನಂದನ' ನಿಮ್ಮನ್ನು ತಲುಪಿದೆ. ಶ್ರೀ ಎಂ. ಜಿ. ನಾಗರಾಜ್ ಅವರು ಈ ಮೂಲಕ ಸದಾ ನಿಮ್ಮವರಾಗಿರಲಿ.

'ಸ್ವಸ್ತಿಶ್ರೀ ಸ್ಥಳ' —ಡಾ|| ಎಚ್. ಎಸ್. ಗೋಪಾಲರಾವ್
ಅರಿಶಿನಕುಂಟೆ ಸಂಪಾದಕ
ನೆಲಮಂಗಲ ತಾಲ್ಲೂಕು–೫೬೨ ೧೨೩




# ಪರಿವಿಡಿ



ಶ್ರೀ ಎಂ.ಜಿ. ನಾಗರಾಜ್ ಮತ್ತು ಶ್ರೀಮತಿ ಸುಲೋಚನಾ ನಾಗರಾಜ್



ಮಗ–ಸೊಸೆ, ಮಗಳು–ಅಳಿಯ ಮತ್ತು ಮೊಮ್ಮಕ್ಕಳ ಜೊತೆ
ಶ್ರೀ ಎಂ.ಜಿ. ನಾಗರಾಜ್ ದಂಪತಿಗಳು



ಸೋದರ, ಸೋದರಿಯರೊಂದಿಗೆ ಶ್ರೀ ಎಂ. ಜಿ. ನಾಗರಾಜ್



ಕೋಲಾರ ಜಿಲ್ಲೆ ಗೂಳೂರಿನ ಗಡಿನಾಡ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ
ನಿರ್ವಾಹಕರಾಗಿ, 1991



'ಶಿವ – ಶ್ರೀರಾಮ ಗಿರಿ ಕ್ಷೇತ್ರದರ್ಶನ' ಗ್ರಂಥ ಬಿಡುಗಡೆಯ ಸಂದರ್ಭದಲ್ಲಿ ಸನ್ಮಾನ



ಕೊಡಗಿನ ಅಪ್ರಕಟಿತ ಶಾಸನ ಶೋಧನೆಯಲ್ಲಿ, 1990



ಲೇಖನ – 3

ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕು ಬೂದಿಬೆಟ್ಟದಲ್ಲಿ
ದೊರೆತಿರುವ ಬೃಹತ್ ಶಿಲಾಯುಗದ ಕಲ್ಗುಡಿ
'ಕಲ್ಗುಡಿ' ಬೃಹತ್ ಶಿಲಾಯುಗದ ಗೋರಿ, ಬೂದಿಬೆಟ್ಟ

ನೂತನ ಶಿಲಾಯುಧಗಳು
ವೈ.ಎನ್. ಹಳ್ಳಿ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ



ಲೇಖನ – 3

ಚಿತ್ರ – 4 : ಇತಿಹಾಸ ಆರಂಭಕಾಲದ ಮಡಕೆ ಚೂರುಗಳು
ವೈ.ಎನ್. ಹೊಸಕೋಟೆ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ



ಲೇಖನ – 8

ಚಿತ್ರ – 1 : ಆದಿನಾಥ ಬಸದಿ ಜಗಲಿ ಮೇಲಿರುವ ನಿಶಧಿ ಶಾಸನ



ಚಿತ್ರ – 2 : ಆದಿನಾಥ ಬಸದಿ ಮುಂದಿರುವ
ಪಂಚಪರಮೇಷ್ಠಿಯ ಬಿಂಬ



ಲೇಖನ – 9



ಲೇಖನ – 13

ಚಿತ್ರ ೧ : ಅಜ್ಜಂಪುರದಲ್ಲಿ ದೊರೆತ ಒಂದು ತಾಮ್ರಪಟ–ಮುಂಬದಿ



ಚಿತ್ರ ೨ : ಅಜ್ಜಂಪುರದಲ್ಲಿ ದೊರೆತ ಒಂದು ತಾಮ್ರಪಟ – ಹಿಂಬದಿ

(ಛಾಯಾಚಿತ್ರಗಳು :
ಶ್ರೀ ಭವಾನಿ ಸ್ಟುಡಿಯೊ, ಚಿತ್ರದುರ್ಗ)


Nāgēśvara Temple at Mosaḷe
Kalaśa
Ghaṇṭā
Vēdi
Kūṭa
Vēdi
Kanṭaka
Kapōta
Jaṅghā
Bhūmi
Kūṭa
Vēdi
Kanṭaka
Kapōṭa
Chādya
Manjarī
Vēdi
Kanṭaka
Kapōta
Karṇikā
Padmapaṭṭikā
Khuraka
Bhit.

ಲೇಖನ – 21



ಲೇಖನ – 22

ಚಿತ್ರ – 1 : ಹಂಪೆಯ ಹಜಾರರಾಮಸ್ವಾಮಿ ದೇವಾಲಯದ ದೇವೀ ದೇವಾಲಯ

ಚಿತ್ರ – 2 : ವೇದಿಭದ್ರ ಉಪಪೀಠ ಮತ್ತು ತ್ರಿಬಂಧ ಅಧಿಷ್ಠಾನ ಬನ್ನೇರುಘಟ್ಟದ ಚಂಪಕಧಾಮಸ್ವಾಮಿ ದೇವಾಲಯದ ಪ್ರತೋಲಿ



ಗುಡ್ಡಕ್ಕೆ ಹೊಂದಿ ಕಟ್ಟಿದ ಎರಡು ಸುತ್ತು ಕೋಟೆಯ ಉತ್ತರ ನೋಟ

ಕೆಳಗಿನ ಮತ್ತು ಮೇಲಿನ ಎರಡು ಸುತ್ತುಗಳ ಕೋಟೆಗೋಡೆಯ ದಕ್ಷಿಣ ದೃಶ್ಯ
ಹಾಗೂ ಕೆಳಗಿನ ಕೋಟೆ ಗೋಡೆಗೆ ಹೊಂದಿದ ಚರಕನೋಟ



ಮೊದಲ ಸುತ್ತಿನ ಕೋಟೆ ಸುತ್ತಲಿನ ಆಳವಾದ ಕಂದಕ

ಬೃಹದಾಕಾರದ ಪಂಚ ಲೋಹದ ಫಿರಂಗಿಯಲ್ಲಿ ಬಳೆಗಳು – ಹಿಡಿಕೆಗಳು

ಪಂಚಲೋಹದ ಪಿರಂಗಿ ಅದಕ್ಕೆ ಹೊಂದಿದ ಹಿಡಿಕೆಗಳು



ಮೊದಲ ಸುತ್ತಿನ ಕೋಟೆಯ ಪ್ರವೇಶ ದ್ವಾರದ ಬಾಗಿಲು–ಕದ



ಎರಡನೇ ಸುತ್ತಿನ ಕೋಟೆಗೋಡೆಗೆ ಹೊಂದಿರುವ ಮತ್ತು ಇಕ್ಕಟ್ಟಾದ ದಾರಿ
ಎದುರಿನ ಕಟ್ಟಡದ ಗೋಡೆ – ಜಾಲಂಧ್ರಗಳು



ಎರಡನೇ ಸುತ್ತಿನ ಕೋಟೆ ಗೋಡೆ ಒಳಗಿನ ಬಿಜ್ಜಳನ ಅರಮನೆಯ ಹಿಂದಿನ ದೃಶ್ಯ.
ಇದು ಈಗ ಕರ್ನಾಟಕ ಸರ್ಕಾರದ ಮ್ಯೂಜಿಯಂ ಆಗಿದೆ.



ರಾಜಮಹಲಿನ ಅಲಂಕಾರಿಕ ಪ್ರವೇಶ ದ್ವಾರ



ಕೋಟೆ ಒಳಗಿನ ವಿವಿಧ ಕಟ್ಟಡಗಳು

ಡಾ|| ಬಾ.ರಾ. ಗೋಪಾಲ್

# ಶಾಸನಗಳ ಅಧ್ಯಯನದಲ್ಲಿ ಆಗಬೇಕಾದ ಕಾರ್ಯ

ಶಾಸನಶಾಸ್ತ್ರಕ್ಕೆ ೧೬೦ ವರ್ಷಗಳಿಗೂ ಮೀರಿದ ಇತಿಹಾಸವಿದೆ. ಕ್ರಿ.ಶ. ೧೮೩೩ರಲ್ಲಿ ಜೇಮ್ಸ್ ಪ್ರಿನ್ಸೆಪ್ ಪುರಾತತ್ವ ಶಾಸ್ತ್ರಕ್ಕೆ ಅಧಿಕೃತ ಸ್ಥಾನಮಾನ ನೀಡಿದರು. ಆದರೆ ಅದಕ್ಕೂ ಮೊದಲೇ ೧೭೮೧ರಿಂದ೧೮೨೧ರ ವರೆಗೆ ಜಾನ್ ಫೈತ್‌ಫುಲ್ ಫ್ಲೀಟ್ ಹಾಗೂ ಕರ್ನಲ್‌ಮೆಕೆಂಜಿಯುವರುಗಳು ಅಂದಿನ ಮುಂಬಯಿ ಹಾಗೂ ಮದರಾಸ್ ಪ್ರಾಂತಗಳ ಶಾಸನಗಳನ್ನು ಸಂಗ್ರಹಿಸಿ ನೂರಾರು ಶಾಸನಗಳ ಪಾಠಗಳನ್ನು ಸಿದ್ಧಗೊಳಿಸಿ ಪ್ರಕಟಿಸಿದ್ದರು. ಸರ್ ವಾಲ್ಟರ್ ಇಲಿಯಟ್ಟರು Hindu Inscriptions ಎಂಬ ದೀರ್ಘ ಲೇಖನದಲ್ಲಿ ಶಾಸನ ಪಾಠಗಳನ್ನು, ಅವುಗಳ ಬಗೆಗೆ ಟಿಪ್ಪಣಿಗಳನ್ನು ಅಳವಡಿಸಿ ರಾಯಲ್ ಏಷ್ಯಾಟಿಕ್ ಸೊಸೈಟಿಯ ನಿಯತಕಾಲಿಕದ ಮೊದಲ ಸಂಪುಟದಲ್ಲಿ ಪ್ರಕಟಿಸಿದ್ದರು. ಮೈಸೂರು ಸಂಸ್ಥಾನದಲ್ಲಿ ಲೂಯಿಸ್ ರೈಸ್‌ರವರು Epigraphia Carnaticaದ ಸಂಪುಟಗಳನ್ನು ೧೮೭೯ ರಿಂದ ಪ್ರಕಟಿಸಲಾರಂಭಿಸಿದ್ದರು. ನಂತರ ಹಲವಾರು ವಿದ್ವಾಂಸರು ಈ ಜ್ಞಾನ ಶಾಖೆಯಲ್ಲಿ ಆಸಕ್ತಿ ವಹಿಸಿ ಕೆಲಸ ಮಾಡತೊಡಗಿದರು. ಆಗೆದಂತೆಲ್ಲಾ ಮೇಲೆ ಬರುವ ಶಾಸನಗಳ ಅಧ್ಯಯನ ಸಮುದ್ರದಷ್ಟು ವಿಸ್ತಾರವಾದ ಜ್ಞಾನಶಾಖೆ. ಇದನ್ನು ಮನಗಂಡ ಪುರಾತತ್ವ ಇಲಾಖೆ ೧೮೮೩ರಲ್ಲಿ ಇದಕ್ಕೊಂದು ವಿಶಿಷ್ಟರೂಪ ಕೊಟ್ಟು ಶಾಸನ ತಜ್ಞರ ಕಛೇರಿಯನ್ನೇ ಆರಂಭಿಸಿತು. ೧೮೮೩–೮೬ರಲ್ಲಿ ಫ್ಲೀಟ್ ಈ ಹುದ್ದೆ ಅಲಂಕರಿಸಿ ಗುಪ್ತರ ಶಾಸನಗಳ ಸಂಪುಟವನ್ನು ಪ್ರಕಟಿಸಿದರು. ನಂತರ ಬಂದ ಹುಲ್ಷ್‌ರವರು ೧೬ ವರ್ಷಗಳ ಕಾಲ (೧೮೮೬–೧೯೦೩) ಅಧಿಕಾರ ವಹಿಸಿ, ೧೮೯೧ರಲ್ಲಿ

South Indian Inscriptions ದ ಮೊದಲ ಸಂಪುಟ ಹೊರತಂದರು. ೧೮೮೯ರಲ್ಲಿ ಜೇಮ್ಸ್ ಬರ್ಗೆಸ್‌ರವರು Epigraphia Indica ಎಂಬ ಹೆಸರಿನ ಒಂದು ನಿಯತ ಕಾಲಿಕವನ್ನು ಶಾಸನಗಳ ಪ್ರಕಟಣೆಗಾಗಿಯೇ ಆರಂಭಿಸಿದರು. ಈಗ South Indian Inscriptions ನ ೨೬ಸಂಪುಟಗಳು ಮತ್ತು Epigraphica Indica ದ ೪೧ ಸಂಪುಟಗಳು ಪ್ರಕಟವಾಗಿವೆ.

ಈ ಶಾಸನಗಳು ಭಾಷಾ ಬೆಳವಣಿಗೆಯಲ್ಲದೆ ನಾಡಿನ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ಪರಿಸ್ಥಿತಿಗಳ ಮೇಲೆ ಕುತೂಹಲಕಾರಿಯಾದ ಬೆಳಕನ್ನು ಚೆಲ್ಲುತ್ತವೆ. ಇದುವರೆವಿಗೂ ಇತಿಹಾಸಕಾರರು ರಾಜಕೀಯ ಇತಿಹಾಸದ ಪುನಾರಚನೆಗೆ ಇವುಗಳನ್ನು ಬಳಸಿದ್ದಾರೆ. ನೀಲಕಂಠಶಾಸ್ತ್ರಿಗಳ The colas ಹಾಗೂ Pandyan Kingdom, ಆರ್.ಗೋಪಾಲನ್‌ರವರ The Pallavas of Kanchi, ಡುಬ್ರೈಲ್‌ರ The Pallavas, ಕೆ.ವಿ. ರಮೇಶರ Chalukyas of vatapi, ಆಲ್ತೇಕರರ Rashtrakutas of Malkhed, ಬಿ. ಆರ್. ಗೋಪಾಲರ Chalukyas of Kalyana and the Kalachuris, ಡೆರ್ರೆಟ್‌ರವರ The Hoysalas ಎಸ್.ಎಚ್. ರಿತ್ತಿಯವರ The Sevunas, ಎ. ವಿ. ನರಸಿಂಹಮೂರ್ತಿಗಳ Yadavas of Devagiri, ಎನ್. ವೆಂಕಟರಮಣಯ್ಯನವರ The Eastern chalukyas of Vengi, ಸಿ.ವಿ. ರಾಮಚಂದ್ರರಾಯರ Later Eastern Gangas and the Gaja Patis, ಎಂ. ರಾಮರಾಯರ Kakatiyas of Warangal ಹೆಸರಿಸಬಹುದಾದವುಗಳು. ಸಾಮಂತ ಅರಸರ ಚರಿತ್ರೆಗೆ ಸಂಬಂಧಿಸಿದಂತೆ ಎಂ. ವಿ. ಕೃಷ್ಣರಾಯರ Gangas of Talkad, ಎಸ್. ಶ್ರೀಕಂಠಶಾಸ್ತ್ರಿಗಳ Gangas of Talakad, ಬಿ. ಷೇಕ್ ಅಲಿ ಅವರ Western Gangas of Talakad, ಎಂ. ಎಸ್. ಕೃಷ್ಣಮೂರ್ತಿಗಳ The Nolambas, ಎನ್. ವೆಂಕಟರಮಣಯ್ಯನವರ Chalukyas of Lemulavada, ಬಿ. ಆರ್. ಗೋಪಾಲರ Minor Dynasties of Karnataka ಇತ್ಯಾದಿಗಳು ಪ್ರಕಟವಾಗಿವೆ. ಇತ್ತೀಚೆಗೆ ಎಂ. ಎಚ್. ರಾಮಶರ್ಮರ History of Vijayanagara Empire ನ ಎರಡು ಸಂಪುಟಗಳು ಹೊರಬಂದಿವೆ. ಇವುಗಳಲ್ಲದೆ Gazetteer ಗಳಲ್ಲಿಯೂ—ಫ್ಲೀಟ್‌ರವರ ಮುಂಬಯಿ ಗೆಝೆಟಿಯರಿನ ಭಾಗವಾಗಿ Dynasties of Kanarese Districts, ಹಯವದನರಾಯರ Mysore Gazetteer ಸಂಪುಟಗಳು, ಅವುಗಳನ್ನು ಆಧರಿಸಿ ಎಂ. ಶಾಮರಾಯರು ಪ್ರಕಟಿಸಿದ History of Mysore, ಇತ್ತೀಚಿನ Karnataka Gazetteer ನ ಸಂಪುಟಗಳಲ್ಲಿಯೂ ರಾಜಕೀಯ ಇತಿಹಾಸವನ್ನು ನಿರೂಪಿಸಲು ಶಾಸನಾಧಾರಗಳನ್ನೇ ವಿಶೇಷವಾಗಿ ಬಳಸಲಾಗಿದೆ. ಪ್ರಾದೇಶಿಕ ಇತಿಹಾಸಗಳಾಗಿ ಕೆ. ವಿ. ರಮೇಶರ History of south Kanara, ಎಂ.ಡಿ. ಸಂಪತ್‌ರ Chittoor through the Ages

ಗಮನಾರ್ಹ. ರಾಜಕೀಯಕ್ಕೆ ಸೀಮಿತವಾಗದೆ ಆಡಳಿತ, ಆರ್ಥಿಕ, ಸಾಮಾಜಿಕ ಜನಜೀವನವನ್ನು ಚಿತ್ರಿಸುವ ಗ್ರಂಥಗಳಲ್ಲಿ ಟಿ. ವಿ ಮಹಾಲಿಂಗಂರವರ Administration and Social life under Vijayanagara, ಬಿ. ಎ. ಸಾಲತೊರೆ ಅವರ Social and Political life under Vijayanagara, ಜಿ.ಆರ್. ಕುಪ್ಪಸ್ವಾಮಿ ಅವರ Economic Conditions in Karnataka (973-1336 A. D.), ಪಿ. ಷಣ್ಮುಗಂ ರವರ The Revenue system under the Cholas ಇತ್ಯಾದಿಗಳು ಪ್ರಮುಖವಾದವುಗಳು.

ಆದರೂ ಶಾಸನಗಳನ್ನು ರಾಜಕೀಯ ಇತಿಹಾಸದ ವಿಶ್ಲೇಷಣೆಗಳಿಗಷ್ಟೇ ಬಳಸಿಕೊಳ್ಳಲಾಗಿತ್ತು. ಸಾಮಾಜಿಕ ಜೀವನ ಮುಂತಾದವುಗಳ ವಿಶ್ಲೇಷಣೆಗೆ ಹೆಚ್ಚಾಗಿ ಬಳಸಿಕೊಂಡಿಲ್ಲ. ಅಂತಹ ಒಂದು ಪ್ರಯತ್ನವನ್ನು ಚಿದಾನಂದಮೂರ್ತಿಗಳು 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ದಲ್ಲಿ ಯಶಸ್ವಿಯಾಗಿ ಮಾಡಿದ್ದಾರೆ. ಆ ದಿಸೆಯಲ್ಲಿ ನಂತರದ ಶತಮಾನಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಿಸಿ ಒಂದೆರಡು ಸಂಶೋಧನಾ ಪ್ರಬಂಧಗಳು ಬಂದಿವೆ–ಆದರೂ ಈ ದಿಸೆಯಲ್ಲಿ ಆಗಿರುವ ಕಾರ್ಯ ಅತ್ಯಲ್ಪ.

ಹಲವಾರು ದಿಸೆಗಳಲ್ಲಿ ಶಾಸನಗಳನ್ನು ಸಂಶೋಧನೆಗೆ ಆಧಾರವಾಗಿ ಬಳಸಬಹುದು. ಶಾಸನಗಳನ್ನು ಕಲ್ಲುಗಳ ಮೇಲೆ ಅಥವಾ ತಾಮ್ರಪಟಗಳ ಮೇಲೆ ಕೊರೆಯಲಾಗಿದೆ. ತಾಮ್ರ ಪಟಗಳನ್ನು ಬಳಸಬೇಕಾದರೆ ತಾಮ್ರಲೋಹ ಒಂದು ಸ್ಥಳದಲ್ಲಿ ಅಥವಾ ಪ್ರಾಂತದಲ್ಲಿ ಹೆಚ್ಚಾಗಿ ಲಭಿಸಬೇಕು. ಆ ಲೋಹದ ಗಣಿಗಳು ಸಮೀಪದಲ್ಲಿದ್ದಿರಬೇಕು. ದಕ್ಷಿಣ ಭಾರತದಲ್ಲಿ ಬಹಳ ಸಂಖ್ಯೆಯಲ್ಲಿ ತಾಮ್ರ ಶಾಸನಗಳು ಸಿಕ್ಕಿರುವುದು ತಮಿಳು ನಾಡಿನಲ್ಲಿ ಹಾಗೂ ಪೂರ್ವ ತೀರದಲ್ಲಿ ಆಂಧ್ರಪ್ರದೇಶದ ಅರಸುಮನೆತನಗಳಿಗೆ ಸಂಬಂಧಿಸಿದಂತೆ. ಪಲ್ಲವರು, ಚೋಳರು ತಾಮ್ರವನ್ನು ಬಳಸಿದ್ದಾರೆ. ಪಲ್ಲವರ ತಾಮ್ರಶಾಸನಗಳು ಶಿಲಾಶಾಸನಗಳಿಗಿಂತಲೂ ಹೆಚ್ಚು ಸಂಖ್ಯೆಯಲ್ಲಿ ದೊರೆತಿವೆ. ಸಂಖ್ಯೆಯಲ್ಲಿ ಚೋಳರ ಶಿಲಾಶಾಸನಗಳು ಹೆಚ್ಚಾಗಿದ್ದರೂ ತಾಮ್ರಶಾಸನಗಳೂ ಬಹಳವಾಗಿವೆ. ತಿರುವಾಲಂಗಾಡು[1] ಶಾಸನವನ್ನು ೩೧ ಪಟಗಳಲ್ಲಿ ಕೊರೆಯಲಾಗಿದೆ. ಲೇಡನ್ (Leyden) ವಸ್ತುಸಂಗ್ರಹಾಲಯದಲ್ಲಿರುವ ರಾಜರಾಜನ ಶಾಸನ ೨೧ ಪಟಗಳಲ್ಲಿದೆ.[2] ರಾಜೇಂದ್ರ ಚೋಳನ ಕರಂದೈ ಶಾಸನ ತಿರುವಾಲಂಗಾಡು ಶಾಸನಕ್ಕಿಂತ ದೊಡ್ಡದು. ಇದನ್ನು ೫೫+೨=೫೭ ತಾಮ್ರ

1 South Indian Inscriptions iii pp. 383 ff.

2 Epigraphia Indica. xxii, pp. 213 ff.

ಪಟಗಳಲ್ಲಿ ಕಂಡರಿಸಲಾಗಿದೆ.[3] ಕರ್ನಾಟಕದಲ್ಲಿ ಮೇಲುಕೋಟೆಯ ಸಮೀಪದ ತೊಣ್ಣೂರಿನಲ್ಲಿ ೧೬ ಹಲಗೆಗಳ ಮೇಲೆ ಕಂಡರಿಸಲಾದ ಮೈಸೂರಿನ ಅರಸ ಮುಮ್ಮಡಿ ಕೃಷ್ಣರಾಜರ ತಾಮ್ರ ಶಾಸನವಿದೆ.[4]

ವೇಂಗಿಯ ಚಾಲುಕ್ಯರ ಶಾಸನಗಳೂ ಬಹಳಷ್ಟು ತಾಮ್ರ ಪಟಗಳಲ್ಲಿ ಕೆತ್ತಲಾದವುಗಳೇ. ಪೂರ್ವ ಗಂಗರ, ಕಾಕತೀಯರ ಹಲವಾರು ಶಾಸನಗಳು ತಾಮ್ರ ಪಟಗಳ ಮೇಲಿನವೇ. ಆದರೆ ಕರ್ನಾಟಕದಲ್ಲಿ ಬಾದಾಮಿಯ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ತಾಮ್ರಶಾಸನಗಳು ಹೆಚ್ಚು ಸಂಖ್ಯೆಯಲ್ಲಿ ಲಭಿಸಿದ್ದರೂ ಹೊಯ್ಸಳರ, ಕಲ್ಯಾಣದ ಚಾಲುಕ್ಯರ ಶಿಲಾಶಾಸನಗಳೇ ಬಹು ಸಂಖ್ಯಾತ. ಹೊಯ್ಸಳರ ತಾಮ್ರಶಾಸನಗಳು ಸಂಖ್ಯೆಯಲ್ಲಿ ಕಲ್ಯಾಣದ ಚಾಲುಕ್ಯರ ತಾಮ್ರ ಶಾಸನಗಳಿಗಿಂತ ಹೆಚ್ಚಾಗಿವೆ. ತುಂಗಭದ್ರೆಯ ಉತ್ತರಕ್ಕೆ ಆಳಿದ ಸೇಉಣರ ತಾಮ್ರಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರತಿವೆ. ಇದಕ್ಕೆ ಕಾರಣಗಳೇನು ? ಮೇಲಿನ ವಿವರಗಳನ್ನು ವಿಶ್ಲೇಷಿಸಿದಾಗ ಪೂರ್ವತೀರ ಪ್ರದೇಶದಲ್ಲಿ ತಾಮ್ರ ಲೋಹ ವಿಶೇಷವಾಗಿ ಲಭಿಸಿರುವ ಕಾರಣ ಆದರ ಬಳಕೆ ಅಲ್ಲಿ ಹೆಚ್ಚಿದೆ ಎನ್ನಬಹುದು. ಬಾದಾಮಿಯ ಚಾಲುಕ್ಯರು ಹಾಗೂ ಹೊಯ್ಸಳರು ತಮಿಳುನಾಡಿನ ಅರಸರೊಡನೆ ಹೆಚ್ಚಿನ ಸ್ನೇಹ ಸಂಬಂಧಗಳನ್ನು (ಹಲವು ವೇಳೆ ಕಲೆ ಹಾಗೂ ಅನ್ಯಕ್ಷೇತ್ರಗಳಲ್ಲೂ) ಹೊಂದಿದ್ದ ಕಾರಣ ಅವರಿಗೆ ತಾಮ್ರ ಲೋಹದ ಸರಬರಾಜಾಗಿರಬಹುದು. ಉತ್ತರ ಕರ್ನಾಟಕದಲ್ಲಿ ಈ ಲೋಹ ದೊರಕಿರುವುದರಿಂದ ರಾಷ್ಟ್ರಕೂಟರ, ಸೇಉಣರ ತಾಮ್ರಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ಲಭಿಸಿವೆ. ಈ ಪ್ರದೇಶಗಳಲ್ಲಿ ಆ ಲೋಹ ದೊರಕುತ್ತಿತ್ತೆನ್ನಲು ಶಾಸನಗಳೂ ಆಧಾರಗಳಾಗಬಹುದಲ್ಲ !

ಶಾಸನಗಳ ಭಾಷೆ ಇನ್ನೊಂದು ಕ್ಷೇತ್ರ. ಕನ್ನಡ ಶಾಸನಗಳ ಭಾಷೆಯಲ್ಲಿನ ವ್ಯಾಕರಣಾತ್ಮಕ ಅಂಶಗಳನ್ನು ಕುರಿತು ಈಗಾಗಲೇ ಸ್ವಲ್ಪ ಕೆಲಸವಾಗಿದೆ. ಕರ್ನಾಟಕದ ಶಾಸನಗಳನ್ನು ಅಧ್ಯಯನ ಮಾಡುವಾಗ ಭಾಷೆ ಬೆಳೆದಿರುವ ಅಂಶ ಸ್ಪಷ್ಟವಾಗಿ ಕಂಡು ಬರುತ್ತದೆ. ಜೊತೆಗೆ ಪ್ರಾಂತಭೇದಗಳನ್ನು ಅಧ್ಯಯನ ಮಾಡಬಹುದು. ಶಾಸನ ಸಾಹಿತ್ಯ ಎಂಬ ಒಂದು ಪ್ರಕಾರವೇ ಕನ್ನಡದಲ್ಲಿದೆ.

---

3. K. G. Krishnan (Ed.) : Karandai Plates of Rajendra chola I : Archaeological Survey of India, Memoir 79, 1984)
4. B. R. Gopal (Ed.) : Epigraphia Carnatica. Revised vol. VI. pp. 64.

೧೧-೧೨ ನೆಯ ಶತಮಾನಗಳ ಮತ್ತು ನಂತರದ ಎರಡು-ಮೂರು ಶತಮಾನಗಳ ಚಾಲುಕ್ಯ, ಹೊಯ್ಸಳ, ವಿಜಯನಗರದ ಅರಸುಗಳಿಗೆ ಸೇರಿದ ಅನೇಕ ಶಾಸನಗಳು ಉತ್ಕೃಷ್ಟ ಸಾಹಿತ್ಯ ಕೃತಿಗಳೂ ಆಗಿವೆ. ಬೇರಾವ ಮೂಲಗಳಿಂದಲೂ ಬೆಳಕಿಗೆ ಬಾರದ ಹಲವಾರು ಕನ್ನಡ ಕವಿಗಳು ತಮ್ಮ ಶಾಸನಗಳ ರಚನೆಗಳಿಂದ ಅಮರರಾಗಿದ್ದಾರೆ. ಭಾಷಾ ದೃಷ್ಟಿಯಿಂದ ಗಮನಿಸಿದಲ್ಲಿ ಉತ್ತರ ಕರ್ನಾಟಕದ ಭಾಗಗಳು ಆರ್ಯ ಸಂಸ್ಕೃತಿಯ-ಪ್ರಾಕೃತ, ಸಂಸ್ಕೃತಗಳ-ಪ್ರಭಾವಕ್ಕೆ ಒಳಗಾದ ಸರಿಸುಮಾರಿನಲ್ಲಿಯೇ ದಕ್ಷಿಣ ಕರ್ನಾಟಕದ-ಮೈಸೂರು, ಮಂಡ್ಯ, ಬೆಂಗಳೂರು, ಕೋಲಾರ ಇತ್ಯಾದಿ-ಜಿಲ್ಲೆಗಳ ಪ್ರದೇಶ ದಕ್ಷಿಣ ಭಾರತದಲ್ಲಿ ಆಗ ತಲೆ ಎತ್ತಿದ್ದ ತಮಿಳು ಭಾಷೆ ಮತ್ತು ಸಂಸ್ಕೃತಿಗಳ ಪ್ರಭಾವಕ್ಕೆ ಒಳಪಟ್ಟಿರುವುದನ್ನು ಕಾಣಬಹುದು. ದಕ್ಷಿಣ ಕರ್ನಾಟಕದ ೧೦-೧೧ ನೆಯ ಶತಮಾನಗಳವರೆಗಿನ ಶಾಸನಗಳಲ್ಲಿ ಜಾನಪದವೆನಿಸುವ, ಸಂಸ್ಕಾರಕ್ಕೊಳಪಡದ ಭಾಷೆಯನ್ನು ಕಾಣುತ್ತೇವೆ. ಗಂಗರು ನೆರೆಯ ತಮಿಳುನಾಡಿನ ಅರಸರೊಂದಿಗೆ ಒಡನಾಟ ಪಡೆದಿದ್ದು ತಮಿಳು ಸಂಸ್ಕೃತಿ ಮತ್ತು ಭಾಷೆಗಳ ಪ್ರಭಾವಕ್ಕೆ ಒಳಪಟ್ಟುದು ಗಮನಾರ್ಹವಾದುದು.[5] ಈ ವಿಷಯ ಕುರಿತು ಶ್ರೀಮತಿ ವಿಶಾಲಾಕ್ಷಿಯವರು ಬರೆದಿರುವ ಸಂಶೋಧನಾ ಪ್ರಬಂಧವೊಂದು ಪ್ರಕಟವಾಗದೇ ಉಳಿದಿದೆ. ತಮಿಳುನಾಡಿನಲ್ಲಿ ಇಂತಹ ವ್ಯತ್ಯಾಸಗಳು ಕಂಡು ಬರುವುದಿಲ್ಲ. ಆಂಧ್ರಪ್ರದೇಶದ ಅರಸುಮನೆತನಗಳ ಶಾಸನ ಭಾಷೆ-ಶಿಲಾಶಾಸನಗಳಿಗೆ ಸಂಬಂಧಿಸಿದಂತೆ ಬಹಳ ಮಟ್ಟಿಗೆ ಕೇವಲ ದಾಖಲೆ ಪತ್ರಗಳಿದ್ದಂತಿರುತ್ತವೆ. ಹೇಳಬೇಕಾದುದನ್ನು ನೇರಾಗಿ, ಚುಟುಕಾಗಿ ಹೇಳುವುದು ಅವುಗಳ ವೈಶಿಷ್ಟ್ಯ. ಅಪವಾದವೆಂಬಂತೆ ಕೆಲವು ದೀರ್ಘಶಾಸನಗಳಿದ್ದರೂ, ಸಾಮಾನ್ಯವಾದ ಲಕ್ಷಣ ಇದು. ಇದಕ್ಕೆ ಕಾರಣವೇನು ? ಶಾಸನ ಸಾಹಿತ್ಯದಲ್ಲಿಯೂ ಪ್ರಾದೇಶಿಕ-ತಮಿಳುನಾಡು, ಕರ್ನಾಟಕ, ಆಂಧ್ರಪ್ರದೇಶ-ಇಷ್ಟು ವ್ಯತ್ಯಾಸಗಳಲ್ಲಿರುವುದು ಆಯಾ ಪ್ರದೇಶದ ಜನರ ಮನೋಭಾವ-ಗುಣಗಳನ್ನು ಪ್ರತಿ ಬಿಂಬಿಸುವುದಿಲ್ಲವೇ ?

ಲಿಪಿಯ ದೃಷ್ಟಿಯಿಂದಲೂ ಇಂತಹ ಊಹೆ ಮಾಡಬಹುದೇನೋ ! ಒತ್ತಕ್ಷರಗಳನ್ನು ಪಕ್ಕದಲ್ಲಿ ಬರೆಯುವ ತಮಿಳು ಲಿಪಿ, ತಮಿಳು ಶಾಸನಗಳು ಹೆಚ್ಚು ಸ್ಥಳವನ್ನು ಆಕ್ರಮಿಸಿಕೊಳ್ಳುವಂತೆ ಮಾಡಿವೆ. ಆದುದರಿಂದ ದೊಡ್ಡ ದೊಡ್ಡ ಶಾಸನಗಳನ್ನು ಬರೆಯುವಾಗ ದೇವಸ್ಥಾನದ ಗೋಡೆಗಳ ಒಳ-ಹೊರ ಮೈಗಳನ್ನೂ ಬಳಸಲಾಗಿದೆ. ಕನ್ನಡ-ತೆಲುಗು ಲಿಪಿಗಳಲ್ಲಿ ಇಂತಹ ಪರಿಸ್ಥಿತಿ ಏರ್ಪಟ್ಟಿಲ್ಲ. ತಮಿಳು ಲಿಪಿಗಳಲ್ಲಿ ಪ್ರಾದೇಶಿಕ ವೈವಿಧ್ಯತೆಗಳೂ ಕಂಡು ಬರುವುದಿಲ್ಲ. ಕರ್ನಾಟಕದಲ್ಲಿ ಲಿಪಿಯಲ್ಲಿಯೂ

---

5. ಬಾ. ರಾ. ಗೋಪಾಲ : ಶಾಸನಗಳಿಂದ ಸಾಹಿತ್ಯಕ್ಕೆ ಕೊಡುಗೆ, ಮಾನವಿಕ ಕರ್ನಾಟಕ : ಸಂಪುಟ ೧೪, ಸಂಚಿಕೆ ೨, ಪು. ೪೧-೬೫

ಇಂತಹ ವೈವಿಧ್ಯತೆಯನ್ನು ಕಾಣಬಹುದು. ದಕ್ಷಿಣ ಮತ್ತು ಉತ್ತರ ಕನ್ನಡ (ಮಂಗಳೂರು-ಕಾರವಾರ) ಜಿಲ್ಲೆಗಳಲ್ಲಿ ಕಂಡು ಬರುವ ಶಾಸನ ಲಿಪಿ ಕರ್ನಾಟಕದ ಇತರ ಭಾಗಗಳ ಲಿಪಿಗಳಿಗಿಂತ ಭಿನ್ನ. ಇದರಲ್ಲಿ ಹೆಚ್ಚಿನ ಬೆಳವಣಿಗೆಯನ್ನು ಗುರುತಿಸುವುದು ಕಷ್ಟ. ಆದರೆ ಬಾದಾಮಿಯ ಚಾಲುಕ್ಯರ ಶಾಸನಗಳ, ಗಂಗರ ಶಾಸನಗಳ, ಲಿಪಿಗಳಲ್ಲಿ ಭಿನ್ನತೆಯನ್ನು ಗುರುತಿಸಬಹುದು. ಆದರೂ ಈ ಕನ್ನಡ ಶಾಸನಗಳು ನೋಡಲು ಗಾತ್ರದಲ್ಲಿ ಸಣ್ಣದಾಗಿದ್ದು ಮುದ್ದಾಗಿವೆ. ಹೊಯ್ಸಳ ಶಾಸನಗಳ ಲಿಪಿ ಹೆಚ್ಚು ಕಲಾತ್ಮಕವೂ ಆಗಿವೆ. ವಿಜಯನಗರದ ಕಾಲಕ್ಕೆ ಈ ಲಿಪಿಯಲ್ಲಿ ಒಂದು ವಿಧದ ಅವನತಿಯನ್ನು ಕಾಣಬಹುದಾಗಿದೆ. ಇವುಗಳಿಗೆಲ್ಲ ಕಾರಣವೇನು ? ಯಾವುದೇ ಒಂದು ಲಿಪಿ ಮನುಷ್ಯನ- ಸಮಾಜದ-ಗುಣದ ಪ್ರತಿ ಬಿಂಬವೆನ್ನಬಹುದಾದ ಇಲ್ಲೂ ಅಂತಹ ಸಮಾಜದ ಗುಣಗಳನ್ನು ಲಿಪಿಗಳ ಅಧ್ಯಯನದಿಂದ ಅರಿತುಕೊಳ್ಳಬಹುದಾಗಿದೆ.

ಕನ್ನಡ ಶಾಸನಗಳು ಸಾಮಾನ್ಯವಾಗಿ ದೇವಸ್ತುತಿಯಿಂದ ಆರಂಭವಾಗಿ, ಅರಸನ, ಹಲವು ಬಾರಿ ಆತನ ವಂಶಾವಳಿಯ, ಕಾಲದ, ಅರಸನಲ್ಲದೆ ಬೇರಾದರೂ ದಾತೃಗಳಾಗಿದ್ದರೆ ಅವರ ಪ್ರಶಸ್ತಿಯನ್ನು, ದಾನದ ವಿವರಗಳನ್ನು, ಅಂತಿಮವಾಗಿ ದಾನವನ್ನು ದುರುಪಯೋಗ ಮಾಡದಿರುವಂತೆ ಶಾಪವಾಕ್ಯಗಳನ್ನು ಒಳಗೊಂಡಿರು ತ್ತವೆ. ಕಲ್ಯಾಣದ ಚಾಲುಕ್ಯರ, ಹೊಯ್ಸಳರ ಶಾಸನಗಳು ಹೆಚ್ಚು ವಿವರಗಳನ್ನೊಳ ಗೊಂಡಿರುವುವನ್ನು ಕಾಣುತ್ತೇವೆ. ಆದರೂ ಅವುಗಳಲ್ಲಿ ಬಹಳಷ್ಟು ಉತ್ಪ್ರೇಕ್ಷೆಗಳಾ ಗಲೀ, ಅರಸರ-ಸಾಮಂತರ ಸಾಧನೆಗಳ ಬಗೆಗೆ ಅನವಶ್ಯಕವೆನಿಸಬಹುದಾದ ಉಲ್ಲೇಖಗಳಾಗಲಿ ಕಂಡು ಬರುವುದಿಲ್ಲ. ಆದರೆ ತಮಿಳುನಾಡಿನ ಸಮಕಾಲೀನ ಚೋಳರ ಶಾಸನಗಳಲ್ಲಿ ರಾಜನ ಆಳ್ವಿಕೆಯ ವರ್ಷಗಳು ಹೆಚ್ಚಿದಂತೆಲ್ಲಾ ವಿವರಗಳೂ ಹೆಚ್ಚಾಗುತ್ತವೆ. ಇವು ವಾಸ್ತವಿಕವೂ ಆಗಿರಬಹುದು. ಆಯಾ ಅರಸನಿಗೆ ಸಂಬಂಧಿಸಿದಂತೆ ಇದನ್ನು ಐತಿಹಾಸಿಕ ಮುನ್ನುಡಿಗಳೆಂದು ಕರೆಯಲಾಗಿದೆ. ಚಾಲುಕ್ಯರು ತಮ್ಮ ಸಹಜ ಸಾಧನೆಗಳನ್ನು ಹೇಳಿಕೊಳ್ಳಲು ಹಿಂಜರಿದಿದ್ದಾರೆ- ಸಂಕೋಚ ಪಟ್ಟಿದ್ದಾರೆ-ಎನ್ನುವುದು ಆಶ್ಚರ್ಯ. ಪ್ರಸಿದ್ಧಿ ಪಡೆದ ಕೊಪ್ಪಂಕದನದಲ್ಲಿ ಚೋಳರ ರಾಜಾಧಿರಾಜ ಸೋತ; ಜೀವಕಳೆದುಕೊಂಡ. ಆದರೆ ಇದನ್ನು ಚಾಲುಕ್ಯರ ಶಾಸನಗಳು ಎಲ್ಲಿಯೂ ಉಲ್ಲೇಖಿಸಿಲ್ಲ. ತಮಿಳರ ಶಾಸನಗಳಲ್ಲಿ ರಾಜಾಧಿರಾಜನ ಸಾವನ್ನು ಧೀರೋದಾತ್ತವಾದುದೆಂದು ಹೇಳಿ ಆತ ಆನೆಯ ಮೇಲೆ ಕುಳಿತಿದ್ದಾಗ ಆಸು ನೀಗಿದಾತ ಎಂದು ವರ್ಣಿಸಲಾಗಿದೆ.[6] ಸೋಲನ್ನೇ ಗೆಲುವಾಗಿ ಪರಿವರ್ತಿ ಸುವ ಮನೋಭಾವ ಇದು.

---

6, B. R. Gopal Chalukyas of Kalyana and the Kalachuris, p. 166-68

ಕರ್ನಾಟಕದ ಅರಸರಾರೂ ತಮ್ಮದಲ್ಲದ, ಅನ್ಯರ ರಾಜ್ಯಗಳನ್ನು ಕಸಿಯುಲಾಗಲೀ, ಅವರ ಬಾಳಿನ ಮೇಲೆ ಒತ್ತಾಯಪೂರ್ವಕವಾಗಿ ತಮ್ಮ ಪ್ರಭಾವ ಬೀರುವುದಾಗಲೀ ಮಾಡಲಿಲ್ಲ! ಬಾದಾಮಿ ಚಾಲುಕ್ಯ ವಂಶದ ವಿಕ್ರಮಾದಿತ್ಯ (II) ಕಂಚಿಯನ್ನು ಆಕ್ರಮಿಸಿ ಅಲ್ಲಿನ ದೇವಾಲಯದ ಸಂಪತ್ತನ್ನು ಕಂಡಾಗ ಅದರಿಂದ ಸಂತುಷ್ಟನಾಗಿ ತಾನೂ ಸಹ ವಿಶೇಷವಾದ ದಾನವನ್ನು ನೀಡಿದನೇ ಹೊರತು ಅದನ್ನು ಸ್ವತಃ ಸೂರೆಗೊಳ್ಳಲಿಲ್ಲ. ಆದರೆ ಚೋಳರು ಬಾದಾಮಿಯಲ್ಲಿದ್ದ ಗಣಪತಿಯ ವಿಗ್ರಹವನ್ನು ಒಯ್ದರು. ಕಲ್ಯಾಣದಲ್ಲಿದ್ದ ಕಂಚಿನ ವಿಗ್ರಹಗಳನ್ನು ತಮ್ಮ ರಾಜ್ಯಕ್ಕೆ ಸಾಗಿಸಿದುದಾಗಿ ಶಾಸನಗಳಲ್ಲಿಯೇ ಹೇಳಿಕೊಂಡಿದ್ದಾರೆ. ತಾವು ಗೆದ್ದುಕೊಂಡ ರಾಜ್ಯದ ಪ್ರದೇಶಗಳಲ್ಲಿ ತಮ್ಮದೇ ಭಾಷೆ, ಆಡಳಿತ ಪದ್ಧತಿಯನ್ನು, ತಮ್ಮವರೇ ಆಡಳಿತಗಾರರನ್ನು ಸಹ ಹೇರಿದರು. ಎಂತಲೇ ಕರ್ನಾಟಕದಲ್ಲಿ ಅವರ ತಮಿಳು ಶಾಸನಗಳು ಬಹುಸಂಖ್ಯೆಯಲ್ಲಿಯೇ ಲಭಿಸಿವೆ. ತಮಿಳುನಾಡಿನ ಕೆಲವು ಭಾಗಗಳನ್ನು ಮೊದಲು ರಾಷ್ಟ್ರಕೂಟರ ಮುಮ್ಮಡಿ ಕೃಷ್ಣ, ಅನಂತರ ಹೊಯ್ಸಳ ಅರಸರು ವಶಪಡಿಸಿಕೊಂಡರಾದರೂ ಅಲ್ಲಿ ಅವರೂ ತಮಿಳು ಶಾಸನಗಳನ್ನೇ ಬರೆಸಿದರು. ತಮ್ಮ ಯಾವ ಪದ್ಧತಿಗಳನ್ನೂ ಬಳಸಲಿಲ್ಲ.

ಶಾಸನಗಳ ಈ ತುಲನಾತ್ಮಕ ಅಧ್ಯಯನದಿಂದ ಕನ್ನಡಿಗರ, ತಮಿಳರ ಗುಣ–ಶೀಲಗಳನ್ನು ಗುರುತಿಸಬಹುದಾಗಿದೆ. ಆಂಧ್ರಪ್ರದೇಶದ ಅರಸರದು ಹೆಚ್ಚು ಸಂತೃಪ್ತ ಮನೋಭಾವ. ಅವರು ಆಳುತ್ತಿದ್ದ ಪ್ರದೇಶ ಫಲವತ್ತಾದ ಪ್ರದೇಶ. ಅನ್ಯರಿಂದ ತಮ್ಮನ್ನು ರಕ್ಷಿಸಿಕೊಳ್ಳಬೇಕಿತ್ತೇ ಹೊರತು ತಾವಾಗಿ ಇತರರನ್ನು ಕೆಣಕುವ ಪ್ರವೃತ್ತಿ ಕಾಣಬರುವುದಿಲ್ಲ. ಕೆಲವು ಅಪವಾದಗಳಿಲ್ಲದೆ ಇಲ್ಲವಾದರೂ ಇಂತಹ ಪ್ರವೃತ್ತಿಯನ್ನು ಅವರು ಬೆಳೆಸಿ ಕೊಳ್ಳಲಿಲ್ಲ. ಕೃಷ್ಣ–ಗೋದಾವರಿ ನಡುವಣ ಪ್ರದೇಶದ ಒಡೆತನಕ್ಕಾಗಿ ಅರಸು ಮನೆತನಗಳಲ್ಲಿ ನಿರಂತರ ಕದನಗಳಾಗಿವೆ. ಹಾಗೆಯೇ ಕಾವೇರಿ–ತುಂಗಭದ್ರ, ತುಂಗಭದ್ರ–ಕೃಷ್ಣ ನಡುವಣ ಪ್ರದೇಶ ಸಹ ದಾಳಿಗಳಿಗೆ ಬಲಿಯಾಗಿದೆ. ಶಾಸನಗಳಿಂದ ನಾವು ಕಂಡುಕೊಂಡ ವಿಷಯ ಇದು. ಭೌಗೋಳಿಕ ಪರಿಸ್ಥಿತಿಗಳಿಗೆ ಇದನ್ನು ಹೋಲಿಸಿದಲ್ಲಿ ಇದು ಬಹುಮಟ್ಟಿಗೆ ಸತ್ಯವೆಂಬ ಅಂಶ ಸುಸ್ಪಷ್ಟವಾಗುತ್ತದೆ.

ಈ ಎಲ್ಲ ದೃಷ್ಟಿಗಳಿಂದ ಶಾಸನಗಳ ಅಧ್ಯಯನ ಮಾಡಬಹುದು. ಸಾಮಾಜಿಕ ಜೀವನ ಹೇಗಿತ್ತು, ಯಾವ ಯಾವ ಕಾರಣಗಳಿಗಾಗಿ ಬದಲಾಗಿದೆ ಎಂಬೆಲ್ಲ ವಿವರಗಳನ್ನು ಶಾಸನಾಧಾರಗಳಿಂದ, ಇತರ ಜ್ಞಾನ ಕ್ಷೇತ್ರಗಳಾದ ಭೂಗೋಳ, ಸಮಾಜ ಶಾಸ್ತ್ರ, ಅರ್ಥಶಾಸ್ತ್ರ ಇತ್ಯಾದಿಗಳ ನೆರವಿನಿಂದ ಚಿತ್ರಿಸಬಹುದಾಗಿದೆ. ಬ್ರಿಟನ್‌ಗೆ ಸಂಬಂಧಿಸಿ T. H. Green ಎಂಬಾತ ಬರೆದ Social History ನಮ್ಮಲ್ಲಿನ್ನೂ ಬರಬೇಕಾಗಿದೆ. ಶಾಸನಶಾಸ್ತ್ರ ಹೊಸಹೊಸ ಆಯಾಮಗಳಿಗೆ ವಿಸ್ತರಿಸಬೇಕಾಗಿದೆ. ಇಲ್ಲಿ ಪ್ರಸ್ತಾಪಿಸಿರುವುದು ಕೆಲವು ಉದಾಹರಣೆಗಳನ್ನು ಮಾತ್ರ. O

ಆಳ್ಲ ಚಿರಂಜೀವಿ

# ಋಗ್ವೇದ ಸಂಹಿತೆಯಲ್ಲಿ ಆರ್ಥಿಕ ವ್ಯವಸ್ಥೆ

ನಮ್ಮ ದೇಶದಲ್ಲಿ ವೇದಗಳ ಪೂರ್ವಕಾಲದ ಅವಧಿಯನ್ನು ಸೈಂಧವ ಸಂಸ್ಕೃತಿಯ ಯುಗವೆಂದು ಪರಿಗಣಿಸಲಾಗಿದೆ. ಇದರ ಪರಿಸರದ ಉತ್ಖನನಗಳಿಂದ ಭಾರತಕ್ಕೂ ಸಮಕಾಲೀನ ಸುಮೇರಿಯನ್, ಮೆಸಪೊಟೇಮಿಯಾ ಹಾಗೂ ಇತರ ಪ್ರದೇಶ ಗಳಿಗೂ ವ್ಯಾಪಾರದ ಸಂಪರ್ಕವಿತ್ತೆಂದು ತಿಳಿದುಬರುತ್ತದೆ. ಋಗ್ವೇದ ಸಂಹಿತೆ ನಮ್ಮ ದೇಶದಲ್ಲಿ ದೊರೆತಿರುವ ಮೊದಲನೆಯ ಲಿಖಿತ ಸಾಹಿತ್ಯವೆಂದು ಪರಿಗಣಿಸಲ್ಪಟ್ಟಿರುವುದರಿಂದ ಇದರಲ್ಲಿ ಇದರ ಹಿಂದಿನ ಕಾಲದ ಆರ್ಥಿಕ ವ್ಯವಸ್ಥೆಯ ದಾಖಲೆಗಳು ಅಲ್ಲಲ್ಲಿ ಕಂಡುಬರುತ್ತವೆ.

ವೇದಗಳ ಕಾಲದ ಋಷಿಗಳು ಹಣವನ್ನು 'ಬಹಿಪ್ರಾಣ' –ಎಂದರೆ ದೇಹದ ಹೊರಗಿನ ಉಸಿರು ಎಂದೂ, ತಮ್ಮ ದೇಹ ದೊಳಗೆ ಉಸಿರಾಡುವ ಗಾಳಿಯನ್ನು 'ಅಂತಪ್ರಾಣ'ವೆಂದೂ ಭಾವಿಸಿದ್ದರು. ಈ ಎರಡು ಪ್ರಾಣಗಳಿಗೂ ಅನೇಕ ವೇಳೆ ಸಾಮರಸ್ಯವಿಲ್ಲದೆ ತಮ್ಮ ನಿತ್ಯ ಜೀವನದಲ್ಲಿ ಒದಗಿ ಬರುತ್ತಿದ್ದ ಸಹಿಸಲಾಗದ ಯಾತನೆಗಳನ್ನು ಅವರು ತಮ್ಮ ತಮ್ಮ ಋಕ್ಕು ಗಳಲ್ಲಿ ಮನ ಕರಗುವಂತೆ ಬಹಿರಂಗಪಡಿಸಿದ್ದಾರೆ.

ಈ ದೃಷ್ಟಿಯಿಂದ ಹೇಳುವುದಾದರೆ ಇವರು ಇಹಲೋಕದ ಗೃಹಸ್ಥ ಜೀವನದಲ್ಲಿ ಹಾಗೂ ಸರಾಗವಾಗಿ ಸಾಗುವ ಸಂಸಾರ ಚಕ್ರದಲ್ಲಿ ಲಭಿಸುವ ಆನಂದವನ್ನು ಅನುಭವಿಸುವ ಮನೋ ಧರ್ಮ ಬೆಳೆಸಿ ಕೊಂಡಿದ್ದರೆಂದು ಇವರ ಪ್ರಾರ್ಥನಾ ಋಕ್ಕು ಗಳಿಂದ ತಿಳಿದು ಬರುತ್ತದೆ. ಈ ಋಷಿಗಳು ಇಹಪರ ಸಾಧನ ಕ್ಕಾಗಿ ತಮಗೂ, ತಮ್ಮನ್ನೇ ನಂಬಿರುವ ಪುತ್ರ ಪೌತ್ರರಿಗೂ

ಎಲ್ಲಾ ಕಾಲಕ್ಕೂ ಧನಪ್ರಾಪ್ತಿಯಾಗಲೆಂದು ಇಂದ್ರ, ಅಗ್ನಿ, ಸವಿತೃ, ಪೂಷ, ಸೋಮ, ಉಷಾ, ಸರಸ್ವತಿ— ಹೀಗೆ ಎಲ್ಲಾ ದೇವತೆಯರಿಗೂ ಹಂಬಲಿಸಿರುವುದು ಈ ಕೆಳಕಂಡ ಋಕ್ಕುಗಳಿಂದ ತಿಳಿದುಬರುತ್ತದೆ.

ಯುಂಜಂತಿ ಬ್ರಧ್ನ ಮರುಷಂ
ಚರಂತಂ ಪರಿತಸ್ಥುಷಃ |
ರೋಚಂತೇ ರೋಚನಾ ದಿವಿ ||

(ಋಗ್ವೇದ ಸಂಹಿತಾ-ಮಂಡಲ ೧-ಸೂಕ್ತ ೬-ಋಕ್ ೧)

ಇಂದ್ರನು ಅಗ್ನಿ, ವಾಯು, ಆದಿತ್ಯ, ನಕ್ಷತ್ರ ಇವುಗಳ ರೂಪದಿಂದ ಪ್ರಕಾಶಿಸುತ್ತಾ ಪರಮೈಶ್ವರ್ಯಯುಕ್ತನಾಗಿರುವನು. ಇವನೇ ಪ್ರಪಂಚದ ಸಮಸ್ತ ವ್ಯಾಪಾರಗಳಿಗೂ ಪ್ರಧಾನ ದೇವನಾಗಿರುವನು.

ತ್ವಂ ತಮಿಂದ್ರ ಪರ್ವತಂ ನ ಭೋಜಸೇ
ಮಹೋ ನೃಮ್ಣಸ್ಯ ಧರ್ಮಣಾ ಮಿರಜ್ಯಸಿ |
ಪ್ರ ವೀರ್ಯೇಣ ದೇವತಾತಿ ಚೇಕಿತೇ
ವಿಶ್ವಸ್ಮಾ ಉಗ್ರಃ ಕರ್ಮಣೇ ಪುರೋಹಿತಃ ||

(ಋ. ಸಂ. ಮಂ. ೧-ಸೂ. ೫೫-ಋಕ್ ೩)

ಇಂದ್ರನೇ ನೀನು ನಮಗೆ ಬಲಗೈಯಿಂದ ಧನವನ್ನು ತಂದು ಎಡಗೈಯಿಂದ ದಾನಮಾಡು (ಮಂ. ೮-೮೧-೬). ನಿಷಾದಾದಿ ಪಂಚಜನರಲ್ಲಿರುವ ಧನವನ್ನೆಲ್ಲಾ ನಮಗೆ ಕೊಡು (ಮಂ. ೭-೭೬-೪). ನೀನು ಬಹಳ ಧನದಿಂದ ಮೆರೆಯುವ ಧನಿಕರನ್ನು ದ್ವೇಷಿಸುತ್ತೀಯೆ (ಮಂ. ೬-೪೭-೬)

ಎಲೈ ಇಂದ್ರನೇ ಪ್ರಭೂತವಾದ ಧನಕ್ಕೆ ಅಧಿಪತಿಗಳಾದ ಧರ್ಮಣಾಂ-ಕುಬೇರಾದಿ ದೇವತೆಗಳಿಗೆ ಒಡೆಯನಾಗಿದ್ದೀಯೆ.

ಸದಸಸ್ಪತಿಮದ್ಭುತಂ ಪ್ರಿಯಮಿಂದ್ರಸ್ಯ ಕಾಮ್ಯಂ |
ಸನಿಂ ಮೇಧಾಮಯಾಸಿ ಷಂ ||

(ಮಂ, ೧-೧೮-೬)

ಇಂದ್ರನಿಗೆ ಪ್ರೀತಿಪಾತ್ರನೂ ಸುಂದರನೂ ಸಾಹಸಿಯೂ 'ಸನಿಂ' ಎಂದರೆ ಧನವನ್ನು ಕೊಡುವವನೂ ಆದ ಸದಸಸ್ಪತಿ ಎಂದು ಹೆಸರು ಪಡೆದಿರುವ ಅಗ್ನಿಯನ್ನು ಪ್ರಾರ್ಥಿಸುವೆನು. ನಿನ್ನಲ್ಲಿ ಸಕಲ ಧನಗಳು ನಿಕ್ಷೇಪಗಳಂತೆ ಸ್ಥಾಪಿತವಾಗಿವೆ (ಮಂ. ೧-೫೯-೩) ಮತ್ತು (ಮಂ. ೨-೪-೯). ನಮಗೆ ರಾಧಃ-ಧನವನ್ನೂ

ಅನ್ನವನ್ನೂ ಕೊಡು (ಮಂ. ೩-೯-೪). ನಮ್ಮಿಂದ ಶೇಖರಿಸಲ್ಪಟ್ಟ ಧನವು ವಂಶ ಪಾರಂಪರ್ಯವಾಗಿ ನಮ್ಮಲ್ಲಿಯೇ ಸ್ಥಿರವಾಗಿ ಉಳಿದಿದ್ದು ಸಕಲ ಬಾಧೆಗಳಿಂದಲೂ ರಕ್ಷಿಸಲ್ಪಡುವಂತಾಗಲಿ (ಮಂ. ೭-೫-೩). ಯಜಮಾನರು ಯಜ್ಞ ಮಾಡಿ ಧನಲಾಭಕ್ಕೋಸ್ಕರ ನಿನ್ನನ್ನು ಸಮೀಪಿಸುತ್ತಾರೆ (ಮಂ. ೭-೧೫-೯), (ಮಂ. ೭-೧೭-೭). ಮಿತ್ರಾವರುಣರು ಮತ್ತು ರೇವತಿ ಎಂದು ಹೆಸರು ಪಡೆದಿರುವ ಧನಯುಕ್ತಳಾದ ಅದಿತಿಯಿಂದ ನಮಗೆ ಮಂಗಳವುಂಟಾಗಲಿ (ಮಂ. ೫-೫೧-೧೪). ಅಜರೂಪನಾದ ಅಶ್ವವುಳ್ಳ ಪೂಷದೇವ ಧನಸಂಪತ್ತಿಗೆ ಪ್ರವಾಹರೂಪದಲ್ಲಿದ್ದಾನೆ (ಮಂ. ೬-೬೪-೫). ಎಲೈ ಉಷೋದೇವಿಯೇ ವೃಷಭರೂಪಳಾದ ನಿನ್ನ ವಾಹನಗಳ ಮೇಲೆ ಅಪಾರವಾದ ಧನಸಂಪತ್ತನ್ನು ಹೇರಿಕೊಂಡು ಬಾ (ಮಂ. ೬-೬೪-೫) ಮತ್ತು (ಮಂ. ೬-೬೫-೪). ಧನದೇವತೆಯಾಗಿರುವ ಸರಸ್ವತೀ ದೇವಿಯೇ ಮೊಣಕಾಲನ್ನೂರಿ ನಮಸ್ಕರಿಸುವ ಸ್ತುತಿಕರ್ತರಿಗೆಲ್ಲಾ ಅಧಿಕ ಸಂಪತ್ತನ್ನು ದಾನ ಮಾಡುತ್ತಾಳೆ (ಮಂ. ೭-೯೫-೪). ಧನವನ್ನು ಕೊಡುವುದಕ್ಕಾಗಿಯೇ ಧನವನ್ನು ಕೈಯಲ್ಲಿ ಎತ್ತಿಹಿಡಿದಿರುವ ದ್ಯುಲೋಕಾಭಿಮಾನಿ ದೇವತೆ, ಧಾನ್ಯಾದಿ ಸಂಪತ್ತನ್ನು ಅನುಗ್ರಹಿಸುವ ಸಲುವಾಗಿ ಭೂದೇವಿ ಹಾಗೂ ಧನಸಂಪತ್ತನ್ನು ನೀಡಲೆಂದೇ ಅಶ್ವಿನೀ ದೇವತೆಗಳು ಯಜ್ಞಶಾಲೆಗೆ ಬರುತ್ತಾರೆ (ಮಂ. ೧೦-೧೩೨-೧) ಎಂದು ನಾನಾ ರೀತಿಯಲ್ಲಿ ಸ್ತುತಿಸಿರುತ್ತಾರೆ. ಅವರು ಸೋಮನು ಪೌರನು ಪಟ್ಟಣವನ್ನು ಪ್ರವೇಶಿಸುವಂತೆ ಸೋಮರಸ ಪಾತ್ರೆಗೆ ಇಳಿದು ಬರುತ್ತಾನೆ (ಮಂ. ೯-೧೦೭-೧೦) ಎಂದು ಹೋಲಿಕೆಯ ಮೂಲಕ ಸ್ತುತಿಸಿರುವುದನ್ನು ಗಮನಿಸಿದರೆ ಆ ಕಾಲದಲ್ಲಿ ಋಷಿಗಳು ನಗರ ಜೀವನದ ಸಂಪರ್ಕದಿಂದ ದೂರವಿರಲಿಲ್ಲವೆಂದು ತಿಳಿದುಬರುತ್ತದೆ.

ಋಗ್ವೇದ ಸಂಹಿತೆಯಲ್ಲಿ 'ಲಕ್ಷ್ಮಿ' ಧನದೇವತೆಯೆಂದು ಎಲ್ಲಿಯೂ ಉಲ್ಲೇಖಿತವಾಗಿಲ್ಲ. ಮನುಷ್ಯನಿಗೆ ಇಹಲೋಕದಲ್ಲಿ ಪ್ರಾಪ್ತಿಯಾಗುವ ತೇಜಸ್ಸಿಗೆ 'ಲಕ್ಷ್ಮಿ' ಎಂದು ಪರ್ಯಾಯವಾಗಿ ಹೇಳಲಾಗಿದೆ.

ಇಂದ್ರಂ ಕಾಮಾ ವಸೂಯಂತೋ<br>
ಅಗ್ಮನ್ತ್ಸ್ವರ್ಮೀಳ್ಹೇ ನ ಸವನೇ ಚಕಾನಾಃ |<br>
ಶ್ರವಸ್ಯವಃ ಶಶಮಾನಾಸ ಉಕ್ಥೈರೋಕೋ<br>
ನ ರಣ್ವಾ ಸುದೃಶೀವ ಪುಷ್ಟಿಃ ||

(ಮಂ. ೪-೧೬-೧೫)

ವೀರನು ಮತ್ತು ಯಜಮಾನನು ರಣರಂಗದಲ್ಲಿ, ಯಜ್ಞದಲ್ಲಿ ಇಂದ್ರನ

ಸಾಮರ್ಥ್ಯ ಮತ್ತು ಧನಸಂಪತ್ತಿಗಾಗಿ ಮೊರೆಯಿಡುತ್ತಾರೆ. ಅವನು ಈಗ ಧರೆಗೆ ಇಳಿದು ಬಂದು ಅವರಿಗೆ ರಕ್ಷಕನಾಗಿ ಮತ್ತು ರಮಣೀಯಳಾದ ಶೋಭನಾತ್ಮಕಳಾದ 'ಸುದೃಶೀವ'—ಎಂದರೆ ಲಕ್ಷ್ಮಿಯಂತೆ ಪುಷ್ಟಿದಾಯಕನಾಗಿ ನಿಲ್ಲುತ್ತಾನೆ. ಹೀಗೆಯೇ ಇನ್ನೊಂದು ಋಕ್ಕಿನಲ್ಲಿ—

ಸಕ್ತುಮಿವ ತಿತಉನಾ ಪುನಂತೋ
ಯತ್ರ ಧೀರಾ ಮನಸಾ ವಾಚಮಕ್ರತ ।
ಅತ್ರಾ ಸಖಾಯಃ ಸಖ್ಯಾನಿ ಜಾನತೇ
ಭದ್ರೈಷಾಂ ಲಕ್ಷ್ಮೀರ್ನಿಹಿ ತಾಧಿವಾಚಿ ॥

(ಮಂ. ೧೦-೭೧-೨)

ಜ್ಞಾನಿಗಳು ಮತ್ತು ವಿವೇಕಿಗಳು ಚೆನ್ನಾಗಿ ಆಲೋಚಿಸಲ್ಪಟ್ಟ ಮಾತನಾಡುವ ರೀತಿ 'ಲಕ್ಷ್ಮೀಃ' ಎಂದರೆ ಶ್ರೇಯಸ್ಸಿನಿಂದ ಕೂಡಿರುತ್ತದೆ ಎಂಬ ಅರ್ಥ ಕಂಡು ಬರುತ್ತದೆ.

ಯಾಸ್ಕರು ತಮ್ಮ ನಿರುಕ್ತ (೪-೯)ದಲ್ಲಿ 'ಲಕ್ಷ್ಮೀಃ' ಎಂಬ ಶಬ್ದಕ್ಕೆ 'ಲಾಭದ್ವಾ'-ಎಂದರೆ ಹೊಂದುವುದು ಎಂದು ಅರ್ಥೈಸಿದ್ದಾರೆ.

ಆ ಕಾಲದಲ್ಲಿ ನಾಣ್ಯಗಳನ್ನು ಚಿನ್ನದಿಂದ ಟಂಕಿಸುತ್ತಿದ್ದರೆಂದು ಮತ್ತು ಇದರಿಂದ ಹೊರದೇಶಗಳಲ್ಲೆಲ್ಲಾ ವ್ಯಾಪಾರ ವಹಿವಾಟು ನಡೆಸಿ ಸಮೃದ್ಧ ಸಮಾಜ ವನ್ನು ನಿರ್ಮಿಸುತ್ತಿದ್ದರೆನ್ನುವುದಕ್ಕೆ ಹಲವು ಆಧಾರಗಳು ದೊರೆಯುತ್ತವೆ.

ಯ ಋಜ್ರಾ ಮಹ್ಯಂ ಮಾಮಹೇ ಸಹತ್ವಚಾ ಹಿರಣ್ಯಯಾ ।
ಏಷ ವಿಶ್ವಾನ್ಯಭ್ಯಸ್ತು ಸೌಭಗಾ ಸಂಗಸ್ಯ ಸ್ವನದ್ರಥಃ ॥

(ಮಂ. ೮-೧-೩೨)

ಸುವರ್ಣಮಯವಾದ ಕಟ್ಟುಳ್ಳ ಚರ್ಮದ ಚೀಲದಲ್ಲಿ ಸುವರ್ಣಾದಿ ನಾಣ್ಯ ಗಳನ್ನು ತುಂಬಿಸಿ ಕೊಡುವ ದೊರೆ ಆಸಂಗನು ರಥಾರೂಢನಾಗಿ ಶತ್ರುಗಳ ಸಮಸ್ತ ಸಂಪತ್ತನ್ನೂ ಜಯಿಸಿ ತನ್ನ ವಶಮಾಡಿಕೊಳ್ಳಲಿ. ತಿರಿಂದಿರನೆಂಬ ರಾಜನು ಯಾದ್ವ ಸಂಜ್ಞಕರಾದ ಜನರನ್ನು ನಮಗೆ ದಾಸರನ್ನಾಗಿ ಮಾಡಿ ನಾಲ್ಕು ಸುವರ್ಣ ಭಾರಗಳನ್ನು ಹೊತ್ತಿರುವ ಒಂಟೆಗಳನ್ನು ದಾನಮಾಡಿ ಯಶಸ್ಸನ್ನು ಹೊಂದಿ ಕೀರ್ತಿ ವಂತನಾಗಿ ಸ್ವರ್ಗವನ್ನು ಪಡೆದನು (ಮಂ. ೮-೬-೪೮). ಹೀಗೆ ಧನದಾನವನ್ನು ಮಾಡಿದವರಿಗೆ ಯಶಸ್ಸು ಇಹಲೋಕದಲ್ಲಿಯೂ ಮತ್ತು ಇತರ ಲೋಕಗಳಲ್ಲಿಯೂ ಪ್ರಾಪ್ತಿಯಾಗುವುದೆಂದು ಇದೇ ಸಂಹಿತೆಯ ಮಂ. ೮-೨೪-೮; ಮಂ. ೮-೩೨-೧೬; ಮಂ. ೧೦-೬೨-೧೧ ; ಮಂ. ೧೦-೧೦೭-೨ ಗಳಲ್ಲಿ ವಿವರಿಸಲಾಗಿದೆ.

ಅಶ್ವಿನೀ ದೇವತೆಗಳಿಗೆ ನಮ್ಮಿಂದ ಅರ್ಪಿಸುವ ಸೋಮರಸವು ರಾಜನ ಮುಂಭಾಗ ದಲ್ಲಿ ದೂತನು ಸಾಮಂತರಿಂದ ಬಂದಿರುವ ಸಿಧಿಯನ್ನು ಅರ್ಪಿಸಿದಂತೆ ಇರುತ್ತದೆ (ಮಂ. ೭-೬೭-೭). ಇಂದ್ರ ಮತ್ತು ಸೋಮ ದೇವತೆಗಳಿಗೆಂದೇ ಸ್ತುತಿಸುವ ಋಕ್ಕುಗಳು ಸುತ್ತು ಪಟ್ಟಿಯು ಅಶ್ವದ ದೇಹವನ್ನು ಸುತ್ತುವರಿದಿರುವಂತೆ ಸರ್ವತ್ರ ವ್ಯಾಪಿಸಲಿ. ರಾಜರು ಸ್ತುತಿಕರ್ತರನ್ನು ಧನಗಳಿಂದ ತುಂಬುವಂತೆ ನಮಗೆ ಧನ ನೀಡಿರಿ (ಮಂ. ೭-೧೦೪-೬)

ಆ ಕಾಲದಲ್ಲಿ ಯಜ್ಞಯಾಗಗಳನ್ನು ನೇರವೇರಿಸುವುದಕ್ಕೆ ಧನದ ಅವಶ್ಯಕತೆ ಎಷ್ಟಿತ್ತೆಂದು

> ನ ನೂನಂ ಬ್ರಹ್ಮಣಾಮೃಣಂ ಪ್ರಾಶೂನಾಮಸ್ತಿ ಸುನ್ವತಾಂ ।
> ನ ಸೋಮೋ ಅಪ್ರತಾ ಪಪೇ ॥
>
> (ಮಂ. ೮-೩೨-೧೬)

ಎಂಬ ಋಕ್ಕಿನಿಂದ ತಿಳಿದು ಬರುತ್ತದೆ.

ಯಜ್ಞಯಾಗಗಳಲ್ಲಿ ದೇವತೆಗಳಿಗೆ ಸೋಮಪಾನ ಮಾಡಿಸಿ ಅದನ್ನು ತಾವೂ ಕುಡಿಯುವ ಜನರಿಗೆ ದೇವ ಋಣವಿರುವುದಿಲ್ಲ. ಅಂತೆಯೇ ಸಾಕಷ್ಟು ಧನಸಹಾಯ ವಿಲ್ಲದೆ ಯಜ್ಞಯಾಗಗಳನ್ನು ನೆರವೇರಿಸುವುದಕ್ಕೂ ಸಾಧ್ಯವಾಗುವುದಿಲ್ಲ.

ಅವರು ಪಶುಪಾಲನೆಗಾಗಿ ಗೋವುಗಳಿಗೆ ಹಣದ ಮೌಲ್ಯವನ್ನು ಸಮೀಕರಿಸಿರು ವುದಕ್ಕೆ ಒಂದು ನಿದರ್ಶನವಿದೆ.

> ಗಾವೋ ಭಗೋ ಗಾವ ಇಂದ್ರೋ ಮೇ ಅಚ್ಛಾನ್
> ಗಾವಃ ಸೋಮಸ್ಯ ಪ್ರಥಮಸ್ಯ ಭಕ್ಷಃ ।
> ಇಮಾ ಯಾ ಗಾವಃ ಸ ಜನಾಸ ಇಂದ್ರ
> ಇಚ್ಛಾಮೀದ್ಧೃದಾ ಮನಸಾ ಚಿದಿಂದ್ರಂ ॥
>
> (ಮಂ. ೬-೨೮-೫)

ಇಂದ್ರನ ಸ್ವರೂಪವಾಗಿರುವ ಗೋವುಗಳು ಹಾಲನ್ನು ಕೊಡುವುದರಿಂದ ಅವು ಧನರೂಪದಲ್ಲಿವೆ.

ಯಜ್ಞಕರ್ತರು ಹಣದ ವ್ಯವಹಾರಕ್ಕೆ ಬದಲಾಗಿ ಗೋವುಗಳನ್ನು ಕೊಟ್ಟು ಸೋಮಲತೆಗಳನ್ನು ಕೊಂಡು ಅವುಗಳನ್ನು ಹಿಂಡಿ ಸೋಮರಸವನ್ನು ಸಿದ್ಧ ಪಡಿಸುತ್ತಿದ್ದರೆನ್ನುವುದಕ್ಕೆ–

ಪಿಬ ಸ್ವಧೈನ ವಾ ನಾ ಮುತ ಯಸ್ತುಗ್ರೈಃ ಸಚಾ ।
ಉತಾಯ ಮಿಂದ್ರ ಯಸ್ತ್ರವ ॥

(ಮಂ. ೮-೩೨-೨೦)

ಎಂಬ ಋಕ್ಕಿನಿಂದ ತಿಳಿದು ಬರುತ್ತದೆ.

ಅಂತೆಯೇ ತೈತ್ತಿರೀಯ ಸಂಹಿತೆಯ ೬-೧-೧೦-೧, ೨ ರಲ್ಲಿ ಆಡು, ತಪಸ್ಸು, ಸುವರ್ಣ, ಶುಕ್ರ, ಕರೆಯುವ ಹಸು, ಹಾಲು, ಹೋರಿ, ಒಂದು ಜೊತೆ ವಸ್ತ್ರ ಇತ್ಯಾದಿ ಹತ್ತು ವಿಧವಾದ ದ್ರವ್ಯಗಳಲ್ಲಿ ಯಾವುದಾದರೂ ಒಂದನ್ನು ಕೊಟ್ಟು ಕೊಂಡುಕೊಳ್ಳಬಹುದೆಂದು ಹೇಳಿದೆ.

ಋಗ್ವೇದ ಸಂಹಿತೆಯ ಒಂದು ಭಾಗವಾಗಿರುವ ಬೃಹದ್ದೇವತಾ ಗ್ರಂಥದಲ್ಲಿ ತ್ರಸದಸ್ಯು ಎಂಬ ರಾಜರ್ಷಿಯು ಕಾಕುಸ್ಥ ವಂಶದ ವಧುಗಳನ್ನೂ, ಇನ್ನೂರ ಹತ್ತು ಗೋವುಗಳನ್ನೂ, ಒಂಟೆ, ವಸ್ತ್ರ, ರತ್ನ, ವೃಷಭಗಳನ್ನೂ, ಶಂಖನಿಧಿ, ಪದ್ಮನಿಧಿ ಎಂಬ ನಿಕ್ಷೇಪಗಳನ್ನೂ ದಾನವಾಗಿ ಕೊಟ್ಟನೆಂಬ ಉಲ್ಲೇಖವಿದೆ [(ಬೃಹದ್ದೇವತಾ ೫೧ ರಿಂದ ೫೫)-ಒಂದನೇ ಅಧ್ಯಾಯ]

ಶಶೀಯಸೀ ಎಂಬ ರಾಣಿ ಶ್ಯಾವಾಶ್ವನಿಗೆ ಅನೇಕ ಆಡುಗಳನ್ನೂ, ಕುರಿಗಳನ್ನೂ, ಗೋವುಗಳನ್ನೂ ದಾನ ನೀಡಿದ ವಿವರಣೆ ಇದೇ ಗ್ರಂಥದಲ್ಲಿ ಒಂದು ಕಡೆ ಕಂಡು ಬರುತ್ತದೆ.

ಇದೇ ಯುಗದಲ್ಲಿ ರತ್ನಗಳು ವ್ಯವಹಾರದ ಬಳಕೆಯಲ್ಲಿದ್ದುದಕ್ಕೆ ಕೆಲವು ನಿದರ್ಶನಗಳು ಗೋಚರವಾಗುತ್ತವೆ.

ಅಯಂ ದೇವಾಯ ಜನ್ಮನೇ ಸ್ತೋಮೋ ವಿಪ್ರೇಭಿ ರಾಸಯಾ ।
ಅಕಾರಿ ರತ್ನಧಾತಮಃ ||

(ಮಂ. ೧-೨೦-೧)

ಹಿಂದೆ ಮನುಷ್ಯರಾಗಿದ್ದು ದೇವತ್ವಕ್ಕೇರಿದ ಋಭುಗಳೆಂಬ ದೇವತೆಗಳು ತಮ್ಮನ್ನು ಕುರಿತು ಸ್ತೋತ್ರ ಮಾಡುವವರಿಗೆ ರತ್ನ ದ್ರವ್ಯಗಳನ್ನು ನೀಡುವರು.

ರತ್ನಧಾತಮಃ—ಈ ಶಬ್ದವು ಅಗ್ನಿಮೀಳೇ ಎಂಬ ಪ್ರಾರಂಭ ಸೂಕ್ತದಲ್ಲಿಯೇ ಕಂಡು ಬರುತ್ತದೆ.

ರತ್ನಾನಿ ದಧಾತಿ (ದದಾತಿ) ಇತಿ ರತ್ನಧಾಃ ಅತಿಶಯೇನ ಧನಪದ್ರಃ—ರತ್ನ ಮೊದಲಾದ ಧನವನ್ನು ಅತಿಶಯವಾಗಿ ಕೊಡುವುದು ಎಂದರ್ಥ.

ತೇ ನೋ ರತ್ನಾನಿ ಧತ್ತನ ತ್ರಿರಾ ಸಾಪ್ತಾನಿ ಸುನ್ವತೇ ।
ಏಕಮೇಕಂ ಸುಶಸ್ತಿಭಿಃ ||

(ಮಂ. ೧-೨೦-೭)

ನಮ್ಮ ಸ್ತೋತ್ರಗಳಿಂದ ತೃಪ್ತರಾದ ಋಭು ದೇವತೆಗಳು ಸೋಮರಸವನ್ನು ಸಿದ್ಧಪಡಿಸಿ ಕೊಡುವ ಯಜಮಾನನಿಗೆ ಉತ್ತಮ, ಮಧ್ಯಮ, ಅಧಮಗಳೆಂಬ ಮೂರು ವಿಧವಾದ ರತ್ನಗಳನ್ನು ಒಂದೊಂದರಲ್ಲಿಯೂ ತ್ರಿರಾ ಸಾಪ್ತಾನಿ ಎಂದರೆ ಏಳೇಳು ಕರ್ಮಗಳುಳ್ಳ ತ್ರಿವರ್ಗಗಳನ್ನು ನಮಗೆ ಒಂದೊಂದನ್ನಾಗಿ ಅನುಗ್ರಹಿಸಲಿ–

ಸೋಮಾ ರುದ್ರಾ ಧಾರಯೇ ಥಾ ಮ
ಸೂರ್ಯಂ ಪ್ರ ವಾಮಿಷ್ಟ ಯೋ ರ ಮಶ್ನವಂತು ।
ದಮೇ ದಮೇ ಸಪ್ತರತ್ನಾ ದಧಾನಾ ಶಂ
ನೋ ಭೂತಂ ದ್ವಿಪದೇ ಶಂ ಚತುಷ್ಪದೇ ॥

(ಮಂ. ೬–೭೪–೧)

ಎಲೈ ಸೋಮ ಮತ್ತು ರುದ್ರದೇವತೆಗಳೇ ಅಸುರರಲ್ಲಿರುವ ಬಲವನ್ನು ನಮಗೆ ದಯಪಾಲಿಸಿ. ಅಂತೆಯೇ ಸಪ್ತರತ್ನಗಳನ್ನು ಹೊಂದಿರುವ ನೀವು ನಮಗೆ ಸಿರಿ ಸಂಪತ್ತನ್ನು ನೀಡಿರಿ.

ಬೃಹದ್ದೇವತಾ ಗ್ರಂಥದ ೧೨೩ನೇ ಋಕ್ಕಿನಲ್ಲಿ ಚಕ್ರ, ರಥ, ರತ್ನ, ಪತ್ನಿ, ಭೂಮಿ, ಅಶ್ವ, ಆನೆ ಎಂಬಿವೇ ಚಕ್ರವರ್ತಿಗಳಲ್ಲಿರಬೇಕಾದ ಸಪ್ತರತ್ನಗಳೆಂದು ಹೇಳಲ್ಪಡುವುವು.

ಚಿನ್ನದ ಜೊತೆಗೆ ಬೆಳ್ಳಿ, ತಾಮ್ರ, ಸೀಸ ಮೊದಲಾದ ಖನಿಜ ಸಂಪತ್ತನ್ನು ಇದೇ ಯುಗದಲ್ಲಿ ಉಪಯೋಗಿಸುತ್ತಿದ್ದರೆನ್ನುವುದಕ್ಕೆ ಅಲ್ಲಲ್ಲಿ ಆಧಾರಗಳು ದೊರೆಯುತ್ತವೆ. ಅಶ್ವಿನೀ ದೇವತೆಗಳು 'ತ್ರಿಧಾತುನಾ'—ಎಂದರೆ ಚಿನ್ನ, ಬೆಳ್ಳಿ ಮತ್ತು ತಾಮ್ರದ ರಥಗಳಲ್ಲಿ ಯಜ್ಞಶಾಲೆಗೆ ಮನಸ್ಸಿಗಿಂತಲೂ ವೇಗವಾಗಿ ಬರುತ್ತಾರೆ. (ಮಂ. ೧–೧೮೩–೧)

ತವೇದಿಂದ್ರಾವಮಂ ವಸು ತ್ವಂ ಪುಷ್ಯಸಿ ಮಧ್ಯಮಂ ।
ಸತ್ರಾ ವಿಶ್ವಸ್ಯ ಪರಮಸ್ಯ ರಾಜಸಿ ನ ಕಿಷ್ಟ್ವಾ ಗೋಷು ವೃಣ್ವತೇ ॥

(ಮಂ. ೭–೩೨–೧೬)

ಇಂದ್ರನು ಉತ್ತಮ, ಮಧ್ಯಮ ಮತ್ತು ಅಧಮ ವರ್ಗದಲ್ಲಿ ಕ್ರಮವಾಗಿ ರತ್ನಾದಿಗಳು, ಬೆಳ್ಳಿ, ಮತ್ತು ಸೀಸಾದಿ ಧನಗಳಿಗೂ ಒಡೆಯನಾಗಿದ್ದಾನೆ.

ಜನರು ವಸ್ತ್ರಗಳನ್ನು ನೇಯ್ದು ರತ್ನಗಂಬಳಿಗಳನ್ನು ನಿರ್ಮಿಸಿ ಧನ ಸಂಪಾದನೆಯಲ್ಲಿ ತೊಡಗಿದ್ದರೆಂಬುದಕ್ಕೆ ಕೆಲವು ಸಾಕ್ಷ್ಯಗಳು ದೊರೆಯುತ್ತವೆ.

ಪುನಃ ಸಮವ್ಯದ್ವಿತತಂ ವಯಂತೀ ಮಧ್ಯಾ
ಕರ್ತೋರ್ನ್ಯಧಾ ಚ್ಛಕ್ಮ ಧೀರಃ |
ಉತ್ಸಂ ಹಾಯಾ ಸ್ಥಾದ್ವ್ಯಶಿಲ ತೂರದರ್ಧರರ ಮತಿಃ
ಸವಿತಾ ದೇವ ಆಗಾತ್ ||

(ಮಂ. ೨-೩೮-೪)

ರಾತ್ರಿಯು ವಿಸ್ತಾರವಾದ ಲೋಕವನ್ನು 'ವಯಂತೀ'—ಎಂದರೆ ವಸ್ತ್ರವನ್ನು ಹೆಣೆಯುವ ಸ್ತ್ರೀಯಂತೆ ಪ್ರತಿದಿನ ಆವರಿಸುತ್ತದೆ. ಹೀಗೆಯೇ ಮಂ. ೮-೨೬-೧೨ ಮತ್ತು ಇತರ ಮಂಡಲಗಳಲ್ಲಿ ನೇಯುವ ವಸ್ತ್ರಗಳ ಬಗ್ಗೆ ಸಾಂದರ್ಭಿಕವಾಗಿ ಅಲ್ಲಲ್ಲಿ ಉಲ್ಲೇಖಗೊಂಡಿವೆ.

ಊರ್ಣಮ್ರದಾ ವಿ ಪ್ರಥಸ್ವಾಭ್ಯರ್ಕಾ ಅನುಷೂತ |
ಭವಾ ನಃ ಶುಭ್ರ ಸಾತಯೇ ||

(ಮಂ. ೫-೫-೪)

ಯಜ್ಞಶಾಲೆಯಲ್ಲಿ ಆಸನಾರ್ಥವಾಗಿ ಹರಡಿರುವ ದರ್ಭೆಗಳು ಊರ್ಣಮ್ರದಾ—ಎಂದರೆ ರತ್ನಗಂಬಳಿಯಂತೆ ಮೃದುವಾಗಿವೆ.

ಜನರು ಸೋಮರಸಕ್ಕಿಂತಲೂ ಭಿನ್ನವಾದ ಸುರೆಯನ್ನು ತಯಾರಿಸಿ ಮಾರುತ್ತಿದ್ದರೆನ್ನುವ ಅಂಶ ಒಂದು ಕಡೆ ಕಂಡುಬರುತ್ತದೆ.

ಹೃತ್ಸು ಪೀತಾಸೋ ಯುಧ್ಯಂತೇ ದುರ್ಮದಾಸೋ ನ ಸುರಯಾಂ |
ಊಧರ್ನ ನಗ್ನಾ ಜರಂತೇ ||

(ಮಂ. ೮-೨-೧೨)

ಇಂದ್ರನೇ ನಿನ್ನಿಂದ ಕುಡಿಯಲ್ಪಟ್ಟ ಸೋಮರಸಗಳು ಸುರಾಪಾನದಿಂದ ಪ್ರಕಟಿತವಾದ ಚಿತ್ತವಿಕಾರಗಳಂತೆ ಕಂಡುಬರುತ್ತವೆ.

ವರ್ತಕರು ಗುಂಪು ಕಟ್ಟಿಕೊಂಡು ಧನಾಪೇಕ್ಷಿಗಳಾಗಿ ದೋಣಿಗಳ ಮೂಲಕ ಸಮುದ್ರವನ್ನು ಸೇರಿ ಅಲ್ಲಿಂದ ಹಡಗುಗಳಲ್ಲಿ ಸಮುದ್ರಯಾನ ಮಾಡಿ ನಮ್ಮ ದೇಶದಿಂದ ವಸ್ತುಗಳನ್ನು ಕೊಂಡೊಯ್ದು ವ್ಯಾಪಾರ ಮಾಡಿ ಹಿಂದಿರುಗುತ್ತಿದ್ದರೆಂದು ಮಂ. ೧-೪೮-೩ ಮತ್ತು ಮಂ. ೧-೫೬-೨ ಋಕ್ಕುಗಳಿಂದ ತಿಳಿದುಬರುತ್ತದೆ.

ಇವರು ವ್ಯಾಪಾರದ ಘನತೆಯನ್ನು ಕಾಪಾಡುವ ಸಲುವಾಗಿ—

ಭೂಯಸಾ ವಸ್ನಮಚರತ್ಕನೀಯೋ
ವಿಕ್ರೀತೋ ಅಕಾನಿಷಂ ಪುನರ್ಯನ್ |
ಸ ಭೂಯಸಾ ಕನೀಯೋ ನಾರಿರೇಚೀ
ದ್ದೀನಾದಕ್ಷಾ ವಿ ದುಹಂತಿ ಪ್ರವಾಣಾಂ ||

(ಮಂ. ೪-೨೪-೯)

ನಾಗಾಭಿನಂದನ/೧೫

ವರ್ತಕ ಮತ್ತು ಕೊಳ್ಳುವವನು ಮಾರಾಟದ ಸಮಯದಲ್ಲಿ ನಷ್ಟಕ್ಕೆ ಗುರಿಯಾಗದೆ ನಿಷ್ಕರ್ಷೆಗೊಂಡಿರುವ ಪದಾರ್ಥಗಳ ಬೆಲೆಗಳಿಗೆ ಮಾನ್ಯತೆ ನೀಡಬೇಕು.

ಇದಕ್ಕೆ ಪೂರಕವಾಗಿ ತೃತ್ಸುಗಳು ಇಂದ್ರನೊಡನೆ ಯುದ್ಧ ಮಾಡುವುದಕ್ಕೆ ಸಾಧ್ಯವಾಗದೆ 'ಪ್ರಕಲವಿತ್'—ಎಂದರೆ ದ್ರೋಹ ಬಗೆಯುವ ವಾಣಿಜ್ಯೋದ್ಯಮಿಗಳಂತೆ ಓಡಿಹೋದರು, (ಮಂ. ೭-೧೮-೧೫) ಎಂದು ಸಂಹಿತೆಯಲ್ಲಿ ಹೇಳಿದೆ.

ಪ್ರಕಲವಿತ್ | ಪ್ರಕಲ ವಿದ್ವಣಿಗ್ಭವತಿ |
ಕಲಾಶ್ಚವೇದ ಪ್ರಕಲಾಶ್ಚ | ದುರ್ಮಿತ್ರಾ ಸಃ ಪ್ರಕಲ
ವಿನ್ಮಿಮಾನಾಃ ಇತ್ಯಪಿ ನಿಗಮೋಭವತಿ | —(ಯಾಸ್ಕರ ನಿರುಕ್ತ ೬-೬)—ವ್ಯಾಪಾರ ಮಾಡುವಾಗ ನ್ಯಾಯಾನ್ಯಾಯವನ್ನು ಲೆಕ್ಕಿಸದೆ ಲಾಭದ ಮೇಲೆಯೇ ದೃಷ್ಟಿಯಿಟ್ಟು ಕೆಟ್ಟ ಬುದ್ಧಿಯಿಂದ ಪ್ರವಹಿಸುವವನು ಎಂದು ಇದರ ಅರ್ಥ. ಜನರು ಸಾಲ ತೀರಿಸಲಾರದೆ ನಿದ್ದೆ ಇಲ್ಲದೆ ರಾತ್ರಿಗಳನ್ನು ಕಷ್ಟದಿಂದ ಕಳೆಯುತ್ತಿದ್ದ ಸನ್ನಿವೇಶಗಳವೆ.

(ಮಂ. ೨-೨೮-೯).

ಹಣದ ವ್ಯವಹಾರದಲ್ಲಿ ಕೊಟ್ಟ ಸಾಲಕ್ಕೆ ಎರಡರಷ್ಟು ಬಡ್ಡಿ ಪಡೆಯುವ ಕೀಕಟ ಜನಾಂಗದವರನ್ನು ಮಗಂದರೆಂದೂ (ಮಂ. ೩-೫೩-೧೪) ಇತರರನ್ನು ಕುಸೀದಿಗಳೆಂದೂ (ಮಂ. ೮-೬೬-೧೦) ಕರೆಯಲಾಗಿದೆ.

ಬೇಕನಾಟಾನ್—ಅನೇನ ಕುಸೀದಿನೋ
ವೃದ್ಧಿಜೀವಿನೋ ವಾರ್ಧುಷಿಕಾ ಉಚ್ಯಂತೇ.

ಇಂದ್ರನು ಕುಸೀದಿಗಳು ಹಣದ ತೊಂದರೆಗೆ ಸಿಕ್ಕಿ ನರಳುತ್ತಿರುವುದರಿಂದ ಹೆಚ್ಚು ಬಡ್ಡಿಯನ್ನು ಸಂಗ್ರಹಿಸುವುದನ್ನು ತಪ್ಪಿಸಲೆಂದೇ—'ಬೇಕನಾಟಾನ್'—ಎಂದರೆ ವಂಚಕರನ್ನು ನಾಶಮಾಡುತ್ತಾನೆ.

ಇಂದ್ರನು ಬೆಲೆ ಬಾಳುವ ಸ್ವತ್ತಿನ ಆಧಾರದ ಮೇಲೆ ಅಥವಾ ಕೊಟ್ಟ ಸಾಲದ ಮೇಲೆ ಕ್ರಮವಾಗಿ ಎರಡರಷ್ಟು ಬಡ್ಡಿ ಸಂಗ್ರಹಿಸಿ ಜೀವನ ನಡೆಸುವವರಿಗೆ ಮತ್ತು ಹೆಚ್ಚು ಲಾಭ ಬಡುಕ ವರ್ತಕರಿಗೆ ಕಠಿಣ ಶಿಕ್ಷೆಯನ್ನು ವಿಧಿಸುವಂತಹ ಕ್ರಮಗಳನ್ನು ಕೈಗೊಳ್ಳುವನು ಎಂದಭಿಪ್ರಾಯವು.

ಆ ಕಾಲದಲ್ಲಿಯೂ ಧನಿಕರು ಧನವನ್ನು ಭೂಮಿಯಲ್ಲಿ ಬಚ್ಚಿಟ್ಟು ಅದನ್ನು ರಕ್ಷಿಸುತ್ತಿದ್ದರು. (ಮಂ. ೮-೬೬-೪) ಕಳ್ಳರು ಹಣವನ್ನು ಅಪಹರಿಸುತ್ತಿದ್ದ ಸನ್ನಿವೇಶಗಳು (ಮಂ. ೧-೧೦೩-೬ ಮಂ. ೪-೨೮-೩ ಮಂ. ೬-೧೨-೫;

ನುತ್ತು ಮಂ. ೮-೨೯-೬)—ಋಕ್ಕುಗಳಲ್ಲಿ ಕಂಡು ಬರುತ್ತವೆ.

ಜನರು ದ್ಯೂತದಲ್ಲಿ ತಮ್ಮ ಹೆಂಡತಿಯರನ್ನು ಪಣವಾಗಿಟ್ಟು ಆಟವಾಡುತ್ತಿದ್ದರು.

> ನ ಮಾ ಮಿಮೇಥ ನ ಜಿಹಾಳ ಏಷಾ
> ಶಿವಾ ಸಖಿಭ್ಯ ಉತ ಮಹ್ಯಮಾ ಸೀತ್ |
> ಅಕ್ಷಸ್ಯಾಹ ಮೇಕ ಪರಸ್ಯ ಹೇ ತೋರನು—
> ವ್ರತಾಮಪ ಜಾಯ ಮರೋಧಂ ||

(ಮಂ. ೧೦-೩೪-೩)

ಕವಷನೆಂಬ ಹೆಸರಿನವನಾದ ನಾನು ಸಹಧರ್ಮಿಣಿಯಾದ ಪತಿವ್ರತೆಯಾದ ಹಾಗೂ ಹಿತಕಾರಿಣಿಯಾದ ನನ್ನ ಹೆಂಡತಿಯನ್ನು ಪಗಡೆಯಾಟದಲ್ಲಿ ಪಣವಾಗಿಟ್ಟು ಸೋತು ಹೋದೆನು. ದ್ಯೂತದಲ್ಲಿ ಗೆದ್ದವನು ಅವಳನ್ನು ಹಿಡಿದೆಳೆದು ಅವಮಾನ ಪಡಿಸುತ್ತಾನೆ. (ಮಂ. ೧೦-೩೪-೪)

ಈ ಪದ್ಧತಿ ಮಹಾಭಾರತದಲ್ಲಿ ದ್ರೌಪದಿಯನ್ನು ಪಣವಾಗಿಟ್ಟು ಪಾಂಡವರು ಸೋತು ಹೋದ ಘಟನೆಗೆ ಹಿನ್ನೆಲೆಯಾಗಿ ನಿಲ್ಲುತ್ತದೆ.

ಜನರು ಕಷ್ಟಪಟ್ಟು ಕೆಲಸಮಾಡಿ ಧನವನ್ನು ಸಂಪಾದಿಸುತ್ತಿದ್ದರು (ಮಂ. ೬-೬೭-೩). ಕೆಲವರು ಶ್ರೀಮಂತರ ಬಳಿ ಊಳಿಗದವರಾಗಿ ಕೆಲಸ ಮಾಡುತ್ತಿದ್ದರು. ಹೆಂಗಸರು ಹಣಕ್ಕಾಗಿ, ಅನ್ನಕ್ಕಾಗಿ ಭಿಕ್ಷೆ ಎತ್ತುತ್ತಿದ್ದ ಸನ್ನಿವೇಶಗಳೂ ಇವೆ (ಮಂ. ೪-೪೧-೯). ನಾಪಿತ ಕ್ಷೌರವೃತ್ತಿಯಿಂದ ಧನ ಸಂಪಾದನೆ ಮಾಡುತ್ತಿದ್ದನು (ಮಂ. ೧-೯೨-೪). ಋಷಿಗಳು ಇವನು ಕ್ಷೌರ ಮಾಡುವ ಕತ್ತಿಯನ್ನು ಕುರಿತು ಅದರ ಮೊನಚನ್ನು ಕುಶಾಗ್ರ ಬುದ್ಧಿಗೆ ಹೋಲಿಸಿರುವ ಪ್ರಾರ್ಥನೆ (ಮಂ.೩-೨-೧೦) ಸಮಾಜದಲ್ಲಿ ಕೀಳರಿಮೆಗೆ ಸ್ಥಾನವಿಲ್ಲವೆಂದು ಹೇಳುತ್ತದೆ.

ಯಜಮಾನರು ಕೆಲಸಗಾರರಿಗೆ ಅವರ ದುಡಿಮೆಗೆ ತಕ್ಕಂತೆ ನ್ಯಾಯವಾಗಿ ಹಣ ಕೊಡುತ್ತಿದ್ದರು (ಮಂ. ೯-೯೭-೩೮).

ತಂದೆಯು ಮರಣ ಹೊಂದುವಾಗ ತನ್ನಲ್ಲಿರುವ ಧನವನ್ನು ಪುತ್ರಾದಿಗಳಿಗೆ ಬಿಟ್ಟು ಹೋಗುವುದಕ್ಕೆ 'ರೇಕ್ಣಃ' ಎಂದು ಹೆಸರು.

(ಮಂ. ೭-೪-೭, ವಿಶೇಷ ವಿಷಯಗಳು)

ಸಮರ್ಥನಾದ ಪುರುಷನು ಧನ ವಿಭಾಗವನ್ನು ಮಾಡುವ ಮೊದಲು ಧರ್ಮ ರಹಸ್ಯವನ್ನು ತಿಳಿದು ಅದರಂತೆ ನಿರ್ಣಯ ಮಾಡುವುದಕ್ಕೆ 'ನಿಷ್ಕಾ' ಎಂದು

ಹೆಸರು. ಅಂತೆಯೇ ಅವನು ಪುತ್ರಾದಿಗಳಿಗೆ ಧನವನ್ನು ವಿಭಾಗಿಸುವ ವಿಧಾನವನ್ನು ಸಮರ್ಪಕವಾಗಿ ನೆರವೇರಿಸುತ್ತಾನೆ.

> ಧನ ವಿಭಾಗಾ ದೇ ಧರ್ಮ ರಹಸ್ಯಂ ನಿಃಶೇಷೇಣ ಸ್ಥಿತಿ ನಿರ್ಣಯೋ ನಿಷ್ಠಾ | ಸಾ ಯಸ್ಮಿನ್ನಸ್ತಿ ಸ ನಿಷ್ಠಾವಃ |
> ತಾದೃಶಂ ಧರ್ಮ ರಹಸ್ಯ ನಿರ್ಣೇತಾರ ಮಿತ್ಯರ್ಥಃ ||

—ಸಾಯಣ ಭಾಷ್ಯ

(ಮಂ. ೧೦-೬೧)

ತಂದೆ ತನ್ನ ಮೊದಲ ಮಗನಿಗೆ ಹಣವನ್ನು ಕೊಡುವನು. ಅವನು ತನ್ನ ತಮ್ಮನಿಗೆ ಅವನ ಭಾಗದ ಹಣವನ್ನು ಕೊಡುವನು (ಮಂ. ೭-೨೦-೭). ತಂದೆಯಾದವನು ವ್ಯವಹಾರ ಜ್ಞಾನವನ್ನು ಪಡೆದಿರುವ ಪುತ್ರನಿಗೆ ಧನದ ಭಾಗವನ್ನು ಕೊಡುವನು (ಮಂ. ೩-೪೫-೪). ದತ್ತು ಸ್ವೀಕಾರ ಪದ್ಧತಿ ರೂಢಿಯಲ್ಲಿತ್ತು (ಮಂ. ೭-೪-೭). ಒಂದು ವೇಳೆ ಸಹೋದರನಿದ್ದ ಪಕ್ಷದಲ್ಲಿ ಸಹೋದರಿ ಗಂಡನ ಮನೆಗೆ ಹೋಗುವವಳಾದ್ದರಿಂದ ಅವಳಿಗೆ ಪಿತ್ರಾರ್ಜಿತವಾದ ಧನ ಮತ್ತು ಇತರ ಆಸ್ತಿಯ ವಿಷಯದಲ್ಲಿ ಹಕ್ಕಿರಲಿಲ್ಲ (ಮಂ. ೩-೩೧-೨). ಆದರೆ ಅವಳು ವೃದ್ಧಳಾಗುವವರೆಗೆ ಗಂಡನನ್ನು ಪಡೆಯದೆ ತಂದೆ ತಾಯಿಗಳ ಮನೆಯಲ್ಲಿಯೇ ಇದ್ದು ಜೀವನ ನಡೆಸುವವಳಾದರೆ ಪಿತ್ರಾರ್ಜಿತ ಧನಗಳು ಲಭಿಸುತ್ತಿದ್ದುವು (ಮಂ. ೨-೧೭-೭).

ಭಾರತೀಯ ನ್ಯಾಯಾಂಗದ ಇತಿಹಾಸದ ಪರಂಪರೆಯಲ್ಲಿ ಮೊದಲಬಾರಿಗೆ ಲಿಖಿತ ರೂಪದಲ್ಲಿ ಋಗ್ವೇದ ಸಂಹಿತೆಯಲ್ಲಿ ನ್ಯಾಯಾಸ್ಥಾನದ ಅಸ್ತಿತ್ವದ ವಿಷಯ ದಾಖಲಾಗಿದೆ.

> ಅಭ್ರಾತೇವ ಪುಂಸ ಏತಿ ಪ್ರತೀಚೀ ಗರ್ತಾರುಗಿವ ಸನಯೇ ಧನಾನಾಂ|
> ಜಾಯೇವ ಪತ್ಯ ಉಶತೀ ಸುವಸಾ ಉಷಾ ಹಸ್ರೇವ ನಿರಿಣೀತೇ ಅಪ್ಸಃ ||

(ಮಂ. ೧-೧೨೪-೭)

ಉಷಾದೇವಿ ಸೂರ್ಯನ ಬಳಿಗೆ ಹೋಗುವ ವೈಖರಿಯಂತೆ ಭ್ರಾತೃರಹಿತಳೂ, ಪುತ್ರರಹಿತಳೂ ಆದ ಸ್ತ್ರೀ ಪಿತ್ರಾರ್ಜಿತವಾದ ಧನಾದಿ ಹಕ್ಕುಗಳನ್ನು ಪಡೆಯುವ ಸಲುವಾಗಿ ಅಲಂಕರಿಸಿಕೊಂಡು ನ್ಯಾಯಸ್ತಂಭದ ಬಳಿಗೆ ಹೋಗಿ ನಿಲ್ಲುತ್ತಾಳೆ.

ಆ ಕಾಲದಲ್ಲಿ ಮದುವೆಯ ಸಂದರ್ಭದಲ್ಲಿ ಕನ್ಯೆಯನ್ನು ಪಡೆಯುವ ಸಲುವಾಗಿ ಕನ್ಯಾಶುಲ್ಕ ಮತ್ತು ವರನನ್ನು ಪಡೆಯುವ ಸಲುವಾಗಿ ವರದಕ್ಷಿಣೆಯನ್ನು ನೀಡುವ ಪದ್ಧತಿ ಇದ್ದುದಕ್ಕೆ ಈ ಕೆಳಕಂಡ ಋಕ್ಕು ಸಾಕ್ಷಿಯಾಗಿ ನಿಲ್ಲುತ್ತದೆ.

ಅಶ್ರವಂ ಹಿ ಭೂರಿದಾವತ್ತರಾ ವಾಂ ವಿಜಾಮಾತುರತ ವಾ ಘಾ
ಸ್ಯಾಲಾತ್ |
ಅಥಾ ಸೋಮಸ್ಯ ಪ್ರಯತೀ ಯುವ ಭ್ಯಾಮಿಂದ್ರಾಗ್ನೀ ಸ್ತೋಮಂ
ಜನಯಾಮಿ ನವ್ಯಂ ||
(ಮಂ. ೧-೧೦೯-೨)

ವೈದಿಕ ಯುಗದ ಆರ್ಥಿಕ ವ್ಯವಸ್ಥೆಯ ಸಂದೇಶ ನಮ್ಮ ದೇಶದ ಸರ್ವಕಾಲೀನ ಜೀವನ ಮೌಲ್ಯಗಳ ತಳಹದಿಯಾಗಿದೆ. ಮಾನವ ಇಹಪರ ಸಾಧನವನ್ನು ಸಮರ್ಪಕವಾಗಿ ನಿಯಂತ್ರಿಸುವ ಸಲುವಾಗಿ ನೈತಿಕ ಮೌಲ್ಯಗಳನ್ನು ಬಿಟ್ಟುಕೊಡದೆ ಧನವನ್ನು ನಿಯಮಕ್ಕೆ ಒಳಪಟ್ಟಂತೆ ಶೇಖರಿಸಿ ಅದನ್ನು ರಕ್ಷಿಸಬೇಕು. ಅವನು ಮತ್ತು ಅವನ ಮುಂದಿನ ಪೀಳಿಗೆ ಆ ಧನವನ್ನು ವಿವೇಕದಿಂದ ನಿಯಂತ್ರಿಸುತ್ತಾ ಅವರು ಬಂಧುಗಳ ಬಳಿಗೆ ಹೋಗಿ ಧನಯಾಚನೆ ಮಾಡದೆ ಆತ್ಮ ಗೌರವದಿಂದ ಜೀವನ ನಡೆಸಬೇಕು—ಹೀಗೆಂದು ಋಷಿಗಳು, ಯಜ್ಞಕರ್ತರು ಜನ ಸಮೂಹದ ಪರವಾಗಿ ವರುಣ ದೇವನನ್ನು ಸ್ತುತಿಸಿರುವ ಈ ಕೆಳಕಂಡ ಋಕ್ಕು ಮನೋಜ್ಞ ವಾಗಿದೆ.

ಮಾಹಂ ಮಘೋನೋ ವರುಣ ಪ್ರಿಯಸ್ಯ ಭೂರಿದ್ನಾವ ಆ ವಿದಂ
ಶೂನಮಾಪೇಃ ||
ಮಾ ರಾಯೋ ರಾಜನ್ತ್ಸುಯ ಮಾದವ ಸ್ಥಾಂ ಬೃಹದ್ವದೇಮ
ವಿದಥೇ ಸುವೀರಾಃ ||
(ಋ. ಸಂ. ಮಂ. ೨-೧೭-೭)

ಕೆ. ಬಿ. ಶಿವತಾರಕ್

# ಪಾವಗಡ ತಾಲ್ಲೂಕಿನ ಪ್ರಾಗಿತಿಹಾಸ

**ಪೀಠಿಕೆ :**

ಪಾವಗಡ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ಸರ್ವೇಕ್ಷಣೆಯನ್ನು ಕೈಗೊಂಡು ದೊರೆತ ಪುರಾತತ್ವ ಅವಶೇಷಗಳ ಅಧ್ಯಯನದಿಂದಾಗಿ ಈ ಪ್ರದೇಶದ ಮಾನವನ ಇತಿಹಾಸವು ಆದಿ ಹಳೆ ಶಿಲಾಯುಗ (೧೫ರಿಂದ ೨ ಲಕ್ಷ ವರ್ಷ ಹಳೆಯದು), ಮಧ್ಯ ಹಳೆ ಶಿಲಾಯುಗ (ಸುಮಾರು ೧ ಲಕ್ಷದಿಂದ ೩೦ ಸಾವಿರ ವರ್ಷ ಹಳೆಯದು), ಅಂತ್ಯ ಹಳೆ ಶಿಲಾಯುಗ (ಸುಮಾರು ೪೦ರಿಂದ ೧೦ ಸಾವಿರ ವರ್ಷ ಹಳೆಯದು), ಸೂಕ್ಷ್ಮ ಶಿಲಾಯುಗ (ಕಿ. ಪೂ. ೧೦ರಿಂದ ೩ ಸಾವಿರ ವರ್ಷ ಹಳೆಯದು), ನೂತನ ಶಿಲಾಯುಗ (ಕ್ರಿ. ಪೂ. ೧೮೦೦ರಿಂದ ೮೦೦ ವರ್ಷ ಹಳೆಯದು), ತಾಮ್ರಶಿಲಾಯುಗ ಮತ್ತು ಬೃಹತ್ ಶಿಲಾಯುಗಗಳ ಹಾಗೂ ಇತಿಹಾಸ ಆರಂಭ ಕಾಲದವರೆಗೆ ಇದುವರೆಗೂ ತಿಳಿಯದಿದ್ದ ಹಲವಾರು ಮಹತ್ವದ ಮಾಹಿತಿಯನ್ನು ತಿಳಿಯಲು ಸಾಧ್ಯವಾಗಿದೆ.

**ಅಧ್ಯಯನದ ಇತಿಹಾಸ :**

ಪಾವಗಡ ತಾಲ್ಲೂಕಿನ ಪ್ರಾಗಿತಿಹಾಸದ ಅಧ್ಯಯನ ವೈಜ್ಞಾನಿಕವಾಗಿ ಆಗಿಲ್ಲವೆಂದೇ ಹೇಳಬಹುದು. ಆಗಿಂದಾಗ್ಗೆ ದೊರೆತಿರುವ ವಿವರಗಳನ್ನಾಧರಿಸಿ ಪ್ರಾಗಿತಿಹಾಸದ ಇತಿಹಾಸವನ್ನು ಈ ರೀತಿ ತಿಳಿಸಬಹುದು.

ಈ ಪ್ರದೇಶದ ಪ್ರಾಗಿತಿಹಾಸವು ನೂತನ ಶಿಲಾಯುಗ ಸಂಸ್ಕೃತಿಯಿಂದ ಆರಂಭವಾಗುತ್ತದೆಂದು ನಾಗಲಾಪುರ ಮತ್ತು

ಕೊಲಮಿಪಾಳ್ಯಂಗಳಲ್ಲಿ ದೊರೆತ 'ಬೂದಿಗುಡ್ಡೆ' (ರಾಮಿರೆಡ್ಡಿ ವಿ ; ೧೯೯೦ : ೮೫-೧೦೫) ಮತ್ತು ವೈ. ಎನ್. ಹೊಸಕೋಟೆಯಲ್ಲಿ ದೊರೆತ ಶಿಲಾಕೊಡಲಿ (ಶ್ರೀವತ್ಸ ಎಸ್. ವಟಿ ; ೧೯೭೯)ಗಳ ವರದಿಗಳನ್ನಾಧರಿಸಿ ತಿಳಿಯಲಾಗಿದೆ. ಅದೇ ರೀತಿ ಬೃಹತ್ ಶಿಲಾಗೋರಿಗಳು ಬಸವನ ಬೆಟ್ಟ, ಕಣಿಕಲ ಬಂಡೆ, ತಪ್ಪಗಾನದೊಡ್ಡಿ ಮತ್ತು ಪಳವಳ್ಳಿ ಪ್ರದೇಶಗಳಲ್ಲಿ (ಚಲುವರಾಜನ್ ವಿ. ಆರ್ ; ೧೯೮೭ ; ೧೬) ಇರುವ ಬಗ್ಗೆ ತಿಳಿಯಲಾಗಿತ್ತು. ಆದರೆ ಈ ಪ್ರದೇಶದ ಪ್ರಾಗಿತಿಹಾಸವು ಅತ್ಯುತ್ಕೃಷ್ಟವಾದುದೆಂಬ ಬಗ್ಗೆ ಇತ್ತೀಚೆಗಷ್ಟೇ ತಿಳಿಯಲು ಸಾಧ್ಯವಾಗಿದೆ.

**ಭೌಗೋಳಿಕ ಹಿನ್ನೆಲೆ :**

ಒಂದು ಪ್ರದೇಶದ ಇತಿಹಾಸವು ಹುಟ್ಟಿ ಬೆಳೆಯಲು ಅಲ್ಲಿನ ಭೌಗೋಳಿಕ ಲಕ್ಷಣ ಪ್ರಮುಖ ಪಾತ್ರ ವಹಿಸುತ್ತದೆ. ಆ ಪ್ರದೇಶದಲ್ಲಿ ಹುಟ್ಟಿ ಹರಿಯುವ ನದಿಗಳು, ದೊರಕುವ ಭೂಗರ್ಭ ಸಂಪತ್ತು, ಅರಣ್ಯ ಸಂಪತ್ತು, ಬೆಟ್ಟಗುಡ್ಡಗಳು ಮತ್ತು ವಾಯುಗುಣಗಳು ಮಾನವನ ಇತಿಹಾಸದ ವಿಕಸನಕ್ಕೆ ಪೂರಕವಾಗುತ್ತವೆ.

ಪಾವಗಡ ತಾಲ್ಲೂಕಿನಲ್ಲಿ ಹಬ್ಬಿರುವ ಕಗ್ಗಲ್ಲು ಬೆಟ್ಟಗಳ ಸಾಲು ಆದಿಮಾನವನ ನಿವಾಸಕ್ಕೆ ಪ್ರಶಸ್ತ ಸ್ಥಳವಾಗಿದ್ದಿತು. ಇಲ್ಲಿನ ಪ್ರಮುಖ ಬೆಟ್ಟಗಳೆಂದರೆ ನಿಡುಗಲ್ಲು, ಕಾಮನದುರ್ಗ ಮತ್ತು ಪಾವಗಡ ಬೆಟ್ಟಗಳು. ಶಿಲಾಯುಗದ ಕಾಲದಲ್ಲಿ ಶಿಲಾಯುಧಗಳನ್ನು ತಯಾರು ಮಾಡಲು ಉಪಯುಕ್ತವಾದ ಅಗ್ನಿಶಿಲೆಯ ಮಾದರಿಯಾದ ಗ್ರಾನೈಟ್ ಮತ್ತು ಕ್ಲೋಸ್‌ಪೇಟೆ ಗ್ರಾನೈಟ್ ಶಿಲೆಗಳ ಗುಂಪಿಗೆ ಸೇರಿದ ಕುರಂದ ರೀತಿಯ ಶಿಲಾಪದರಗಳು ಹಲವೆಡೆ ದೊರಕುತ್ತವೆ. ಅಲ್ಲಲ್ಲಿ ದೊರಕುವ ಬೆಣಚುಕಲ್ಲು ಮತ್ತು ಹಲವು ಮೃದುಕಲ್ಲುಗಳು ಶಿಲಾಯುಧ ತಯಾರಿಸಲು ಉಪಯುಕ್ತವಾದ ಕಲ್ಲುಗಳಾಗಿದ್ದುವೆಂದು ತಿಳಿದುಬರುತ್ತದೆ.

ಪಾವಗಡ ತಾಲ್ಲೂಕಿನಲ್ಲಿ ಅತಿ ಕಡಿಮೆ ಮಳೆ ಬೀಳುತ್ತದಾದರೂ ತಾಲ್ಲೂಕಿನ ಪೂರ್ವಭಾಗದಲ್ಲಿ ಹಾದು ಹೋಗುವ ಉತ್ತರ ಪಿನಾಕಿನಿ ನದಿ ನೀರಿನ ಆಸರೆಯನ್ನು ಹಿಂದಿನಿಂದಲೂ ಒದಗಿಸಿಕೊಂಡು ಬಂದಿದೆ ಎಂದು ಹೇಳಬಹುದು. ಇದೇ ರೀತಿ ಅರಣ್ಯ ಸಂಪತ್ತು ಕೂಡ ಪೂರಕವಾಗಿ ಮಾನವನು ಕಾಲಮಾನದುದ್ದಕ್ಕೂ ಪ್ರಕೃತಿದತ್ತ ಕೊಡುಗೆಗಳಿಗೆ ಅವಲಂಬಿಯಾಗಿ ತನ್ನ ಜೀವನ ನಡೆಸಿರುವುದನ್ನು ಕಾಣಬಹುದು.

**ಶಿಲಾಯುಗ ಸಂಸ್ಕೃತಿಗಳು :**

ಪಾವಗಡ ತಾಲ್ಲೂಕಿನಲ್ಲಿ ದೊರೆತಿರುವ ಅವಶೇಷಗಳು ಹಳೆ ಶಿಲಾಯುಗದ

ಮೂರೂ ಹಂತಗಳಿಗೂ, ಸೂಕ್ಷ್ಮ ಶಿಲಾಯುಗ, ನೂತನ ಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಗಳಿಗೂ ಅಲ್ಲದೆ ಇತಿಹಾಸ ಆರಂಭ ಕಾಲಕ್ಕೂ ಸೇರಿವೆ.

**ಅ) ಹಳೆ ಶಿಲಾಯುಗ ಸಂಸ್ಕೃತಿ :**

ಆದಿಹಳೆ ಶಿಲಾಯುಗ, ಮಧ್ಯಹಳೆ ಶಿಲಾಯುಗ ಮತ್ತು ಅಂತ್ಯಹಳೆ ಶಿಲಾಯುಗಕ್ಕೆ ಸೇರಿದ ಶಿಲಾಯುಧಗಳು ವೈ. ಎನ್. ಹೊಸಕೋಟೆ, ನಿಡುಗಲ್ಲು ಮತ್ತು ನಾಗಲಾಪುರಗಳಲ್ಲಿ ದೊರೆತಿವೆ. ಆದಿ ಹಳೆ ಶಿಲಾಯುಗದ ಕೈಗೊಡಲಿಗಳು ವೈ. ಎನ್. ಹೊಸಕೋಟೆಯಲ್ಲಿ ದೊರೆತಿವೆ. ಮಧ್ಯ ಹಳೆ ಶಿಲಾಯುಗದ ಒರೆಯುವ ಚಕ್ಕೆಗಳು, ರಂಧ್ರ ಕೊರೆಯುವ ಸೂಜಿಗಲ್ಲುಗಳು, ಬಾಣದ ಮೊನೆಗಳು ಇತ್ಯಾದಿ ಆಯುಧಗಳನ್ನು ನಿಡುಗಲ್ಲಿನಲ್ಲಿ ಶೋಧಿಸಲಾಗಿದೆ.

ಅಂತ್ಯಹಳೆ ಶಿಲಾಯುಗದ ಆಯುಧಗಳು ನಿಡುಗಲ್ಲು ಮತ್ತು ನಾಗಲಾಪುರಗಳಲ್ಲಿ ದೊರೆತಿವೆ. ಇಂತಹ ಆಯುಧಗಳನ್ನು ಮಧ್ಯದ ಭಾಗದಿಂದ ಎರಡೂ ಕಡೆಗೆ ಚಕ್ಕೆಗಳನ್ನು ತೆಗೆದು ಅಥವಾ ಬಲಪ್ರಯೋಗದಿಂದ ಚಕ್ಕೆಗಳನ್ನು ತೆಗೆದು ತಯಾರಿಸಲಾಗಿದೆ. ಈ ಸಂಸ್ಕೃತಿಯ ಒಂದು ಪ್ರಮುಖ ನೆಲೆಯು ಗುಬ್ಬಿ ತಾಲ್ಲೂಕಿನ ಮೂಗನಾಯಕನ ಕೋಟೆಯಾಗಿದೆ.

**ಆ) ಸೂಕ್ಷ್ಮ ಶಿಲಾಯುಧ ಸಂಸ್ಕೃತಿ :**

ಸೂಕ್ಷ್ಮ ಶಿಲಾಯುಧವು ನಾಗಲಾಪುರ, ನಿಡುಗಲ್ಲು, ವೈ. ಎನ್. ಹಳ್ಳಿ ಮತ್ತು ವೈ. ಎನ್. ಹೊಸಕೋಟೆಗಳಲ್ಲಿ ದೊರಕಿದ್ದು, ಅತಿ ಪ್ರಮುಖವಾದ ನೆಲೆ ನಾಗಲಾಪುರವಾಗಿದೆ. ಈ ಪ್ರದೇಶಗಳಲ್ಲಿ ಅಪಾರದರ್ಶಕ ಶಿಲೆ (Jasper)ಯು ಕಡಿಮೆ ಪ್ರಮಾಣದಲ್ಲಿ ದೊರೆಯುವುದರಿಂದ ಸ್ಥಳೀಯವಾಗಿ ದೊರಕುವ ಬೆಣಚುಕಲ್ಲು (Quartz) ಮತ್ತು ಸ್ಪಟಿಕಶಿಲೆ (Chert)ಗಳನ್ನು ಬಳಸಿ ಸೂಕ್ಷ್ಮ ಶಿಲಾಯುಧಗಳನ್ನು ತಯಾರಿಸಿರುವುದನ್ನು ಕಾಣಬಹುದು. ಇಲ್ಲಿ ದೊರೆತಿರುವ ಪ್ರಮುಖ ಶಿಲಾಯುಧಗಳ ಮಾದರಿ ಎಂದರೆ ಬಾಣದ ಮೊನೆ, ರಂಧ್ರ ಕೊರೆಯುವ ಸೂಜಿಕಲ್ಲು, ಕೊರೆಯುವ ಆಯುಧ, ಅಗಲವಾದ ತೆಳು ಚಕ್ಕೆ, ಅಲಗುಕತ್ತಿ, ಅರ್ಧ ಚಂದ್ರಾಕೃತಿಯ ಆಯುಧ ಮತ್ತು ಹೆರೆಗತ್ತಿಗಳು.

**ಇ) ನೂತನ ಶಿಲಾಯುಗ ಸಂಸ್ಕೃತಿ :**

ತುಮಕೂರು ಜಿಲ್ಲೆಯಲ್ಲಿ ಇದುವರೆವಿಗೂ ನೂತನ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ಪಾವಗಡ ತಾಲ್ಲೂಕಿನಲ್ಲಿ ಮಾತ್ರ ದೊರೆತಿವೆ. ಇಲ್ಲಿ ದೊರೆತಿರುವ ಪ್ರಮುಖ ನೆಲೆಗಳೆಂದರೆ ವೈ. ಎನ್. ಹೊಸಕೋಟೆ, ವೈ.ಎನ್. ಹಳ್ಳಿ, ಬೂದಿಬೆಟ್ಟ,

ಮರಿದಾಸನಹಳ್ಳಿ, ನಿಡುಗಲ್ಲು, ನಾಗಲಾಪುರ, ಕೊಲವಿುಪಾಳ್ಯಂ ಮತ್ತು ರಾಚಮಾರನ ಹಳ್ಳಿಗಳು. ಇವುಗಳಲ್ಲಿ ವೈ. ಎನ್. ಹೊಸಕೋಟೆಯು ಬಹು ಪ್ರಮುಖ ನೆಲೆಯಾಗಿದ್ದು ಇದು ನೂತನ ಶಿಲಾಯುಗದ ಆಯುಧ ಉದ್ಯಮ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಈ ನೆಲೆಗಳಲ್ಲಿ ದೊರೆತಿರುವ ನೂತನ ಶಿಲಾಯುಗದ ಅವಶೇಷಗಳೆಂದರೆ ಉಜ್ಜಿ ನಯಗೊಳಿಸಿದ ಶಿಲಾಯುಧಗಳು, ಮಡಕೆಯ ಚೂರುಗಳು ಮತ್ತು ಬೂದಿಗುಡ್ಡೆಗಳು. ವೈ. ಎನ್. ಹೊಸಕೋಟೆ ಮತ್ತು ವೈ. ಎನ್. ಹಳ್ಳಿಗಳಲ್ಲಿ ಹೊಸದಾಗಿ ಬೂದಿಗುಡ್ಡೆಗಳು ದೊರೆತಿದ್ದು ಅವುಗಳನ್ನು ನಾಶಮಾಡಲಾಗಿದೆ. ಆದರೆ ಈಗಾಗಲೇ ತಿಳಿದಿರುವ ಬೂದಿಗುಡ್ಡೆಗಳು ನಾಗಲಾಪುರ ಮತ್ತು ಕೊಲಮಿ ಪಾಳ್ಯಂಗಳಲ್ಲಿದ್ದು ಇವುಗಳನ್ನು ಡಾ. ವಿ. ರಾಮಿರೆಡ್ಡಿಯವರು ವರದಿ ಮಾಡಿರುವರು. ಇಲ್ಲಿ ದೊರೆತಿರುವ ಅವಶೇಷಗಳ ಅಧ್ಯಯನದಿಂದ ಈ ಪ್ರದೇಶದ ನೂತನ ಶಿಲಾಯುಗ ಸಂಸ್ಕೃತಿಯ ಬಗ್ಗೆ ತಿಳಿಯಲು ಸಹಾಯಕವಾಗಿದೆ.

**ಅವಶೇಷಗಳು :**

**೧) ಶಿಲಾಯುಧಗಳು :**

ಪಾವಗಡ ಪ್ರದೇಶದ ಹಲವು ನೆಲೆಗಳು ನೂತನ ಶಿಲಾಯುಧಗಳನ್ನು ಒದಗಿಸಿವೆ. ಉಜ್ಜಿ ನಯಗೊಳಿಸಿದ ಆಯುಧಗಳ ಹಲವಾರು ಮಾದರಿಗಳನ್ನು ಕಾಣಬಹುದು. ವೈ. ಎನ್. ಹೊಸಕೋಟೆಯಲ್ಲಿ ಅತಿ ಹೆಚ್ಚು ಸಂಖ್ಯೆಯಲ್ಲಿ ದೊರೆತಿರುವ ಈ ಆಯುಧಗಳು ತಯಾರಿಕೆಯ ವಿವಿಧ ಹಂತಗಳಲ್ಲಿರುವುದರಿಂದ ಈ ಸ್ಥಳವು ನೂತನ ಶಿಲಾಯುಗದ ಉದ್ಯಮ ಕೇಂದ್ರವೆಂದೇ ಹೇಳಬಹುದು. ಇಲ್ಲಿ ದೊರೆತಿರುವ ವಿವಿಧ ಮಾದರಿಯ ಆಯುಧಗಳನ್ನಾಧರಿಸಿ ಅವುಗಳನ್ನು ಈ ರೀತಿಯಾಗಿ ಆಕೃತಿ ವರ್ಗೀಕರಣ ಮಾಡಬಹುದು.

ಅ) ಉಜ್ಜಿದ ಅಂಚಿನ ಆಯುಧಗಳು

 ೧) ತೆಳು ಚಕ್ಕೆ ಮತ್ತು ಉಜ್ಜಿದ ಅಂಚಿನ ಆಯುಧಗಳು

 ೨) ಕುಟ್ಟಿದ ಮತ್ತು ಉಜ್ಜಿದ ಅಂಚಿನ ಆಯುಧಗಳು

 ೩) ತೆಳು ಚಕ್ಕೆಯಂತೆ ಕುಟ್ಟಿದ ಮತ್ತು ಉಜ್ಜಿದ ಅಂಚಿನ ಆಯುಧಗಳು

 ೪) ಉಜ್ಜಿದ ಅಂಚು ಮಾತ್ರ ಇರುವ ಆಯುಧಗಳು

ಆ) ಪೂರ್ಣವಾಗಿ ಉಜ್ಜಿರುವ ಆಯುಧಗಳು

ಇ) ಬಾಚಿಗಳು

ಈ) ಉಳಿಗಳು

ಉ) ರಂಧ್ರ ಕೊರೆದಿರುವ ಚಕ್ರಾಕಾರದ ಕಲ್ಲುಗಳು (ಈ ಆಯುಧವನ್ನು ಅಗೆಯುವ ಕೋಲುಗಳಿಗೆ ಭಾರವನ್ನೊದಗಿಸಲು ರಂಧ್ರದ ಮೂಲಕ ಸೇರಿಸುತ್ತಿದ್ದರು)

ಕೆಲವು ಸ್ಥಳಗಳಲ್ಲಿ ಆಯುಧಗಳನ್ನು ಬಂಡೆಗೆ ಉಜ್ಜಿ ನಯಗೊಳಿಸಿರುವುದರಿಂದ ಉಜ್ಜಿದ ಗುಳಿಗಳನ್ನು ಕಾಣಬಹುದು. ಹೀಗಾಗಿ ಇದೇ ಸ್ಥಳಗಳಲ್ಲಿ ಆಯುಧವನ್ನು ಸಿದ್ಧಗೊಳಿಸಲಾಗಿದೆ ಎಂಬ ಅಂಶ ಸ್ಪಷ್ಟವಾಗುತ್ತದೆ.

ಇಂತಹ ನಯಗೊಳಿಸಿದ ಕಲ್ಲಿನ ಆಯುಧಗಳನ್ನು ಉಪಯೋಗಿಸುವಾಗ ಅವುಗಳಿಗೆ ಮರದ ಹಿಡಿಗಳನ್ನು ಮಾಡುತ್ತಿದ್ದರು. ಸಾಮಾನ್ಯವಾಗಿ ಚೂಪಾದ ಮೇಲ್ಭಾಗ ಅಥವಾ ಸಮತಟ್ಟಾದ ಮೇಲ್ಭಾಗವಿರುವ ಕೊಡಲಿಗಳನ್ನು ತಯಾರಿಸುತ್ತಿದ್ದರು. ಇಂತಹ ಕಲ್ಲಿನ ಆಯುಧಗಳನ್ನು ಹಿಡಿಕೆಗೆ ಸೇರಿಸಲು ಅನುಕೂಲವಾಗುತ್ತಿದ್ದಿತು. ಅಂಚಿನ ಆಯುಧಗಳು ಬಹು ಮುಖ್ಯವೂ ಅತ್ಯವಶ್ಯವಾದವುಗಳೂ ಆಗಿವೆ. ಅಂಚಿನ ಆಯುಧಗಳನ್ನು ಮರ ಕಡಿಯಲು, ಸೀಳಲು ಉಪಯೋಗಿಸುತ್ತಿದ್ದರು. ಮರವನ್ನು ಕೆತ್ತಿ ಮಟ್ಟು ಮಾಡುವುದರಲ್ಲಿ ಬಾಚಿಯು ಉಪಯೋಗವಾಗುತ್ತಿದ್ದಿತು. ಕಲ್ಲಿನ ಉಳಿಗಳನ್ನು ನೆಲವನ್ನು ಅಗೆಯಲು ಮತ್ತು ಇನ್ನಿತರ ಉಪಯೋಗಕ್ಕೆ ಬಳಸಲಾಗುತ್ತಿದ್ದಿತು. ಈ ರೀತಿಯ ಎರಡು ಉಳಿಗಳು ವೈ.ಎನ್. ಹಳ್ಳಿಯಲ್ಲಿ ದೊರೆತಿವೆ. ಇದರಲ್ಲಿ ಒಂದು ಉಳಿಯನ್ನು ಉಜ್ಜಿ ನಯಗೊಳಿಸಿದ್ದರೆ ಮತ್ತೊಂದನ್ನು ಅರ್ಧ ಮಾತ್ರ ನಯಗೊಳಿಸಲಾಗಿದೆ.

ಒಟ್ಟಿನಲ್ಲಿ ತನ್ನ ವಿವಿಧ ಅವಶ್ಯಕತೆಗೆ ಬೇಕಾಗುವ ವಿವಿಧ ಮಾದರಿಯ ಆಯುಧಗಳನ್ನು ಶಿಲೆಯಲ್ಲಿಯೇ ತಯಾರಿಸಿ ತನ್ನ ಬೇಡಿಕೆಗಳನ್ನು ಈಡೇರಿಸಿಕೊಂಡ ಒಂದು ಉನ್ನತ ಮಾದರಿಯ ಸಂಸ್ಕೃತಿಯ ಬೆಳವಣಿಗೆಯನ್ನು ಇಲ್ಲಿ ಕಾಣಬಹುದು.

**೨) ಮಡಕೆಗಳು :**

ಪಾವಗಡ ಪ್ರದೇಶದ ಹಲವು ನೆಲೆಗಳಲ್ಲಿ ನೂತನ ಶಿಲಾಯುಗದ ಮಡಕೆ ಚೂರುಗಳು ದೊರೆತಿದ್ದು, ಇವು ಈ ಸಂಸ್ಕೃತಿಯ ಬಗ್ಗೆ ಹೆಚ್ಚು ತಿಳಿಸುವ ಆಕರಗಳಾಗಿವೆ. ಈ ಸ್ಥಳಗಳಲ್ಲಿ ದೊರೆತಿರುವ ಒರಟಾದ ಅಥವಾ ನಯಗೊಳಿಸಿದ ಬೂದು ಬಣ್ಣದ ಮಣ್ಪಾತ್ರೆಗಳು ಪ್ರಮುಖವಾದವುಗಳು. ಇವುಗಳನ್ನು ಮತ್ತೆ ವಿಭಾಗಿಸಿ ಬೂದು ಬಣ್ಣದ ಮತ್ತು ಕೆಂಪು ಬಣ್ಣದ ಮಡಕೆಗಳೆಂದು ಹೇಳಲಾಗಿದೆ. ಇವುಗಳನ್ನು ನೂತನ ಶಿಲಾಯುಗದ ಆರಂಭದಲ್ಲಿ ಕೈನಲ್ಲಿ ಮಾಡಲಾಗುತ್ತಿತ್ತು. ನಂತರದಲ್ಲಿ ಚಕ್ರವನ್ನು ಬಳಸಿ ಮಡಕೆ ತಯಾರಿಸಿರುವುದು ತಿಳಿಯುತ್ತದೆ. ಜೇಡಿ ಮಣ್ಣಿನಲ್ಲಿ ಈ ಮಡಕೆಗಳನ್ನು ತಯಾರಿಸುತ್ತಿದ್ದರು. ಇವುಗಳನ್ನು ತೆರೆದ ಕುಂಬಾರ ಕುಲುಮೆಯಲ್ಲಿ ಸುಡುತ್ತಿದ್ದುದರಿಂದ ಹೆಚ್ಚು ಶಾಖ ಸಿಗದೆ ಅರ್ಧ ಸುಟ್ಟಂತಾಗುತ್ತಿತ್ತು. ಹಾಗಾಗಿ ಈ ಮಡಕೆಗಳು ಬೂದು ಬಣ್ಣ ಅಥವಾ ಬೂದು–ಕಪ್ಪು ಬಣ್ಣದಲ್ಲಿರುತ್ತಿದ್ದವು. ಇಂತಹ ಮಡಕೆಗಳ ಆಕಾರದಲ್ಲಿಯೂ ಸಾಕಷ್ಟು ವೈವಿಧ್ಯತೆ

ಯನ್ನೂ ಕಾಣಬಹುದು. ಅಳವಿರುವ ಬಟ್ಟಲು, ವಿವಿಧ ರೀತಿಯ ಲೋಟಗಳು, ನೀರಿನ ಗಡಿಗೆಗಳು ಬಹು ಪ್ರಮುಖ ಆಕಾರದ ಮಣ್ಪಾತ್ರೆಗಳೆಂದು ಹೇಳಬಹುದು. ರಂಧ್ರಗಳಿಂದ ಕೂಡಿದ ಪಾತ್ರೆಗಳನ್ನು ಬಳಸಿರುವುದನ್ನು ಕಾಣಬಹುದು. ಇಂತಹ ಪಾತ್ರೆಗಳು ವೈ. ಎನ್. ಹೊಸಕೋಟೆಯಲ್ಲಿ ದೊರೆತಿವೆ. ಕೆಲವು ಬಾರಿ ಮಡಕೆ ತಯಾರಿಸುವಾಗ ಕಾಗೆ ಬಂಗಾರ (Mica) ಮತ್ತು ಮರಳನ್ನು ಮಿಶ್ರಮಾಡಿರುವುದನ್ನೂ ಕಾಣಬಹುದು.

ಇಂತಹ ದೈನಂದಿನ ಉಪಯೋಗದ ಮಡಕೆಗಳು ಇವರ ಜೀವನದ ಬಗ್ಗೆ ಉಪಯುಕ್ತ ಮಾಹಿತಿಯನ್ನೊದಗಿಸಿ ನೂತನ ಶಿಲಾಯುಗ ಸಂಸ್ಕೃತಿಯ ಜನರ ಬಗ್ಗೆ ತಿಳಿಯಲು ಸಹಾಯಕವಾಗಿವೆ.

೩) ಬೂದಿಗುಡ್ಡೆ :

ನೂತನ ಶಿಲಾಯುಗ ಸಂಸ್ಕೃತಿಯ ಒಂದು ಪ್ರಮುಖ ಅವಶೇಷವಾದ ಬೂದಿಗುಡ್ಡೆಗಳು ಕಳೆದ ಒಂದೂವರೆ ಶತಮಾನದಿಂದಲೂ ಪುರಾತತ್ವಜ್ಞರನ್ನು ಆಕರ್ಷಿಸುತ್ತಿವೆ.

ಪಾವಗಡ ತಾಲ್ಲೂಕಿನಲ್ಲಿ ನಾಲ್ಕು ಬೂದಿಗುಡ್ಡೆಗಳ ಅವಶೇಷಗಳನ್ನು ಕಾಣಬಹುದು. ನಾಗಲಾಪುರ ಮತ್ತು ಕೊಲಮಿಪಾಳ್ಯಂನ ಬೂದಿಗುಡ್ಡೆಗಳನ್ನು ಪ್ರೊ|| ರಾಮಿರೆಡ್ಡಿಯವರು ವರದಿ ಮಾಡಿರುವರು. ನನ್ನ ಸರ್ವೇಕ್ಷಣೆಯ ಸಮಯದಲ್ಲಿ ವೈ. ಎನ್. ಹೊಸಕೋಟೆ ಮತ್ತು ವೈ. ಎನ್. ಹಳ್ಳಿಗಳಲ್ಲಿ ಬೂದಿಗುಡ್ಡೆಗಳಿದ್ದ ಬಗ್ಗೆ ತಿಳಿಯಿತು. ಈ ಬೂದಿಗುಡ್ಡೆಗಳು ಮೂಲರೂಪದಲ್ಲಿಲ್ಲ. ಭೂಮಿಯನ್ನು ಕೃಷಿಗೆ ಉಪಯೋಗಿಸುವ ಸಲುವಾಗಿ ಬೂದಿಗುಡ್ಡೆಗಳನ್ನು ಹಾಳು ಮಾಡಲಾಗಿದೆ. ಈ ಎರಡೂ ಸ್ಥಳಗಳೂ ನೂತನ ಶಿಲಾಯುಗ ಸಂಸ್ಕೃತಿಯ ವಾಸ್ತವ್ಯದ ಸ್ಥಳಗಳಾಗಿರುವುದರಿಂದ ಈ ಬೂದಿಗುಡ್ಡೆಗಳು ಕೂಡ ಈ ಸಂಸ್ಕೃತಿಗೇ ಸೇರಿದವುಗಳೆಂದು ಊಹಿಸಬಹುದಾಗಿದೆ.

೪) ತಾಮ್ರ ಶಿಲಾಯುಗ ಸಂಸ್ಕೃತಿ :

ವೈ. ಎನ್. ಹೊಸಕೋಟೆಯಲ್ಲಿ ಮತ್ತು ನಿಡುಗಲ್ಲಿನಲ್ಲಿ ದೊರೆತ ಕೆಲವು ಮಡಕೆ ಚೂರುಗಳು ಕುತೂಹಲಭರಿತವಾದವುಗಳಾಗಿವೆ. ಇವು ಮಹಾರಾಷ್ಟ್ರದ ತಾಮ್ರ ಶಿಲಾಯುಗದ ಮಡಕೆಯ ಮಾದರಿಯಲ್ಲಿಯೇ ಇವೆ. ಪಾವಗಡ ಪ್ರದೇಶಕ್ಕೆ ದಖನ್ ತಾಮ್ರ ಶಿಲಾಯುಗ ಸಂಸ್ಕೃತಿಯು ವಿಸ್ತರಿಸಿರುವ ಸಾಧ್ಯತೆ ಇದೆ.

ನನ್ನ ಇತ್ತೀಚಿನ ಪುನರ್ ಪರಶೀಲನೆಯ ಫಲವಾಗಿ ವೈ. ಎನ್. ಹಳ್ಳಿ ಮತ್ತು

ವೈ.ಎನ್. ಹೊಸಕೋಟೆಗಳಲ್ಲಿ ಬೆಣಚುಕಲ್ಲು ಮತ್ತು ಸ್ಫಟಿಕ ಶಿಲೆಯಲ್ಲಿ ತಯಾರಿಸಿದ ಅಲಗುಳ್ಳ ನೀಳ ಚಕ್ಕೆ ಆಯುಧಗಳು ಒಂದೊಂದು ದೊರೆತಿವೆ. ಅಲ್ಲದೆ ತಿರುಳು ಗಲ್ಲುಗಳೂ ದೊರೆತಿದ್ದು ತಾಮ್ರ ಶಿಲಾಯುಗ ಸಂಸ್ಕೃತಿಯು ಇಲ್ಲಿದ್ದ ಬಗ್ಗೆ ಸೂಚ್ಯ ಮಾಹಿತಿಯನ್ನೊದಗಿಸುತ್ತವೆ.

೫) ಕಬ್ಬಿಣ ಯುಗದ ಬೃಹತ್ ಶಿಲಾಸಮಾಧಿ ಸಂಸ್ಕೃತಿ :

ಬೃಹತ್ ಶಿಲಾಯುಗ ಸಂಸ್ಕೃತಿಯು ಮಾನವನ ಜೀವನವು ಸುಸಜ್ಜಿತ ಘಟ್ಟ ವೆಂದೇ ಹೇಳಬಹುದು. ಈ ಜನರ ಸಂಸ್ಕೃತಿಯ ಕುರುಹುಗಳನ್ನು ದಕ್ಷಿಣ ಭಾರತದ ತುಂಬೆಲ್ಲಾ ಕಾಣಬಹುದು. ಪಾವಗಡದ ಪ್ರದೇಶದಲ್ಲಿಯೂ ಇವರ ಶಿಲಾಗೋರಿ ಗಳನ್ನೂ ಮತ್ತು ನೆಲೆಗಳನ್ನು ಸ್ಪಷ್ಟವಾಗಿ ಗುರ್ತಿಸಲು ಸಾಧ್ಯವಾಗಿದೆ. ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳಿರುವೆಡೆಯಲ್ಲಿ ನೂತನ ಶಿಲಾಯುಗದ ನೆಲೆಗಳೂ ಇರುವುದರಿಂದ ಇದು ಮುಂದುವರಿದ ಸಂಸ್ಕೃತಿಯಾಗಿದೆ ಎಂದು ಹೇಳಬಹುದು. ಈ ಪ್ರದೇಶದ ಪ್ರಮುಖ ನೆಲೆಗಳೆಂದರೆ ವೈ. ಎನ್. ಹೊಸಕೋಟೆ, ವೈ. ಎನ್. ಹಳ್ಳಿ, ರಾಜವಾರನಹಳ್ಳಿ, ಬೂದಿಬೆಟ್ಟ ಮತ್ತು ನಿಡುಗಲ್ಲುಗಳು.

ಈ ಸಂಸ್ಕೃತಿಯ ಜನರು ಕೆಂಪು-ಕಪ್ಪು ಬಣ್ಣದ ಮಡಕೆಯನ್ನು, ಜೊತೆಗೆ ಕಬ್ಬಿಣದ ಆಯುಧಗಳನ್ನೂ ಬಳಸುತ್ತಿದ್ದುದು ತಿಳಿದುಬರುತ್ತದೆ. ಬೂದಿಬೆಟ್ಟದಲ್ಲಿ ಒಂದು ಹಾಳಾದ ಶಿಲಾಗೋರಿಯನ್ನು ಸ್ವಸ್ತಿಕ ಶೈಲಿಯಲ್ಲಿ ನಿರ್ಮಿಸಲಾಗಿದ್ದು ಕಪ್ಪು, ಕೆಂಪು ಮತ್ತು ಕೆಂಪು-ಕಪ್ಪು ಬಣ್ಣದ ಮಡಕೆಯ ಚೂರುಗಳು ದೊರೆತಿವೆ. ಇವರ ಸಮೀಪದಲ್ಲಿಯೇ ಒಂದು 'ಕಲ್ಗುಡಿ' ಎಂದು ಕರೆಯುವ ಶಿಲಾಗೋರಿಯಿದ್ದು ಅದು ಸಾಕಷ್ಟು ಹಾಳಾಗಿದೆ. ಇದರ ಎತ್ತರ ೨೧೫ ಸೆಂ. ಮೀ. ನಿಲ್ಲಿಸಿರುವ ಎರಡು ಕಲ್ಲುಗಳು ಮಾತ್ರ ಉಳಿದಿವೆ. ಮುಚ್ಚಳಿಕೆ ಕಲ್ಲನ್ನು ಅಲ್ಪಸ್ವಲ್ಪ ಹಾಳು ಮಾಡ ಲಾಗಿದೆ. ವೈ. ಎನ್. ಹೊಸಕೋಟೆಯ ಪ್ರದೇಶದಲ್ಲಿಯೂ ಇಂತಹ ಶಿಲಾಗೋರಿ ಗಳಿದ್ದಿರಬೇಕು. ಆದರೆ ಅವುಗಳನ್ನೆಲ್ಲಾ ತೆಗೆದು ಕೃಷಿ ಭೂಮಿ ಮಾಡಲಾಗಿದೆ.

**ಇತಿಹಾಸ ಆರಂಭಕಾಲ :**

ಇದುವರೆವಿಗೂ ತಿಳಿದಿದ್ದಂತೆ ತುಮಕೂರು ಜಿಲ್ಲೆಯ ಇತಿಹಾಸವು ತಲಕಾಡು ಗಂಗರ ಇತಿಹಾಸದಿಂದಲೇ ಪ್ರಾರಂಭವಾಗುತ್ತದೆ ಎಂದು ತಿಳಿಯಲಾಗಿತ್ತು. ಆದರೆ ಇತ್ತೀಚಿನ ಸರ್ವೇಕ್ಷಣೆಯಲ್ಲಿ ದೊರೆತಿರುವ ಇತಿಹಾಸ ಆರಂಭ ಕಾಲದ ಮಡಕೆ ಚೂರುಗಳಿಂದಾಗಿ ಈ ಪ್ರದೇಶದ ಇತಿಹಾಸವು ಇನ್ನೂ ಎರಡು ಶತಮಾನಗಳಷ್ಟು ಮುಂಚೆಯೇ ಆರಂಭವಾಗುತ್ತದೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ಕಾಲದ ಮಡಕೆ ಚೂರುಗಳು ವೈ. ಎನ್. ಹೊಸಕೋಟೆ, ವೈ. ಎನ್. ಹಳ್ಳಿ, ನಿಡುಗಲ್ಲು,

ರಾಚಮಾರನಹಳ್ಳಿ ಮತ್ತು ಮರಿದಾಸನಹಳ್ಳಿಗಳಲ್ಲಿ ದೊರೆತಿವೆ. ಇವುಗಳಲ್ಲಿ ರಾಚಮಾರನಹಳ್ಳಿಯು ಅತಿ ಪ್ರಮುಖವಾದ ನೆಲೆಯಾಗಿದೆ.

ಈ ಪ್ರದೇಶದಲ್ಲಿ ದೊರೆತಿರುವ ಕೆಂಪು, ಕಪ್ಪು ಮತ್ತು ಕಪ್ಪು-ಕೆಂಪು ಬಣ್ಣದ ಮಡಕೆ ಚೂರುಗಳು ಮತ್ತು ಇವುಗಳ ಮೇಲೆ ಬಿಳಿ ಬಣ್ಣದಲ್ಲಿ ಮತ್ತು ಕಂದು ಕೆಂಪು ಬಣ್ಣದಲ್ಲಿ ಹಲವಾರು ಮಾದರಿಯ ರೇಖಾ ಮತ್ತು ಚುಕ್ಕಿ ಚಿತ್ರಗಳನ್ನು ಚಿತ್ರಿಸಿ ರುವರು. ಇದೇ ರೀತಿಯ ಮಡಕೆಗಳನ್ನು ನೆರೆಯ ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ ಮತ್ತು ಬ್ರಹ್ಮಗಿರಿಗಳಲ್ಲಿ ಕಾಣಬಹುದು.

ರಾಚಮಾರನಹಳ್ಳಿಯಲ್ಲಿ ದೊರೆತಿರುವ ಒಂದು ಮಡಕೆಯ ಚೂರಿನ ಮೇಲೆ ಚೇಳಿನ ರೀತಿಯ ಚಿತ್ರವನ್ನು ಬಿಡಿಸಲಾಗಿದೆ. ತಕ್ಷಣ ನೋಡುವಾಗ ಚೇಳಿನಂತೆ ಕಂಡರೂ ಕೂಡ, ಸರಿಯಾಗಿ ಗಮನಿಸಿದಾಗ ಅದು ಯಾವುದೋ ಒಂದು ಜಲಚರ ಪ್ರಾಣಿಯಂತೆ ಕಾಣಿಸುತ್ತದೆ. ಇದರ ಬಗ್ಗೆ ಪೂರ್ಣ ಮಾಹಿತಿ ದೊರೆತಲ್ಲಿ ಹಲವು ಹೊಸ ವಿಷಯಗಳು ಈ ಕಾಲದ ಸಂಸ್ಕೃತಿಯ ಬಗ್ಗೆ ತಿಳಿಯಬಹುದು.

ಪಾವಗಡ ಪ್ರದೇಶದಲ್ಲಿ ಈ ಕಾಲದ ಶಿಲಾಶಾಸನಗಳಾವುವೂ ದೊರಕ ದಿದ್ದರೂ, ಈ ಪ್ರದೇಶವೆಲ್ಲಾ ಇತಿಹಾಸ ಆರಂಭ ಕಾಲದಲ್ಲಿ ಶಾತವಾಹನರ ಆಳ್ವಿಕೆಗೆ ಸೇರಿತ್ತೆಂಬ ಅಂಶ ಸ್ಪಷ್ಟವಾಗುತ್ತದೆ.

**ಕರ್ನಾಟಕದ ಪ್ರಾಗಿತಿಹಾಸದ ಮೇಲೆ ಪ್ರಭಾವ :**

ತುಮಕೂರು ಜಿಲ್ಲೆಯಲ್ಲಿ ಇದುವರೆವಿಗೂ ಪ್ರಾಗೈತಿಹಾಸಿಕ ದೃಷ್ಟಿಯಿಂದ ಸರ್ವೇಕ್ಷಣೆಯನ್ನು ಕೈಗೊಂಡೇ ಇರಲಿಲ್ಲ. ಹೀಗಾಗಿ ಆದಿಮಾನವನ ಚಲನ-ವಲನೆಯ ಬಗ್ಗೆ ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗಿರಲಿಲ್ಲ. ಆದರೆ ಇತ್ತೀಚಿನ ಸರ್ವೇಕ್ಷಣೆಯ ಫಲವಾಗಿ ಕರ್ನಾಟಕದ ಪ್ರಾಗಿತಿಹಾಸದ ಪೂರ್ಣಚಿತ್ರಣವನ್ನು ಪಡೆಯಲು ಸಾಧ್ಯವಾಗುತ್ತದೆ.

ಪಾವಗಡ ಪ್ರದೇಶದ ಅಲ್ಲದೆ ತುಮಕೂರು ಜಿಲ್ಲೆಯ ಪ್ರಾಗಿತಿಹಾಸದ ಪರಿಶೀಲನೆಯಿಂದ ಮಾನವನ ಆರಂಭದಿಂದ ಹಿಡಿದು ನಾಗರಿಕನಾದ ಹಂತದ ವರೆಗಿನ ಜನಜೀವನದ ಬದಲಾವಣೆಗಳ ಬಗ್ಗೆ ತಿಳಿಯಲು ಸಾಧ್ಯವಾಗುತ್ತದೆ. ಅಲ್ಲದೆ ಇಲ್ಲಿ ದೊರೆತ ಎಲ್ಲಾ ಸಂಸ್ಕೃತಿಗಳ ಅವಶೇಷಗಳೂ ಈ ಪ್ರದೇಶದ ಮಾನವನ ಇತಿಹಾಸದ ಮೇಲೆ ಬೆಳಕು ಚೆಲ್ಲಲು ಪ್ರಮುಖ ಪಾತ್ರವಹಿಸಿವೆ.

## ಗ್ರಂಥಋಣ


ಅಭಿಶಂಕರ್ ಕೆ. ೧೯೬೯ **ತುಮಕೂರು ಡಿಸ್ಟ್ರಿಕ್ಟ್ ಗೆಜಿಟಿಯರ್,** ಬೆಂಗಳೂರು

ಗುರುರಾಜರಾವ್ ಬಿ. ಕೆ. ೧೯೭೦ **ಕರ್ನಾಟಕದ ಶಿಲಾಯುಗ ಸಂಸ್ಕೃತಿಗಳು** ಪ್ರಸಾರಾಂಗ, ಮೈಸೂರು ವಿ.ವಿ. ಮೈಸೂರು

" ೧೯೭೧ **ಕರ್ನಾಟಕದ ಲೋಹಯುಗ ಸಂಸ್ಕೃತಿಗಳು** ಪ್ರಸಾರಾಂಗ, ಮೈಸೂರು ವಿ. ವಿ. ಮೈಸೂರು

ಗೋಪಾಲ್ ಬಾ. ರಾ. ೧೯೭೧ **ಕರ್ನಾಟಕದಲ್ಲಿ ನವಶಿಲಾಯುಗ** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಚಲುವರಾಜನ್ ವಿ.ಆರ್. ೧೯೮೭ **ಪಾವಗಡ ತಾಲ್ಲೂಕು ದರ್ಶನ** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

ರಾಮಿರೆಡ್ಡಿ ವಿ. ೧೯೯೦ "ಆ್ಯಶ್ ಮೌಂಡ್ಸ್ ಇನ್ ಸೌತ್ ಇಂಡಿಯಾ–ಎ ರಿವ್ಯೂ" **ಆರ್ಕಿಯಾಲಜಿ ಇನ್ ಕರ್ನಾಟಕ** ಸಂ : ಎ. ಸುಂದರ, ಡೈರಕ್ಟರೇಟ್ ಆಫ್ ಆರ್ಕಿಯಾಲಜಿ ಆಂಡ್ ಮ್ಯೂಸಿಯಂಸ್ ಇನ್ ಕರ್ನಾಟಕ ; ಮೈಸೂರು

ಶಿವತಾರಕ್ ಕೆ. ಬಿ. ೧೯೯೧(ಎ) **"ನಿಯೋಲಿತಿಕ್ ಸೈಟ್ಸ್ ಆಫ್ ತುಮಕೂರ್ ರೀಜನ್"** ಎಂಬ ಸಂಪ್ರಬಂಧವನ್ನು ಕನ್ನಡ ಸಂಶೋಧನಾ ಸಂಸ್ಥೆ, ಧಾರವಾಡ ಇಲ್ಲಿ ಮಂಡಿಸಲಾಗಿತ್ತು. (ಅಪ್ರಕಟಿತ)

ಶಿವತಾರಕ್ ಕೆ. ಬಿ. ೧೯೯೧(ಬಿ) "ತುಮಕೂರು ಜಿಲ್ಲೆಯಲ್ಲಿ ಇತ್ತೀಚೆಗೆ ದೊರೆತ ಕೆಲವು ಪ್ರಾಗೈತಿಹಾಸಿಕ ನೆಲೆಗಳು"
**ಇತಿಹಾಸ ದರ್ಶನ-೭**
ಕರ್ನಾಟಕ ಇತಿಹಾಸ ಅಕಾಡೆಮಿ (ರಿ.)
ಬೆಂಗಳೂರು

ಸುಂದರ ಎ. (ಸಂ) ೧೯೯೦ **ಆರ್ಕಿಯಾಲಜಿ ಇನ್ ಕರ್ನಾಟಕ**
ಡೈರೆಕ್ಟರೇಟ್ ಆಫ್ ಆರ್ಕಿಯಾಲಜಿ ಅಂಡ್ ಮ್ಯೂಸಿಯಂಸ್ ಇನ್ ಕರ್ನಾಟಕ,
ಮೈಸೂರು

ಡಾ|| ಸೂರ್ಯನಾಥ ಕಾಮತ್

# ಭಾರತದ ಅಧಿರಾಜತ್ವ ಕರ್ನಾಟಕಕ್ಕೆ ಬಂದಾಗ

ಭಾರತದಲ್ಲಿ ಐತಿಹಾಸಿಕ ದಾಖಲೆಗಳಿರುವ ಇತಿಹಾಸಯುಗ ಆರಂಭವಾದಾಗ ಭಾರತದ ಅಧಿರಾಜತ್ವವು (Paramountcy) ಮಗಧದಲ್ಲಿ ನೆಲೆಗೊಂಡಿತ್ತು. ನಂದರು, ಮೌರ್ಯರು, ಶುಂಗರು, ಕಣ್ವರು, ಹಾಗೂ ಗುಪ್ತರು ಮಗಧದಲ್ಲಿನ ಪಾಟಲೀಪುರದಿಂದ ಭಾರತದ ಬಹು ಭಾಗಗಳನ್ನು ಆಳಿದರು. ಇಡೀ ಭರತ ವರ್ಷವು ಈ ರಾಜ ಮನೆತನಗಳ ಆಡಳಿತಕ್ಕೆ ಒಳಪಟ್ಟಿರಲಿಲ್ಲವಾದರೂ ದೇಶದ ಭಾರಿ ದೊಡ್ಡ ಭಾಗ ಈ ರಾಜ ಮನೆತನಗಳ ವಶದಲ್ಲಿತ್ತು. ಆವರ ರಾಜ್ಯದ ಅನೇಕ ನೆರೆಯ ರಾಜರು ಮಗಧರಾಜರ ಅಧೀನರಾಗಿದ್ದರು. ಇಲ್ಲವೆ ಅವರ ಜೊತೆ ಸ್ನೇಹದಿಂದಿದ್ದರು. ಕೆಲವೊಮ್ಮೆ ಈ ಹಿರಿಯ ರಾಜವಂಶಕ್ಕೆ ಕಪ್ಪವನ್ನು ಇಲ್ಲವೆ ನೆಪ ಮಾತ್ರದ ಕಾಣಿಕೆಯನ್ನು ಕೊಡುವ ಪದ್ಧತಿಯನ್ನು ಈ ನೆರೆ ರಾಜ್ಯಗಳು ಇರಿಸಿಕೊಂಡಿದ್ದುವು. ಒಟ್ಟಿನಲ್ಲಿ ಮಗಧವು ಭಾರತದ ಇತಿಹಾಸಾಭ್ಯಾಸಿಗಳ ಅಗ್ರಗಮನವನ್ನು ಸೆಳೆಯುವ ಕಾಲ ಅದಾಗಿತ್ತು.

ಹರ್ಯಂಕರು, ನಂದರು, ಮೌರ್ಯರು, ಕಾಣ್ವರು, ಶುಂಗರು, ಮಗಧದ ರಾಜರಾಗಿ ಭಾರತದ ಅಧಿರಾಜರೆನಿಸಿಕೊಂಡರು. ಗುಪ್ತರ ಪತನಾನಂತರ ಮೆಲ್ಲಮೆಲ್ಲನೆ ಮಗಧಕ್ಕಿದ್ದ ಪ್ರಾಶಸ್ತ್ಯ ಕಡಿಮೆಯಾಯಿತು. ಮೌಖರಿಗಳ (Maukharis) ರಾಜಧಾನಿಯಾಗಿದ್ದ ಕನೋಜದ ಮಹತ್ವ ಹೆಚ್ಚಿತು. ಹರ್ಷನ ಕಾಲದಲ್ಲಿ ಗಂಗಾ–ಯಮುನಾ ನದಿಗಳ ಈ ದೋಆಬ್ ಅಥವಾ 'ಮಧ್ಯದೇಶ'ದ ಅಧಿಪತಿ ಭಾರತದ ಅಧಿಪತಿಯೆಂಬ ಭಾವನೆ ಬೆಳೆಯಿತು. ಹರ್ಷವರ್ಧನನು

ಉತ್ತರಾಪಥದ ಸಮ್ರಾಟನಾಗಿ ಮೆರೆದನು. ಹರ್ಷನ ನಂತರ ಕನೋಜವನ್ನು ವಶಪಡಿಸಿಕೊಳ್ಳಲು ಉತ್ತರಾಪಥದಲ್ಲಿ ಆಳುತಿದ್ದ ಗುರ್ಜರ-ಪ್ರತೀಹಾರ ಮನೆತನವೂ ಬಂಗಾಳದ ಪಾಲ ಮನೆತನವೂ ಮೇಲಾಟ ನಡೆಸಿದವು. "ಪಶ್ಚಿಮ ಏಷ್ಯದ ಯುದ್ಧೋತ್ಸುಕ ಜನಾಂಗಗಳು ಬ್ಯಾಬಿಲನ್ ನಗರವನ್ನು ವಶಪಡಿಸಿಕೊಳ್ಳಲು ಶ್ರಮಿಸಿದುವು ; ಬರ್ಬರ ಟ್ಯೂಟಾನಿಕ್ ಜನ ಸಮುದಾಯಗಳು ರೋಂ ನಗರಕ್ಕಾಗಿ ಕಿತ್ತಾಡಿಕೊಂಡವು ; ಮಧ್ಯಯುಗದಲ್ಲಿ ಪೂರ್ವ ಮತ್ತು ದಕ್ಷಿಣ ಯುರೋಪ್‌ನ ದೇಶಗಳು ಬೈಜಾಂಟಿಯಂ (ಕಾನ್‌ಸ್ಟಂಟಿನೋಪಲ್)ಗಾಗಿ ಮೇಲಾಟ ನಡೆಸಿದವು. ಎಂಟನೇ ಮತ್ತು ಒಂಬತ್ತನೇ ಶತಮಾನದ ಪ್ರಬಲ ರಾಜವಂಶಗಳು ಮಹೋದಯಶ್ರೀ (ಕನೋಜ) ಯನ್ನು ವಶಪಡಿಸಿಕೊಳ್ಳಲು ಹೋರಾಟ ನಡೆಸಿದುವು" ಎಂಬುದಾಗಿ ಭಾರತದ ಹಿರಿಯ ಇತಿಹಾಸಕಾರರೊಬ್ಬರು ಅಂದಿನ ಕನೋಜದ ಮಹತ್ವವನ್ನು ಬಣ್ಣಿಸುತ್ತ ಹೇಳಿದ್ದಾರೆ.

ಕನೋಜದ ಅಗ್ರಮಾನ್ಯತೆಯ ಈ ಕಾಲದಲ್ಲಿ ಆ ಪ್ರದೇಶಗಳನ್ನು ಆಳುತ್ತಿದ್ದ ದೊರೆಗಳನ್ನು ಒಂದಕ್ಕಿಂತ ಹೆಚ್ಚು ಬಾರಿ ಸೋಲಿಸಿದ ಹಿರಿಮೆ ಕರ್ನಾಟಕದ ದೊರೆಗಳದು. ವಾಸ್ತವವಾಗಿ ಹರ್ಷನನಂತರ ಕನೋಜವನ್ನು ಆಳುತ್ತಿದ್ದವರು ಭಾರತದ 'ಅಧಿರಾಜ'ರೆಂದು ಕರೆಸಿಕೊಳ್ಳುವ ಯೋಗ್ಯತೆಯನ್ನೇ ಪಡೆದಿರಲಿಲ್ಲ. ಹರ್ಷನ ಇಲ್ಲವೆ ಮಗಧದ ದೊರೆಗಳಷ್ಟು ವಿಶಾಲವಾದ ರಾಜ್ಯವು ಕನೋಜದ ದೊರೆಗಳಲ್ಲಿರಲಿಲ್ಲ. ವಾಸ್ತವವಾಗಿ ಕರ್ನಾಟಕದಲ್ಲಿ ಆಳಿದ ದೊರೆಗಳು ವಿಶೇಷತಃ ರಾಷ್ಟ್ರಕೂಟರು ಭಾರತದ ಅಧಿರಾಜರು ತಾವೆಂದು ಹೇಳಿಸಿಕೊಳ್ಳುವ ಯೋಗ್ಯತೆಯನ್ನು ನಿಜವಾಗಿ ಪಡೆದಿದ್ದರು.

ಕರ್ನಾಟಕದ ದೊರೆಗಳ ಈ ಘನತೆಯ ಯುಗಕ್ಕೆ ಬಾದಾಮಿಯ ಚಾಳುಕ್ಯರಿಂದ ನಾಂದಿಯಾಯಿತು. ಇಮ್ಮಡಿ ಪುಲಿಕೇಶಿಯು ಹರ್ಷನನ್ನು ಸೋಲಿಸಿದಾಗ ಕನ್ನಡದ ದೊರೆಗಳು ಉತ್ತರದ ದೊರೆಗಳ ದಕ್ಷಿಣದಂಡ ಯಾತ್ರೆಗಳಿಗೆ ತಡೆಹಾಕುವ ಕಾಲ ಆರಂಭವಾಯಿತು. ಪುಲಿಕೇಶಿಯ ಮೊಮ್ಮಗನಾದ ವಿನಯಾದಿತ್ಯನು ಕನೋಜದ ದೊರೆಗಳನ್ನು ಸೋಲಿಸಿದನು. ಗಂಗಾ ಯಮುನಾ ನದಿಗಳ ನಡುವಣ ಪ್ರದೇಶದ ಸ್ವಾಮ್ಯದ ಪ್ರತೀಕವಾದ ಪಾಳಿಧ್ವಜವನ್ನು ಸೆಳೆದುಕೊಂಡು ಬಂದನು. "ಸಕಲೋತ್ತರಾಪಥನಾಥ ಮಥನೋಪಾರ್ಜಿತೋರ್ಜಿತ ಪಾಳಿಧ್ವಜಾದಿ ಸಮಸ್ತ ಪಾರಮೈಶ್ವರ್ಯ ಚಿಹ್ನಸ್ಯ" (South Indian Inscriptions, XX, ನಂ. 4), ಎಂಬುದಾಗಿ 683ರ ಒಂದು ಶಾಸನ ಈ ಸಾಧನೆಯನ್ನು ತಿಳಿಸುತ್ತದೆ. ಹೀಗೆ ವಿನಯಾದಿತ್ಯನಿಂದ ಸೋಲಿಸಲ್ಪಟ್ಟ "ಸಕಲೋತ್ತರಪಥನಾಥ"ನು ವಜ್ರಟನೆಂಬ ದೊರೆಯಿರಬೇಕೆಂದು ವಿದ್ವಾಂಸರು ಊಹಿಸಿದ್ದಾರೆ.

ವಾತಾಪಿಯ ಚಾಳುಕ್ಯರನಂತರ ಕರ್ನಾಟಕದಲ್ಲಿ ಆಳಿದ ರಾಷ್ಟ್ರಕೂಟರು ಇನ್ನೂ ಹೆಚ್ಚಿನ ಉತ್ಸಾಹದಿಂದ ತಮ್ಮ ಉತ್ತರ ದಿಗ್ವಿಜಯದ ನೀತಿಯನ್ನು ಮುಂದು ವರಿಸಿದರು. ಹೀಗೆ ಉತ್ತರ ದಿಗ್ವಿಜಯವನ್ನು ಕೈಕೊಂಡ ಮೊದಲ ದೊರೆ ರಾಷ್ಟ್ರ ಕೂಟ ಧ್ರುವ (780–93). ಆಗ ಉತ್ತರ ಭಾರತದಲ್ಲಿ ಕನೋಜದ ಸ್ವಾಮಿತ್ವ ಕ್ಕಾಗಿ ಕಲಹ ನಡೆದಿತ್ತು. ಮಾಳ್ವದಲ್ಲಿ ಆಳುತ್ತಿದ್ದ ಗುರ್ಜರ–ಪ್ರತೀಹಾರ ದೊರೆ ವತ್ಸರಾಜ ಹಾಗೂ ಬಂಗಾಳದ ಪಾಲವಂಶದ ಧರ್ಮಪಾಲರು ಆಗಿನ ಪ್ರಬಲರಾಜರು. ಕನೋಜವನ್ನು ಆಳುತ್ತಿದ್ದ ಇಂದ್ರಾಯುಧ ಒಬ್ಬ ದುರ್ಬಲದೊರೆ. ಕನೋಜವನ್ನು ವಶಪಡಿಸಿಕೊಳ್ಳಲು ಧರ್ಮಪಾಲ ದಂಡೆತ್ತಿ ಬಂದ. ವತ್ಸರಾಜ ಅವನನ್ನು ಸೋಲಿಸಿದ. ಧರ್ಮಪಾಲನ ಬೆಳ್ಗೊಡೆಯನ್ನು ಸೆಳೆದುಕೊಂಡ. ಇದೇ ಕಾಲಕ್ಕೆ ಧ್ರುವ ಉತ್ತರಾಪಥಕ್ಕೆ ದಂಡೆತ್ತಿನಡೆದ. ವತ್ಸರಾಜನನ್ನು ಸೋಲಿಸಿದ. ಆಮೇಲೆ ಧರ್ಮಪಾಲನನ್ನೂ ಪರಾಜಯಗೊಳಿಸಿದ. "ವಿಜಯಿಯಾದ ಧ್ರುವನು ಪವಿತ್ರ ನದಿಗಳಾದ ಗಂಗೆ ಯಮುನೆಯರ ದಡದಲ್ಲಿ ಕೆಲಕಾಲ ಕಳೆದ. ಅಲ್ಲಿನ ತನ್ನ ವಾಸ್ತವ್ಯದ ಸ್ಮಾರಕವಾಗಿ ಈ ಖ್ಯಾತ ನದಿಗಳನ್ನು ರಾಷ್ಟ್ರಕೂಟ ಸಾಮ್ರಾಜ್ಯದ ಧ್ವಜದಲ್ಲಿ ಅಂಕಿತಗೊಳಿಸಿದ." ಎಂಬುದಾಗಿ ಶ್ರೀ ಆಳತೇಕರ್ ಅವರು ಹೇಳಿದ್ದಾರೆ. (Age of Imperial Kanauj, ಪು. 5). ಅಷ್ಟೇ ಅಲ್ಲ, "ರಾಷ್ಟ್ರಕೂಟರ ಹಿರಿಮೆ ಯನ್ನು ಅಲ್ಲಗಳೆಯುವ ಯಾವ ರಾಜ ಶಕ್ತಿಯೂ ಆಗ ದೇಶದಲ್ಲಿ ಇರಲಿಲ್ಲ" ಎಂಬು ದಾಗಿ ಧ್ರುವನ ಸಾಧನೆಯ ಮಹತಿಯನ್ನು ಬಣ್ಣಿಸಿದ್ದಾರೆ.

ಧ್ರುವನ ಉತ್ತರ ದಿಗ್ವಜಯದ ನೀತಿಯನ್ನು ಅವನ ಮಗನಾದ ಮೂರನೆಯ ಗೋವಿಂದನು (793–813) ಮುಂದುವರಿಸಿದ. ಗುರ್ಜರ–ಪ್ರತೀಹಾರ ಎರಡ ನೆಯ ನಾಗಭಟ, ಕನೋಜದ ದೊರೆ ಚಕ್ರಾಯುಧ ಹಾಗೂ ಗೌಡಾಧಿಪ (ಬಂಗಾಲ) ಧರ್ಮಪಾಲ ಇವರನ್ನೆಲ್ಲರನ್ನೂ ಸೋಲಿಸಿದ. "ಗೋವಿಂದನ ಸೇನೆಯಲ್ಲಿನ ಅಶ್ವ ಗಳು ಹಿಮಾಲಯದವರೆಗೆ ತೆರಳಿ ಅಲ್ಲಿನ ಮಂಜು ಕರಗಿದ ನೀರನ್ನು ಕುಡಿದವು. ಅವನ ಆನೆಗಳು ಗಂಗಾನದಿಯ ನೀರಿನ ರುಚಿ ನೋಡಿದವು" ಎಂದು ಸಂಜಾನ್ ತಾಮ್ರ ಶಾಸನ ಹೇಳುತ್ತದೆ (Epigraphia Indica, XVIII, 235) ಮಾಳವ, ಕೋಸಲ, ಕಳಿಂಗ, ವೆಂಗಿ, ಡಾಹಳ, ಓಡ್ರ ಗಂಗ, ಕೇರಳ, ಚೋಳ, ಪಾಂಡ್ಯ, ಪಲ್ಲವ ಹಾಗೂ ಲಂಕೆಯ ದೊರೆಗಳನ್ನೂ ಗೋವಿಂದನು ಸೋಲಿಸಿದ್ದ ನೆಂದೂ ಇದೇ ಶಾಸನ ತಿಳಿಸುತ್ತದೆ. ಗೋವಿಂದನಷ್ಟು ವಿಶಾಲ ಸಾಮ್ರಾಜ್ಯ ವನ್ನು ಪಡೆದಿದ್ದ ದೊರೆ ಆಗ ಇಡೀ ಭಾರತದಲ್ಲಿ ಇನ್ನಾರೂ ಇರಲಿಲ್ಲ.

ಗೋವಿಂದನ ಮಗ ಅಮೋಘವರ್ಷನು (814–878) ತನ್ನ ತಂದೆಯ

ವಿಶಾಲ ಸಾಮ್ರಾಜ್ಯವನ್ನು ಬಹಳ ಪರಿಶ್ರಮದಿಂದ ಉಳಿಸಿಕೊಂಡು ಬಂದನು. "ವಂಗಾಂಗ ಮಗಧ ಮಾಳವ ವೆಂಗೀಶ್ವರಾರ್ಚಿತೊ,"–ವಂಗ, ಅಂಗ, ಮಗಧ, ಮಾಳವ, ವೆಂಗಿಗಳ ದೊರೆಗಳಿಂದ ಅರ್ಚಿತನು–ಎಂದು ಅವನ ಕಾಲದ ನೀಲಗುಂದ ಶಾಸನ ಅವನ ರಾಜ್ಯದ ವಿಸ್ತಾರದ ಕಲ್ಪನೆಕೊಡುತ್ತದೆ (E.I.VI ಪು. 103). ಇವನ ಕಾಲದಲ್ಲಿ ಇವನ ರಾಜ್ಯವನ್ನು ಸಂದರ್ಶಿಸಿದ ಅರಬ್ಬಿ ಪ್ರವಾಸಿ ಸುಲೇಮಾನ್ (ಕ್ರಿ.ಶ.851) ಹೇಳುವಂತೆ "ಬಲ್ಹಾರ" (ವಲ್ಲಭ–ರಾಷ್ಟ್ರಕೂಟರ ಬಿರುದು)ರ ರಾಜ್ಯವು ಜಗತ್ತಿನ ನಾಲ್ಕು ಹಿರಿಯ ಸಾಮ್ರಾಜ್ಯಗಳಲ್ಲಿ ಒಂದು. ಅವನು ಹೇಳಿದ ಇತರ ಸಾಮ್ರಾಜ್ಯಗಳು ಪೂರ್ವದ ರೋಮನ್ ಸಾಮ್ರಾಜ್ಯ (ಬೈಜಾಂಟಿಯಂ), ಬಾಗ್ದಾದ್‌ನ ಸಾಮ್ರಾಜ್ಯ ಹಾಗೂ ಚೀನದ ಸಾಮ್ರಾಜ್ಯಗಳೆಂದು ಗಮನಿಸಿದಾಗ, ರಾಷ್ಟ್ರಕೂಟರದು ಅಂದಿನ ಭಾರತದಲ್ಲಿಯೇ ಪ್ರಬಲವಾದ ರಾಜ್ಯವಾಗಿತ್ತೆಂದು ಗಮನಿಸಬೇಕು. ಅದಕ್ಕೂ ವಿಶಾಲವಾದ ಭಾರತೀಯ ಸಾಮ್ರಾಜ್ಯ ಆಗ ಬೇರೆ ಇರಲಿಲ್ಲ.

ಅಮೋಘ ವರ್ಷನ ಮಗ ಎರಡನೆಯ ಕೃಷ್ಣನು (870–914) "ಗೂರ್ಜರ -ಪ್ರತೀಹಾರ)ರನ್ನು ಹೆದರಿಸಿ ಲಾಟರನ್ನು ಬಗ್ಗಿಸಿದನು. ಗೌಡರಾಜನನ್ನು ವಿನೀತನಾಗಿಮಾಡಿದನು. ಕಲಿಂಗ, ಗಂಗ, ಮಗಧರು ಇವನ ದ್ವಾರಪಾಲಕರಾಗಿದ್ದಾರೆ", ಎಂಬುದಾಗಿ ದೇವ್ರೋಳಿ ಶಾಸನ ಹೇಳುತ್ತದೆ (E.I.V, ಪು. 192). ಕೃಷ್ಣನ ಕೈಯಲ್ಲಿ ಗೂರ್ಜರ ದೊರೆ ಸೋತ ವಿಚಾರ ಬಾಗುಮ್ರ ಶಾಸನದಲ್ಲೂ ವರ್ಣಿತವಾಗಿದ್ದು (ಉಪರ್ಯುಕ್ತ IX, ಪು. 31), ಹೀಗೆ ಸೋತವನು ಒಂದನೆಯ ಭೋಜನೆಂದೇ ಊಹಿಸಲಾಗಿದೆ.

ಮೂರನೆಯ ಇಂದ್ರ (914.28)ನು ಕನೋಜ ರಾಜಧಾನಿಯನ್ನೇ ವಶಪಡಿಸಿಕೊಳ್ಳುವ ಪರಮ ಸಾಹಸ ಮಾಡಿದ. ಪಂಪನ ಆಶ್ರಯದಾತ ಅರಿಕೇಸರಿ (ಈತ ರಾಷ್ಟ್ರಕೂಟರ ಮಾಂಡಲಿಕ)ಯ ತಂದೆ ನರಸಿಂಹನು ಈ ಸಾಹಸದಲ್ಲಿ ಪ್ರಮುಖಪಾತ್ರ ವಹಿಸಿದ್ದ. ಶಕವರ್ಷ 852ರ ಒಂದು ತಾಮ್ರ ಶಾಸನದಂತೆ ಇಂದ್ರನು ಮಹೋದಯುವನ್ನು ನಾಶಗೊಳಿಸಿದನೆಂದು ಹೇಳಿದೆ. ಈ ಮಹೋದಯುವೇ ಕನೋಜ. (ಉಪರ್ಯುಕ್ತ, VII, ಪು. 36). ಇಂದ್ರನಿಂದ ಸೋಲಿಸಲ್ಪಟ್ಟ ದೊರೆ ಗುರ್ಜರ ಪ್ರತಿಹಾರ ಮಹೀಪಾಲ. ಕೆಲವು ವರ್ಷಗಳ ತನಕ ಕನೋಜವು ರಾಷ್ಟ್ರಕೂಟರ ವಶದಲ್ಲಿಯೇ ಇತ್ತು.

ಮೂರನೆಯ ಕೃಷ್ಣನು (940–68) ರಾಷ್ಟ್ರಕೂಟರಲ್ಲೇ ಸಮರ್ಥನಾದ ದೊರೆ. ಅವನು ಯುವರಾಜನಾಗಿದ್ದಾಗಲೇ ತನ್ನ ಬೀಗರಾದ ಮಧ್ಯಭಾರತದ

ಚೇದಿಗಳನ್ನು ಸೋಲಿಸಲು ಯತ್ನಿಸಿದ ಗುರ್ಜರ-ಪ್ರತೀಹಾರರಿಗೆ ಬುದ್ಧಿ ಕಲಿಸಿದ (ದೇವೋಳಿ ಶಾಸನ). ಇದಲ್ಲದೆ ತಾನು ಪಟ್ಟಕ್ಕೆ ಬಂದ ಮೇಲೆ ಚೋಳರನ್ನು ಸೋಲಿಸಿ ಇಡೀ ದಕ್ಷಿಣ ಭಾರತದ ಪ್ರಭುವಾದ. ಚೋಳರಾಜ ಪರಾಂತಕನ ಮಗ ರಾಜಾದಿತ್ಯನನ್ನು ತಕ್ಕೋಳಂ ಕಾಳಗದಲ್ಲಿ ಸೋಲಿಸಿದ (ಉಪರ್ಯುಕ್ತ, VI, 53) ದಕ್ಷಿಣದವರೆಗೂ ದಂಡೆತ್ತಿ ನಡೆದು ರಾಮೇಶ್ವರದ ಬಳಿ "ಕೃಷ್ಣೇಶ್ವರ" ಮಂದಿರವನ್ನು ಸ್ಥಾಪಿಸಿದ. ಮೂರನೆಯ ಕೃಷ್ಣನು "ದಖ್ಖಣದ ಸಮ್ರಾಟ"ನೆಂಬ ಹೆಸರನ್ನು ಸಾರ್ಥಕಗೊಳಿಸಿದ ದೊರೆ. ಇನ್ನಾವ ದೊರೆಯೂ ಅವನಂತೆ ದಕ್ಷಿಣಾಪಥದ ಮೇಲೆ ಪೂರ್ತಿ ಅಧಿಕಾರ ಹೊಂದಿರಲಿಲ್ಲ, ಎಂದು ಪ್ರೊ|| ಅಳತೇಕರ್ ಅವರ ಅಭಿಮತ (Age of Imperial Kanauj, ಪು. 15). ಚೋಳ, ಪಾಂಡ್ಯ, ಸಿಂಹಳ ರಾಜರನ್ನು ತನ್ನ ಅಂಕೆಗೂಳಪಡಿಸಿದ ಮೇಲೆ ಕೃಷ್ಣನು ಉತ್ತರ ದಿಗ್ವಿಜಯಕ್ಕೆ ತೆರಳಿದನೆಂದೂ, ಅವನ ಸೇನಾನಿಯಾದ ಗಂಗದೊರೆ ಮಾರಸಿಂಹನು ಗೂರ್ಜರ ದೊರೆಯನ್ನು ಸೋಲಿಸಿ "ಗೂರ್ಜರಾಧಿ ರಾಜ"ನೆಂಬ ಖ್ಯಾತಿಗೆ ಪಾತ್ರನಾದನೆಂದೂ ಒಂದು ಶಾಸನ ಹೇಳುತ್ತದೆ. ಹೀಗೆ ಕೃಷ್ಣನಿಂದ ಸೋಲಿಸಲ್ಪಟ್ಟ ಗೂರ್ಜರ-ಪ್ರತೀಹಾರ ದೊರೆ ಮಹೀಪಾಲನ ಮಗ ವಿಜಯಪಾಲ. ಕೃಷ್ಣನ ಉತ್ತರ ದಿಗ್ವಿಜಯದ ಪ್ರತೀಕವಾಗಿ ಬುಂಡೇಲ ಖಂಡದಲ್ಲಿ (ಜಬ್ಬಲಪುರದಬಳಿ) ಜೂರಾ ಎಂಬಲ್ಲಿ ಅವನ ಕನ್ನಡ ಶಿಲಾ ಶಾಸನವೊಂದು ಇಂದಿಗೂ ಇದೆ (Ep. Ind., XIX, ಪು. 289).

ರಾಷ್ಟ್ರಕೂಟರ ಉಚ್ಛ್ರಾಯದ ಕಾಲವು ದಖ್ಖಣದ ಇತಿಹಾಸದಲ್ಲಿನ ಅತ್ಯಂತ ಉಜ್ವಲವಾದ ಕಾಲವೆಂದು ಶ್ರೀ ಅಳತೇಕರರು ಹೇಳಿದ್ದಾರೆ. "ದಖ್ಖಣದ ಇನ್ನಾವ ರಾಜವಂಶವೂ ಭಾರತದ ಇತಿಹಾಸದಲ್ಲಿ ಇಷ್ಟೊಂದು ಪ್ರಭಾವೀ ಪಾತ್ರವನ್ನು ನಿರ್ವಹಿಸಿಲ್ಲ" ಎನ್ನುವ ಅವರು ರಾಷ್ಟ್ರಕೂಟರ ನಂತರ ಇಂಥ ಸಾಮರ್ಥ್ಯ ತೋರಿದ ರಾಜ ಶಕ್ತಿಯು 18ನೆಯ ಶತಮಾನದ ಮರಾಠರದಷ್ಟೇ ಎಂದು ಹೇಳಿದ್ದಾರೆ.

ವಾಸ್ತವವಾಗಿ ರಾಷ್ಟ್ರಕೂಟರಷ್ಟು ವಿಶಾಲ ಸಾಮ್ರಾಜ್ಯ ಹೊಂದಿದ ಸಮಕಾಲೀನ ಪ್ರಭುಗಳು ಇನ್ನಾರೂ ಇರಲಿಲ್ಲ. ಸಮ್ರಾಟ್ ಶಕ್ತಿಯ ಪೀಠವೆನಿಸಿದ ಕನೋಜದ ಪ್ರಭುಗಳಾದ ಗೂರ್ಜರರನ್ನು ಎಷ್ಟು ಬಾರಿ ರಾಷ್ಟ್ರಕೂಟರು ಸೋಲಿಸಿದರೆಂಬುದನ್ನು ಇಲ್ಲಿ ನೋಡಿದೆ. ಸುಲೇಮಾನನಂಥ ವಿದೇಶಿ ಪ್ರವಾಸಿಯೂ ರಾಷ್ಟ್ರಕೂಟರ ಸಾಮ್ರಾಜ್ಯವೇ ಅಂದಿನ ಭಾರತದ ಪ್ರಬಲ ಸಾಮ್ರಾಜ್ಯವೆಂದಿದ್ದಾನೆ. ಉತ್ತರ ಭಾರತದ ಇತಿಹಾಸಕಾರರು ಬಳಸುವ ಪದ ಪುಂಜ 'ಏಜ್ ಆಫ್ ಇಂಪೀರಿಯಲ್ ಕನೋಜ್' ಎಷ್ಟು ಪೊಳ್ಳಾಗಿತ್ತೆಂದು ಇದರಿಂದ ತಿಳಿಯುತ್ತದೆ.

ಪ್ರಬಲರಾದ ರಾಷ್ಟ್ರಕೂಟ ದೊರೆಗಳು ವೀರಸೇನ, ಜಯಸೇನ, ಗುಣಭದ್ರ

ಮುಂತಾದ ಶ್ರೇಷ್ಠ ಜೈನ ವಿದ್ವಾಂಸರ ಆಶ್ರಯದಾತರು.'ಧವಲಾ'. 'ಹರಿವಂಶ', 'ಆದಿ ಪುರಾಣ', 'ಜಯಧವಲಾ'ಗಳು ಅವರ ಆಸ್ಥಾನದಲ್ಲೇ ರಚಿತವಾದ ಪ್ರಾಕೃತ ಗ್ರಂಥ ಗಳು. ಕುಮುದೇಂದು ('ಸಿರಿ ಭೂವಲಯ') ಹಾಗೂ ಮಹಾವೀರಾಚಾರ್ಯ ('ಗಣಿತಸಾರ ಸಂಗ್ರಹ') ರಂಥ ಗಣಿತ ಪಂಡಿತರೂ ಅವರ ಆಸ್ಥಾನಿಕರು. ಶಾಕಟಾ ಯನನ "ಅಮೋಘ ವೃತ್ತಿ" ಎಂಬ ವ್ಯಾಕರಣ ಗ್ರಂಥ, ತ್ರಿವಿಕ್ರಮನ "ನಲ ಚಂಪು", "ಮದಾಲಸ ಚಂಪು" ಅಮೋಘವರ್ಷನ "ಪ್ರಶ್ನೋತ್ತರ ರತ್ನಮಾಲಿಕೆ", ಸೋಮ ದೇವನ "ಯಶಸ್ತಿಲಕ ಚಂಪು" ಇವೆಲ್ಲವೂ ರಾಷ್ಟ್ರಕೂಟ ಸಾಮ್ರಾಜ್ಯದ ಅಖಿಲ ಭಾರತ ಮಹತ್ವವನ್ನು ಸಾರಿ ಹೇಳುವ, ಅವರ ರಾಜ್ಯದಲ್ಲಿ ರಚಿತವಾದ ಸಂಸ್ಕೃತ ಕಾವ್ಯಗಳು. ಇದಲ್ಲದೆ ಜೈನರ 'ಷಟ್ಖಂಡಾಗಮಗಳ' ಬಗ್ಗೆ ಜಿನಸೇನ, ವೀರಸೇನ, ಗುಣಭದ್ರರು 'ಧವಲಾ' ಎಂಬ ಟೀಕಾ ಗ್ರಂಥಗಳ ಮಾಲಿಕೆಯನ್ನು ರಚಿಸಿದರು. ಈ ಕನ್ನಡ ಸಾಮ್ರಾಜ್ಯದ ಖ್ಯಾತಿ ಎಷ್ಟಿತ್ತೆಂದರೆ ರಾಷ್ಟ್ರಕೂಟರ ನಂತರ ಕರ್ನಾಟಕದಲ್ಲಿ ಆಳಿದ ಕಲ್ಯಾಣದ ಚಾಲುಕ್ಯರ ಆಶ್ರಯ ಯಾಚಿಸಿ ಕಾಶ್ಮೀರದ ಬಿಲ್ಹಣಕವಿ ದಕ್ಷಿಣಕ್ಕೆ ಬಂದ. ಕಲ್ಯಾಣದ ಆರನೆಯ ವಿಕ್ರಮಾದಿತ್ಯನ ಆಶ್ರಯ ಪಡೆದ. ಇದೇ ಕನ್ನಡ ಸಾಮ್ರಾಜ್ಯದಲ್ಲಿ ರಚಿತವಾದ ವಿಜ್ಞಾನೇಶ್ವರನ "ಮಿತಾಕ್ಷರ" ಅಖಿಲ ಭಾರತದಲ್ಲಿ (ಬಂಗಾಲದ ಹೊರತು) ಸ್ವೀಕೃತವಾದ ಕಾನೂನಿನ ಗ್ರಂಥವಾಯಿತು. ಕನ್ನಡ ನೆಲ ಭಾರತದ ಪರಮ ಶಕ್ತಿಯ, ಅಧಿರಾಜತ್ವದ ಪೀಠಸ್ಥಾನವಾಗಿತ್ತೆಂಬ ಕಲ್ಪ ನೆಯು, ಚಾಲುಕ್ಯರ ಕಾಲದ ಈ ಎರಡು ಘಟನೆಗಳಿಂದ ಕೂಡ ಸಮರ್ಥಿಸಲ್ಪಟ್ಟಿದೆ.

ಮಗದ, ಗಂಗಾ–ಯಮುನಾ ದೋಆಬ್, ದೆಹಲಿಗಳಂತೆ ಕರ್ನಾಟಕವೂ ಭಾರತದ ಇತಿಹಾಸದಲ್ಲಿ ಅಗ್ರಪಾತ್ರ ವಹಿಸಿತ್ತು. ವಾತಾಪಿ, ಮಳಖೇಡ, ಕಲ್ಯಾಣ ಗಳೇ ಈ ಕಾಲದ ರಾಜಧಾನಿಗಳಾಗಿದ್ದವು. ಕರ್ನಾಟಕವು ಭಾರತ ದೇಶದ 'ಉದರ ಭಾಗ'ದಲ್ಲಿದ್ದ ಭೌಗೋಲಿಕ ವೈಶಿಷ್ಟ್ಯವೂ ಈ ವಿದ್ಯಮಾನಕ್ಕೆ ಒಂದು ಸಾಧಕವಾದ ಅಂಶವಾಗಿತ್ತು.

೦

ಪಿ. ವಿ. ಕೃಷ್ಣಮೂರ್ತಿ

# ಕರ್ನಾಟಕಕ್ಕೆ ಹೊಂದಿಕೊಂಡ ತಮಿಳುನಾಡು ಗಡಿ ಪ್ರಾಂತ್ಯದ ಕನ್ನಡ ಶಾಸನಗಳು

ನಮ್ಮ ನಾಡಿನ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಅಧ್ಯಯನಕ್ಕೆ ಶಾಸನಗಳು ಮಹತ್ವದ ಹಾಗೂ ಅನಿವಾರ್ಯ ಅಗತ್ಯ ಆಕರಗಳಾಗಿರುತ್ತವೆ. ನಮ್ಮ ದೇಶದಲ್ಲಿ ಶಾಸನಗಳ ಅನ್ವೇಷಣೆ, ಪ್ರಕಟನಾ ಕಾರ್ಯ ಇನ್ನೂ ಕ್ರಮವಾಗಿ ನಡೆದಿಲ್ಲ. ಸಮಗ್ರವಾದ ಮತ್ತು ಅಧಿಕೃತವೆನ್ನಬಹುದಾದ ಅಧ್ಯಯನಗಳು ನಡೆಯಬೇಕಾದರೆ ಎಲ್ಲ ಪ್ರದೇಶಗಳ, ಎಲ್ಲ ಐತಿಹಾಸಿಕ ಆಕರಗಳ ಸಂಕಲನ, ಅಧ್ಯಯನ ವಿಶ್ಲೇಷಣೆಗಳ ಬೆಳಕಿನಲ್ಲಿ ಸೂಕ್ಷ್ಮ ಅಧ್ಯಯನಗಳು ನಡೆಯಬೇಕಾಗಿವೆ. ಈ ನಿಟ್ಟಿನಲ್ಲಿ ಪ್ರಾದೇಶಿಕ ಅಧ್ಯಯನವು ಮೊದಲ ಹಂತವಾಗಿದೆ.

ಹಿಂದೆ ಕನ್ನಡ ಅರಸುಮನೆತನಗಳ ಆಳಿಕೆಗೆ ಒಳಪಟ್ಟು ಸ್ವಾಭಾವಿಕವಾಗಿಯೇ ಕನ್ನಡ ಭಾಷಾ ಪ್ರದೇಶಗಳಾಗಿದ್ದ ಅನೇಕ ಭಾಗಗಳು ಇಂದಿಗೂ ಕರ್ನಾಟಕದ ಹೊರಗುಳಿದಿರುವುದು ಸರಿಯಷ್ಟೆ. ಅಂತಹ ಪ್ರದೇಶಗಳಲ್ಲೊಂದಾದ ತಮಿಳುನಾಡು ಗಡಿಪ್ರಾಂತದ ಕನ್ನಡ ಶಾಸನಗಳ ಸಮಾಲೋಕ ಪ್ರಸ್ತುತ ಲೇಖನದ ಉದ್ದೇಶ.

ಕೇಂದ್ರ ಸರ್ಕಾರದ ಪುರಾತತ್ವ ಇಲಾಖೆಯ ಶಾಸನಗಳ ವಾರ್ಷಿಕ ವರದಿಗಳು ಮತ್ತು ದಕ್ಷಿಣ ಭಾರತದ ಶಾಸನ ಸಂಪುಟಗಳನ್ನು ಅವಲೋಕಿಸಿದರೆ, ಕರ್ನಾಟಕಕ್ಕೆ ಹೊಂದಿಕೊಂಡ ತಮಿಳುನಾಡಿನ ಗಡಿ ಪ್ರಾಂತ್ಯದಲ್ಲಿ, ಗಂಗರ ಕಾಲದಿಂದ

ಪ್ರಾರಂಭಿಸಿ ತೀರಾ ಇತ್ತೀಚಿನವರೆಗೂ ನೂರಾರು ಕನ್ನಡ ಶಾಸನಗಳು ಹುಟ್ಟಿಕೊಂಡಿರುವುದು ಮನವರಿಕೆಯಾಗುತ್ತದೆ.

### ಭೌಗೋಳಿಕ ಮಹತ್ವ

ಭೌಗೋಳಿಕವಾಗಿ ಈ ಗಡಿಪ್ರದೇಶ, ಪ್ರಾಚೀನ ಕಾಲದಲ್ಲಿ ಬಾಣ ಮತ್ತು ಪುನ್ನಾಟ ಅರಸರ ಆಳಿಕೆಗೆ ಒಳಪಟ್ಟಿದ್ದಿತೆಂದು ಹೇಳಲು ಆಧಾರಗಳಿವೆ. ಕೋಲಾರ ಮತ್ತು ಬೆಂಗಳೂರು ಜಿಲ್ಲೆಗೆ ಅಂಟಿಕೊಂಡಂತಿರುವ ಧರ್ಮಪುರಿ ಜಿಲ್ಲಾ ಪ್ರದೇಶವು ಮೊದ ಮೊದಲು ಬಾಣರ ಆಳಿಕೆಗೆ ಒಳಪಟ್ಟಿದ್ದಿತು. ಪ್ರಸ್ತುತ ಬಾರಾಮಹಲ್ ಮತ್ತು ಬಾಲಾಘಾಟ್ ಎಂದು ವ್ಯವಹರಿಸುವ ಪೂರ್ವಘಟ್ಟಗಳ ಪಶ್ಚಿಮಕ್ಕಿರುವ, ಕರ್ನಾಟಕಕ್ಕೆ ಹೊಂದಿಕೊಂಡ ಎತ್ತರವಾದ ಪ್ರಸ್ಥಭೂಮಿ ಪ್ರದೇಶವೇ ಇದಾಗಿದೆ. ಮೈಸೂರು ಜಿಲ್ಲೆಗೆ ಅಂಟಿಕೊಂಡಂತಿರುವ ಸೇಲಂ ಮತ್ತು ಪೆರಿಯಾರ್, ಕೊಯಮತ್ತೂರು ಜಿಲ್ಲೆಯ ಉತ್ತರ ಭಾಗಗಳು ಪುನ್ನಾಟ ಮತ್ತು ಕೊಂಗು ನಾಡುಗಳ ಭಾಗಗಳಾಗಿದ್ದವು. ಪುನ್ನಾಟ ಮತ್ತು ಕೊಂಗು ಪ್ರದೇಶಗಳು ನೆರೆಹೊರೆಯ ಪ್ರದೇಶಗಳೆಂಬ ಅಂಶ ಶಾಸನಗಳಿಂದ ತಿಳಿದು ಬರುತ್ತದೆ.

ಈ ಪ್ರದೇಶಗಳಲ್ಲಿ ದೊರೆಯುವ ಪ್ರಾಚೀನತಮ ಶಾಸನಗಳೆಂದರೆ ತಲಕಾಡು ಗಂಗರವು. ಇವರು ಗಂಗವಾಡಿ 96,000 ಪ್ರದೇಶದ ಒಡೆಯರು. ಗಂಗವಾಡಿಗೆ ಸೇರಿದ, ಗಂಗ ಆಱು ಸಾಸಿರ, ಮೊರಸುನಾಡು, ಪುದುಕನ್ದ ವಿಷಯ, ಕೊಂಗುನಾಡು, ಪೊರಮನ್ದನಾಡು ಮುಂತಾದವು ಈ ಪ್ರದೇಶದ ಶಾಸನಗಳಲ್ಲಿ ಉಕ್ತವಾಗಿವೆ. ಕ್ರಿ. ಶ. 8ನೇ ಶತಮಾನದಲ್ಲಿ ಗಜ್ಗನಾಡು, ಪೊರಮಲೆನಾಡು, ಕೂವುನ್ನಾಡು, ತಾಯಲುನಾಡು, ಮಿಗೆನಾಡು, ಪೊನ್ನನಾಡು, ಮೇಳಲನಾಡು, ವೆಜ್ಗಾಲನಾಡುಗಳಲ್ಲದೆ ತೇಕಲ್ನಾಡೆಳ್ಪತ್ತು ಮುಂತಾದ ಪ್ರಾದೇಶಿಕ ವಿಭಾಗಗಳು ಬಾಣರ ವಶದಲ್ಲಿದ್ದಂತೆ ತಿಳಿದು ಬರುತ್ತದೆ. ನೊಳಂಬರ ಶಾಸನಗಳಲ್ಲಿ ತಗಡೂರುನಾಡು, ಪೊರಮಲೆನಾಡು, ಗಂಗ ಆರುಸಾಸಿರ ಮುಂತಾದವು ಉಲ್ಲೇಖಿತವಾಗಿವೆ. ಹತ್ತನೆಯ ಶತಮಾನದ ಕೊನೆ ಕೊನೆಯ ಕಾಲದಲ್ಲಿ ಈ ಪ್ರದೇಶ ಚೋಳರ ವಶವಾಯಿತು. ಆಗ ಅವರು ಈ ಪ್ರದೇಶವನ್ನು ನಿಗರಿಲಿ ಚೋಳ ಮಂಡಲವೆಂದು ಕರೆದಿರುತ್ತಾರೆ. ಹೊಸೂರಿನ ರಾಜೇಂದ್ರ ಚೋಳನ ಕನ್ನಡ ಶಾಸನದಲ್ಲಿ ಪೊಲಮುನ್ದನಾಡಿನ ಪ್ರಸ್ತಾಪ ಬಂದಿದೆ. ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ಹೊಯ್ಸಳರ ಆಳಿಕೆ ಈ ಪ್ರದೇಶದ ಮೇಲೆ ಸ್ಥಾಪಿತವಾಯಿತು. ಇವರ ಕಾಲದ ಬಹಳಷ್ಟು ಶಾಸನಗಳು ತಮಿಳು ಭಾಷೆಯಲ್ಲಿದ್ದು ಚೋಳರ ಕಾಲದಲ್ಲಿ ಪ್ರಚಲಿತವಿದ್ದ ಆಡಳಿತ ವಿಭಾಗಗಳನ್ನೇ ಇವರು ಮುಂದುವರಿಸಿರುವುದು ಕಂಡುಬರುತ್ತದೆ. ಹದಿನಾಲ್ಕನೆಯ ಶತಮಾನದ ಹೊಸೂರಿನ ಶಾಸನವೊಂದರಲ್ಲಿ ಎರಮಂಡಲ ಎಂಬ

ನಾಡಿನ ಉಲ್ಲೇಖ ಬಂದಿದೆ. ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಿಂದ ವಿಜಯನಗರದ ಕರ್ನಾಟಕಾಧೀಶರ ಆಳಿಕೆಯ ಕುರುಹುಗಳಾಗಿ ಅನೇಕ ಶಾಸನಗಳು ಕಂಡುಬರುತ್ತವೆ. ಮಧುರಾ ವಿಜಯವನ್ನು ಪಡೆದ ಬುಕ್ಕರಾಯನ ಕುಮಾರ ವೀರ ಕಂಪಣ್ಣ ಒಡೆಯನ ಮಾಂಡಲಿಕತನದ ಅನೇಕ ಶಾಸನಗಳು ಈ ಪ್ರದೇಶದಲ್ಲಿವೆ. ಮುಳುವಾಯಿ ರಾಜ್ಯ, ಮೊರಸುನಾಡುಗಳ ಉಲ್ಲೇಖಗಳು ಬಂದಿವೆ. ಡೆಂಕಣಿ ಕೋಟೆಯು ಮುಳುವಾಗಿಲು ಚಾವಡಿಗೆ ಸೇರಿದ್ದ ನಾಯಕತನದ ಸ್ಥಳವೆಂದು ಶಾಸನವೊಂದರಿಂದ ತಿಳಿದು ಬರುತ್ತದೆ. ಬೆಂಗಳೂರು (ಸ್ಥಳದ) ವಳಿತದ ಗುಮ್ಮಳಾಪುರ ಹೋಬಳಿ, ಮಂಜಿನಾಡ ಪೆಣ್ಣಾಗರ ಸೀಮೆ, ಕೂತಪಾಡಿ, ಬಡಗ ಕೊಂಗನಾಡ ಗಾಜನೂರ ಸ್ಥಳ, ಧಾರಾಪುರ ಚಾವಡಿಯ ಬಾ...ಹಳ್ಳಿ, ಕಾರಿಮಂಗಲ ಸೀಮೆಯ ತಗಡನಾಡು, ಕಾರಿಮಂಗಲ ಪೆಣಾಗರ, ಮೊರಸುನಾಡಿನ ಡೆಂಕಣಿಕೋಟೆ ಸ್ಥಳದ ಡೆಂಕಣಿಕೋಟೆ ಎಂಬಿವೇ ಮುಂತಾದ ಆಡಳಿತ ವಿಭಾಗಗಳು, ವಿಜಯನಗರದ ಅರಸರ ಕಾಲದ ಶಾಸನಗಳಲ್ಲಿ ಕಂಡು ಬಂದಿವೆ. ಕ್ರಿ. ಶ. ೧೭ನೇ ಶತಮಾನ, ಅಂದರೆ ಮೈಸೂರು ಅರಸ ರಣಧೀರ ಕಂಠೀರವ ನರಸರಾಜ ಒಡೆಯರ ಕಾಲದಿಂದೀಚೆಗೆ, ಆ ವಂಶೀಯರ ಅನೇಕ ಶಾಸನಗಳು ಈ ಪ್ರದೇಶದಲ್ಲಿ ಕಂಡು ಬಂದಿವೆ. ಅವರ ಶಾಸನಗಳಲ್ಲಿ ಉಕ್ತವಾಗಿರುವ, ಈ ಗಡಿನಾಡಿನ ಆಡಳಿತ ವಿಭಾಗ ಗಳು ಮತ್ತು ಅವುಗಳಲ್ಲಿ ಅಂತರಗತವಾಗಿದ್ದ ಊರುಗಳ ವಿವರ ಈ ರೀತಿ ಇದೆ :

೧) ವಾಮಲೂರು ಸ್ಥಳದ ಮಲ್ಲಿಗೆ ಕೋಂಟೆಗೆ ಸೇರಿದ ವೆಳಗೌಂಡನ ಪಟ್ಟಿ. ನಾಡರೆಡ್ಡಿ ಪಟ್ಟಿ, ಮಲಯರಾಯಪಟ್ಟಿ.

೨) ಯೇಣೂರು ಕಣಿವೆಯ ಕೆಳಗಣ ಉಡವಂಕನಾಡ ಸತ್ಯಮಂಗಲದ ಸ್ಥಳಕ್ಕೆ ಸಲ್ಲುವ ಕರವಳಿ ಹೋಬಳಿಯ ಬೆಸ್ತರಪಾಳ್ಯಕ್ಕೆ ಪ್ರತಿನಾಮ ಕುಮಾರಪುರ ಗ್ರಾಮ.

೩) ವೀರಭದ್ರ ದುರ್ಗದ ಸೀಮೆಯ ಕುಂನೆಕೊಳದ ಹೋಬಳಿ ಪಾಪರ ಪಟ್ಟಿ, ಯುಟಗಾನಹಳ್ಳಿ, ಆಚಾರಹಳ್ಳಿ, ಕಮಲನಾಯಕನ ಹಳ್ಳಿ, ಗುಲ್ಲಪ್ಪ ನಾಯಕನ ಹಳ್ಳಿ, ಮಾದಹಳ್ಳಿ, ಬೇಲೂರು, ವರತಹಳ್ಳಿ, ಬೆಳಚಾರಹಳ್ಳಿ, ಸಕುಲಹಳ್ಳಿ, ವಾಸಲಿಹಳ್ಳಿ, ನಲಪನಾಯಕನಹಳ್ಳಿ.

೪) ಶಂಖಗಿರಿ ಹೋಬಳಿಗೆ ಸೇರಿದ ತಗುಡಸ್ವಾಡಿ (ಅದಕ್ಕೆ ಸೇರಿದ ೧೪ ಉಪ ಗ್ರಾಮಗಳು)

೫) ಪೊಸೂರು ಸೀಮೆಯ ಗುಮ್ಮಳಾಪುರ ಹೋಬಳಿ, ಉಳಮಾರನಹಳ್ಳಿ, ಹೊನ್ನ ಹಳ್ಳಿ ಮತ್ತು ಉಪ್ಪಾರಹಳ್ಳಿ.

೬) ಮೈಸೂರು ರಾಜ್ಯದ ವಂಜಿನಾಡಿನ ವನವಾಸಿ.

ಈ ಮೇಲೆ ಪ್ರಸ್ತಾಪಿತವಾಗಿರುವ ಪ್ರಾದೇಶಿಕ ಆಡಳಿತ ವಿಭಾಗಗಳಲ್ಲಿ ಅನೇಕ ವನ್ನು ಗುರುತಿಸಬಹುದಾಗಿದೆ. ಗಂಗರ ಕಾಲದಿಂದ ವಿಜಯನಗರ ಕಾಲದವರೆಗಿದ್ದ ಮೊರಸುನಾಡೆಂಬ ಗಂಗ ೬೦೦೦ ಸಾಸಿರದ ಭಾಗವು, ಇಂದಿನ ಕರ್ನಾಟಕದ ಕೋಲಾರ ಜಿಲ್ಲೆಯ ಮಾಲೂರು, ಬೆಂಗಳೂರು ಜಿಲ್ಲೆಯ ಹೊಸಕೋಟೆ, ಆನೇಕಲ್ಲು ತಾಲ್ಲೂಕಿನ ಭಾಗಗಳು ಹಾಗೂ ಇಂದಿನ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರು ಮತ್ತು ಡೆಂಕಣಿಕೋಟೆ ತಾಲ್ಲೂಕು ಪ್ರದೇಶಗಳ ಹಲವು ಭಾಗಗಳನ್ನೊಳಗೊಂಡಂತೆ ಇದ್ದ ಒಂದು ಪ್ರಾಚೀನ ಪ್ರಾದೇಶಿಕ ವಿಭಾಗ. ಗಂಗ ೬೦೦೦ಸಾಸಿರದ ವ್ಯಾಪ್ತಿ ಇದನ್ನೂ ಒಳಗೊಂಡಂತೆ ಮತ್ತೂ ವಿಸ್ತಾರವಾಗಿದ್ದಿರಬೇಕೆಂದು ತೋರುತ್ತದೆ. ಇದು ಬಹುತೇಕವಾಗಿ ನೊಳಂಬರ ಆಳಿಕೆಯಲ್ಲಿಯೇ ಇದ್ದ ಬಗ್ಗೆ ಶಾಸನಗಳ ಆಧಾರಗಳಿವೆ. ತಗಡೂರುನಾಡು ಇಂದಿನ ಧರ್ಮಪುರಿಯ ಸುತ್ತಮುತ್ತಲ ಪ್ರದೇಶವಾಗಿದ್ದಿತು. ತೇಕಲನಾಡು ಇಂದಿನ ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ತೇಕಲ್ಲನ್ನು ಕೇಂದ್ರವಾಗಿಟ್ಟುಕೊಂಡು ಸುತ್ತಮುತ್ತಲ ೭೦ ಗ್ರಾಮಗಳನ್ನು ಒಳಗೊಂಡಿದ್ದಂತಹ ಒಂದು ವಿಭಾಗ. ಧರ್ಮಪುರಿ ಜಿಲ್ಲೆಯ ಹೊಸೂರು ತಾಲ್ಲೂಕಿನ ಹಲವು ಗ್ರಾಮ ಗಳು ಈ ಪ್ರಾದೇಶಿಕ ವಿಭಾಗದಲ್ಲಿ ಅಂತರಗತವಾಗಿದ್ದುವೆಂದು ಹೇಳಬಹುದಾಗಿದೆ. ಗುಂಡ್ಲುಪೇಟೆ ಮತ್ತು ಕೊಳ್ಳೇಗಾಲ, ಚಾಮರಾಜನಗರ ತಾಲ್ಲೂಕುಗಳ ಹಲವು ಭಾಗಗಳು ಹಾಗೂ ಅವುಗಳಿಗೆ ಅಂಟಿಕೊಂಡಂತಿರುವ ಪೆರಿಯಾರ್/ಕೊಯಮತ್ತೂರು ಜಿಲ್ಲೆಯ ಸತ್ಯಮಂಗಲ, ಗೋಪಿಚೆಟ್ಟಿಪಾಳ್ಯ ಮುಂತಾದ ಪ್ರದೇಶಗಳು ಬಡಗ ಕೊಂಗನಾಡಿನಲ್ಲಿ ಅಂತರಗತವಾಗಿದ್ದುವೆಂದು ಹೇಳಬಹುದಾಗಿದೆ. ಎರಮಂಡಲ ವೆಂಬುದು ಪ್ರಾಯಶಃ ಆನೇಕಲ್ ತಾಲ್ಲೂಕಿನ ಶಾಸನಗಳಲ್ಲಿ ಉಕ್ತವಾಗಿರುವ ಎೞುಮುರ್ರೆನಾಡಿನ ಪರ್ಯಾಯ ರೂಪವೆನ್ನಬಹುದು. ಮಾತಂಡಿನಾಡಿನ ಭಾಗವಾದ ಎೞುಮುರ್ರೆ (ಎಮರೆ) ನಾಡು, ಆನೇಕಲ್ ತಾಲ್ಲೂಕಿನ ಸರ್ಜಾಪುರ, ಹೊಸೂರು ತಾಲ್ಲೂಕಿನ ಬಾಗಲೂರು ಪ್ರದೇಶಗಳನ್ನು ಒಳಗೊಂಡಿದ್ದಿರಬಹುದು. ವಿಜಯನಗರ ಕಾಲದ ಮುಳುವಾಯಿ ಅಥವಾ ಮುಳುವಾಗಿಲು ರಾಜ್ಯವು ಅವರ ಸಾಮ್ರಾಜ್ಯದ ಒಂದು ಮುಖ್ಯ ರಾಜ್ಯವಾಗಿದ್ದಿತು. ಇದರಲ್ಲಿ ಕೋಲಾರ, ಬೆಂಗಳೂರು ಜಿಲ್ಲೆಯ ಹಲವು ಪ್ರದೇಶಗಳನ್ನೊಳಗೊಂಡಂತೆ ಧರ್ಮಪುರಿ ಜಿಲ್ಲೆಯ ಹೊಸೂರು, ಡೆಂಕಣಿ ಕೋಟೆ, ಕೃಷ್ಣಗಿರಿ ಮತ್ತು ರಾಯಕೋಟೆಯ ಸುತ್ತಮುತ್ತಲ ಪ್ರದೇಶಗಳನ್ನೊಳ ಗೊಂಡ ರಾಜ್ಯವಾಗಿದ್ದಿತು. ಇದರಲ್ಲಿ ಇಂದಿನ ಪೆನ್ನಾಗರದ ಸುತ್ತಮುತ್ತಲ ಪ್ರದೇಶವೇ ಮಂಜಿನಾಡ ಪೆಣ್ಣಾಗರ ಸೀಮೆಯಾಗಿದ್ದಿತು. ಮೈಸೂರು ಅರಸರ ಕಾಲದ ಶಾಸನಗಳಲ್ಲಿ ಉಕ್ತವಾಗಿರುವ ಬಹುತೇಕ ಎಲ್ಲ ಪ್ರಾದೇಶಿಕ ವಿಭಾಗಗಳ ಕೇಂದ್ರ ಸ್ಥಳಗಳು ಇಂದಿಗೂ ಪ್ರಮುಖ ಸ್ಥಳಗಳಾಗಿರುವುದು ಕಂಡು ಬರುತ್ತವೆ.

ಪೂರ್ವಘಟ್ಟಗಳ ಸರಣಿಗೆ ಸೇರಿದ ಜಾವಡಿ, ಶೆವರಾಯ್ ಕಿರಿರಾಯನ್

ಮತ್ತು ಪಶ್ಚಿಮಲೆ ಬೆಟ್ಟಗಳಿಗೆ ಪಶ್ಚಿಮೋತ್ತರವಾಗಿರುವ ಪ್ರದೇಶ, ಅಂದರೆ ಬಾರಾಮಹಲ್ ಮತ್ತು ಬಾಲಾಘಾಟ್ ಎಂದು ಕರೆಯಲ್ಪಡುತ್ತಿರುವ ಪ್ರಸ್ಥಭೂಮಿ ಪ್ರದೇಶದಲ್ಲಿ ಮೇಲೆ ವಿವರಿಸಿದ ಪ್ರದೇಶಗಳು ಅಂತರಗತವಾಗಿರುತ್ತವೆ. ಈ ಪ್ರದೇಶದ ಹೊರಗಿನ ಭಾಗ, ಅಂದರೆ ಘಟ್ಟದ ಪೂರ್ವ ದಕ್ಷಿಣಗಳಿಗಿರುವ ಕೆಳಗಿನ ಭಾಗಗಳನ್ನು ತಾಲಘಾಟ್ ಎಂದು ಕರೆಯಲ್ಪಡುತ್ತಿದ್ದು, ತಿರುಚಿನಾಪಳ್ಳಿ, ದಕ್ಷಿಣ ಆರ್ಕಾಡು, ಕೊಯಮತ್ತೂರು ಜಿಲ್ಲೆಯ ದಕ್ಷಿಣ ಭಾಗಗಳು ಈ ಗಡಿನಾಡಿನ ಹೊರಗೆ ನಿಲ್ಲುವ ಪ್ರದೇಶವಾಗಿರುತ್ತವೆ.

**ರಾಜಕೀಯ ಮಹತ್ವ :**

ರಾಜಕೀಯವಾಗಿ ಈ ಪ್ರದೇಶದ ಶಾಸನಗಳಲ್ಲಿ ಗಂಗ, ಬಾಣ, ನೊಳಂಬ, ಚೋಳ, ಹೊಯ್ಸಳ, ವಿಜಯನಗರ ಮತ್ತು ಮೈಸೂರು ಅರಸರ ಆಳ್ವಿಕೆ ಕಂಡುಬರುತ್ತದೆ.

ಈ ಗಡಿನಾಡಿನ ಪ್ರಾಚೀನತಮ ಶಾಸನಗಳು ಈ ಮೊದಲೇ ಹೇಳಿರುವಂತೆ ಗಂಗ ವಂಶೀಯರವಾಗಿವೆ. ದಕ್ಷಿಣದಲ್ಲಿ ಪ್ರಬಲರಾಗಿದ್ದ ತಮಿಳರಸರ ರಾಜ್ಯಗಳೊಂದಿಗೆ ದಕ್ಷಿಣ ಕರ್ನಾಟಕವು ಸೇರದಂತೆ ಕರ್ನಾಟಕದ ಶ್ರೀರಕ್ಷೆಯಾಗಿ ನಿಂತವರು ಗಂಗರು. ಇವರು ವಿಶೇಷವಾದ ರಾಜನೀತಿ ನೈಪುಣ್ಯ ಪಡೆದಿದ್ದು ಕಾಲಕಾಲಕ್ಕೆ ಸರಿತೋರಿದ ರೀತಿಯಲ್ಲಿ ಮೈತ್ರಿ, ಸಮರ ಸಂದರ್ಭಗಳಲ್ಲಿ ಹೋರಾಟ ಮಾಡುತ್ತಾ ಬಹುಮಟ್ಟಿಗೆ ಯಶಗಳಿಸಿದರು. ಆದರಿಂದಾಗಿಯೇ ದಕ್ಷಿಣ ಕರ್ನಾಟಕದ ಬಹುಭಾಗ ಅಚ್ಚ ಕನ್ನಡ ರಾಜ್ಯವಾಗಿಯೇ ಉಳಿಯುವಂತಾಯಿತು. 'ಸಮ್ಯಕ್ ಪ್ರಜಾಪಾಲನ ಮಾತ್ರಾಧಿಗತ ರಾಜ್ಯ ಪ್ರಯೋಜನಸ್ಯ' ಎಂಬಂತೆ, ಜನಪದ ಹಿತವೇ ಗಂಗರಸರ ರಾಜ್ಯಾಡಳಿತದ ಆಳತೆಗೋಲಾಗಿತ್ತು. ಗಂಗವಂಶದ ದೊರೆ ಮೊದಲ ಶಿವಮಾರನ ನಂತರ ಆತನ ಮೊಮ್ಮಗನಾದ ಶ್ರೀ ಪುರುಷ ಕ್ರಿ. ಶ. ೭೨೬ ರಿಂದ ೭೮೮ರ ವರೆಗೆ ರಾಜ್ಯಭಾರ ಮಾಡಿದನು. ಇವನ ಕಾಲದಲ್ಲಿ ಗಂಗವಾಡಿಯು ವೈಭವದ ತುತ್ತ ತುದಿಯಲ್ಲಿತ್ತು. ಶ್ರೀಪುರುಷನು ಪಲ್ಲವರನ್ನು ಗಂಗರಾಜ್ಯದಂಚಿಗೇನೇ ತಡೆದಿಟ್ಟು ಕನ್ನಡ ರಾಜ್ಯವನ್ನು ಉಳಿಸಿದ ವಿಖ್ಯಾತಿಯನ್ನು ಪಡೆದವನು. 'ಕೊಂಗುಣಿ ರಾಜಾಧಿರಾಜ ಪರಮೇಶ್ವರ ಶ್ರೀಪುರುಷ' ಎಂಬ ಬಿರುದು ಧರಿಸಿದ್ದನು. ಪಲ್ಲವ ಮತ್ತು ರಾಷ್ಟ್ರಕೂಟರ ವಿರುದ್ಧ ಅವಿರತ ಹೋರಾಟ ನಡೆಸಿ ಗಂಗವಾಡಿಯನ್ನು ಪರರ ಆಕ್ರಮಣದಿಂದ ಕಾಪಾಡಿದ ಕೀರ್ತಿ ಈತನದು. ಈತನ ಕ್ರಿ. ಶ. ೭೭೧ರ ಸೇಲಂ ಸ್ಥಳದ ಸುಕವನೇಶ್ವರ ದೇವಾಲಯದ ತಾಮ್ರಪಟಗಳಲ್ಲಿ ಪ್ರಸ್ತಾಪಿತವಾಗಿರುವ ಕೊರಮಂಗಲವು ಸೇಲಂ ಜಿಲ್ಲೆಯ ತಿರುಚೆಂಗೋಡು ತಾಲ್ಲೂಕಿನ ಕೊಮರ ಮಂಗಲಂ ಎಂದೂ, ಅದೇ ಜಿಲ್ಲೆಯ ಪುದೂರು ಎಂಬುದೇ ಪುದುಕನ್ದ ವಿಷಯದ

ಕೇಂದ್ರಸ್ಥಳವಿದ್ದಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿರುತ್ತಾರೆ. ಕೊನೆಯ ಬಲಿಷ್ಠ ಗಂಗರಾಜರಲ್ಲೊಬ್ಬನಾದ ಮಾರಸಿಂಹ (ಕ್ರಿ.ಶ. ೯೬೧-೭೪)ನ ಆಳಿಕೆಯಲ್ಲಿ ಕರ್ನಾಟಕ ಭರತ ಖಂಡದ ರಾಜಕೀಯದಲ್ಲಿ ಪ್ರಮುಖ ಸ್ಥಾನ ಪಡೆಯಲು ಪ್ರಯತ್ನ ಪಟ್ಟಿರುವುದು ಕಂಡುಬರುತ್ತದೆ. ಈತನು ತನ್ನ ಮಿತ್ರನಾದ ರಾಷ್ಟ್ರಕೂಟ ಕನ್ನರನ (ಕೃಷ್ಣ III) ಪರವಾಗಿ ಗುಜರಾತಿನ ಮೇಲೆ ದಂಡೆತ್ತಿಹೋದನು. ಇಂತಹ ಪರಾಕ್ರಮಿಯಾದ ಮಾರಸಿಂಹನ ಶಾಸನವೊಂದು ಹೊಸೂರಿನ ರಾಮನಾಯಕ ಕೆರೆಯಲ್ಲಿರುವ ಗಂಗಮ್ಮನ ದೇವಾಲಯದಲ್ಲಿದ್ದು, ಮೊರಸುನಾಡು ಮತ್ತು ಪೊಳಲಸೆಟ್ಟಿ ಎಂಬ ಉಲ್ಲೇಖಗಳನ್ನು ಮಾಡುತ್ತದೆ.

ಕ್ರಿಸ್ತಶಕದ ಪ್ರಾರಂಭದಿಂದಲೇ ದಕ್ಷಿಣ ಭಾರತದ ಇತಿಹಾಸದಲ್ಲಿ ಕಾಣಿಸಿಕೊಳ್ಳುವ ಬಾಣರು, ಪಲ್ಲವರು ಪ್ರಬಲರಾದಾಗ ಅವರ ಮಾಂಡಲಿಕರಾಗಿ ಕೋಲಾರ, ಕಡಪ, ತಿರುವಲ್ಲಂ ಪ್ರದೇಶಗಳನ್ನು ಆಳುತ್ತಿದ್ದರು. ೭-೮ನೇ ಶತಮಾನದಲ್ಲಿ ಕದಂಬರು, ನಂತರದಲ್ಲಿ ಚಲುಕ್ಯರು, ಅನಂತರ ಗಂಗರು, ಕೊನೆಗೆ ನೊಳಂಬರು ಹಾಗೂ ಚೋಳರು ಬಾಣರ ಮೇಲೆ ದಾಳಿ ನಡೆಸಿದ್ದಾರೆ. ಇವರ ಶಾಸನವೊಂದು ಕೃಷ್ಣಗಿರಿ ತಾಲ್ಲೂಕು ರಾಯಕೋಟೆಯಲ್ಲಿ ದೊರೆತಿದ್ದು, ಮಹಾಬಲಿ ಬಾಣರಸನಿಗೆ ಸೇರಿದುದಾಗಿದೆ. ಮಹಾವಲಿ ವಂಶದ ಜಯಮೇರು ಈತನಿರಬಹುದೆಂದು ಇತಿಹಾಸಕಾರರು ಅಭಿಪ್ರಾಯ ಪಟ್ಟಿರುತ್ತಾರೆ. ಈ ಶಾಸನದ ಪ್ರಕಾರ ಈತನು ಅನೇಕ ಪ್ರಾಂತಗಳ ಮೇಲೆ ಅಧಿಕಾರ ಪಡೆದಿದ್ದ ಅಂಶ ಸ್ಪಷ್ಟವಾಗುತ್ತದೆ. ಇದಕ್ಕೂ ಪೂರ್ವದಲ್ಲಿ ಈ ಪ್ರಾಂತಗಳು ಗಂಗರ ಆಳಿಕೆಗೆ ಒಳಪಟ್ಟಿದ್ದ ಅಂಶ ಗಂಗರ ಶಾಸನಗಳಿಂದ ತಿಳಿದು ಬರುತ್ತದೆ.

ಪಲ್ಲವ ವಂಶದಿಂದ ಬಂದವರೆಂದು ಹೇಳಲಾದ ನೊಳಂಬರು ತಮ್ಮ ಆಳಿಕೆಯನ್ನು ಇಂದಿನ ಆಂಧ್ರಪ್ರದೇಶದ ಮಡಕಶಿರಾ ತಾಲ್ಲೂಕಿನ ಹೆಂಜೇರು ಅಥವಾ ಹೇಮಾವತಿಯಲ್ಲಿ, ಕ್ರಿ.ಶ. ೮ನೆಯ ಶತಮಾನದಲ್ಲಿ ಆರಂಭಿಸಿದರು. ಮೊದಮೊದಲು ಗಂಗರ ಅಧೀನದಲ್ಲಿ ತಮ್ಮ ಆಳಿಕೆಯನ್ನು ನಡೆಸುತ್ತಿದ್ದರು. ಈ ವಂಶದ ಚಾರು ಪೊನ್ನೇರನು ಗಂಗರ ಆಶ್ರಯವನ್ನು ಬಿಟ್ಟು ರಾಷ್ಟ್ರಕೂಟ ದೊರೆ ಮುಮ್ಮಡಿ ಗೋವಿಂದನ ಅಧೀನದಲ್ಲಿ ಆಳಿದನು. ಇವನ ಕಾಲದಲ್ಲೇ 'ನೊಳಂಬಳಿಗೆ-೧೦೦೦' ಎಂಬ ಪ್ರಾಂತ್ಯ ಅಸ್ತಿತ್ವಕ್ಕೆ ಬಂದಿತು. ಈತನು ಮತ್ತೆ ಗಂಗರೊಂದಿಗೆ ಸ್ನೇಹ ಸಂಪಾದಿಸಿ ಗಂಗದೊರೆ ರಾಚಮಲ್ಲನ ಮಗಳಾದ ಜಾಯಬ್ಬೆಯನ್ನು ತನ್ನ ಸೊಸೆಯಾಗಿ ಮಾಡಿಕೊಂಡನು. ಇವನ ನಂತರ ಆಳಿದ ಪೊಳಲ್ಚೋರನು ಗಂಗದೊರೆ ಮೊದಲನೇ ನೀತಿಮಾರ್ಗನ ಸಾಮಂತನಾಗಿ ರಾಜ್ಯವಾಳಿದನು. ಗಂಗರು ಬಾಣರನ್ನು ಸೋಲಿಸಿ ಅವರಿಂದ ಗೆದ್ದ ಭಾಗಗಳನ್ನು ನೊಳಂಬ ಪೊಳೆಲ್ಚೋರನಿಗೆ ಕೊಟ್ಟರು. ಪೊಳಲ್ಚೋರನು ತನ್ನ ಮಗನಾದ ಮೊದಲನೇ ಮಹೇಂದ್ರನಿಗೆ ಗಂಗ

ರಾಜಕುಮಾರಿ ಗಾಮಬ್ಬೆಯನ್ನು ತಂದುಕೊಂಡ. ಇದರಿಂದ ನೊಳಂಬ ಮತ್ತು ಗಂಗರ ಸ್ನೇಹ ವೃದ್ಧಿಸಿತು. ಕ್ರಿ.ಶ. ೮೭೫ರ ಸುಮಾರಿನಲ್ಲಿ ಮಹೇಂದ್ರ ರಾಜನು ಪಟ್ಟಕ್ಕೆ ಬಂದನು. ಈತನು ಬಾಣರನ್ನು ಪೂರ್ಣವಾಗಿ ಸೋಲಿಸಿ 'ಮಹಾಬಲಿ ಕುಲ ವಿಧ್ವಂಸಕ' ಎಂಬ ಬಿರುದನ್ನು ಧರಿಸಿದನು. ತನ್ನ ಬಂಧುಗಳೇ ಆದ ತಲಕಾಡಿನ ಗಂಗರ ಮೇಲೂ ಯುದ್ಧ ಮಾಡಿದನು. ಇವನ ಕಾಲದಲ್ಲಿ ನೊಳಂಬವಾಡಿ ವಿಸ್ತಾರವಾಯಿತು. ಇವನ ಆಳಿಕೆಗೆ ಸೇರಿದ ಹಲವು ಶಾಸನಗಳು ಧರ್ಮಪುರಿ, ಹೊಸೂರು ತಾಲ್ಲೂಕಿನ ಮಾಚಿನಾಯಕನಹಳ್ಳಿ ಮೊದಲಾದ ಸ್ಥಳಗಳಲ್ಲಿ ದೊರೆತಿವೆ. ಕ್ರಿ.ಶ. ೮೯೩ಕ್ಕೆ ಸೇರಿದ ಈತನ ಧರ್ಮಪುರಿ ಶಾಸನವು ಜೈನ ಬಸದಿಯೊಂದಕ್ಕೆ ದತ್ತಿಯನ್ನು ನೀಡಿರುವ ವಿವರವನ್ನು ನೀಡುತ್ತದೆ. ಮಾಚಿನಾಯಕನಹಳ್ಳಿಯ ಶಾಸನವು ತುರುಗಾಳಗಕ್ಕೆ ಸಂಬಂಧಿಸಿದ ವೀರಗಲ್ಲಾಗಿದೆ. ಧರ್ಮಪುರಿಯ ಮತ್ತೊಂದು ಶಾಸನವು ಈತನ ಆಳಿಕೆಯ ಅವಧಿಗೆ ಸೇರಿದ್ದು ಆ ಕಾಲದ ವಾಣಿಜ್ಯ ಮತ್ತು ಕೃಷಿಯ ಬಗ್ಗೆ ಬೆಳಕು ಚೆಲ್ಲುತ್ತದೆ. ಈತನ ನಂತರ ಇವನ ಮಗನಾದ ಅಯ್ಯಪದೇವನು ನೊಳಂಬವಾಡಿಯ ದೊರೆಯಾದ. ಈತನು ಗಂಗರೊಂದಿಗೆ ಸ್ನೇಹದಿಂದಿದ್ದು 'ನೊಳಂಬವಾಡಿ-೩೨೦೦೦' ಎಂಬ ವಿಶಾಲವಾದ ಪ್ರಾಂತ್ಯಕ್ಕೆ ಅಧಿಪತಿಯಾದನು. ಇವನು ಪೂರ್ವ ಚಾಲುಕ್ಯರೊಂದಿಗೆ ನಡೆಸಿದ ಹೋರಾಟಗಳಲ್ಲಿ ಗಂಗರು ನೆರವಾಗಿರುವ ಅಂಶ ಪ್ರಸಿದ್ಧ ಬೇಗೂರು ವೀರಗಲ್ಲು ಶಾಸನದಿಂದ ಸ್ಪಷ್ಟಪಡುತ್ತದೆ. ಈತನ ಶಾಸನವೊಂದು ಧರ್ಮಪುರಿಯಲ್ಲೇ ಇದ್ದು ಹಿಂದೆ ನಿಧಿಯಣ್ಣನಿಂದ ಕಟ್ಟಲಾಗಿದ್ದ ಬಸದಿಗೆ ಲೋಕಯ್ಯನೆಂಬುವವನು ಬೂದುಗೂರೆಂಬ ಸ್ಥಳವನ್ನು ದತ್ತಿಬಿಟ್ಟಿರುವ ವಿಷಯುವನ್ನು ತಿಳಿಸುತ್ತದೆ. ಬೀರನೊಳಂಬನ ಮಗನಾದ ಇರುಳ ಚೋರನ (ಕ್ರಿ. ಶ. ೯೨೯) ಶಾಸನಗಳು ಧರ್ಮಪುರಿ ತಾಲ್ಲೂಕು ಕೊಳಗಟ್ಟೂರು ಸ್ಥಳದಲ್ಲಿ ದೊರೆತಿವೆ. ಧರ್ಮಪುರಿಯಲ್ಲಿರುವ ಈತನ ಶಾಸನದಿಂದ ನೊಳಂಬರ ವಂಶವೃಕ್ಷ, ಗಂಗ, ನೊಳಂಬ ಮತ್ತು ಚಾಲುಕ್ಯರೊಂದಿಗಿದ್ದ ವೈವಾಹಿಕ ಸಂಬಂಧಗಳನ್ನು ಅರಿಯಬಹುದಾಗಿದೆ. ಇವನ ನಂತರ ಬೀರನೊಳಂಬ ಅಣ್ಣಿಗನು ದೊರೆಯಾದನು. ನಂತರ ಇವನ ಸೋದರ ಇರಿವನೊಳಂಬ I (ದಿಲೀಪ) [ಕ್ರಿ.ಶ. ೯೪೧-೬೮] ರಾಜನಾದ. ಇವನು ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಮಿತ್ರನಾಗಿದ್ದು, ರಾಷ್ಟ್ರಕೂಟರು ಕೈಗೊಂಡ ದಂಡಯಾತ್ರೆಗಳಲ್ಲಿ ಭಾಗವಹಿಸಿದ್ದನು. ದಿಲೀಪನ ಮಗ ನನ್ನಿನೊಳಂಬನ ಕಾಲಕ್ಕೆ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನು ಮರಣ ಹೊಂದಿದ್ದುದರಿಂದ ಅಸಹಾಯಕನಾಗಿದ್ದನು. ಆಗ ಗಂಗರ ಇಮ್ಮಡಿ ಮಾರಸಿಂಹನು ಈತನನ್ನು ಸೋಲಿಸಿ ನೊಳಂಬ ಕುಲಾಂತಕ ಎಂಬ ಬಿರುದನ್ನು ಧರಿಸಿದನು. ನಂತರದಲ್ಲಿ ಇಮ್ಮಡಿ ಮಹೇಂದ್ರ, ಇಮ್ಮಡಿ ಇರಿವನೊಳಂಬ ಮುಂತಾದವರು ಆಳಿದರು. ಕೊನೆಕೊನೆಗೆ, ಕಲ್ಯಾಣದ ಚಾಲುಕ್ಯರ ಆಶ್ರಿತರಾಗಿ ಹಲವು ಕಾಲ ಆಳಿರುವುದು ಕಂಡು ಬರುತ್ತದೆ.

ಕ್ರಿಸ್ತಶಕ ೧೦೦೪ ರಿಂದ ೧೧೧೬ರ ವರೆಗೂ ಕರ್ನಾಟಕದ ದಕ್ಷಿಣ ಮತ್ತು ಪೂರ್ವಭಾಗಗಳ ಹೆಚ್ಚು ಪ್ರದೇಶಗಳನ್ನು ಚೋಳರು ಆಕ್ರಮಿಸಿದ್ದರು. ಅದಕ್ಕೂ ಮೊದಲು ಕ್ರಿ.ಶ. ೯೪೯ರಲ್ಲಿ ಗಂಗರಾಜ ಬೂತುಗನು ರಾಷ್ಟ್ರಕೂಟ ಮತ್ತು ಚೋಳರ ಮಧ್ಯೆ ತಕ್ಕೋಲದಲ್ಲಿ ನಡೆದ ಯುದ್ಧದಲ್ಲಿ ಚೋಳರಾಜಾದಿತ್ಯನನ್ನು ಕೊಂದಿದ್ದನು. ರಾಜೇಂದ್ರ ಚೋಳನ ಕಾಲದ ಶಾಸನವೊಂದು ಹೊಸೂರಿನಲ್ಲಿದ್ದು ಅದು ಅವನ ಆಳಿಕೆಯ ೧೪ನೆಯ ವರ್ಷದ್ದೆಂದು ತಿಳಿದು ಬರುತ್ತದೆ. ಅಂದರೆ ಕ್ರಿ.ಶ. ೧೦೧೪ನೇ ವರ್ಷಕ್ಕೆ ಸೇರಿದ್ದು ಪೊಲಮುನ್ದನಾಡಿನ ವಿಕ್ರಮ ಚೋಳಗಾವುಂಡನನ್ನು ಉಲ್ಲೇಖಿಸುತ್ತದೆ.

ಇಮ್ಮಡಿ ರಾಜೇಂದ್ರ ಚೋಳನ ಕಾಲದಲ್ಲಿ (ಕ್ರಿ.ಶ. ೧೦೭೦) ಮತ್ತು ನಂತರದಲ್ಲಿ ಪ್ರಬಲರಾಗತೊಡಗಿದ್ದ ಹೊಯ್ಸಳರಿಂದ ಚೋಳರು ಹಿಮ್ಮೆಟ್ಟಬೇಕಾಯಿತು. ಹೊಯ್ಸಳ ವಿಷ್ಣುವರ್ಧನನ ಆಳಿಕೆಯಲ್ಲಿ ಪ್ರಸಿದ್ಧ ಹೊಯ್ಸಳ ಸೇನಾನಿ ಗಂಗರಾಜನು ಕ್ರಿ.ಶ. ೧೧೧೬ರಲ್ಲಿ ಚೋಳರಿಂದ ತಳಕಾಡನ್ನು ವಶಪಡಿಸಿಕೊಂಡನು. ಮಲೆಪರೊಳ್ಗಂಡರೆನಿಸಿಕೊಂಡಿದ್ದ ಹೊಯ್ಸಳರು, ಚೋಳರನ್ನು ಕರ್ನಾಟಕದಿಂದ ಓಡಿಸಿ ಕೊಂಗು, ನಂಗಲಿ, ಗಂಗವಾಡಿ ಮೊದಲಾದ ಪ್ರದೇಶಗಳನ್ನು ವಶಪಡಿಸಿಕೊಂಡರು. ವಿಷ್ಣುವರ್ಧನನ ನಂತರ ಮೊದಲನೇ ನರಸಿಂಹ, ಇಮ್ಮಡಿ ವೀರಬಲ್ಲಾಳನ ಆಳ್ವಿಕೆ ಪ್ರಾರಂಭವಾಯಿತು. ಈತನ ಅನೇಕ ಶಾಸನಗಳು ಈ ಭಾಗದಲ್ಲಿ ಲಭ್ಯವಿದ್ದು, ತಮಿಳು ಭಾಷೆಯಲ್ಲಿವೆ. ಹೊಯ್ಸಳರ ಆಳ್ವಿಕೆಯ ಅವಧಿಗೆ ಸೇರಿದ ಕನ್ನಡ ಶಾಸನಗಳು ಹೊಸೂರು ತಾಲ್ಲೂಕಿನ ಸದಕಿ ಹಳ್ಳಿ, ಮಾಚಿನಾಯಕನ ಹಳ್ಳಿ, ಹೊಸೂರು ಸ್ಥಳಗಳಲ್ಲಿ ಕಂಡು ಬಂದಿವೆ.

ತುಂಗಭದ್ರಾ ತೀರದ ವಿಜಯನಗರದಲ್ಲಿ ಸ್ಥಾಪಿತವಾದ ಕರ್ನಾಟಕ ಸಾಮ್ರಾಜ್ಯ ಕ್ರಿ.ಶ. ೧೩೩೬ ರಿಂದ ೧೬೪೬ರ ವರೆಗೆ ಬಾಳಿ ಸೈನಿಕ ಮತ್ತು ರಾಜಕೀಯ ರಂಗಗಳಲ್ಲಿ ಹಿಂದೂಗಳ ಘನತೆಯನ್ನು ಹಿಂದೆಂದೂ ಕಾಣದಷ್ಟು ಮಟ್ಟಿಗೆ ಉನ್ನತಿಗೇರಿಸಲು ಕಾರಣವಾಯಿತು. ಮಹಮ್ಮದೀಯರು ಕರ್ನಾಟಕದ ಉತ್ತರಭಾಗದಲ್ಲಿ ಸೇವುಣರನ್ನು ತೊಡೆದುಹಾಕಿ, ಪೂರ್ವದಲ್ಲಿ ಗಜಪತಿಯ ರಾಜ್ಯವನ್ನು ನಾಶಮಾಡಿ, ದಕ್ಷಿಣದ ತಮಿಳು ರಾಜ್ಯದ ಕೊನೆ ಕೊನೆಯ ಗುರುತುಗಳನ್ನು ಅಳಿಸಿಬಿಟ್ಟಿದ್ದರು. ಕರ್ನಾಟಕದಲ್ಲೂ ಕೂಡ ಹೊಯ್ಸಳರ ರಾಜ್ಯವನ್ನು ಹಾಳು ಮಾಡಲು ಪ್ರಯತ್ನ ಮಾಡಿದ್ದರು. ಮುಮ್ಮಡಿ ಬಲ್ಲಾಳನು ಸಾಹಸದಿಂದ ಅವರನ್ನು ಎದುರಿಸಿದ್ದನು. ಅಷ್ಟೇ ಅಲ್ಲದೆ ವಿಜಯಗರದ ಸಂಸ್ಥಾಪಕರಾದ ಹಕ್ಕಬುಕ್ಕ ಸಹೋದರರು ಸ್ವೀಕರಿಸಿದ ಹಿಂದೂ ರಕ್ಷಣೆಯ ದೀಕ್ಷೆಯು ಮುಸ್ಲಿಮರನ್ನು ನಾಡಿನಿಂದ ಹೊರಗೋಡಿಸಿ ಹಿಂದೂಗಳ ಪರಮ ಪ್ರಭುತ್ವವನ್ನು ಸ್ಥಾಪಿಸಲು ಕಾರಣವಾಯಿತು. ವಿಜಯನಗರ ರಾಜಧಾನಿಯನ್ನೂ ಅದರ ಕೋಟೆ ಕೊತ್ತಲಗಳನ್ನು ಕಟ್ಟಿಸಿದ ಸಂಗಮನ ಎರಡನೆಯ

ಮಗ ಬುಕ್ಕರಾಯ ಪ್ರಸಿದ್ಧನು. ಅವನು ಮತ್ತು ಅವನ ಸೋದರರ ಸೈನಿಕ ಜಯಗಳ ಫಲವಾಗಿ ಕೃಷ್ಣಾನದಿಯ ದಕ್ಷಿಣದ ನಾಡೆಲ್ಲ ಹಿಂದೂ ಧರ್ಮದ ನಾಡಾಯಿತು. ಮಧುರೆಯಲ್ಲಿ ಕಡೆಕಡೆಯ ಕುರುಹಾಗಿ ಉಳಿದಿದ್ದ ಮಹಮ್ಮದೀಯ ಅಧಿಕಾರವನ್ನು ಬುಕ್ಕರಾಯನ ಕುಮಾರನಾದ ವೀರಕಂಪಣರಾಯನು ಒರಸಿಹಾಕಿದನು. ಈ ಕುಮಾರ ಕಂಪಣ ಒಡೆಯನನ್ನು ಪ್ರಸ್ತಾಪಿಸುವ ಕ್ರಿ.ಶ. ೧೩೭೦ರ ಅವಧಿಗೆ ಸೇರಿದ ಶಾಸನಗಳು ಹೊಸೂರಿನಲ್ಲಿದ್ದು, ಆತನ ಮಹಾಪ್ರಧಾನಿ ಸೋವಪ್ಪ ದಂಡನಾಯಕನೆಂದು ತಿಳಿದು ಬರುತ್ತದೆ. ವಿಜಯನಗರದ ಆಳಿಕೆಯ ಕುರುಹಾಗಿ ಸುಮಾರು ೭೫ಕ್ಕಿಂತಲೂ ಹೆಚ್ಚು ಶಾಸನಗಳು ಈ ಗಡಿಪ್ರದೇಶದಲ್ಲಿ ದೊರೆತಿವೆ.

ಇಮ್ಮಡಿ ಹರಿಹರನ ಮಗ ಬುಕ್ಕಣ ಒಡೆಯನ ಕ್ರಿ.ಶ. ೧೩೭೮ರ ಶಾಸನಗಳು ಹೊಸೂರು ಹಾಗೂ ಅದೇ ತಾಲ್ಲೂಕಿನ ಮುಗಳೂರು ಗ್ರಾಮದಲ್ಲಿ ಕಂಡು ಬಂದಿವೆ. ಕ್ರಿ.ಶ. ೧೩೮೬ಕ್ಕೆ ಸೇರಿದ ವೀರ ಹರಿಯಪ್ಪ ಒಡೆಯನ ಆಳಿಕೆಯ ಶಾಸನ ಗೋಪಿಚೆಟ್ಟಿಪಾಳ್ಯ ತಾಲ್ಲೂಕಿನ ಎರಗನಹಳ್ಳಿಯಲ್ಲಿದೆ. ಅಲ್ಲದೆ ಮತ್ತೊಂದು ಶಾಸನವು ಹೊಸೂರು ತಾಲ್ಲೂಕಿನ ಕೂಸ್ತನಹಳ್ಳಿ ಗ್ರಾಮದಲ್ಲಿದೆ. ದೇವರಾಯನ ಆಳಿಕೆಯ ಕಾಲಕ್ಕೆ ಸೇರಿದ ಶಾಸನಗಳು ಉಳಮಾರನಹಳ್ಳಿ, ಗುಮ್ಮಳಾಪುರ ಸ್ಥಳಗಳಲ್ಲಿ ಕಂಡು ಬಂದಿವೆ. ಸಾಳುವ ವೀರಭುಜಬಲರಾಯನದೆಂದು ತಿಳಿದು ಬರುವ ಕ್ರಿ.ಶ. ೧೫೦೯ರ ಶಾಸನವೊಂದು ಕೂತಪ್ಪಾಡಿ ಸ್ಥಳದಲ್ಲಿದೆ. ತುಳುವ ವಂಶದ ಕೃಷ್ಣದೇವರಾಯನನ್ನು ಇಲ್ಲಿನ ಹಲವು ಶಾಸನಗಳು ಸಾಳುವ ಇಮ್ಮಡಿ ಕೃಷ್ಣರಾಯನೆಂದು ಕರೆದಿರುವುದು ಕುತೂಹಲಕಾರಿಯಾಗಿದೆ. ಕ್ರಿ.ಶ. ೧೫೦೮ ರಿಂದ ೧೫೨೯ರ ವರೆಗೂ ಗಂಗನಹಳ್ಳಿ, ಕಾಟನಾಯಕನ ದೊಡ್ಡಿ, ಹೊಸೂರು ಗುಮ್ಮಳಾಪುರ, ಇಂದೂರು ಮುಂತಾದ ಸ್ಥಳಗಳಲ್ಲಿ ಈತನ ಶಾಸನಗಳಿವೆ. ಕ್ರಿ.ಶ. ೧೫೩೦ ರಿಂದ ೧೫೪೯ರ ಅವಧಿಗೆ ಸೇರಿದ ಅಚ್ಯುತರಾಯನ ಅನೇಕ ಶಾಸನಗಳು ಅಥಮಾನಕೋಟೆ, ತಳಿ, ಎರಗನಹಳ್ಳಿ, ಹೊಸೂರು, ಮುದುಗಾನಹಳ್ಳಿ ಮುಂತಾದ ಸ್ಥಳಗಳಲ್ಲಿ ಕಂಡುಬಂದಿವೆ. ಕ್ರಿ.ಶ. ೧೫೪೦ ರಿಂದ ೧೫೬೬ರ ವರೆಗಿನ ಹಲವು ಶಾಸನಗಳಲ್ಲಿ ಸದಾಶಿವ ದೇವರಾಯನು ಉಲ್ಲೇಖಿತನಾಗಿದ್ದು, ಶಂಖಗಿರಿ, ಧಾರಾಪುರ, ಕಾರಿಮಂಗಲ ಮುಂತಾದ ಸ್ಥಳಗಳಲ್ಲಿವೆ. ರಾಮರಾಜ ಒಡೆಯನನ್ನು ಉಲ್ಲೇಖಿಸುವ ಕ್ರಿ.ಶ. ೧೫೬೩ರ ಶಾಸನವೊಂದು ಡೆಂಕಣಿಕೋಟೆಯಲ್ಲಿದೆ. ಕ್ರಿ.ಶ. ೧೬೦೬ರ ಗುಮ್ಮಳಾಪುರದ ಶಾಸನವೊಂದರಲ್ಲಿ ವೆಂಕಟಪತಿರಾಯನ ಉಲ್ಲೇಖ ಬಂದಿದೆ. ಧರ್ಮಪುರಿಯ ವಿರೂಪಾಕ್ಷಪುರದಲ್ಲಿರುವ ಕ್ರಿ.ಶ. ೧೬೧೯ರ ಶಾಸನವು ಶ್ರೀರಂಗರಾಯನದಾಗಿದೆ.

ವಿಜಯನಗರ ಆಳಿಕೆಯ ಕೊನೆಕೊನೆಯ ಕಾಲದಲ್ಲಿ ಪ್ರಬಲರಾಗತೊಡಗಿದ್ದ ಸ್ಥಳೀಯ ಸಾಮಂತರೇ ಮುಂತಾದವರು ಮುಂದೆ ಪಾಳೆಯಗಾರರೆನಿಸಿಕೊಂಡರು.

ಹೀಗೆ ತಲೆಯೆತ್ತಿದ ಅನೇಕರಲ್ಲಿ ಮೈಸೂರಿನ ಒಡೆಯರು ಹೆಚ್ಚು ಪ್ರಬಲರಾಗಿ ಇತರ ಪಾಳೆಯಗಾರರನ್ನು ಸೋಲಿಸಿ ತಮ್ಮ ಅಧೀನಕ್ಕೆ ಒಳಪಡಿಸಿಕೊಂಡಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ಕ್ರಿಸ್ತಶಕ ಹದಿನೈದನೆಯ ಶತಮಾನದ ಆದಿಭಾಗದಲ್ಲಿ ತಲೆಯೆತ್ತತೊಡಗಿದ ಮೈಸೂರು ಅರಸರು ವಿಜಯನಗರದ ಪತನದೊಂದಿಗೆ ಹುಟ್ಟಿಕೊಂಡ ಪಾಳೆಯಗಾರರಿಂದ ಏರ್ಪಟ್ಟಿದ್ದ ಅರಾಜಕತೆಯ ಅನುಕೂಲವನ್ನು ಪಡೆದು ತಮ್ಮ ರಾಜ್ಯವನ್ನು ವಿಸ್ತರಿಸುತ್ತಾ ಹೋದರು. ಈ ವಂಶದಲ್ಲಿ ಹನ್ನೆರಡನೆಯ ಅರಸನೆನಿಸಿಕೊಂಡ ರಣಧೀರ ಕಂಠೀರವ ನರಸರಾಜ ಒಡೆಯರು (ಕ್ರಿ. ಶ. ೧೬೩೮–೫೯) ಬಹು ಪರಾಕ್ರಮಿಯಾದ ಅರಸು. ತಮಿಳುನಾಡಿನ ಮಧುರೆ ಪ್ರದೇಶವನ್ನು ಘಟ್ಟಿಮೊದಲಿಯಾರ್, ವೆಂಕಟಾದ್ರಿ ಮುಂತಾದ ನಾಯಕರು ಆಳುತ್ತಿದ್ದರು. ಮಧುರೆಯ ಆಡಳಿತಕ್ಕೆ ಸೇರಿದ್ದ ದಂಟಳ್ಳಿ, ಶಿಂಗಾನಲ್ಲೂರು, ಕಾವೇರಿಪುರ, ತೋಳ್ಳದ ಹೋಬಳಿಗೆ ಸೇರಿದ ಚಂಗಪ್ಪಾಡಿ, ಮೊರಟಿಹಳ್ಳಿ ಮುಂತಾದವುಗಳನ್ನು ಕ್ರಿ. ಶ. ೧೬೪೧ರಲ್ಲಿ ಸಾಧಿಸಿದ ಇವರು ಮತ್ತೆ ಕ್ರಿ. ಶ. ೧೬೫೩ರಲ್ಲಿ ದಣಾಯಕನಕೋಟೆ, ಬಿಜಾಪುರದ ಮುಸ್ಲಿಮರ ವಶದಲ್ಲಿದ್ದ ವೀರಭದ್ರದುರ್ಗ, ಪೆನ್ನಾಗರ, ಡೆಂಕಣಿಕೋಟೆ, ಧರ್ಮಪುರಿಗಳನ್ನೂ ಚಂದ್ರಶೇಖರನಿಂದ ಹೊಸೂರನ್ನು ಕ್ರಿ. ಶ. ೧೬೫೫ರಲ್ಲಿಯೂ ವಶಪಡಿಸಿಕೊಂಡರು. ಹೀಗೆ ರಾಜ್ಯವಿಸ್ತರಣಾ ವಿಷಯದಲ್ಲಿ ಪುರೋಗಾಮಿಯಾದ ಇವರ ಕ್ರಿ. ಶ. ೧೬೫೫ರ ಶಾಸನವೊಂದು ಈರೋಡಿನಲ್ಲಿ ದೊರೆತಿದ್ದು ದಳವಾಯಿ ಹಂಪೈಯ ಮತ್ತು ಮಧುರೆಯನ್ನು ಉಲ್ಲೇಖಿಸುತ್ತದೆ. ಕ್ರಿ. ಶ. ೧೬೫೯ರಲ್ಲಿ ಮುಪ್ಪಿನ ದೇವರಾಜ ಒಡೆಯರ ಮಗ ದೊಡ್ಡದೇವರಾಜ ಒಡೆಯರು (ಕ್ರಿ. ಶ. ೧೬೫೫–೧೬೭೩) ಸಿಂಹಾಸನಸ್ಥನಾದರು. ಪರಾಕ್ರಮಿ ಹಾಗೂ ಪರಮ ದೈವಭಕ್ತರಾಗಿದ್ದ ಇವರು ಸೇಲಂ ಜಿಲ್ಲೆಗೆ ಸೇರಿದ ನಾಮಲೂರು ಸ್ಥಳದ ಮಲ್ಲಿಗೆ ಕೋಟೆಯನ್ನು ಸ್ವಪರಾಕ್ರಮದಿಂದ ಗೆದ್ದು, ನಂಜನಗೂಡಿನ ನಂಜುಂಡೇಶ್ವರನಿಗೆ ಕೆಲವು ಗ್ರಾಮಗಳನ್ನು ದತ್ತಿಬಿಟ್ಟ ವಿವರವನ್ನು ಶಾಸನವೊಂದು ನೀಡುತ್ತದೆ. ಕ್ರಿ. ಶ. ೧೬೬೯ರಲ್ಲಿ ಸತ್ಯಮಂಗಲ ತಾಲ್ಲೂಕಿನ ಬಸ್ತರಪಾಳ್ಯ (ಬೆಸ್ತರಪಾಳ್ಯ) ಗ್ರಾಮದ ಶಿಲಾಶಾಸನದ ಗ್ರಾಮದಾನವನ್ನು ಉಲ್ಲೇಖಿಸಿದರೆ, ಕ್ರಿ. ಶ. ೧೬೭೦ರ ಶಾಸನವೊಂದು ಯೇಣೂರು ಕಣಿವೆಯ ಕೆಳಗಣ ಉಡಮಂಕನಾಡ ಸತ್ಯಮಂಗಲದ ಸ್ಥಳಕ್ಕೆ ಸಲ್ಲುವ ಕರವಳಿ ಹೋಬಳಿಯಲ್ಲಿನ ಬೆಸ್ತರಪಾಳ್ಯಕ್ಕೆ ಪ್ರತಿನಾಮವಾದ ಕೊಮಾರಪುರದ ಗ್ರಾಮವನ್ನು ಧವಳಗಿರಿಯ ಕುಮಾರಸ್ವಾಮಿಯವರ ಸೇವೆಗೆ ದತ್ತಿಬಿಟ್ಟ ವಿವರವನ್ನು ತಿಳಿಸುತ್ತದೆ. ಈ ಅರಸರ ಆಳಿಕೆಗೆ ಸೇರಿದ ಇನ್ನೊಂದು ಶಾಸನವು ಸತ್ಯಮಂಗಲ ತಾಲ್ಲೂಕಿನ ವಿನ್ನಪಳ್ಳಿಯಲ್ಲಿ ದೊರೆತಿದ್ದು (ಕ್ರಿ. ಶ. ೧೬೭೧), ಬ್ರಾಹ್ಮಣರಿಗೆ ದತ್ತಿ ಬಿಟ್ಟ ವಿವರವನ್ನು ತಿಳಿಸುತ್ತದೆ.

ಚಿಕ್ಕದೇವರಾಜ ಒಡೆಯರು (ಕ್ರಿ. ಶ. ೧೬೭೩-೧೭೦೪), ಮೈಸೂರು ದೊರೆಗಳಲ್ಲಿಯೇ ಕ್ರಾಂತಿಕಾರಿ ಎನಿಸಿಕೊಂಡವರು. ಇವರು ಕಳಲೆ ಕುಮಾರಯ್ಯ, ದೊಡ್ಡಯ್ಯ ಮುಂತಾದ ದಳವಾಯಿಗಳ ನೆರವಿನಿಂದ, ಕೈಬಿಟ್ಟು ಹೋಗಿದ್ದ ಅನೇಕ ಪ್ರದೇಶಗಳನ್ನು ಮತ್ತೆ ಪಡೆದುಕೊಂಡರು. ಹೀಗೆ ಬಂದ ಸ್ಥಳಗಳಲ್ಲಿ ಶಂಖಗಿರಿ, ಮನ್ನಾರಗುಡಿ, ವಾಮಲೂರು, ಧರ್ಮಪುರಿ, ಕಾವೇರಿಪಟ್ಟಣ, ಶಾದಮಂಗಲ, ನಾಮಕಲ್ಲು, ತಮ್ಮಂಬಟ್ಟಿ ಮುಂತಾದವುಗಳನ್ನು ಹೆಸರಿಸಬಹುದು. ಇವರು ತಿರುಚಿನಾಪಳ್ಳಿಗೆ ಮುತ್ತಿಗೆ ಹಾಕಿದರು. ನಂತರ ಮರಾಠರೊಂದಿಗೂ ಯುದ್ಧ ಮಾಡಿದರು. ಇವರ ಆಳಿಕೆಯ ಕಾಲದ ಹಲವು ಶಾಸನಗಳು ಈ ಗಡಿಪ್ರದೇಶದಲ್ಲಿದ್ದು ಅವರ ದಳವಾಯಿಗಳ ಬಗ್ಗೆ ಬೆಳಕು ಚೆಲ್ಲುತ್ತವೆ. ಕ್ರಿ. ಶ. ೧೬೭೩ರ ಹೊಸೂರು ತಾಲ್ಲೂಕಿನ ದೊಡ್ಡ ಬೇಲೂರಿನ ಶಾಸನವು ದಳವಾಯಿ ಕುಮಾರಯ್ಯನನ್ನು ಪ್ರಸ್ತಾಪಿಸುತ್ತದೆ. ಈತನ ಕಿರಿಯ ಸೋದರನಾದ ನಂಜರಾಜಯ್ಯನನ್ನು ಪ್ರಸ್ತಾಪಿಸುವ ಶಾಸನವು ತೊರಪಳ್ಳಿ ಗ್ರಾಮದಲ್ಲಿದ್ದು ಕ್ರಿ ಶ. ೧೬೭೪ಕ್ಕೆ ಸೇರಿದೆ. ತಿರುಚೆಂಗೋಡು ತಾಲ್ಲೂಕು ಶಂಖಗಿರಿಯ ಕ್ರಿ. ಶ. ೧೬೭೮ರ ಶಾಸನವು ಅಲ್ಲಿನ ಚೆನ್ನಕೇಶವ ದೇವಾಲಯಕ್ಕೆ ದ್ವಾರಪಾಲಕರನ್ನು ಮಾಡಿಸಿ ಕೊಟ್ಟಿರುವ ವಿವರವನ್ನು ನೀಡುತ್ತದೆ.

ಚಿಕ್ಕದೇವರಾಜ ಒಡೆಯರ ನಂತರದಲ್ಲಿ ಬಂದ ಮೈಸೂರು ಅರಸರಲ್ಲಿ ದೊಡ್ಡ ಕೃಷ್ಣರಾಜ ಮತ್ತು ಇಮ್ಮಡಿ ಕೃಷ್ಣರಾಜರ ಆಳಿಕೆ ಮುಖ್ಯವಾದುದು. ದೊಡ್ಡಕೃಷ್ಣರಾಜರ ಆಳಿಕೆಯ ಕಾಲದಲ್ಲಿ ಹಿಂದಿನಂತೆ ರಾಜ್ಯವಿಸ್ತರಣಾ ಕಾರ್ಯವು ದಳವಾಯಿಗಳ ಮುಖಾಂತರ ಮುಂದುವರೆದು ಅವರು ಹೆಚ್ಚು ಪ್ರಬಲರಾದರು. ಮಹಾರಾಜರಾದರೋ ಸಂಗೀತ, ಸಾಹಿತ್ಯ, ನಾಚುರಂಗು ಮುಂತಾದವುಗಳಲ್ಲಿ ತಲ್ಲೀನರಾಗಿದ್ದರಲ್ಲದೆ, ತಿರುಪತಿಯ ಪರಕಾಲ ಸ್ವಾಮಿಗಳಿಂದ ಶ್ರೀ ವೈಷ್ಣವ ದೀಕ್ಷೆಯನ್ನು ಪಡೆದು ಪರಮ ಭಾಗವತರಾಗಿದ್ದರು. ಕ್ರಿ. ಶ. ೧೭೧೭ರ ಧರ್ಮಪುರಿ ಜಿಲ್ಲೆಯ ಪಾಪಾರಪಟ್ಟಿ ಸ್ಥಳದ ಶಾಸನವು ಕಂಚಿಯ ವರದರಾಜ ಸ್ವಾಮಿಯ ಸಂನಿಧಿಯಲ್ಲಿ ಅಳಘಿಯ ಮನವಾಳ ರಾಮಾನುಜ ಜೀಯರವರ ಹವಾಲಿನಲಿ ಶಾಶ್ವತವಾಗಿ ನಡೆಸಿಕೊಂಡು ಬರುವ ನಿತ್ಯ ಕೈಕಂಯರ್ಯಕ್ಕೆ ವೀರಭದ್ರದುರ್ಗದ ಸೀಮೆಯ ಕುಂನೆಕೊಳದ ಹೋಬಳಿಯ ಪಾಪಾರಪಟ್ಟಿ ಮುಂತಾದ ಒಟ್ಟು ೧೨ ಗ್ರಾಮಗಳನ್ನು ದತ್ತಿಬಿಟ್ಟಿರುವುದನ್ನು ತಿಳಿಸುತ್ತದೆ. ಹೀಗಾಗಿ ಈ ಅರಸರ ಕಾಲದಲ್ಲಿ ದಳವಾಯಿ ನಂಜರಾಜಯ್ಯ ಸರ್ವಾಧಿಕಾರಿ ಸ್ಥಾನವನ್ನು ಪಡೆದು ತಾನೇ ರಾಜನೆಂಬಂತೆ ಮೆರೆದ. ಕೈಬಿಟ್ಟು ಹೋಗಿದ್ದ ಮಾಗಡಿ, ಶಾಲ್ಯ (ಸೇಲಂ), ರತ್ನಗಿರಿ ಮುಂತಾದವುಗಳನ್ನು ಮರಳಿ ವಶಪಡಿಸಿಕೊಳ್ಳುವುದರ ಮೂಲ ರಾಜ್ಯವಿಸ್ತರಣಾ ಕಾರ್ಯವೇನೋ

ಮುಂದುವರೆಯಿತು. ಮುಂದೆ ಬಂದ ಚಾಮರಾಜ ಒಡೆಯ (ಕ್ರಿ. ಶ. ೧೭೩೨-೩೪) ರವರನ್ನು ದಳವಾಯಿ ದೇವರಾಜಯ್ಯನೇ ಮುಂತಾದವರು ಸೇರಿ ಕಬ್ಬಾಳುದುರ್ಗದಲ್ಲಿ ಬಂಧನದಲ್ಲಿರಿಸಿದರು. ಅನಂತರ ಕ್ರಿ. ಶ. ೧೭೩೪ ರಿಂದ ಇಮ್ಮಡಿ ಕೃಷ್ಣರಾಜ ಒಡೆಯನ ಆಳಿಕೆ ಪ್ರಾರಂಭವಾಯಿತು. ಪಟ್ಟಕ್ಕೆ ಬಂದಾಗ ರಾಜರು ಕೇವಲ ಆರು ವರ್ಷದ ಬಾಲಕನಾಗಿದ್ದುದರಿಂದ ಸರ್ವಾಧಿಕಾರಿ ನಂಜರಾಜಯ್ಯನು ೫-೬ ವರ್ಷಗಳ ಕಾಲ ಎಲ್ಲ ಕಾರಬಾರನ್ನು ತಾನೇ ಮಾಡಿದನು. ಈತನು ಕ್ರಿ. ಶ. ೧೭೩೯ರಲ್ಲಿ ತೀರಿಕೊಂಡ ನಂತರ ದಳವಾಯಿ ದೇವರಾಜಯ್ಯನ ಸೋದರನಾದ ಕರಚೂರಿ ನಂಜ ರಾಜನು ಸರ್ವಾಧಿಕಾರಿಯಾದನು. ಈ ಅವಧಿಯಲ್ಲೇ, ಕೇವಲ ಜಮಾದಾರನಾಗಿದ್ದ ಹೈದರ್‌ನಾಯಕನು ಸ್ವಾಮಿನಿಷ್ಠೆ ಮತ್ತು ಪರಾಕ್ರಮಗಳಿಂದ ತನ್ನ ಭವಿಷ್ಯವನ್ನು ರೂಪಿಸಿಕೊಂಡನು. ಕೈತಪ್ಪಿ ಹೋಗಿದ್ದ ಅನೇಕ ಪ್ರದೇಶಗಳನ್ನು ಹೈದರ್ ಗೆದ್ದುದಲ್ಲದೆ, ಮೈಸೂರು ಸೀಮೆಯನ್ನು ನಾಲ್ಕೂ ದಿಕ್ಕುಗಳಲ್ಲಿ ವಿಸ್ತರಿಸುತ್ತಾ ಹೋದನು. ಕ್ರಿ. ಶ. ೧೭೪೨ ರಿಂದ ೧೭೬೩ರ ಅವಧಿಯ ಇಮ್ಮಡಿ ಕೃಷ್ಣರಾಜ ಒಡೆಯರ ಅನೇಕ ಶಾಸನಗಳು ಈ ಪ್ರದೇಶದ ತಳಿ, ಅವಿನಾಶಿ, ಅಮ್ಮಾಪಾಳ್ಯ, ಸತ್ಯಮಂಗಲ, ಕುಮಾರಪಾಳ್ಯ, ಮೆಟ್ಟೂರು, ಅನ್ನಿಮಲೈ (ಆನೆಮಲೆ) ಮುಂತಾದ ಸ್ಥಳಗಳಲ್ಲಿ ದೊರೆತಿವೆ.

ಕಾಲದ ಉಲ್ಲೇಖವಿಲ್ಲದ ಉಪ್ಪಾರಹಳ್ಳಿಯ ಶಾಸನವೊಂದು ಚಾಮರಾಜ ಒಡೆಯ ಮತ್ತು ನರಸಿಂಗರಾಯ ಎಂಬುವವರನ್ನು ಪ್ರಸ್ತಾಪಿಸುತ್ತದೆ. ತಳಿ ಸ್ಥಳದಲ್ಲಿರುವ ಶಾಸನವೊಂದು ಸಿದ್ಧಾರ್ಥಿ ಸಂವತ್ಸರ ಚೈತ್ರ ಬಹುಳ ೩೦ ಶನಿವಾರದಂದು ಮಧ್ಯಾಹ್ನ ಶ್ರೀರಂಗಪಟ್ಟಣವನ್ನು ಕುಂಪಣಿಯವರು (ಈಸ್ಟ್ ಇಂಡಿಯಾ ಕಂಪನಿಯವರು) ವಶಪಡಿಸಿಕೊಂಡ ವಿಷಯ ಹಾಗೂ ಕಲೆಕ್ಟರ್ ಹಾಮಿಲ್ಟನ್ನನನ್ನು ಉಲ್ಲೇಖ ಮಾಡುತ್ತದೆ. ಈ ತೇದಿ ವಿವರಗಳು ಕ್ರಿ.ಶ. ೧೮೯೯ನೇ ಮೇ ೪ನೇ ತಾರೀಖಿಗೆ ತಾಳೆಯಾಗುತ್ತದೆ.

ಒಟ್ಟಾರೆ ಈ ಗಡಿಪ್ರದೇಶದ ಶಾಸನಗಳು ರಾಜಕೀಯವಾಗಿ ಅನೇಕ ವಿಷಯಗಳ ಬಗ್ಗೆ ಮಹತ್ವದ ಬೆಳಕನ್ನು ಚೆಲ್ಲಿ ಗಮನ ಸೆಳೆಯುತ್ತವೆ.

ಯಾವುದೇ ಒಂದು ಪ್ರದೇಶದ ನಿಜವಾದ ಆಡಳಿತಗಾರರೆಂದರೆ, ರಾಜರಿಂದ ನೇಮಿತರಾದ ಇಲ್ಲವೆ ಅಧಿಕೃತರಾದ ಸಾಮಂತ, ಮಾಂಡಲಿಕ ಮತ್ತು ಅವನ ಕೈಕೆಳಗಿನ ಅಧಿಕಾರಿಗಳೆಂದೇ ಹೇಳಬೇಕು. ಅಂತಹ ಅನೇಕ ಅಧಿಕಾರಿಗಳ ಉಲ್ಲೇಖ ಗಳನ್ನು ಈ ಪ್ರದೇಶದ ಶಾಸನಗಳಲ್ಲಿ ಕಾಣಬಹುದಾಗಿದೆ.

ಗಂಗರ ಮಾಂಡಲಿಕನಾಗಿ ವೈದುಂಬರ ರಾಮರಾಜ ಅರಸನೆಂಬುವವನ ಉಲ್ಲೇಖ

ಮಾಚಿನಾಯಕನಹಳ್ಳಿಯ ೯ನೆಯ ಶತಮಾನದ ಶಾಸನದಲ್ಲಿ ಬಂದಿದೆ. ಪ್ರಾಯಶಃ ತವಳಂ ಶಾಸನದಲ್ಲಿ ಉಕ್ತನಾಗಿರುವ ರಾಮರಸನೆಂಬುವವನು ಇವನೇ ಇರಬೇಕು. ಬಾಣರ ಆಳಿಕೆಯ ಕಾಲದಲ್ಲಿ ತೇಕಲ್ನಾಡೆಪ್ಪತ್ತನ್ನು ಕೀರ್ತಿಲಮ್ಮರಸನೆಂಬುವನು ಆಳುತ್ತಿದ್ದ. ಅವನ ಮಗನ ಹೆಸರು ಎಱಿಗಜಗ್ಗನ್ ಎಂದು ತಿಳಿದುಬರುತ್ತದೆ.

ಈ ಪ್ರದೇಶದ ಪ್ರಾರಂಭಕಾಲದ ಶಾಸನಗಳಲ್ಲಿ ಸ್ಥಳೀಯ ಆಡಳಿತ ಘಟಕಗಳಾದ ನಾಡು, ಗ್ರಾಮ ಮತ್ತು ಪಟ್ಟಣಗಳ ಅಧಿಕಾರಿಗಳಾಗಿ ಹಲವು ಗಾವುಂಡರು ಮತ್ತು ಸೆಟ್ಟಿ ವರ್ತಕರ ಉಲ್ಲೇಖಗಳು ಕಂಡುಬರುತ್ತವೆ. ಕ್ರಿ. ಶ. ಒಂಭತ್ತನೆಯ ಶತಮಾನದ ಮಾಚಿನಾಯಕನಪಳ್ಳಿ ಶಾಸನದಲ್ಲಿ ವೆಂತುರಗಾಮುಂಡನ ಹೆಸರು ಬಂದಿದೆ. ತವಳಂ ಶಾಸನದಲ್ಲಿ ಕೊಳ್ಳ ಗಾಮಣ್ಣ, ಹೊಸೂರಿನ, ಪೊಲಮುನ್ದನಾಡಿನ ನಾಡಗಾವುಂಡ, ವಿಕ್ರಮಚೋಳ ಗಾವುಂಡ, ಮೊರಸುನಾಡಿನ ಗೌಡ ಸಾಲಯ, ಎಲಹಂಕ ನಾಡಪ್ರಭು ಇಮ್ಮಡಿ ಕೆಂಪೇಗೌಡ ಮುಂತಾದವರಲ್ಲದೆ, ಚೂಡೇಗೌಡ, ಕೆಂಪಣ್ಣಗೌಡ ಎಂಬ ಊರುಗೌಡುಗಳ ಉಲ್ಲೇಖಗಳು ವಿಜಯನಗರ ಮತ್ತು ನಂತರ ಕಾಲದ ಶಾಸನಗಳಲ್ಲಿ ಕಂಡುಬಂದಿವೆ. ಪೊಟಲಸೆಟ್ಟಿ, ಪಟ್ಟಣಸೆಟ್ಟಿ, ಕರಡಿಸೆಟ್ಟಿ, ರಾಜಜೆವಹಾರಿ ಗುಮ್ಮಳಾಪುರದ ಅಕ್ಕಲ ಚೆಂನಿಸೆಟ್ಟಿ ಮುಂತಾದ ನಖರ ವರ್ಗದ ಮುಖಂಡರ ಉಲ್ಲೇಖಗಳು ಗಮನ ಸೆಳೆಯುತ್ತವೆ.

ವಿಜಯನಗರದ ಅರಸರು ಪ್ರಾರಂಭದಲ್ಲಿ ತಮ್ಮನ್ನು ಮಹಾಮಂಡಲೇಶ್ವರರೆಂದೇ ಕರೆದುಕೊಂಡಿದ್ದರು. ಅವರ ಬಹುತೇಕ ತಾಮ್ರಪಟಗಳಲ್ಲಿ ಹಾಗೂ ಹಲವು ಶಿಲಾಶಾಸನಗಳಲ್ಲಿ 'ಶ್ರೀ ವಿರೂಪಾಕ್ಷ' ಎಂಬ ವೊಪ್ಪವನ್ನು ಹಾಕಿರುವುದನ್ನು ಗಮನಿಸಿದರೆ ವಿರೂಪಾಕ್ಷ ಸ್ವಾಮಿಯೇ ಸಾಮ್ರಾಜ್ಯದ ಒಡೆಯ, ತಾವು ಆತನ ಅಜ್ಞಾಧಾರಕರಾದ ಮಂಡಲೇಶ್ವರರು ಎಂಬ ನಿಲುವನ್ನು ತಳೆದಿದ್ದರೆಂದೆನಿಸುತ್ತದೆ. ಮಹಾಮಂಡಳೇಶ್ವರ ಬುಕ್ಕಣವೊಡೆಯ ಮತ್ತು ಆತನ ಮಗ ಕುಮಾರ ವೀರಕಂಪಣ ಒಡೆಯ, ಮಹಾಮಂಡಳೇಶ್ವರ ಹರಿಯಪ್ಪವೊಡೆಯ ಎಂಬ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ. ನಂತರದ ಶಾಸನಗಳಲ್ಲಿ ಮಹಾಮಂಡಳೇಶ್ವರ ಹಿರಿಯ ತಿರುಮಲೇದೇವ ಅರಸು, ಹುಲಿಯ ರಾಮಯ್ಯದೇವ ಮಹಾಅರಸು, ಮುಂತಾದವರು ಮಹಾಮಂಡಳೇಶ್ವರರೆಂಬ ಅಧಿಕಾರವನ್ನು ಪಡೆದಿದ್ದ ಅಂಶ ತಿಳಿದುಬರುತ್ತದೆ.

ಮಹಾಮಂಡಳೇಶ್ವರರ ಕೈಕೆಳಗೆ ಅನೇಕ ಪ್ರಧಾನಿಗಳು ಹಾಗೂ ದಂಡ–ನಾಯಕರುಗಳು ಕಾರ್ಯನಿರ್ವಹಿಸುತ್ತಿದ್ದರು. ಕುಮಾರ ವೀರ ಕಂಪಣ ಒಡೆಯನ ಮಹಾಪ್ರಧಾನ ಸೋವಪ್ಪನಾಗಿದ್ದನು. ಮಹಾಪ್ರಧಾನ ಕುಪ್ಪಯ ದಂಡನಾಯಕ,

ಪ್ರಧಾನ ಮಲ್ಲಪ್ಪಯ್ಯ, ಶಿರಃ ಪ್ರಧಾನ ಶಿಕ್ಕರಸ ಮುಂತಾದವರು ಶಾಸನೋಕ್ತ ರಾಗಿದ್ದಾರೆ. ಎರಮಂಡಲನಾಡಿನ ದಂಡನಾಯಕ ಅಚಲಪ್ಪ, ಮುಳುವಾಯಿ ರಾಜ್ಯದ ದಂಡನಾಯಕ ಲಕ್ಕಣ್ಣರಾಗಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ.

ಅಮರನಾಯಕರೆನಿಸಿಕೊಂಡ ಅನೇಕ ಸ್ಥಳೀಯ ಸೇನಾನಾಯಕರ ಹಾಗೂ ಆಡಳಿತಗಾರರ ಉಲ್ಲೇಖಗಳು ವಿಜಯನಗರ ಕಾಲದ ಶಾಸನಗಳಲ್ಲಿ ಕಂಡುಬರುತ್ತವೆ. ಡೆಂಕಣಿಕೋಟೆಯ ಅಮರನಾಯಕ ರಾಮರಾಜ ಒಡೆಯನಾಗಿದ್ದನೆಂಬ ಅಂಶ ಶಾಸನವೊಂದರಿಂದ ತಿಳಿದುಬರುತ್ತದೆ. ಮಹಾನಾಯಕಾಚಾರ್ಯರೆನಿಸಿಕೊಂಡ ಅಧಿಕಾರಿಗಳ ಸೇವೆ ವಿಜಯನಗರ ಸಾಮ್ರಾಜ್ಯಕ್ಕೆ ಅಪೂರ್ವವಾದುದು. ಶ್ರೀ ಮನ್ಮಹಾನಾಯಕಾಚಾರ್ಯ ಪಾಲುವಲ್ಲಟರ ಬಪ್ಪನಾಯಕನ ಮಗ ಮದ್ದಿ ಬೊಮ್ಮಿಯಪ್ಪ, ಅವನ ಮಗ ಕಾಮಿಯಪ್ಪನಾಯಕ, ವಿರುಪನಾಯಕರ ಮಕ್ಕಳು ಸಾಲೆಯನಾಯಕರು, ಪದ್ಮನಾಯಕ, ಅಲ್ಕಪ್ಪನಾಯಕ. ಸಾಜಿರಿಯ ನಾಗಿಯ ನಾಯಕನ ಮಗ ಪೆಮ್ಮಯನಾಯಕ, ಕೋಟನಾಯಕನ ಮಗ ಮುದಿಯ ಮುಂತಾದವರು ಶಾಸನೋಕ್ತರಾಗಿದ್ದಾರೆ.

ಕಂದಾಚಾರದ ಅಧಿಕಾರಿ ತಿಮ್ಮರಸಯ್ಯನ ಮಕ್ಕಳು ನಂಜಪ್ಪಯ್ಯನವರು, ಗಾಜಿನೂರು ಸ್ಥಳದ ಪಾರುಪತ್ಯಗಾರ ಕೊಂಡಪ್ಪಯ್ಯನವರು, ಅಲ್ಲಿನ ಶಾನುಭೋವ ಗುಮ್ಮಟಯ್ಯ ಜೊತೆಗೆ ಹಲವು ಸ್ಥಳದ ಗವುಡುಗಳ ಪ್ರಸ್ತಾಪ ಶಾಸನಗಳಲ್ಲಿ ಬರುತ್ತದೆ.

ದೇವಾಲಯದ ಸ್ಥಾನಿಕನಾಗಿ ಕುಪ್ಪೈಯ, ಚೂಡೇ ಆಳ್ವರೆಂಬುವವರು ಹೊಸೂರಿನ ಚೂಡೆಯಲಿಂಗನ ದೇವಸ್ಥಾನದಲ್ಲಿದ್ದ ಬಗ್ಗೆ ತಿಳಿದುಬರುತ್ತದೆ. ಚೂಡಜೀಯನ ಮಗ ಚೆಂಬಿನಾಯಕ> ಚೆಂಬಿಜೀಯ, ಸಣಿಜೀಯನ ಮಗ ವೀರಪ್ಪ ಮುಂತಾದ ಅಧಿಕಾರಿಗಳ ಬಗ್ಗೆ ಕೂಸ್ತನಹಳ್ಳಿಯ ಶಾಸನದಿಂದ ತಿಳಿದುಬರುತ್ತದೆ.

ಕೊಯಮತ್ತೂರು ಜಿಲ್ಲೆಯ ಶಾಸನವೊಂದರಲ್ಲಿ ದಳವಾಯಿ ಹಂಪಯ್ಯ ನೆಂಬುವವನ ಉಲ್ಲೇಖ ಬಂದಿದೆ. ಕ್ರಿ. ಶ ೧೬೭೩ರ ಶಾಸನವೊಂದರಲ್ಲಿ ದಳವಾಯಿ ಕುಮಾರರಾಯನು ಉಕ್ತವಾಗಿದ್ದಾನೆ. ಈತನನ್ನು ಉಲ್ಲೇಖಿಸುವ ಇನ್ನೊಂದು ಶಾಸನ ಹೊಸೂರಿನಲ್ಲಿದ್ದು ಕೊಮಾರಯ್ಯ ಎಂದು ಕರೆಯಲಾಗಿದೆ. ಆತನ ಕಿರಿಯ ಸೋದರ ನಂಜರಾಜಯ್ಯನೆಂಬುವವನನ್ನು ಹೆಸರಿಸುತ್ತದೆ. ದಳವಾಯಿ ಕೊಮಾರಯ್ಯನ ಅಧೀನದಲ್ಲಿ ನಂಜರಾಜಯ್ಯನು ಹೊಸೂರನ್ನು ಆಳುತ್ತಿದ್ದ. ಈತನೇ ಮುಂದೆ ಸರ್ವಾಧಿಕಾರಿಯಾದ ಕರಾಚೂರಿ ನಂಜರಾಜಯ್ಯ. ಈತನ ತಂದೆ ಮಲ್ಲರಾಜಯ್ಯನೆಂದೂ, ಗುರುಸ್ವಾಮಿಕೆರೆ ಪದ್ಮರಸಯ್ಯದೇವನೆಂದೂ, ವೀರರಾಜಯ್ಯ

ನೆಂಬುವವನು ಮಗನೆಂದು ತಿಳಿದುಬರುತ್ತದೆಯಲ್ಲದೆ, ನಂಜರಾಜಯ್ಯನ ಹೆಂಡತಿಯು ಹೆಸರು ಲಿಂಗಪಾದಮ್ಮನೆಂದು ಅದೇ ಶಾಸನದಿಂದ ತಿಳಿದುಬರುತ್ತದೆ.

ಗುಮ್ಮಳಾಪುರದ ಶಾಸನವೊಂದರಲ್ಲಿ ದಳವಾಯಿ ಕ್ಷತ್ರಿಯ ವಂಶದ ಕಳಲೆ ನಂಜರಾಜಯ್ಯನ ಉಲ್ಲೇಖ ಬಂದಿದೆ. ಈತನು ಸರ್ವಾಧಿಕಾರಿ ಕರಾಚೂರಿ ನಂಜರಾಜಯ್ಯನಿಂದ ಭಿನ್ನ.

ರಾಯದುರ್ಗ ಎಂಬ ಕನ್ನತೂರು ದುರ್ಗವನ್ನು ನಂಜರಾಜನ ಅಧಿಕಾರಿ ಮುದ್ದಳಕಾದ್ರಿ ನಾಯಕ ಮತ್ತು ಅವನ ಅಧೀನದಲ್ಲಿದ್ದ ಮುದ್ದಯ್ಯನೆಂಬುವವನು ಆಳುತ್ತಿದ್ದ. ಇಲ್ಲಿ ಉಕ್ತವಾಗಿರುವ ರಾಯದುರ್ಗವೆಂಬ ಕನ್ನತೂರು ದುರ್ಗವೆಂಬುದು ಪ್ರಾಯಶಃ ಇಂದಿನ ಶಂಖಗಿರಿಯೇ ಆಗಿದ್ದಿತೆಂದನಿಸುತ್ತದೆ.

ದಳವಾಯಿ ದೇವರಾಜಯ್ಯನ ಅಧೀನದಲ್ಲಿ ಶಂಕರಯ್ಯ ಎಂಬುವವನು ಕೊಯಮುತ್ತೂರಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು. ಶಂಕರಯ್ಯನ ತಂದೆಯು ತೆರಕಣಾಂಬಿಯ ಮಾದಯ್ಯ. ಶಂಕರಯ್ಯನ ಮಗನ ಹೆಸರೂ ಕೂಡ ಮಾದಯ್ಯ ಎಂದಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ. ಮಾದಯ್ಯ ತನ್ನ ತಂದೆಯ ನಂತರ ಕೊಯಮುತ್ತೂರಿನ ಅಧಿಕಾರಿಯಾಗಿದ್ದ. ಆತನ ಕಾಲದಲ್ಲಿ ಆನ್ನಿಮಲೆ (ಆನೆಮಲೆ) ಸಮೀಪದಲ್ಲಿ ಮಾಧವಪುರ ಎಂಬ ಅಗ್ರಹಾರ ಸ್ಥಾಪಿತವಾಯಿತು.

**ಧಾರ್ಮಿಕ ಮಹತ್ವ :**

ಈ ಗಡಿನಾಡಿನ ಶಾಸನಗಳ ಅವಲೋಕನದಿಂದ ಈ ಪ್ರದೇಶದಲ್ಲಿ ಜೈನ, ಶೈವ, ವೀರಶೈವ, ವೈಷ್ಣವ, ವೈದಿಕ ಮತ್ತು ಇಸ್ಲಾಂ ಧರ್ಮಗಳು ಹಲವು ಪ್ರದೇಶಗಳಲ್ಲಿ ಹಲವು ಕಾಲ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದ ಬಗ್ಗೆ ಮನಗಾಣಬಹುದಾಗಿದೆ.

**ಜೈನಧರ್ಮ :**

ಧರ್ಮಪುರಿ ಮತ್ತು ಸುತ್ತಮುತ್ತಲೂ ದೊರೆತ ನೊಳಂಬರ ಶಾಸನಗಳಲ್ಲಿ ಜೈನಧರ್ಮದ ಕುರುಹುಗಳು ಕಂಡುಬರುತ್ತವೆ. ನೊಳಂಬರು ಮೂಲತಃ ಶೈವರಾದರೂ ಜೈನ ಧರ್ಮವನ್ನು ಪ್ರೋತ್ಸಾಹಿಸಿದ್ದರು. ಇದಕ್ಕೆ ಪ್ರಾಯಶಃ ಧರ್ಮ ಸಮನ್ವಯ ಗುಣವಷ್ಟೇ ಅಲ್ಲದೆ ಅವರಿಗಿದ್ದ ಗಂಗವಂಶೀಯರ ಸಂಬಂಧವೂ ಕೂಡ ಕಾರಣವಾಗಿರಬೇಕು. ಕ್ರಿ. ಶ. ೮೯೩ರ ಧರ್ಮಪುರಿಯ ಶಾಸನದ ಪ್ರಕಾರ

ನಿಧಿಯಣ್ಣ ಮತ್ತು ಚಂಡಿಯಣ್ಣ ಎಂಬುವವರು ರಾಜನಿಂದ ಮೂಲಪಳ್ಳಿ ಎಂಬ ಸ್ಥಳವನ್ನು ಪಡೆದು, ಮೂಲ ಸಂಘದ ಸೇನಾನ್ವಯದ ಪೊಗರೀಯ ಗಣದ ವಿನಯಸೇನ ಭಟ್ಟಾರಕರ ಶಿಷ್ಯ ಕನಕಸೇನ ಸಿದ್ಧಾಂತ ಭಟಾರಂಗೆ ಬಸದಿಯ ಜೀರ್ಣೋದ್ಧಾರಕಾಗಿ ನಾಲ್ಕು ಸಮಯಗಳು, ನಾಡು, ನಗರ, ನರಶಾಸನ ಅಧಿಕಾರಿಗಳ ಸಮ್ಮುಖದಲ್ಲಿ ದತ್ತಿ ಬಿಡಲಾಗಿದೆ. ಇಲ್ಲಿ ಉಕ್ತವಾಗಿರುವ ಮೂಲಪಳ್ಳಿ ಎಂಬುದು ಧರ್ಮಪುರಿಯ ಪಶ್ಚಿಮಕ್ಕೆ ಸುಮಾರು ೧೫ ಕಿ. ಮೀ ಅಂತರದಲ್ಲಿರುವ ಮೂಲಕಾಡು ಸ್ಥಳವಿರಬಹುದು. ಇದೇ ಬಸದಿಗೆ ಲೋಕಯ್ಯನೆಂಬುವವನಿಂದ ಬೂದುಗೂರು ಎಂಬ ಸ್ಥಳವನ್ನು ದತ್ತಿ ಬಿಟ್ಟಿರುವ ವಿಷಯ ನೊಳಂಬ ಅಯ್ಯಪ ದೇವನ ಶಾಸನದಲ್ಲಿ ಉಕ್ತದಾಗಿದೆ. ಧರ್ಮಪುರಿಯ ದಕ್ಷಿಣಕ್ಕೆ ೧೧ ಕಿ. ಮೀ ದೂರದಲ್ಲಿರುವ ಬೂದಗನಹಳ್ಳಿ ಗ್ರಾಮವೇ ಇದಾಗಿರಬೇಕು. ಕ್ರಿಶ. ೯೨೫ರ ನೊಳಂಬ ಇರುಳ ಚೋರನ ಕಾಲದಲ್ಲಿ ತಗಡೂರು (ಧರ್ಮಪುರಿ) ಪಡುವಣ ದೇಹಾರು ಮಾಜ್ಞಬ್ಬೆ ಕನ್ತಿಯ ಉಲ್ಲೇಖ ಬಂದಿದೆ.

ಧರ್ಮಪುರಿ ಜಿಲ್ಲೆಯ ಹೊಸೂರು, ಕೃಷ್ಣಗಿರಿ ತಾಲ್ಲೂಕಿನ ಶವಳಂ ಮತು ಪೆರಿಯಾರ್ ಜಿಲ್ಲೆಯ ವಿಜಯಮಂಗಲಂಗಳಲ್ಲಿ ಜೈನ ಸಂಬಂಧಿ ದಾಖಲೆಗಳು ಲಭ್ಯವಾಗಿವೆ. ಹೊಸೂರಿನಲ್ಲಿ ಪಾರ್ಶ್ವನಾಥ ಬಸದಿಯ ಪ್ರಸ್ತಾಪವಿದ್ದು, ವಾಸುಪೂಜ್ಯ ಪಂಡಿತನೆಂಬುವವನು ಅಲ್ಲಿನ ಸ್ಥಾನಪತಿಯಾಗಿದ್ದನು. ಶಿವಡಪಾಡಿಗೆ ಸೇರಿದ ಇಲಂದೈ ಎಂಬ ಚಿತ್ರಮೇಟಿ'ನಲ್ಲೂರನ್ನು ದತ್ತಿ ಬಿಟ್ಟಿರುವ ವಿವರವು ಅಲ್ಲಿನ ತಮಿಳು ಶಾಸನವೊಂದರಿಂದ ತಿಳಿದುಬರುತ್ತದೆ. ವಿಜಯಮಂಗಲದಲ್ಲಿ ಗಂಗ ದೊರೆ ರಾಚಮಲ್ಲನ ಪ್ರಸಿದ್ಧ ಮಂತ್ರಿ ಚಾವುಂಡರಾಯನ ಕಿರಿಯ ಸೋದರಿ ಪೊಲ್ಲಬ್ಬೆಯ ನಿಸಿದಿ ಶಾಸನ ತಮಿಳು ಗ್ರಂಥ ಲಿಪಿಯಲ್ಲಿದೆ. ಗಂಗ ರಾಚಮಲ್ಲನು ಪೂರ್ವ ಘಟ್ಟಗಳ ಹೊರಗೂ ಅಂದರೆ ಉತ್ತರ ಆರ್ಕಾಡು ಜಿಲ್ಲೆ ವಳ್ಳಿಮಲೆಯಲ್ಲಿ ಗುಹಾ ದೇವಾಲಯಗಳನ್ನು ಕಟ್ಟಿಸಿದ್ದಾನೆ ; ಅಲ್ಲದೆ ಜಿಂಜಿ ತಾಲ್ಲೂಕಿನ ಶಿಯಮಂಗಲದಲ್ಲೂ ಗವಿಗಳನ್ನು ಕೊರೆಯಿಸಿ ಜೈನ ಬಿಂಬಗಳನ್ನು ಪ್ರತಿಷ್ಠಾಪಿಸಿದ್ದಾನೆ. ಹನ್ನೆರಡನೆಯ ಶತಮಾನದ ನಂತರದಲ್ಲಿ ಜೈನಧರ್ಮ ಈ ಪ್ರದೇಶದಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ.

**ಶೈವ ಧರ್ಮ :**

ಧರ್ಮಪುರಿ ನೊಳಂಬರ ಆಳ್ವಿಕೆಯ ಕಾಲದಲ್ಲಿ ಅನೇಕ ಧರ್ಮಗಳ ಆಗರವಾಗಿದ್ದಿತೆನ್ನಬಹುದು. ಇಲ್ಲಿನ ಶಾಸನಗಳಲ್ಲಿ ಶೈವಧರ್ಮದ ದಟ್ಟ ಕುರುಹುಗಳಿವೆ. ಧರ್ಮಪುರಿ ಮಲ್ಲಿಕಾರ್ಜುನ ದೇವಾಲಯದ ಶಾಸನವೊಂದರಲ್ಲಿ ಭೈರವ ಶಕ್ತಿ ಭಟ್ಟಾರಕನ ಉಲ್ಲೇಖ ಬಂದಿದೆ. ಅದೇ ಊರಿನ ಕರೆಯ ಕಟ್ಟೆಯ ಮೇಲಿದ್ದ

ಶಾಸನ ವಿದ್ಯೆರಾಶಿ ಎಂಬ ಲಾಕುಳಾಗಮಿಕ ಶೈವ ಪಂಥದ ಸ್ಥಾನಿಕನನ್ನು ಬಣ್ಣಿಸುತ್ತದೆ. ಈ ವಿದ್ದೇರಾಶೀನ್ದ್ರರ ಮಹಿಮೆಯಿಂದ ತಗಡೂರು ಸ್ಥಳವು ಕೊಳ, ನಂದನವನ, ಪ್ರಾಕಾರ ಮುಂತಾದವುಗಳನ್ನು ಪಡೆದು ಕಲಿ ಚೋಳೇಶ್ವರ, ಪಲ್ಲವೇಶ್ವರ, ಮಹಾಭೋಗೇಶ್ವರ, ಉತ್ತುಂಗ ನಿರ್ಮಲ ನನ್ನೇಶ್ವರ, ಸತ್ಯಾಕಿಞ್ಚಿ ಭುಜಂಗೇಶ್ವರ ಇತ್ಯಾದಿ ದೇಗುಲಗಳಿಂದ ಕಂಗೊಳಿಸುತ್ತಿದ್ದಿತು ಎಂಬ ವರ್ಣನೆ ಶಾಸನಗಳಲ್ಲಿ ಬಂದಿದೆ.

ಡೆಂಕಣಿಕೋಟೆ ತಾಲ್ಲೂಕು ಮದಗೊಂಡಹಳ್ಳಿ ಗ್ರಾಮದ ಅರ್ಕೇಶ್ವರ ದೇವಾಲಯಕ್ಕೆ ಹೊಯ್ಸಳರ ಕಾಲದಲ್ಲಿ ದಾನದತ್ತಿಗಳನ್ನು ಬಿಟ್ಟಿರುವುದು ಕಂಡು ಬರುತ್ತದೆ. ಅದರಿಂದಾಗಿ ಇದು ಒಂದು ಪ್ರಾಚೀನ ಶೈವ ದೇವಾಲಯವೆಂಬುದರಲ್ಲಿ ಸಂಶಯವಿಲ್ಲ, ಅಲ್ಲದೆ ಇದರ ವಾಸ್ತು ಶಿಲ್ಪವು ಗಂಗರ ಕಾಲದ ದೇವಾಲಯಗಳ ರಚನೆಗಳೊಂದಿಗೆ ಹೋಲಿಸಬಹುದಾಗಿದೆ. ಹೊಸೂರಿನ ಬೆಟ್ಟದ ಮೇಲಿರುವ ಚಂದ್ರಚೂಡೇಶ್ವರ ದೇವಾಲಯವೂ ಕೂಡ ಒಂದು ಪ್ರಾಚೀನ ಶೈವ ಕೇಂದ್ರವಾಗಿದ್ದಿತು. ಚೋಳರ ಕಾಲಕ್ಕಾಗಲೇ ಈ ದೇವಾಲಯ ಅಸ್ತಿತ್ವದಲ್ಲಿದ್ದಿತೆಂದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಈ ದೇವಾಲಯದ ವಿಸ್ತರಣೆ ಮತ್ತು ಜೀರ್ಣೋದ್ಧಾರ ಕಾರ್ಯಗಳಲ್ಲಿ ಹೊಯ್ಸಳರು ಹೆಚ್ಚು ಆಸಕ್ತಿ ತೋರಿಸಿರುವುದು ಅಲ್ಲಿನ ವಾಸ್ತು ಮತ್ತು ಶಾಸನಗಳನ್ನು ಗಮನಿಸಿದಾಗ ಮನವರಿಕೆಯಾಗುತ್ತದೆ. ಹೊಯ್ಸಳ ರಾಮನಾಥನು ಮರಣಹೊಂದಿದ ತೇದಿ ವಿವರಗಳನ್ನು ತಿಳಿಸುವ ಗ್ರಂಥಲಿಪಿಯ ಸಂಸ್ಕೃತ ಶಾಸನವೊಂದು ಇಲ್ಲಿ ದೊರೆತಿದೆ. ಈ ದೇವಾಲಯದ ಪೂಜಾ ಕೈಂಕರ್ಯಗಳಿಗೆ ೧೪ನೆಯ ಶತಮಾನದಲ್ಲಿ ಅಚಲಪ್ಪ ದಂಡನಾಯಕನೆಂಬುವವನು ಎರಮಂಡಲನಾಡಿನ ಯಾವುದೋ ತೆಂಗೆಯ ಅರ್ಧ ಭಾಗವನ್ನು ದತ್ತಿಬಿಟ್ಟ ವಿವರ ಶಾಸನವೊಂದರಲ್ಲಿ ಉಕ್ತವಾಗಿದೆ. ವಿಜಯನಗರದರಸರ ಕಾಲದ ಶಾಸನಗಳಲ್ಲಿ ಕುಮಾರ ವೀರ ಕಂಪಣರಾಯನ ಮಹಾಪ್ರಧಾನ ಸೋವಪ್ಪ ಒಡೆಯನಿಂದ ಪ್ರಾರಂಭಿಸಿ ಮುಂದೆ ಬಂದ ಮಹಾಪ್ರಧಾನ ಕುಪ್ಪೆಯ ದಂಡನಾಯಕ, ಅಚ್ಯುತರಾಯನ ಓರ್ವ ಮಹಾಮಂಡಲೇಶ್ವರನಾದ ಹಿರಿಯ ತಿರುಮಲದೇವ ಮಹಾ ಅರಸುಗಳ ಕಾರ್ಯಕ್ಕೆ ಕರ್ತನಾದ ರಾಮನಾಯಕ ಮುಂತಾದವರು ವಿಪುಲ ದತ್ತಿಗಳನ್ನು ಈ ದೇವರಿಗೆ ಬಿಟ್ಟಿರುತ್ತಾರೆ. ಇಲ್ಲಿ ಉಕ್ತವಾಗಿರುವ ರಾಮನಾಯಕನ ಹೆಸರಿನ ಕೆರೆಯೊಂದು ಹೊಸೂರಿನಲ್ಲಿದ್ದು, ಆತನ ಸ್ಮಾರಕವಾಗಿ ಇಂದಿಗೂ ಉಳಿದಿದೆ. ಕುಪ್ಪಯ್ಯ ಮತ್ತು ಚೂಡೇ ಅಳ್ವನ ಮಗ ಚೂಡಪ್ಪ ಅವರುಗಳು ದೇವಾಲಯದ ಸ್ಥಾನಿಕರಾಗಿದ್ದ ಅಂಶ ಶಾಸನವೊಂದರಿಂದ ತಿಳಿದು ಬರುತ್ತದೆ. ಕೋಟನಾಯಕನ ಮಗ ಮುದಿಯನೆಂಬುವವನು ಈ ದೇವಾಲಯಕ್ಕೆ ಪ್ರಾಕಾರ ಗೋಡೆಯನ್ನು ಕಟ್ಟಿಸಿದನೆಂಬ ವಿಷಯು ೧೬ನೇ ಶತಮಾನದ ಶಾಸನವೊಂದರಿಂದ ತಿಳಿದು

ಬರುತ್ತದೆ. ಈ ದೇವಾಲಯಕ್ಕೆ ಹಲವರು ದಾನದತ್ತಿಗಳನ್ನು ಬಿಟ್ಟಿರುವ ವಿಷಯವನ್ನು ತಿಳಿಸುವ ಅನೇಕ ಶಾಸನಗಳು ಇಲ್ಲಿವೆ.

ಧರ್ಮಪುರಿ ಜಿಲ್ಲೆಯ ಅಥವಮಾನ ಕೋಟೆಯಲ್ಲಿರುವ ವಿಜಯನಗರದರಸು ಇಮ್ಮಡಿ ಅಚ್ಯುತರಾಯನ ಕ್ರಿ.ಶ. ೧೫೩೦ರ ಶಾಸನದಲ್ಲಿ ಭೈರವ ದೇವರ ಪ್ರಸ್ತಾಪ ಬಂದಿದ್ದು, ದೇವರ ದೀಪಾರಾಧನೆ ಮುಂತಾದವುಗಳಿಗೆ ದತ್ತಿ ಬಿಡಲಾದ ವಿಷಯವಿದೆ.

ವಿಜಯನಗರದರಸರ ಆಳಿಕೆಯ ಕಾಲಕ್ಕಾಗಲೇ ನಂಜನಗೂಡಿನ ನಂಜುಂಡೇಶ್ವರ ದೇವರ ಪ್ರಸಿದ್ಧಿ ಕೊಂಗುನಾಡು ಪ್ರದೇಶದಲ್ಲೆಲ್ಲಾ ಆವರಿಸಿತ್ತು. ನಂಜನಗೂಡಿನಲ್ಲಿ ಬ್ರಾಹ್ಮಣ ಮತ್ತು ಜಂಗಮ ಛತ್ರಗಳನ್ನು ನಡೆಸುವುದಕ್ಕಾಗಿ ವಿಪುಲದಾನದತ್ತಿಗಳನ್ನು ಬಿಟ್ಟಿರುವ ವಿವರ ಎರಗನಹಳ್ಳಿ ಶಾಸನಗಳಿಂದ ತಿಳಿಯುತ್ತದೆಯಲ್ಲದೆ, ಶ್ರೀ ನಂಜುಂಡೇಶ್ವರ ದೇವರನ್ನು ಬ್ರಾಹ್ಮಣ ಜಾತಿಯ ಜಂಗಮ ದೇವರೆಂದು ಕರೆಯಲಾಗಿದೆ. ಮೈಸೂರು ಅರಸರ ಆಳಿಕೆಯಲ್ಲಿ ನಂಜನಗೂಡಿನ ನಂಜುಂಡೇಶ್ವರ ದೇವರಿಗೆ ಅವರು ಗೆದ್ದ ದೂರದ ಸ್ಥಳಗಳಲ್ಲೂ ಕೂಡ ದತ್ತಿಗಳನ್ನು ಬಿಟ್ಟಿರುವುದು ಕಂಡುಬರುತ್ತದೆ. ಸೇಲಂ ಜಿಲ್ಲೆಯ ಓಮಲೂರು ತಾಲ್ಲೂಕು ಮಲ್ಲಿಕೋಟ್ಟೆಯಲ್ಲಿರುವ ದೊಡ್ಡ ದೇವರಾಯ ಒಡೆಯನ ಶಾಸನವು ನಂಜನಗೂಡಿನ ನಂಜುಂಡೇಶ್ವರನಿಗೆ ವಾಮಲೂರು ಸ್ಥಳದ ಮಲ್ಲಿಗೆ ಕೋಂಟೆಗೆ ಸೇರಿದ ಹಲವು ಗ್ರಾಮಗಳನ್ನು ದತ್ತಿ ಬಿಟ್ಟ ವಿವರವನ್ನು ತಿಳಿಸುತ್ತದೆ.

ಕೊಯಮತ್ತೂರು ಸಮೀಪದ ಅವಿನಾಶಿ ಎಂಬಲ್ಲಿ ಅವಿನಾಶೀಶ್ವರ ದೇವಾಲಯವನ್ನು ಇಮ್ಮಡಿ ಕೃಷ್ಣರಾಜ ಒಡೆಯರವರ ಕಾಲದಲ್ಲಿ ಅಂದರೆ ಕ್ರಿ.ಶ. ೧೭೫೮ರಲ್ಲಿ ಜೀರ್ಣೋದ್ಧಾರ ಮಾಡಿಸಿರುವ ಬಗ್ಗೆ ವಿವರ ದೊರೆಯುವುದಲ್ಲದೆ ಕೊಯಮತ್ತೂರಿನ ಅಧಿಕಾರಿಯಾದ ಶಂಕರಯ್ಯನು ಶಂಕರ ಲಿಂಗವನ್ನು ಪ್ರತಿಷ್ಠಾಪಿಸಿದ ದಾಖಲೆಯಿದೆ. ಕ್ರಿ.ಶ. ೧೭೭೮ರಲ್ಲಿ ದಳವಾಯಿ ವೀರರಾಜ ಒಡೆಯನ ಆಳಿಕೆಯಲ್ಲಿ ಮಂಜಿನಾಡಿನ ವನವಾಸಿಯಲ್ಲಿ ಶಿವದೇವಾಲಯಕ್ಕೆ ತೋಟವನ್ನು ದತ್ತಿಬಿಟ್ಟಿರುವ ವಿವರವಿದೆ.*

**ವೀರಶೈವ ಧರ್ಮ :**

ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಏಳಿಗೆಯನ್ನು ಪಡೆದ ವೀರಶೈವ ಧರ್ಮ, ವಿಜಯನಗರ ಅರಸರ ಕಾಲದಲ್ಲಿ, ಅದರಲ್ಲೂ, ಪ್ರೌಢದೇವ

---

* ವನವಾಸಿ ಸ್ಥಳವು ಸೇಲಂ ಜಿಲ್ಲೆಯ ಓಮಲೂರಿಗೆ ಸೇರಿದ ಗ್ರಾಮವಾಗಿದೆ.

ರಾಯನ ಕಾಲದಲ್ಲಿ ದಕ್ಷಿಣ ಕರ್ನಾಟಕ ಹಾಗೂ ಅದರ ಹೊರಗೂ ಹರಡಿತು. ತಮಿಳುನಾಡಿನ ಗಡಿ ಪ್ರಾಂತ್ಯದಲ್ಲಷ್ಟೇ ಅಲ್ಲದೆ ಅದರ ಹೊರಗೂ ವೀರಶೈವಧರ್ಮ ನೆಲೆಯೂರಿರುವ ಅಂಶ ಶಾಸನಗಳಿಂದ ತಿಳಿದು ಬರುತ್ತದೆ.

ಧರ್ಮಪುರಿಜಿಲ್ಲೆ ಉತ್ತಂಗೆರೆ ತಾಲ್ಲೂಕಿನ ಕಲ್ಲಾವಿಯ ರೈಲು ಹಾದಿಯ ೧೫೭ನೇ ಮೈಲಿಕಲ್ಲಿನ ಸಮೀಪದ ಬಂಡೆಯ ಮೇಲಿರುವ ಶಾಸನ, ಹಿರತ್ತ (ವಿರಕ್ತ) ಮಠದ ಕರಿಬಸಪ್ಪದೇವರಿಗೆ ಪರ್ವತ ಒಡೆಯನೆಂಬುವವನು ಲಿಂಗಾಯತ ಮಠವನ್ನು ಕಟ್ಟಿಸಿ ತೋಟದ ಭೂಮಿಗೆ ಲಿಂಗಮುಂದ್ರೆ ಕಲ್ಲು ಹಾಕಿಸಿರುವುದು ಕಂಡುಬರುತ್ತದೆ. ಡೆಂಕಣಿಕೋಟೆ ತಾಲ್ಲೂಕು ಗುಮ್ಮಳಾಪುರದಲ್ಲಿ ದೊರೆತ ಕ್ರಿ.ಶ. ೧೪೭೪ರ ವಿಜಯ ನಗರ ನರಸಿಂಹದೇವ ಮಹಾರಾಯನ ತಾಮ್ರ ಶಾಸನವೊಂದರಲ್ಲಿ; ಪ್ರಸಾದಿದೇವ ಬಿಟ್ಟಮುಂಡೆಯ ಪ್ರಭು, ನಿಜಲಿಂಗ ಚಿಕ್ಕಯ, ಶಂಖದ ಸಿದ್ಧಲಿಂಗ, ಚಿಕದೇವ, ಮುಂತಾದ ವೀರಮಾಹೇಶ್ವರರ ಪ್ರಸ್ತಾಪ ಬಂದಿದೆ. ಇವರು ಪ್ರಖ್ಯಾತರಾದ ಶಿವಶರಣರಿದ್ದು, ಚೆನ್ನಬಸವಪುರಾಣ, ರಾಘವಾಂಕ ಚರಿತೆ, ವೀರಶೈವಾ ಮೃತ ಪುರಾಣ, ಶಿವತತ್ವ ಚಿಂತಾಮಣಿ ಮುಂತಾದ ಕೃತಿಗಳಲ್ಲಿ ಪ್ರಸ್ತಾಪಿತ ರಾಗಿದ್ದಾರೆ. ಇದೇ ಸ್ಥಳದ ಕ್ರಿ.ಶ. ೧೬೦೬ರ ಶಾಸನವು ಎಲಹಂಕನಾಡಪ್ರಭು ಇಮ್ಮಡಿ ಕೆಂಪೇಗೌಡನು ಗುಮ್ಮಳಾಪುರದ ಸಿಂಹಾಸನಕ್ಕೆ ಕರ್ತರಾದ ನಂಜೇದೇವರು ಅಯ್ಯನವರ ಪೌತ್ರ ಚೆನ್ನಮಲ್ಲಿಕಾರ್ಜುನ ದೇವರ ಪುತ್ರ ಭಾರದ್ವಾಜ ಗೋತ್ರದ ಪಡಿವಿಡಿವರ್ಗದ ನಂಜೇದೇವಪ್ಪ ಅಯ್ಯನವರಿಗೆ ಮೇಲೂರಿಗೆ ಸೇರಿದ ಗುಮ್ಮಳಾ ಪುರವನ್ನು ದತ್ತಿ ಬಿಟ್ಟ ವಿವರವನ್ನು ನೀಡುತ್ತದೆ. ಕ್ರಿ. ಶ. ೧೫೧೮ರ ಕೃಷ್ಣದೇವ-ರಾಯನ ಕಾಲದ ಶಾಸನವೊಂದರಲ್ಲಿ ನಾಗಮಂಗಲದ ವೀರಭದ್ರದೇವನ ಪ್ರಿಯ ಪುತ್ರನಾದ ಗುಮ್ಮಳಾಪುರದ ರಾಜಬೆನಹಾರಿಗಳಾದ ವೀರಶೈವ ವರ್ತಕರ ಉಲ್ಲೇಖ ಬಂದಿದೆ. ಗುಮ್ಮಳಾಪುರದ ಕ್ರಿ. ಶ. ೧೫೩೬ರ ಇನ್ನೊಂದು ಶಾಸನದಲ್ಲೂ ಅದೇ ವೀರಭದ್ರದೇವರ ಪ್ರಿಯಪುತ್ರರಾದ ಗುಮ್ಮಳಾಪುರದ ಅಕ್ಕಲ ಚೆಂನಿಸೆಟ್ಟಿ ಎಂಬುವ ವನ ಪ್ರಸ್ತಾಪವಿದೆ. ತಳಿ ಕೆರೆಯ ಮೇಲಿನ ಶಾಸನ ಕ್ರಿ. ಶ. ೧೫೩೦ಕ್ಕೆ ಸೇರಿದ್ದು ಅಚ್ಯುತರಾಯನ ಆಳಿಕೆಯಲ್ಲಿ ಅಕ್ಕಲ ಚೆಂನಿಸೆಟ್ಟಿಯ ಮೊಮ್ಮಗ ಹೊನ್ನ ಸೆಟ್ಟಿ ಅವನ ಮಗ ಹೊನ್ನಹಲಗಿಸೆಟ್ಟಿ ಎಂಬುವವನ ಪ್ರಸ್ತಾಪ ಮಾಡುತ್ತದೆ.

ಗುಮ್ಮಳಾಪುರವು ವೀರಶೈವ ಸಾಹಿತ್ಯ ದೃಷ್ಟಿಯಿಂದಲೂ ಗಮನಾರ್ಹ ಸ್ಥಾನ ವನ್ನು ಪಡೆದಿದೆ. ಈ ಸ್ಥಳದ ಪ್ರಭುಗ ಎಂಬ ವೀರಶೈವ ಕವಿ ಚೂಡನಾಸ್ಥಾನ ವೈಭೋಗ ಮತ್ತು ರಾಜನಾಸ್ಥಾನ ವೈಭೋಗ ಎಂಬ ಶಿವಸ್ತುತಿ ಪರವಾದ ಕೃತಿ ಗಳನ್ನೂ, ಹಲಗ ಎಂಬುವವನು ಹರಿಶ್ಚಂದ್ರ ಸಾಂಗತ್ಯವನ್ನೂ ರಚಿಸಿರುತ್ತಾರೆ. ತೋಂಟದ ಸಿದ್ಧಲಿಂಗ ಯತಿಗಳ ಶಿಷ್ಯರಲ್ಲಿ ಗುಮ್ಮಳಾಪುರದ ಸಿದ್ಧಲಿಂಗೇಶನು ಒಬ್ಬ

ನಾಗಿದ್ದನು. ಈತನು 'ಷಟ್ಸ್ಥಳದ ಲಿಂಗಾಂಗ ಸಂಬಂಧ ನಿರ್ವಚನ'ವೆಂಬ ಕೃತಿಯನ್ನು ರಚಿಸಿರುತ್ತಾನೆ. ಪ್ರಸಿದ್ಧ ವೀರಶೈವ ಕೃತಿ ಶೂನ್ಯ ಸಂಪಾದನೆಯೊಂದಿಗೆ ಈ ಗುಮ್ಮಳಾಪುರದ ಸಿದ್ಧಲಿಂಗದೇವನ ಹೆಸರು ಪ್ರಸಿದ್ಧವಿದೆ.

ಗೋಪಿಚೆಟ್ಟಿಪಾಳ್ಯ ತಾಲ್ಲೂಕು ಎರಗನಹಳ್ಳಿ ಗ್ರಾಮದ ಕ್ರಿ. ಶ. ೧೫೪೨ರ ಶಾಸನಗಳಲ್ಲಿ ನಂಜನಗೂಡಿನ ಜಂಗಮ ಛತ್ರದ ನಂಜದೇವರ ಮಕ್ಕಳು ಭೋಗನ ........ಒಡೆಯರ ಮಕ್ಕಳು ಅಂನದಾನಿ ಒಡೆಯರು, ನಂಜಯದೇವರ ಮಕ್ಕಳು ಭೋಗನಂಜಯನವರು ಎಂಬ ಪ್ರಸ್ತಾಪ ಬಂದಿದೆ.

**ವೈಷ್ಣವಧರ್ಮ :**

ಈ ಪ್ರದೇಶದ ಶಾಸನಗಳಲ್ಲಿ ವೈಷ್ಣವಧರ್ಮದ ಕುರುಹುಗಳು ವಿಜಯನಗರ ಕಾಲದಿಂದಷ್ಟೇ ವಿವರವಾಗಿ ಕಾಣುತ್ತದೆ. ಕ್ರಿ. ಶ. ೧೫೫೧ರ ಸದಾಶಿವದೇವರಾಯನ ಶಾಸನವೊಂದು ಧಾರಾಪುರದಲ್ಲಿದ್ದು ಅಲ್ಲಿನ ವಿಷ್ಣುದೇವೋತ್ತಮ ರಾಘವದೇವರ ಪಲ್ಲಕ್ಕಿಯ ಸೇವೆಗಾಗಿ ಧಾರಾಪುರ ಚಾವಡಿಗೆ ಸಲ್ಲುವ ಹಲವು ಗ್ರಾಮಗಳನ್ನು ದತ್ತಿ ಬಿಟ್ಟಿರುವ ವಿವರವಿದೆ. ರಾಹುತರು, ನಾಯಕಮಕ್ಕಳು, ಯಕ್ಕಟಿಗಳು, ಬಲ್ಲರು, ಬಾಣದ ಬಾಗಿಲು ಗೊಲ್ಲರು, ಬೋಯರು, ಊಳಿಗದವರು, ಹುಲ್ಲುವರು, ದಿಯವರು, ಬೆಸ್ತ....ವಾಣಿಗಳು, ಕಾವಾಟದವರು, ವಾದ್ಯದವರು, ಕೂಟದವರು, ಕಟ್ಟುವರು, ಹಸ್ತಕರು ಮುಂತಾದವರ ಪ್ರಸ್ತಾಪ ಬಂದಿದೆ. ಧರ್ಮಪುರಿ ತಾಲ್ಲೂಕು ಪೆನ್ನಾಗರದ ಸಮೀಪದ ಹಳೇಪುರದ ಶ್ರೀ ನಾರಸಿಂಹದೇವರಿಗೆ ವಿರುಪೆಯ ನಾಯ್ಕರ ಮಕ್ಕಳು ಪಾಲೆಯನಾಯಕರು ವಿಶೇಷ ನೈವೇದ್ಯ ದೀಪ ಮಾಡಿಸಿದ ಬಗ್ಗೆ ವಿವರ ಕೊಡುತ್ತದೆ. ಸೇಲಂ ಜಿಲ್ಲೆ ತಿರುಚೆಂಗೋಡು ತಾಲ್ಲೂಕು ಶಂಖಗಿರಿ ಚೆನ್ನಕೇಶವ ದೇವಾಲಯದ ಮೆಟ್ಟಿಲುಗಳ ಮೇಲಿರುವ ಕನ್ನಡ ಶಾಸನವು ಚೆನ್ನರಾಯ ಎಂದು ಉಲ್ಲೇಖಿಸುತ್ತದೆ. ಕ್ರಿ. ಶ. ೧೬೮೬ರ ಮೈಸೂರು ದೊರೆ ಚಿಕ್ಕದೇವರಾಯನ ಆಳಿಕೆಯಲ್ಲಿ ಆವನ ಅಧಿಕಾರಿಗಳು ರಾಯದುರ್ಗ ಎಂಬ ಕನ್ನತೂರು ದುರ್ಗದ ಚನ್ನರಾಯ ಪೆರುಮಾಳ್ ದೇವರಿಗೆ ದ್ವಾರಪಾಲಕರನ್ನು ಮಾಡಿಸಿಕೊಟ್ಟಿರುವ ವಿವರವಿದೆ. ಇಮ್ಮಡಿ ಕೃಷ್ಣರಾಜ ಒಡೆಯರ ಕ್ರಿ. ಶ. ೧೮೧೮ರ ಶಾಸನವೊಂದು ಧರ್ಮಪುರಿ ಜಿಲ್ಲೆಯ ಪಾಪ್ಪಾರಪಟ್ಟಿಯಲ್ಲಿದ್ದು, ಕಂಚಿಯ ವರದರಾಜಸ್ವಾಮಿಯವರ ಸಂನಧಿಯಲ್ಲಿ ಅಳಘಿಯಮನವಾಳ ರಾಮಾನುಜೀಯರವರ ಹವಾಲಿನಲ್ಲಿ ಶಾಶ್ವತವಾಗಿ ನಡೆಸಿಕೊಂಡು ಬರುವ ನಿತ್ಯಕಯಿಂಕರ್ಯಕ್ಕೆ ಪಾಪಾರಪಟ, ಯೆಟಗಾನಹಳ್ಳಿ, ಆಚಾರಹಳ್ಳಿ, ಕಮುನಾಯಕನಹಳ್ಳಿ, ಗುಲ್ಲಪ್ಪನಾಯಕನಹಳ್ಳಿ, ಮಾದಹಳ್ಳಿ, ಬೇಲೂರು, ವರತಹಳ್ಳಿ, ಬೆಳಚಾರಹಳ್ಳಿ, ಸಕುಲಹಳ್ಳಿ, ವ್ಯಾಪಲಿಹಳ್ಳಿ, ನಲಪನಾಯಕನಹಳ್ಳಿ ಎಂಬ ಒಟ್ಟು ೧೨ ಗ್ರಾಮಗಳನ್ನೂ ಪಾಪಾರಪಟಿಯ ೧ ಕೆರೆಯನ್ನೂ ದತ್ತಿ ಬಿಟ್ಟ ವಿವರವನ್ನು ನೀಡುತ್ತದೆ.

ಡೆಂಕಣಿಕೋಟೆ ತಾಲ್ಲೂಕು ತಳಿಯ ಗೋಪಾಲಸ್ವಾಮಿ ದೇವಾಲಯವನ್ನು ಮೈಸೂರಿನ ಅರಸು ಕೃಷ್ಣರಾಜ ಒಡೆಯರವರು ಕ್ರಿ. ಶ. ೧೭೪೩ರಲ್ಲಿ ನಿರ್ಮಿಸಿದರೆಂದು ತಿಳಿದುಬರುತ್ತದೆ. ಕೊಯಮುತ್ತೂರು ತಾಲ್ಲೂಕು ಗಣಪತಿ ಸ್ಥಳದ ವೇಣುಗೋಪಾಲಸ್ವಾಮಿಗೆ ತೆರಕಣಾಂಬಿ ಮದನಯ್ಯನ ಪೌತ್ರ ಶಂಕರಯ್ಯನ ಪುತ್ರ ಮಾದಯ್ಯ, ದೇವರ ಪೂಜಾಕೈಂಕರ್ಯಗಳಿಗಾಗಿ ದತ್ತಿ ಬಿಟ್ಟಿರುತ್ತಾನೆ. ಈತನು ಕೊಯಮುತ್ತೂರಿನಲ್ಲಿ ಅಧಿಕಾರಿಯಾಗಿದ್ದನು. ಸೇಲಂ ಜಿಲ್ಲೆ ತಿರುಚೆಂಗೋಡು ತಾಲ್ಲೂಕು ಪಾಲ್‌ಮೇಡು ಸ್ಥಳದಲ್ಲಿರುವ ಶಾಸನವೊಂದು ಅಹೋಬಲ ಲಕ್ಷ್ಮೀನರಸಿಂಹಸ್ವಾಮಿಯ ಪೂಜಾಕೈಂಕರ್ಯಗಳಿಗೆ ಶ್ರೀ ಪರಾಂಕುಶ ರಾಮಾನುಜಜೀಯರ್ ಮಠ ಮತ್ತು ಶ್ರೀ ವೈಷ್ಣವರ ಆಹಾರ ದಾನಕ್ಕೆ ಪಾಲ್‌ಮೇಡು ಸ್ಥಳವನ್ನು ಮೈಸೂರು ಕೃಷ್ಣರಾಜ ಒಡೆಯರವರು ಸಾವಿರ ವರಹಗಳಿಗೆ ಗೇಣಿಗೆ ದತ್ತಿ ಬಿಟ್ಟಿರುವ ವಿವರವಿದೆ.

**ಅಗ್ರಹಾರ/ವೈದಿಕಧರ್ಮ :**

ಹಿಂದೂ ವರ್ಣಾಶ್ರಮ ಪದ್ಧತಿಯಲ್ಲಿ ಅಗ್ರಸ್ಥಾನ ಬ್ರಾಹ್ಮಣರಿಗೆ ಸಲ್ಲುತ್ತದೆ. ಅಂತೆಯೇ ಶಾಸನಗಳಲ್ಲಿ ಬ್ರಾಹ್ಮಣರಿಗಾಗಿ ಅಗ್ರಹಾರಗಳನ್ನು ದತ್ತಿ ಬಿಟ್ಟು, ಅವರು ಷಟ್ಕರ್ಮ ನಿರತರಾಗಿರುವಂತೆ ಏರ್ಪಾಡುಗಳನ್ನು ಮಾಡಿರುವ ವಿವರಗಳು ಕಂಡು ಬರುತ್ತದೆಯಲ್ಲದೆ, ಗ್ರಾಮದಾನ, ಬ್ರಹ್ಮದೇಯ ಮುಂತಾದ ದತ್ತಿಗಳನ್ನು ನಮ್ಮ ರಾಜಮಹಾರಾಜರು ಕಾಲದಿಂದ ಕಾಲಕ್ಕೆ ಯಥೇಚ್ಛವಾಗಿ ಬಿಟ್ಟಿರುವುದು ಕಂಡು ಬರುತ್ತದೆ.

ಕ್ರಿ. ಶ. ೧೭೬೫ರಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರ ಆಳಿಕೆಯ ಕಾಲದಲ್ಲಿ ಮಾದಯ್ಯ ಎಂಬ ಕೊಯಮುತ್ತೂರಿನ ಅಧಿಕಾರಿಯು ಮಾಧವಪುರವೆಂಬ ಅಗ್ರಹಾರವನ್ನು ಆನೆಮಲೆಗೆ ಪಶ್ಚಿಮದಲ್ಲಿ ಸ್ಥಾಪಿಸಿ ಅಲ್ಲಿ ವಾಸಿಸುವ ಬ್ರಾಹ್ಮಣರಿಗೆ ಭೂಮಿಗಳನ್ನು ದತ್ತಿ ನೀಡಿದ ವಿವರ ಶಾಸನೋಕ್ತವಾಗಿದೆ. ಹೊಸೂರು ತಾಲ್ಲೂಕು ಮುದಗಾನಹಳ್ಳಿ ಗ್ರಾಮದ ೧೫ನೆಯ ಶತಮಾನದ ಶಾಸನವೊಂದು ಬ್ರಹ್ಮದೇಯವನ್ನು ಉಲ್ಲೇಖಿಸುತ್ತದೆ. ಧಾರಾಪುರಂನಲ್ಲಿರುವ ಸದಾಶಿವರಾಯನ ಕಾಲದ ಶಾಸನವೊಂದು ಭಾರದ್ವಾಜ ಗೋತ್ರದ ಅಶ್ವಲಾಯನ ಸೂತ್ರದ ಋಕ್‌ಶಾಖೆಯ ಶಿವನಪ್ಪ ಪಂಡಿತರ ಪುತ್ರರು ವೀರಾಪಂಡಿತರಿಗೆ ಗ್ರಾಮದಾನ ನೀಡಿದ ವಿವರವನ್ನು ನೀಡುತ್ತದೆ. ಸತ್ಯಮಂಗಲ ತಾಲ್ಲೂಕಿನ ವಿನ್ನಪಳ್ಳಿ ಗ್ರಾಮದ ಶಾಸನವೊಂದು ಕ್ರಿ. ಶ. ೧೬೭೧ಕ್ಕೆ ಸೇರಿದ್ದು ಮೈಸೂರು ದೊರೆ ದೇವರಾಜ ಒಡೆಯನದಾಗಿದೆ. ಒಂದು ಗ್ರಾಮವನ್ನು ೬೪ ಭಾಗಗಳಾಗಿ ಮಾಡಿ ೬೪ ಜನ ಬ್ರಾಹ್ಮಣರಿಗೆ ದತ್ತಿ ಬಿಡಲಾಗಿದೆ. ಇಮ್ಮಡಿ ಕೃಷ್ಣರಾಜ ಒಡೆಯನ ಆಳಿಕೆಯ ಕಾಲದಲ್ಲಿ ಅನೇಕ

ಬ್ರಾಹ್ಮಣರಿಗೆ ಭೂಮಿಗಳನ್ನು ಮತ್ತು ಗ್ರಾಮಗಳನ್ನು ಕ್ರಯದಾನವಾಗಿ ಕೊಟ್ಟಿರುವುದು ಕಂಡುಬರುತ್ತದೆ. ಸತ್ಯಮಂಗಲ, ಮೆಟ್ಟೂರು, ಪುದುಪಾಳ್ಯಂ ಮುಂತಾದ ಸ್ಥಳಗಳಿಗೆ ಸೇರಿದ ಈ ಅರಸರ ತಾಮ್ರಪಟಗಳಲ್ಲಿ ಗೋಪಾಲಸಮುದ್ರ, ಗುಡ್ಡನಾಯಕನಪಾಳ್ಯ, ತಿರುಮಲೆಶೆಟ್ಟಿಪಾಳ್ಯ, ಶಂಖಗಿರಿಗೆ ಸೇರಿದ ತಗಡಪ್ಪಾದಿ, ಮನೂರ್ ಮುಂತಾದ ಗ್ರಾಮಗಳನ್ನು ಅಥವಾ ಗ್ರಾಮದ ಭೂಮಿಗಳನ್ನು ಸುಬ್ಬಾಶಾಸ್ತ್ರಿ, ರಾಮಾಶಾಸ್ತ್ರಿ, ರಾಮಾವಧಾನಿ, ವೆಂಕಟೇಶ್ವರಶಾಸ್ತ್ರಿ, ವೆಂಕಟರಮಣಾಚಾರ್ಯ, ರಾಮಲಿಂಗಶಾಸ್ತ್ರಿ ಮೊದಲಾದ ಬ್ರಾಹ್ಮಣರಿಗೆ ಕ್ರಯದಾನವಾಗಿ ನೀಡಿರುವುದು ಕಂಡುಬರುತ್ತದೆ. ಈ ಕ್ರಯದಾನ ಶಾಸನಗಳೆಲ್ಲವೂ ತಾಮ್ರಪಟಗಳಾಗಿದ್ದು ಕ್ರಿ. ಶ. ೧೭೬೦-೯೧ರ ಅವಧಿಗೆ ಸೇರಿದವಾಗಿರುವುದು ಗಮನಾರ್ಹ ಅಂಶ.

ಉಳವೂರನಹಳ್ಳಿ ಸಮೀಪದ ಹಳೆಯೂರು ಶಾಸನದಲ್ಲಿ ಪೊಸೂರು ಸೀಮೆಯ ಗುಮ್ಮಳಾಪುರದ ಹೋಬಳಿಗೆ ಸೇರಿದ ಹಲವು ಗ್ರಾಮಗಳನ್ನು ಸಾಂಬಶಿವ ವೃತ್ತಿಯಾಗಿ ಅಮ್ಮಣ್ಣಭಟ್ಟನ ಮಗ ಕವಿ ವೆಂಕಟ ಎಂಬುವವನಿಗೆ ದಳವಾಯಿ ನಂಜ-ರಾಜಯ್ಯನು ದತ್ತಿ ಬಿಟ್ಟ ವಿವರವಿದೆ. ಕವಿ ಚರಿತ್ರೆಕಾರರು ಉಲ್ಲೇಖಿಸುವ ವೆಂಕಟಶರ್ಮ ಈತನೇ ಇರಬೇಕು. ಕಳಲೆ ವಂಶದ ದಳವಾಯಿಗಳು ಕವಿಜನ ಪೋಷಕರಾಗಿದ್ದರಲ್ಲದೆ ಸ್ವತಃ ಕವಿಗಳೂ ಆಗಿದ್ದ ಬಗ್ಗೆ ಆಧಾರಗಳಿವೆ. ಗುಮ್ಮಳಾಪುರದ ಹಲವು ವೀರಶೈವ ಮಹಾಪುರುಷರು ಕ್ರಿ. ಶ. ೧೪೭೪ರಲ್ಲಿ ಬ್ರಾಹ್ಮಣ ಮತದ ವೆಂಕಟೇಶ್ವರ ಉಪಾಧ್ಯಾಯರಿಗೆ ಒಂದು ಅಗ್ರಹಾರವನ್ನು ದಾನ ನೀಡಿದ್ದಾರೆ. ಇದು ಶರಣರ ಮತ ಮೈತ್ರಿಗೆ ನಿದರ್ಶನವೆಂದು ಪರಿಗಣಿಸಲಾಗಿದೆ.

**ಇಸ್ಲಾಂಧರ್ಮ :**

ಬಿಜಾಪುರದ ಸುಲ್ತಾನನ ಅಧಿಕಾರಿಯಾಗಿ ಮರಾಠರ ಷಹಜಿಯ ಪ್ರದೇಶದೊಂದಿಗೆ ಈ ಪ್ರದೇಶದಲ್ಲಿ ಮುಸ್ಲಿಂ ಧರ್ಮವು ತನ್ನ ಅಸ್ತಿತ್ವವನ್ನು ದೃಢಪಡಿಸಿಕೊಂಡಿತು. ಮುಂದೆ ಮೊಘಲರ ಪ್ರವೇಶ, ನಂತರದಲ್ಲಿ ಸ್ಥಳೀಯವಾಗಿ ತಲೆಯೆತ್ತಿದ ಆರ್ಕಾಡು ನವಾಬರು ಮತ್ತು ಮೈಸೂರಿನ ಹೈದರಾಲಿ, ಟಿಪ್ಪುಸುಲ್ತಾನರವರ ಕಾಲದಲ್ಲಿ ಇಸ್ಲಾಂಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ದೊರೆಯಿತು. ಕ್ರಿ.ಶ. ೧೭೫೯ರ ಮೈಸೂರಿನ ಇಮ್ಮಡಿ ಕೃಷ್ಣರಾಜ ಒಡೆಯರ ಆಳಿಕೆಯ ಕಾಲದಲ್ಲಿ ಸೇಲಂ ತಾಲ್ಲೂಕಿನ ಆಮ್ಮಾಪಾಳ್ಯಂನಲ್ಲಿರುವ ಶಿಲಾಶಾಸನವು ತಾಮ್ರಶಾಸನದ ನಕಲೆಂದು ತಿಳಿಯುತ್ತದೆಯಲ್ಲದೆ ಆಗ ಮೈಸೂರಿನ ದಳವಾಯಿಯಾಗಿದ್ದ ಹೈದರಾಲಿಯಿಂದ ಖಜಾನೆಗೆ ಹಣ ತುಂಬಿ ಅಕಾವಲ್ಲ ಸಾಹೇಬು ಎಂಬುವವನಿಗೆ ದರ್ಗಾವನ್ನು ನಿರ್ವಹಣೆ ಮಾಡಲು ಆಮ್ಮಾಪಾಳ್ಯ ಮುಂತಾದ ಗ್ರಾಮಗಳನ್ನು ರಾಜನಿಂದ ದತ್ತಿ ಬಿಡಿಸಲಾಗಿದೆ.

ಕರ್ನಾಟಕ ದೀರ್ಘವಾದ ವೀರ ಪರಂಪರೆಯ ಇತಿಹಾಸವನ್ನು ಹೊಂದಿದೆ. ವೀರತನವನ್ನು ಪ್ರತಿಬಿಂಬಿಸುವ ವೀರಗಲ್ಲುಗಳು ಒಂದು ರೀತಿಯಲ್ಲಿ ಕರ್ನಾಟಕಕ್ಕೆ ವಿಶಿಷ್ಟವೆನ್ನಬಹುದಾದ ಸ್ಮಾರಕ ಶಿಲೆಗಳಾಗಿವೆ. ಏಕೆಂದರೆ ಇವು ಅಧಿಕ ಪ್ರಮಾಣ ದಲ್ಲಿ ಕಂಡು ಬರುವುದು ಕನ್ನಡ ಅರಸುಮನೆತನಗಳ ಆಳ್ವಿಕೆ ನಡೆಸಿರುವ ಮತ್ತು ಪ್ರಭಾವವಿರುವ ಪ್ರದೇಶಗಳಲ್ಲಿ ಮಾತ್ರ. ಅಂತೆಯೇ, ಬಹುಮಟ್ಟಿಗೆ ಕನ್ನಡ ಅರಸುಮನೆತನಗಳ ಆಳಿಕೆಯಲ್ಲಿಯೇ ಇದ್ದ ಈ ಗಡಿ ಪ್ರಾಂತ್ಯದಲ್ಲಿ ಇಂತಹ ಸ್ಮಾರಕ ಶಿಲೆಗಳು ದೊರೆಯುವುದು ಸಹಜವಷ್ಟೆ. ಯುದ್ಧ, ತುರುಗಾಳಗ, ಪೆಣ್‌ಬುಯಲ್, ಕಳ್ಳರೊಡನೆ ಹೋರಾಟ, ಹುಲಿಬೇಟೆ ಮುಂತಾದ ಪ್ರಕಾರಗಳಿಗೆ ಸಂಬಂಧಿಸಿದ ಇವು ಗಮನ ಸೆಳೆಯುತ್ತವೆ. ನೇರವಾಗಿ ಯುದ್ಧಕ್ಕೆ ಸಂಬಂಧಿಸಿದ ವೀರಗಲ್ಲೊಂದು ರಾಯಕೋಟೆಯಲ್ಲಿದ್ದು, ಮಹಾಬಲಿ ಬಾಣರಸನ ಆಳಿಕೆಯ ಕಾಲಕ್ಕೆ ಸೇರಿದು ದಾಗಿದೆ. ಕಂಚಿಯ ಮೇಲೆ ನಡೆದ ಯುದ್ಧವೊಂದರಲ್ಲಿ ತೇಕಲ್ನಾಡೆಪ್ಪತ್ತನ್ನು ಆಳುತ್ತಿದ್ದ ಕೀರ್ತ್ತಿಲಮ್ಮರಸನ ಮಗ ಎಱಿಗಜ್ಜನೆಂಬ ವೀರನು ವೀರಮರಣ ವನ್ನಪ್ಪುತ್ತಾನೆ. ಆಗ ಬಾಣರಸನು ಎಱಿಗಜ್ಜನ ಪಂಶೀಯರಿಗೆ ದತ್ತಿಬಿಟ್ಟಿರುತ್ತಾನೆ. ಹೊಸೂರು ತಾಲ್ಲೂಕು ಮಾಚಿನಾಯಕನ ಹಳ್ಳಿಯ ಸುಮಾರು ಕ್ರಿ. ಶ. ೯ನೇ ಶತಮಾನದ ವೀರಗಲ್ಲು, ಗಂಗ ಶಿವಮಾರನ ಆಳಿಕೆಯನ್ನು ಸೂಚಿಸುತ್ತದೆಯಲ್ಲದೆ ವೈದುಂಬ ವಂಶದ ರಾಮರಾಜರಸನೆಂಬುವವನು ಆತನ ಮಾಂಡಲಿಕನಾಗಿದ್ದ ಅಂಶ ತಿಳಿಯುತ್ತದೆ. ರಾಮರಾಜರಸನು ಕೈಗೊಂಡ ತುರುಗಾಳೆಗವೊಂದರಲ್ಲಿ ವೀರನೊಬ್ಬನು ಮಡಿದ ವಿವರ ಬಂದಿದೆ. ಅದೇ ಸ್ಥಳದ ಇನ್ನೊಂದು ವೀರಗಲ್ಲು ನೊಳಂಬ ದೊರೆ ಮಹೇಂದ್ರನ ಆಳಿಕೆಯ ಕಾಲಕ್ಕೆ ಸೇರಿದ್ದು, ಮುಗನಲ್ಲೂರು ಸ್ಥಳದ ಸಮೀಪದಲ್ಲಿ ನಡೆದ ತುರುಗಾಳೆಗದಲ್ಲಿ ವೆಂತುರಗಾಮುಣ್ಣನು ಮಡಿದ ವಿಷಯ ಹಾಗೂ ಆತನ ಮಗ ದುದುಗ ಎಂಬುವವನು ವೀರಗಲ್ಲನ್ನು ನಿಲ್ಲಿಸಿದ ಬಗ್ಗೆ ತಿಳಿಸುತ್ತದೆ. ಕೃಷ್ಣಗಿರಿ ತಾಲ್ಲೂಕು ಕನ್ನಡ ಹಳ್ಳಿಯ ತುರುಗಾಳಗದ ವೀರಗಲ್ಲಿನಲ್ಲಿ ಪೊಱೆಯಂಗಾಡು ಎಂಬಲ್ಲಿ ಸಂಭವಿಸಿದ ತುರುಗಾಳಗದಲ್ಲಿ ಪಲಕೊಡೆಯ-ಗಣ್ಣನೆಂದು ಖ್ಯಾತನಾಗಿದ್ದ ವೀರನೊಬ್ಬನು ವೀರಮರಣವನ್ನಪ್ಪಿದ ವಿವರ ಬಂದಿದೆ.

ಹರೂರು ತಾಲ್ಲೂಕು ನವಿಲೈಸ್ಥಳದ ನೊಳಂಬರ ವೀರನೊಳಂಬನ ವೀರ ಗಲ್ಲೊಂದು ಪೆಣ್‌ಬುಯಲಿಗೆ ಸಂಬಂಧಿಸಿರುವಂತೆ ತೋರುತಿದ್ದು ಪಿತುವ ಎಂಬ ವೀರನು ಮಡಿದಿರುತ್ತಾನೆ. ಆಗ ಆತನ ತಂದೆಯಾದ ಪುಳಿಯಣ್ಣನೆಂಬುವವನು ನವಿಲೂರನ್ನು ಆಳುತ್ತಿದ್ದನು. ಇಲ್ಲಿ ನವಿಲೈಯನ್ನು ನವಿಲೂರು ಎಂದು ಕರೆದು, ಆ ಸ್ಥಳದ ಪೂರ್ವರೂಪ ಬಿಂಬಿತವಾಗಿರುವುದು ಗಮನಾರ್ಹ.

ನವಿಲೈ ಸ್ಥಳಕ್ಕೆ ಸೇರಿದ ಇನ್ನೊಂದು ವೀರಗಲ್ಲಿನಲ್ಲಿ ಪುನ್ನಾಗನೆಂಬುವವನು ಕಳ್ಳರೊಡನೆ ಹೋರಾಡುತ್ತ ಮಡಿದಿರುವ ವಿವರ ಬಂದಿದೆ. ಆತನ ಅಳಿಯ ಕಲ್ಲನ್ನು ನಿಲ್ಲಿಸಿರುತ್ತಾನೆ. ಗೋಪಿಚೆಟ್ಟಿ ಪಾಳ್ಯ ತಾಲ್ಲೂಕಿನ ಎರಗನಹಳ್ಳಿಯಲ್ಲಿರುವ ವಿಜಯನಗರ ಕಾಲದ ಮೂರು ಹಂತಗಳುಳ್ಳ ವೀರಗಲ್ಲೊಂದು ಎರಗನಹಳ್ಳಿಯ ಕಲ್ಲಿಗಉಡನ ಮಗ ಚಿಕ್ಕತಮ್ಮನು ಮೂಡಣ ಬೆಟ್ಟದಲಿ ಅಸಹಾಯ ಶೂರನಾಗಿ ಕೊಡಲಿಯಲ್ಲಿ ಕಳ್ಳರ ಹುಯ್ಯು ಕೆಡುಹಿ ತಾನೂ ಬಿದ್ದು ಸತ್ತಾಗ ಆತನ ತಮ್ಮ ಕೇತಯ್ಯನು ವೀರಗಲ್ಲು ಹಾಕಿಸಿದ್ದನ್ನು ದಾಖಲಿಸಿದೆ.

ಸೇಲಂ ಜಿಲ್ಲೆಯ ನಾಮಕ್ಕಲ್ ಸ್ಥಳದ ವೀರಗಲ್ಲಿನ ಮೇಲೆ ವೀರನೋರ್ವನು ಹುಲಿಯೊಂದಿಗೆ ಹೋರಾಡುತ್ತಿರುವ ಶಿಲ್ಪವಿದ್ದು, ಕುರುಬರ ಕಾಳಪ್ಪನನ್ನು ಉಲ್ಲೇಖಿಸುತ್ತದೆ. ಸೇಲಂನ ಮ್ಯೂಸಿಯಂನಲ್ಲಿರುವ, ಮೂಲತಃ ಸೆಂದಮಂಗಲಂ ಸ್ಥಳಕ್ಕೆ ಸೇರಿದ ೧೬ನೇ ಶತಮಾನದ ಶಾಸನವೊಂದು ಕಾಳಪ್ಪನ ಮಗ ಮಾಳಪ್ಪನನ್ನು ಪ್ರಸ್ತಾಪಿಸುತ್ತದೆ. ಇದು ಕೂಡ ಒಂದು ವೀರಗಲ್ಲಾಗಿರುವಂತೆ ತೋರುತ್ತದೆ. ಹೊಸೂರು ತಾಲ್ಲೂಕಿನ ಬುಕ್ಕಸಾಗರದ ಶಾಸನವೊಂದು 'ನೆತ್ತರು ಕೊಡಿಗೆ' ದತ್ತಿಯನ್ನು ತಿಳಿಸುತ್ತದೆ.

ಈ ಇಪ್ಪತ್ತನೆಯ ಶತಮಾನದಲ್ಲೂ ಅಂದರೆ ಕ್ರಿ. ಶ. ೧೯೧೦ ರಲ್ಲಿ ಒಬ್ಬ ಕುದುರೆ-ವೀರನ ಜ್ಞಾಪಕಾರ್ಥವಾಗಿ ಹಾಕಿಸಿರುವ ಸ್ಮಾರಕಶಿಲೆಯೊಂದು, ಗುಮ್ಮಳಾಪುರ ಗ್ರಾಮದಲ್ಲಿದ್ದು ಗಮನ ಸೆಳೆಯುತ್ತದೆ. "ಸನ್ ೧೯೧೦ ಜನವರಿ ತಿಂಗಳು ಹೊನ್ನಗಿರಿ ಹನುಮಂತಣ್ಣನ ಸೊಸೆ" ಮಾದಮ್ಮ ಮಗ ಹನುಮಂತ ಕುದುರೆ ಮೇಲಿಂದ ಬಿದ್ದು ಮೃತ ಪಟ್ಟ ಸ್ಥಳವಿದು" ಎಂಬ ಪಾಠವಿರುವ ಈ ಶಿಲೆಯ ಮೇಲ್ಭಾಗದಲ್ಲಿ ಕುದುರೆ ಮೇಲೆ ಸವಾರಿ ಮಾಡುತ್ತಿರುವ ವೀರನ ಚಿತ್ರವಿದೆ. ಕುದುರೆಯ ಕೆಳಗೆ ಮನುಷ್ಯ ಸತ್ತು ಬಿದ್ದಿದ್ದು, ಆ ದೇಹದ ಪಕ್ಕದಲ್ಲಿ ಒಬ್ಬ ಸ್ತ್ರೀ ನಿಂತಿರುವಂತೆ ಶಿಲ್ಪವಿದೆ. ಈ ಶತಮಾನದ ಆದಿಭಾಗದಲ್ಲಿ ಗುಮ್ಮಳಾಪುರದ ನೆರೆಹೊರೆಯ ಪ್ರದೇಶದಲ್ಲಿ ಸರದಾರನಂತೆ ಮೆರೆದ ಕುದುರೆ ಸವಾರಿ, ವ್ಯಭಿಚಾರ ಮತ್ತು ಜೂಜಾಟಗಳಲ್ಲಿ ಪ್ರಸಿದ್ಧನಿದ್ದ ಹನುಮಂತ ಒಮ್ಮೆ ಕುದುರೆಯ ಮೇಲೆ ಬಹಳ ವೇಗವಾಗಿ ಬರುತ್ತಿದ್ದಾಗ ಮಾರಮ್ಮನ ಗುಡಿಯ ಸಮೀಪದ ಸಿಡಿಗಂಭಕ್ಕೆ ಬಡಿದು ಸ್ಥಳದಲ್ಲೆ ಮೃತನಾದನೆಂದು ಸ್ಥಳೀಯರು ಮಾಹಿತಿ ನೀಡುತ್ತಾರೆ.*

---

* ನನ್ನ ಮಿತ್ರರಾದ ವೇಮುಗಲ್ ಶ್ರೀ ಸೋಮಶೇಖರ್‌ರವರು, ತಮ್ಮ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶೋಧಿಸಿ, ಪ್ರಕಟಿಸಿದ್ದ (ಸ್ಟ್ಯಾಂಗ್ ಇಂಡಿಯಾ-ಪಾಕ್ಷಿಕ, ಆಗಸ್ಟ್ ೧೬-೩೧, ೧೯೮೭) ಗುಮ್ಮಳಾಪುರದ ಈ ಶಾಸನ ಶಿಲ್ಪದ ಛಾಯಾಚಿತ್ರ, ಪತ್ರ ಹಾಗೂ ಮಾಹಿತಿಗಳನ್ನು ಒದಗಿಸಿ ಉಪಕರಿಸಿರುತ್ತಾರೆ. ಅವರಿಗೆ ಲೇಖಕ ಕೃತಜ್ಞ.

**ಕೃಷಿ ನೀರಾವರಿ ವಾಣಿಜ್ಯ-ಇತ್ಯಾದಿ.**

ಕೃಷಿ ಪ್ರಧಾನವಾದ ದೇಶ ನಮ್ಮದು. ನೀರಾವರಿಯ ಅನುಕೂಲವಿಲ್ಲದ ಬಯಲು-ಪ್ರದೇಶದಲ್ಲಿ ಮಳೆಯ ಆಶ್ರಯದಲ್ಲಿಯೇ ಬೆಳೆಗಳನ್ನು ಬೆಳೆಯಬೇಕಾಗುತ್ತದೆ. ಇಂತಹ ಭೂಮಿಯನ್ನು ಶಾಸನಗಳು ದೇವಮಾತೃಕೆಗಳೆಂದು ಕರೆದಿವೆ. ಮಾನವ ತನ್ನ ನಾಗರಿಕತೆಯ ಹಂತಗಳಲ್ಲಿ ಮಳೆಯ ನೀರನ್ನು ಸಂಗ್ರಹಿಸಲು ಹಾಗೂ ಅಂತರಜಲವನ್ನು ಮೇಲೆತ್ತಿ ನೀರಾವರಿ ಸೌಲಭ್ಯವೇರ್ಪಡಿಸಿಕೊಳ್ಳಲು ಮಾಡಿಕೊಂಡ ಪ್ರಯತ್ನದ ಫಲಗಳೇ ಕೆರೆ, ಅಣೆಕಟ್ಟೆ, ಕುಂಟೆ, ಬಾವಿ, ಕಾಲುವೆ, ಮುಂತಾದವುಗಳಾಗಿವೆ. ಈ ದಿಸೆಯಲ್ಲಿ ಕೆರೆ, ಅಣೆಕಟ್ಟು, ಕುಂಟೆ ಮುಂತಾದವುಗಳ ರಚನೆ, ನಿರ್ವಹಣೆಗೆ ಸಂಬಂಧಿಸಿನ ಹಲವು ವಿಷಯಗಳನ್ನು ಶಾಸನಗಳು ಪ್ರತಿಬಿಂಬಿಸುತ್ತವೆ. ಧರ್ಮಪುರಿಯ ಕ್ರಿ.ಶ. ೯ನೇ ಶತಮಾನದ ಹೊಸೂರಿನ ಶಾಸನದಲ್ಲಿ ಪ್ರೊಲೆತಂಮನೆಂಬುವವನಿಂದ ಕೆರೆಯೊಂದಕ್ಕೆ 'ಬಿತ್ತುವಾಟ' ಎಂಬ ದತ್ತಿಯನ್ನು ಬಿಟ್ಟಿರುವ ವಿವರವಿದೆ. 'ಬಿತ್ತುವಾಟ' ಎಂಬುದು ಕೆರೆಗಳ ದುರಸ್ತಿಗಾಗಿ ಬಿಟ್ಟ ದತ್ತಿಯೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುತ್ತಾರೆ. ಚೋಳರ ಮೊದಲ ರಾಜೇಂದ್ರನ ೧೪ನೇ ಆಡಳಿತ ವರ್ಷದ ಹೊಸೂರು ಶಾಸನವು ಸಾಲಿಪೂರಿಗೆ ಸೇರಿದ ವ್ಯಕ್ತಿಯೊಬ್ಬನ ಹೆಂಡತಿ, ಕೆರೆಯೊಂದನ್ನು ಕಟ್ಟಿಸಿದ ಬಗ್ಗೆ ತಿಳಿಸುತ್ತದೆ. ವಿಜಯನಗರದ ಹರಿಹರನ ಕಾಲಕ್ಕೆ ಸೇರಿದ ೧೫ನೇ ಶತಮಾನದ ಶಾಸನವೊಂದು ಹೊಸೂರು ತಾಲ್ಲೂಕಿನ ಕೂಸ್ತನಹಳ್ಳಿಯಲ್ಲಿದ್ದು, ಹೊಸದಾಗಿ ಕೆರೆಯೊಂದನ್ನು ಕಟ್ಟಲಾದ ವಿಷಯವನ್ನು ತಿಳಿಸುತ್ತದೆ. ಗುಮ್ಮಳಾಪುರದಲ್ಲಿರುವ ದೇವರಾಯನ ಕಾಲದ ಶಾಸನ ಹಲವು ಸೆಟ್ಟಿವರ್ತಕರು ಸೇರಿ ಕುಂಟೆಯೊಂದನ್ನು ನಿರ್ಮಾಣ ಮಾಡಿಸಿದ ಬಗ್ಗೆ ತಿಳಿಸುತ್ತದೆ. ಹೊಸೂರು ತಾಲ್ಲೂಕು ದೊಡ್ಡಬೇಲೂರಿನ ಸ್ಥಳೀಯ ಅಣೆಕಟ್ಟಿನ ಮೇಲಿರುವ ಶಾಸನವು ಮೈಸೂರು ದೊರೆ ಚಿಕ್ಕದೇವರಾಯನ ಆಳಿಕೆಯ ಕಾಲದಲ್ಲಿ (ಕ್ರಿ. ಶ. ೧೬೭೩) ದಳವಾಯಿ ಕುಮಾರರಾಯನು ಆ ಅಣೆಕಟ್ಟನ್ನು ಕಟ್ಟಿಸಿದನೆಂದು ಹೇಳುತ್ತದೆ. ಅದೇ ಚಿಕ್ಕದೇವರಾಯನ ಕಾಲದಲ್ಲಿ ಕ್ರಿ. ಶ. ೧೬೭೪ರ ತೊರಹಳ್ಳಿ ಶಾಸನವು ತಿರುವಿಚಿಹಳ್ಳಿಯ ಸಮೀಪದಲ್ಲಿ ಸಂಜರಾಯ ಸಮುದ್ರವೆಂಬ ಅಣೆಕಟ್ಟನ್ನು ದಳವಾಯಿ ಸಂಜರಾಜಯ್ಯನು ತನ್ನ ಗುರು ಅಣ್ಣ, ತಂದೆ, ತಾಯಿ, ಕಿರಿಯ ಸೋದರ ಹಾಗೂ ತನ್ನ ಸ್ವಂತ ಮಕ್ಕಳ ಕಲ್ಯಾಣಾರ್ಥವಾಗಿ ಮಾಡಿಸಿರುವುದಾಗಿ ತಿಳಿಸುತ್ತದೆ. ಹೊಸೂರು ತಾಲ್ಲೂಕಿನ ಬುಕ್ಕಸಾಗರ ಸ್ಥಳಕ್ಕೆ ಪಶ್ಚಿಮ ಬೆಟ್ಟದ ಇಳಿಜಾರಿನಲ್ಲಿರುವ ಶಾಸನವೊಂದು ಕೆರೆಯಿಂದ ಕಾಲುವೆಯನ್ನು ತೋಡಿಸಿದ ಬಗೆಗೆ ತಿಳಿಸುತ್ತದೆ. ಉಪ್ಪಾರಹಳ್ಳಿಯ ತೃಟಿತ ಶಾಸನವೊಂದರಲ್ಲಿ ಚಾಮರಾಜ ಒಡೆಯ ಮತ್ತು ನರಸಿಂಗರಾಯ ಒಡೆಯ ಎಂಬ ಉಲ್ಲೇಖವಿದ್ದು, ಕೆರೆಯೊಂದರ ನಿರ್ಮಿತಿಯ ಬಗ್ಗೆ ವಿವರವಿದೆ.

ಜೀವನಾವಶ್ಯಕ ವಸ್ತು ಮತ್ತು ಕ್ರಿಯೆಗಳಿಗೆ ಮಾತ್ರ ಸೀಮಿತವಾಗಿದ್ದ ಮಾನವನ ಆರಂಭದ ವೃತ್ತಿಗಳು ಹೆಚ್ಚು ನೈಸರ್ಗಿಕವಾಗಿದ್ದವು. ಕಾಲಕ್ರಮದಲ್ಲಿ ನಿಸರ್ಗಜೀವಿಯಾದ ಮಾನವನು ಸಮಾಜಜೀವಿಯಾಗಿ ಬೆಳೆದಂತೆ ನೈಸರ್ಗಿಕ ವೃತ್ತಿಗಳೊಂದಿಗೆ ಅನೇಕ ಸಾಮಾಜಿಕ ವೃತ್ತಿಗಳೂ ಹುಟ್ಟಿಕೊಂಡವು. ಇಂತಹ ವೃತ್ತಿಗಳಲ್ಲಿ ಪ್ರಧಾನತಃ ವಿನಿಮಯ ಪ್ರಕ್ರಿಯೆಯನ್ನೊಳಗೊಂಡಿರುವುದು ವರ್ತಕ ವೃತ್ತಿಯಾಗಿದೆ. ಈ ವೃತ್ತಿಯ ಕಾರ್ಯಚಟುವಟಿಕೆಗಳ ಹರವು ಶಾಸನಗಳಿಂದ ತಿಳಿದು ಬರುತ್ತದೆ.

ಧರ್ಮಪುರಿ ತಾಲ್ಲೂಕು ಅಧಮಾನ ಕೋಟೆಯ ಕ್ರಿ. ಶ. ೧೫೩೦ರ ಅಚ್ಯುತರಾಯನ ಶಾಸನದ 'ಶ್ರೀ ಭೈರವದೇವರ ಸಂನಿಧಿಯ ಸಂತೆಖಿಲವಾಗಿರಲಾಗಿ, ಪ್ರತಿಹುಟ್ಟಿಸಿ ಅಳ್ಳಿ ಆಡಿಕಾಸು ಸಹ ದ್ರವ್ಯ ಮುಖದಿಂ ಬರುವ ಸಂತೆಯಾದಾಯವನ್ನು ದೇವರ ದೀಪಾರಾಧನೆಗೆ' ದತ್ತಿ ಬಿಟ್ಟಿರುವ ಉಲ್ಲೇಖದಿಂದ ಖಿಲವಾದ ಸಂತೆಗಳನ್ನು ಮತ್ತೆ ಜೀರ್ಣೋದ್ಧಾರ ಮಾಡಿಸುತ್ತಿದ್ದ ವಿಷಯ ಸ್ಪಷ್ಟವಾಗುತ್ತದೆ. ಇಂತಹ ಸಂತೆಗಳು ಸೇರಬೇಕಾದರೆ ಸೆಟ್ಟಿವರ್ತಕರ ಸಹಕಾರ ತೀರ ಅಗತ್ಯ. ಈ ಪ್ರದೇಶದ ಶಾಸನಗಳಲ್ಲಿ ಸೆಟ್ಟಿವರ್ತಕರ ಹೆಸರುಗಳು ಉಲ್ಲೇಖಿತವಾಗಿವೆ. ಗುಮ್ಮಳಾಪುರದ ಶಾಸನವೊಂದರಲ್ಲಿ ಹಾಮ್‌ನಿಸೆಟ್ಟಿಯ ಮಗ ಪಟ್ಟಣಸ್ವಾಮಿ ಕರಡಿಸೆಟ್ಟಿಯ ಉಲ್ಲೇಖ ಬಂದಿದೆ. ಕ್ರಿ. ಶ. ೧೫೭೮ರ ಗಂಗನಹಳ್ಳಿ ಶಾಸನವು ನಾಗಮಂಗಲದ ವೀರಭದ್ರದೇವನ ಪ್ರಿಯಪುತ್ರರಾದ ಗುಮ್ಮಳಾಪುರದ ರಾಜಬೆವಹಾರಿಗಳ ಪ್ರಸ್ತಾಪವನ್ನು ಮಾಡುತ್ತದೆ. ಆಕ್ಕಲ ಚೆಂನಿಸೆಟ್ಟಿಯ ಪ್ರಸ್ತಾಪ ಗುಮ್ಮಳಾಪುರ ಹಾಗೂ ತಳಿಯ ಶಾಸನಗಳಲ್ಲಿ ಕಂಡುಬಂದಿದೆ. ಗಿರಿಸೆಟ್ಟಿಯ ಮಗ ಚಿಕ್ಕಣ್ಣಸೆಟ್ಟಿಯ ಉಲ್ಲೇಖ ಚಿಕ್ಕಮದ ಗೊಂಡಹಳ್ಳಿ ಶಾಸನದಲ್ಲಿದೆ.

ಧರ್ಮಪುರಿ, ನೊಳಂಬರ ಕಾಲದಲ್ಲಿ ಬಹಳ ಪ್ರಸಿದ್ಧಿಯನ್ನು ಪಡೆದ ವಾಣಿಜ್ಯ ಕೇಂದ್ರವಾಗಿದ್ದಿತು. ಅಲ್ಲಿನ ಶಾಸನಗಳಲ್ಲಿ ಅನೇಕ ವರ್ತಕರ ಉಲ್ಲೇಖಗಳು ಕಂಡು ಬಂದಿವೆ. ಮೆಳಸು (ಮೆಣಸು), ಎಲೆ, ಮುಂತಾದ ಪದಾರ್ಥಗಳ ಮೇಲಿನ ಸುಂಕವನ್ನು ದೇವದಾನವಾಗಿ ದತ್ತಿ ಬಿಟ್ಟಿರುವ ಉಲ್ಲೇಖಗಳಿಂದಲೂ, ವೀಸ, ಚಮರಿಯಮಳವೆ, ಸೇಱು, ಕಟ್ಟು ಮುಂತಾದ ಅಳತೆಯ ಮಾನಗಳ ಪ್ರಸ್ತಾಪದಿಂದಲೂ ಅಂದಿನ ವಾಣಿಜ್ಯ ಪದಾರ್ಥಗಳು ಮತ್ತು ಅವುಗಳ ವಿನಿಮಯಕ್ಕಾಗಿ ಬಳಸುತ್ತಿದ್ದ ಮಾನಗಳ ಬಗ್ಗೆ ಅರಿವುಂಟಾಗುತ್ತದೆ.

'ಹೊನ್ನು' ವಿಜಯನಗರ ಕಾಲದ ಶಾಸನಗಳಲ್ಲಿ ಕಂಡುಬರುವ ಒಂದು ಮುಖ್ಯ ನಾಣ್ಯವಾಗಿದೆ. ಮೈಸೂರು ಅರಸರ ಶಾಸನಗಳಲ್ಲಿ ವರಹ, ರಾಜಗೋಪಾಲ ವರಹ, ರಾಜಗೋಪಾಲ-ಚಕ್ರ ವರಹ ಎಂಬ ನಾಣ್ಯಗಳು ಉಕ್ತವಾಗಿವೆ.

ಕಾಣಿಯಾಚಿ, ಅಳ್ಳು, ಅಡಿಕಾಸು, ಕಾಣಿಕೆ, ಸುವರ್ಣಾದಾಯ, ಸಮು ದಾಯ, ಬಂಡಿವಣ ಮುಂತಾದ ಸುಂಕ/ಕರಗಳು ಶಾಸನೋಕ್ತವಾಗಿವೆ. ಭೂಮಿ ಯನ್ನು ಖಣ್ಡುಗ ಎಂಬ ಬೀಜವರಿ ಪ್ರಮಾಣದಲ್ಲಿ ಗಣಿಸುತ್ತಿದ್ದರು.

ಈ ಗಡಿನಾಡಿನಲ್ಲಿ ಕ್ರಿ. ಶ. ೮-೯ನೆ ಶತಮಾನದಿಂದ ೨೦ನೇ ಶತಮಾನದ ವರೆಗಿನ ಅವಧಿಗೆ ಸೇರಿದ ನೂರಕ್ಕು ಹೆಚ್ಚು ಕನ್ನಡ ಶಾಸನಗಳು ಶೋಧನೆಯಾಗಿ ದ್ದರೂ, ಕೇವಲ ಕೈಬೆರಳೆಣಿಕೆಯಷ್ಟು ಶಾಸನಗಳ, ಪೂರ್ಣಪಾಠಗಳು ಮಾತ್ರ ಈವರೆಗೂ ಪ್ರಕಟವಾಗಿವೆ. ಉಳಿದ ಶಾಸನಗಳ ಪಾಠಗಳು, ಹಾಗೂ ಈ ಪ್ರದೇಶ ದಲ್ಲಿ ಇನ್ನೂ ಶೋಧವಾಗದೆಯಿರುವ ಶಾಸಪಗಳ ಅನ್ವೇಷಣಾ ಕಾರ್ಯ ತ್ವರಿತ ವಾಗಿ ಆಗಬೇಕಾದ ಕೆಲಸವಾಗಿದೆ. ಹೀಗಾದಲ್ಲಿ ಮಾತ್ರ ಈ ಗಡಿನಾಡಿನ ನೈಜ ವಾದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಮಹತ್ವ ಇನ್ನೂ ಹೆಚ್ಚು ನಿಖರವಾಗಿ ತಿಳಿ ಯಲು ಸಾಧ್ಯವಾಗುತ್ತದೆ. ಕರ್ನಾಟಕದ ಪ್ರಮುಖ ರಾಜಮನೆತನಗಳಾದ ಗಂಗ, ಬಾಣ, ನೊಳಂಬ, ಹೊಯ್ಸಳ, ವಿಜಯನಗರ ಮತ್ತು ಮೈಸೂರು ಅರಸರುಗಳ ಶಾಸನಗಳೇ ಪ್ರಧಾನವಾಗಿರುವ ಈ ಗಡಿನಾಡಿನ ರಾಜಕೀಯ, ಸಾಂಸ್ಕೃತಿಕ ಅಂಶ ಗಳನ್ನು ಕುರಿತು ಈ ಅವಲೋಕನವು ಈ ಪ್ರದೇಶ ಹಿಂದೊಮ್ಮೆ ಕರ್ನಾಟಕದ ಅವಿ ಭಾಜ್ಯ ಅಂಗವೇ ಆಗಿದ್ದಿತೆಂಬ ಅಂಶವನ್ನು ದೃಢಪಡಿಸುತ್ತದೆ.

ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ಚೋಳರ ಆಕ್ರಮಣ ನಡೆದು ಸುಮಾರು ಒಂದು ನೂರು ವರ್ಷಗಳಿಗೂ ಹೆಚ್ಚು ಕಾಲ ಪರಾಧೀನವಾಗಿದ್ದ ಈ ಪ್ರದೇಶವನ್ನು, ದಕ್ಷಿಣ ಮಧ್ಯ ಕರ್ನಾಟಕದಲ್ಲಿ ತಲೆಯೆತ್ತಿದ ಹೊಯ್ಸಳರು ಚೋಳರನ್ನು ಓಡಿಸುವುದರ ಮೂಲಕ ಮುಕ್ತಗೊಳಿಸಿದರು. ಮುಂದೆ ಕರ್ನಾಟಕಾ ಧೀಶರೆನಿಸಿದ ವಿಜಯನಗರ ಸಾಮ್ರಾಟರ ಮತ್ತು ಮೈಸೂರು ಒಡೆಯರ, ಹೈದರ್, ಟಿಪ್ಪುರವರ ಆಳಿಕೆ ಅವಿರತವಾಗಿ ಈ ಪ್ರದೇಶದಲ್ಲಿ ನಡೆದಿರುವುದನ್ನು ಶಾಸನಗಳು ದೃಢಪಡಿಸಿವೆ. ಮೈಸೂರಿನ ಹುಲಿಯೆನಿಸಿದ್ದ ಟಿಪ್ಪು ಬ್ರಿಟಿಷ ರೊಡನೆ ನಡೆದ ಹೋರಾಟದಲ್ಲಿ ಮಡಿದಾಗ, ಬ್ರಿಟಿಷರು ಮತ್ತು ಮೈಸೂರು ಅರಸು ಮನೆತನದವರ ಮಧ್ಯೆ ಏರ್ಪಟ್ಟ ಒಪ್ಪಂದದಿಂದಾಗಿ ಶತಶತಮಾನಗಳ ಕಾಲ ದಿಂದಲೂ ಅಚ್ಚಗನ್ನಡ ಪ್ರದೇಶವಾಗಿ ಕರ್ನಾಟಕದ ಅವಿಭಾಜ್ಯ ಅಂಗವಾಗಿದ್ದ ಈ ಸಹಜ ಕನ್ನಡ ಪ್ರದೇಶ ರಾಜಕೀಯವಾಗಿ ಬೇರ್ಪಟ್ಟಿತು. ಹೀಗೆ ಬೇರ್ಪಟ್ಟ ಪ್ರದೇಶ ಮುಂದೆ ಭಾರತಕ್ಕೆ ಸ್ವಾತಂತ್ರ್ಯ ಬಂದು ಭಾಷಾವಾರು ಪ್ರಾಂತ್ಯಗಳು ರಚನೆಯಾದಾಗಲೂ, ಕರ್ನಾಟಕದ ಹೊರಗೇ ಉಳಿಯಿತು.

ಈ ಪ್ರದೇಶದ ಸ್ಥಳನಾಮಗಳು, ವ್ಯಕ್ತಿನಾಮಗಳು ಮತ್ತು ಪ್ರಚಲಿತವಿರುವ

ಜಾನಪದ ಆಚರಣೆಗಳು ಇಂದಿಗೂ ಬಹಳಷ್ಟು ಮಟ್ಟಿಗೆ ಕನ್ನಡ ಮೂಲದವಾಗಿದ್ದು ಅವುಗಳ ಪ್ರತ್ಯೇಕ ಅಧ್ಯಯನ ನಡೆಯಬೇಕಾದ ಅಗತ್ಯವಿದೆ.

## ಮುಖ್ಯ ಆಧಾರಗ್ರಂಥಗಳು


೧. Rangacharya, V.–*A Topographical List of the Inscriptions of the Madras presidency*. Vol-1 to 3, Madras, 1919

೨. *Annual Reports on South India/Indian Epigraphy*, 1927 onwards

೩. *South Indian Inscriptions*, Vols, VII, IX

೪. *Epigraphia Indica*, Vols, X, XXVII

೫. *Jaina Inscriptions in Tamilnadu*, (Ed). Dr. Ekambara nathan & C. K. Shivaprakasham, Madras, 1987

೬. *Journal of the Epigraphical Society of India*, Vol, V Mysore 1978

೭. Dr. Krishna Murthy M. S. -*The Nolambas*, Mysore, 1980

೮. ಡಾ॥ ಸಾಲೆತೊರ್, ಬಿ. ಎ. -ಕನ್ನಡನಾಡಿನ ಚರಿತ್ರೆ (ಮೊದಲನೆ ಭಾಗ) ಬೆಂಗಳೂರು, (೬ನೇ ಮುದ್ರಣ) ೧೯೭೩

೯. ಮುಮ್ಮಡಿ ಕೃಷ್ಣರಾಜ ಒಡೆಯರು-ಮೈಸೂರು ಸಂಸ್ಥಾನದ ಪ್ರಭುಗಳು, ಶ್ರೀ ಮನ್ಮಹಾರಾಜರವರ ವಂಶಾವಳಿ

೧೦. ವಾಸುದೇವರಾವ್ ಎಂ.-ರಾಜಕೇಸರಿ ಶ್ರೀ ಪುರುಷ, ಬೆಂಗಳೂರು, ೧೯೭೫

೧೧. ಇತಿಹಾಸ ದರ್ಶನ, ಸಂಪುಟ- ೫/೧೯೯೦ (ಸಂ) ಡಾ॥ ಸೂರ್ಯನಾಥ ಕಾಮತ್, ಲಕ್ಷ್ಮಣ್ ತೆಲಗಾವಿ

೧೨. Madras District Manuals-Salem District Vol. I & II

೧೩. ಶರಣ ಸಾಹಿತ್ಯ ಸಂಪುಟ ೨೧, ಸಂಚಿಕೆ ೨, ೩

ಡಾ|| ಎಚ್. ಎಸ್. ಗೋಪಾಲರಾವ್

# ಬಳ್ಳಿಗಾವೆ : ಪ್ರಾಚೀನ ವಿದ್ಯಾಕೇಂದ್ರದ ಗುರು ಪರಂಪರೆ

ಶೈವ, ಜೈನ ಮತ್ತು ಬೌದ್ಧ ಧರ್ಮಗಳ ಪ್ರಮುಖ ಕೇಂದ್ರವಾಗಿ ಮಾತ್ರವಲ್ಲದೆ ಪ್ರಮುಖ ಪ್ರಾಚೀನ ವಿದ್ಯಾ ಕೇಂದ್ರವಾಗಿಯೂ ಬಳ್ಳಿಗಾವೆಯು ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ವಿಶಿಷ್ಟಸ್ಥಾನ ಪಡೆದಿದೆ. ಬಲಿಪುರ, ಬಲಿನಗರ, ಬಳ್ಳಿಗ್ರಾಮ, ಬಳ್ಳಿಗಾವೆ ಎಂದೆಲ್ಲಾ ಕರೆಯಲ್ಪಟ್ಟ ಬಳ್ಳಿಗಾವೆಯು ಬಹುಮುಖ್ಯ ಕಾಳಾಮುಖ ಕೇಂದ್ರವೂ ಆಗಿತ್ತು. ಸಾಮಾನ್ಯವಾಗಿ ಕಾಳಾಮುಖ ಕೇಂದ್ರಗಳೆಲ್ಲವೂ ವಿದ್ಯಾಕೇಂದ್ರಗಳಾಗಿರುತ್ತಿದ್ದುದು ತಿಳಿದಿರುವ ವಿಷಯ.

ಕ್ರಿ. ಶ. ೧೦೩೬ ರ ವೇಳೆಗಾಗಲೇ ಬಳ್ಳಿಗಾವೆಯಲ್ಲಿ ವಿದ್ಯಾರ್ಥಿ ತಪಸ್ವಿಗಳಿದ್ದರು. ಕಾಳಾಮುಖ ಬ್ರಹ್ಮಚಾರಿಸ್ಥಾನ ವೆಂದು ಪ್ರಸಿದ್ಧ ಪಡೆದಿದ್ದ ವಿದ್ಯಾಸ್ಥಾನದ ಗುರುಗಳಾಗಿ ಲಕುಳೀಶ್ವರ ಪಂಡಿತರಿದ್ದರು. ನಂತರದ ಕಾಲದ ಅನೇಕ ಶಾಸನಗಳು ಬಳ್ಳಿಗಾವೆಯ ವಿದ್ಯಾರ್ಥಿ ತಪೋಧನರ ಆಹಾರ ಕ್ಕೆಂದು ದೊರೆತ ದಾನವನ್ನು ಉಲ್ಲೇಖಿಸಿವೆ. ದಕ್ಷಿಣ ಕೇದಾರ ಸ್ಥಾನವೆಂದು ಪ್ರಸಿದ್ಧವಾದ ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯವೇ ಅಲ್ಲದೆ ನಖರೇಶ್ವರ ದೇವಾಲಯವೂ ಒಂದು ಪ್ರಮುಖ ವಿದ್ಯಾಸ್ಥಾನವಾಗಿತ್ತು.

ಬಳ್ಳಿಗಾವೆಯಲ್ಲಿ ಅನೇಕ ದೇವಾಲಯಗಳಿದ್ದುವು ; ಪಂಚಮಠಗಳಿದ್ದುವು. ಅವುಗಳಲ್ಲಿ ಪ್ರಖ್ಯಾತವಾಗಿದ್ದುದು ಕೋಡಿಯ ಮಠ. ದಕ್ಷಿಣ ಕೇದಾರಸ್ಥಾನವೆಂದು ಹೆಸರು ಪಡೆದಿದ್ದ ಕೇದಾರೇಶ್ವರ ದೇವಾಲಯಕ್ಕೆ ಹೊಂದಿಕೊಂಡಂತಿದ್ದ

ಕೋಡಿಯ ಮಠವು ನೈಷ್ಠಿಕ ಬ್ರಹ್ಮಚರ್ಯ ಶಿವಮುನಿಜನಾನುಷ್ಠಾನ ಸ್ಥಾನವೂ ಆಗಿದ್ದು, ಋಗ್, ಯಜುರ್, ಸಾಮ ಮತ್ತು ಅಥರ್ವ ವೇದಗಳ ಸ್ವಾಧ್ಯಾಯ ಸ್ಥಾನವಾಗಿತ್ತು. ಅಲ್ಲಿ ನ್ಯಾಯ, ವೈಶೇಷಿಕ, ಮೀಮಾಂಸಾ, ಸಾಂಖ್ಯ, ಬೌದ್ಧ ಇತ್ಯಾದಿ ಷಡ್ದರ್ಶನಗಳನ್ನೂ, ಕೌಮಾರ, ಪಾಣಿನೀಯ, ಶಾಕಟಾಯನ, ಶಬ್ದಾನು ಶಾಸನ ಇತ್ಯಾದಿ ವ್ಯಾಕರಣಗಳನ್ನೂ, ಲಾಕುಳ ಸಿದ್ಧಾಂತ, ಪಾತಂಜಲ ಇತ್ಯಾದಿ ಯೋಗಶಾಸ್ತ್ರಗಳನ್ನೂ, ಅಷ್ಟಾದಶ ಪುರಾಣ, ಧರ್ಮಶಾಸ್ತ್ರ, ಕಾವ್ಯ, ನಾಟಕ, ನಾಟಕಾ ಇತ್ಯಾದಿ ವಿವಿಧ ವಿದ್ಯೆಗಳನ್ನು ವ್ಯಾಖ್ಯಾನದ ಮೂಲಕ ಬೋಧಿಸಲಾಗು ತ್ತಿತ್ತು. ಅಲ್ಲಿ ವಿದ್ಯಾದಾನದ ಜೊತೆಗೆ ಅನ್ನದಾನ ಮತ್ತು ಭೈಷಜ್ಯದಾನಗಳಿಗೂ ಅವಕಾಶವಿತ್ತು. ದೀನ, ಅನಾಥ, ಪಂಗು, ಅಂಧ, ಬಧಿರ, ಕಥಕ, ಗಾಯಕ, ವಾಚಕ, ವಾಂಶಿಕ, ನರ್ತಕ, ವೈತಾಳಿಕ, ನಗ್ನ, ಭಗ್ನ, ಕ್ಷಪಣಕ, ಏಕದಂಡಿ, ತ್ರಿದಂಡಿ, ಹಂಸ, ಪರಮಹಂಸ ಇತ್ಯಾದಿ ವಿವಿಧ ವರ್ಗಗಳ ಜನರ ಅನಿವಾರ್ಯದ ಅನ್ನದಾನ ಸ್ಥಾನವಾಗಿದ್ದ ಕೋಡಿಯ ಮಠವು ಅನಾಥ ರೋಗಿಗಳಿಗೆ ಭೈಷಜ್ಯ ಸ್ಥಾನವೂ ಆಗಿತ್ತು.

ವಿದ್ಯಾಸ್ಥಾನಗಳಾಗಿದ್ದ ದೇವಾಲಯಗಳಲ್ಲಿ ಬೋಧನೆ ಮಾಡುತ್ತಿದ್ದವರ ತಪೋಧನರು. ಕಲಿಯುತ್ತಿದ್ದ ಹಿರಿಯ ವಿದ್ಯಾರ್ಥಿಗಳೇ ಕೆಲವು ಬಾರಿ ತಮಗಿಂತ ಕಿರಿಯ ವಿದ್ಯಾರ್ಥಿಗಳಿಗೆ ಕಲಿಸುತ್ತಲೂ ಇದ್ದರು. ಅಂತಹ ವಿದ್ಯಾರ್ಥಿ–ಉಪಾಧ್ಯಾ ಯರೇ ವಿದ್ಯಾರ್ಥಿ ತಪೋಧನರು. ವಿದ್ಯಾರ್ಥಿಗಳ ಮತ್ತು ತಪೋಧನರ ಊಟ, ವಸತಿ ಮತ್ತು ಉಡುಪುಗಳ ವ್ಯವಸ್ಥೆಗೆ ದಾನಿಗಳು ಹೇರಳದಾನ ನೀಡುತ್ತಿದ್ದರು.

ದೇವಸ್ಥಾನಕ್ಕೆ ಹೊಂದಿಕೊಂಡ ವಿದ್ಯಾಕೇಂದ್ರವೇ ಮಠ ; ಇದಕ್ಕೆ ಸಾಮಾನ್ಯ ವಾಗಿ ಧಾರ್ಮಿಕವಾಗಿಯೂ ಪ್ರಸಿದ್ಧಿ ಮತ್ತು ಮಹತ್ವಗಳಿದ್ದುವು. ಬಳ್ಳಿಗಾವೆಯಲ್ಲಿ ಪಂಚಮಠಗಳಿದ್ದುವು ಎಂದು ಶಾಸನಗಳಿಂದ ತಿಳಿದು ಬರುತ್ತದೆ. ಅವು ಹರಿ, ಹರ, ಕಮಳಾಸನ, ವೀತರಾಗ ಮತ್ತು ಬೌದ್ಧಾಲಯಗಳಿಗೆ ಹೊಂದಿಕೊಂಡ ಮಠಗಳಿರ ಎಂದು ಭಾವಿಸಬಹುದಾಗಿದೆ. ಶಾಸನಗಳ ಮೂಲಕವೇ ಪಿರಿಯಮಠ, ಪಿರಿಯಮು ಭೇರುಂಡೇಶ್ವರ, ಹಿರಿಯ ಮಠ ಶ್ರೀ ಜಗದೇಕಮಲ್ಲೇಶ್ವರ, ಪಂಚಲಿಂಗ, ತ್ರಿಪುರಾಂತಕ, ಕೇದಾರ ಅಥವಾ ಕೋಡಿಯ ಮಠ ಇತ್ಯಾದಿ ಮಠಗಳು ಬಳ್ಳಿಗಾವೆ ಯಲ್ಲಿದ್ದ ವಿಷಯ ತಿಳಿಯುತ್ತದೆ.

ಮಠಗಳ ಆಚಾರ್ಯರಾಗಿದ್ದ ಗುರುಗಳು ದೇವಸ್ಥಾನಗಳ ಆಡಳಿತ ನಿರ್ವಹಣೆ ಯನ್ನೂ ಮಾಡಿಕೊಂಡು ವಿದ್ಯಾಸ್ಥಾನಗಳ ಮುಖ್ಯಸ್ಥರಾಗಿಯೂ ಇರುತ್ತಿದ್ದರು.

ಇವರೇ ಕ್ರಮೇಣ ಸ್ಥಾನಪತಿ, ಸ್ಥಾನಾಧಿಪತಿ, ಮಹಾಸ್ಥಾನಾಧಿಪತಿ ಇತ್ಯಾದಿ ಹೆಸರುಗಳಿಂದ ಗುರುತಿಸಲ್ಪಟ್ಟಿದ್ದಾರೆ. ದೇವಾಲಯುಗಳ ಮತ್ತು ಅದಕ್ಕೆ ಹೊಂದಿಕೊಂಡ ಎಲ್ಲಾ ಘಟಕಗಳ ಆಡಳಿತಾತ್ಮಕ ಜವಾಬ್ದಾರಿಯನ್ನು ಹೊತ್ತವನೇ ಸ್ಥಾನಪತಿ. ಒಂದು ದೇವಸ್ಥಾನಕ್ಕೆ ಅಥವಾ ಹಲವು ದೇವಸ್ಥಾನಗಳ ಸಂಕೀರ್ಣಕ್ಕೆ ಒಬ್ಬ ಸ್ಥಾನಪತಿ ಇರುತ್ತಿದ್ದನು. ಕೇವಲ ಮಠದ ಅಧಿಕಾರವನ್ನು ಮಾತ್ರ ಒಪ್ಪಿಕೊಂಡವನು 'ಮಠಪತಿ' ಎನಿಸಿಕೊಳ್ಳುತ್ತಿದ್ದ. ಬಳ್ಳಿಗಾವೆಯ ಕ್ರಿ. ಶ. ೧೧೮೯ ರ ಒಂದು ಶಾಸನವು ವಿದ್ಯಾಭರಣ ಮತ್ತು ವಾಮಶಕ್ತಿ ಎಂಬಿಬ್ಬರು ಗುರುಗಳ ಪ್ರಸ್ತಾಪ ಮಾಡುತ್ತಾ ವಿದ್ಯಾಭರಣನು ವಿದ್ಯಾಭರಣ ವ್ಯಾಸಂಗಕ್ಕೆ ಇಚ್ಛಿಸಿದ್ದರಿಂದ ವಾಮಶಕ್ತಿ ಎನಿಸಿದ ವಾಮಶಕ್ತಿ ಮುನಿಯನ್ನು ಮಠವ್ಯಾಸಂಗಕ್ಕಾಗಿ ನಿಯೋಜಿಸಲಾಯಿತು ಎಂದು ತಿಳಿಸುತ್ತದೆ. ವಾಮಶಕ್ತಿಯ ನಂತರ ಮತ್ತೆ ವಿದ್ಯಾಭರಣನ ಶಿಷ್ಯ ಗೌತಮಾಚಾರ್ಯನೇ ಮಠಾಧಿಪತಿಯಾಗಿರುವುದೂ ಶಾಸನಗಳಿಂದ ತಿಳಿಯುತ್ತದೆ. ಮಠ ಮತ್ತು ಶಾಲೆಗಳು ತಾತ್ವಿಕವಾಗಿ ಇಲ್ಲಿ ಬೇರೆ ಬೇರೆಯಾಗಿರುವುದನ್ನು ಗಮನಿಸಬಹುದು. ವಿದ್ಯಾಭರಣನು ಕೇವಲ ವ್ಯಾಸಂಗ ಮತ್ತು ಅದಕ್ಕೆ ಸಂಬಂಧ ಪಟ್ಟ ಶಾಲೆಯ ಜವಾಬ್ದಾರಿ ಹೊತ್ತ. ವಾಮಶಕ್ತಿಯು ಮಠದ ಜವಾಬ್ದಾರಿಯನ್ನೊಪ್ಪಿಕೊಂಡ. ಹೀಗೆ ಮಠ ಮತ್ತು ಶಾಲೆಯ ಜವಾಬ್ದಾರಿಗಳು ಪ್ರತ್ಯೇಕವಾದದ್ದು ಬಳ್ಳಿಗಾವೆಯ ಪೂರ್ವೋಲ್ಲೇಖಿತ ಶಾಸನದಿಂದ ಸ್ಪಷ್ಟವಾಗಿದೆ. ಬಳ್ಳಿಗಾವೆಯ ಯಾವ ದೇವಾಲಯ, ಮಠ ಅಥವಾ ವಿದ್ಯಾಲಯದ ಮುಖ್ಯಸ್ಥನನ್ನೂ ಶಾಸನಗಳು ಸ್ಥಾನಪತಿ ಅಥವಾ ಸ್ಥಾನಾಧಿಪತಿ ಇತ್ಯಾದಿ ಹೆಸರುಗಳಿಂದ ಗುರುತಿಸಿಲ್ಲ. ಬದಲಿಗೆ ಆಚಾರ್ಯ ಎಂದು ಗುರುತಿಸಲಾಗಿದೆ.

ಪ್ರಸ್ತುತ ಲೇಖನದಲ್ಲಿ ಬಳ್ಳಿಗಾವೆಯ ಶೈವ ಗುರುವರ್ಗವನ್ನು ಮಾತ್ರ ಗುರುತಿಸಲು ಪ್ರಯತ್ನಿಸಲಾಗಿದೆ. ಬಳ್ಳಿಗಾವೆಯ ಶೈವ ಗುರುಗಳೆಲ್ಲರೂ ಕಾಳಾಮುಖರು. ಪರ್ವತಾವಳಿಯ ಮೂವರಕೋಣೆಯ ಸಂತತಿಯ, ಶಕ್ತಿಪರ್ಷೆಗೆ ಸೇರಿದವರು. ಕಾಳಾಮುಖ ಗುರುಗಳನ್ನು ಸಾಮಾನ್ಯವಾಗಿ ಶಾಸನಗಳು 'ತಪೋಧನ'ರು ಎಂದೇ ಸಂಬೋಧಿಸುತ್ತವೆ. ಅವರು ವಿದ್ಯಾದಾನ ಮತ್ತು ಅನ್ನದಾನಗಳಿಗೆ ವಿಶೇಷ ಪ್ರಾಶಸ್ತ್ಯ ನೀಡಿದ್ದವರು. ದೇವಾಲಯುಗಳಲ್ಲಿ ಸಾಮಾನ್ಯವಾಗಿ ಕಾಳಾಮುಖ ಗುರುಗಳೇ ಸ್ಥಾನಪತಿಗಳಾಗಿಯೂ ಇರುತ್ತಿದ್ದರು. ಬಳ್ಳಿಗಾವೆಯು ಪ್ರಖ್ಯಾತ ಸ್ವಾಧ್ಯಾಯ ಮತ್ತು ವ್ಯಾಖ್ಯಾನ ಸ್ಥಾನವಾಗಿದ್ದುದರಿಂದ ಅಲ್ಲಿ ವಿದ್ಯೆಗೆ ಪ್ರಾಶಸ್ತ್ಯವಿತ್ತು. 'ಮೂವರಕೋಣೆಯ ಸಂತತಿ'ಯವರೆಂದರೆ 'ತ್ರೈಪುರುಷ ದೇವಾಲಯು'ಗಳಿಗೆ ಸಂಬಂಧಿಸಿದವರೆಂದು ಒಂದು ಊಹೆ. ತ್ರೈಪುರುಷ ದೇವಾಲಯಗಳಿಗೂ ವಿದ್ಯಾಭ್ಯಾಸಕ್ಕೂ ನಿಕಟ ಸಂಪರ್ಕವಿದೆ. ಬಹುತೇಕ ತ್ರೈಪುರುಷ ದೇವಾಲಯಗಳು ವಿದ್ಯಾಕೇಂದ್ರಗಳಾಗಿ ಘಟಿಕಾಸ್ಥಾನಗಳಾಗಿಯೇ ಕಾರ್ಯನಿರ್ವಹಿಸಿವೆ.

ಆದ್ದರಿಂದ ಬಳ್ಳಿಗಾವೆಯಲ್ಲಿದ್ದ ಮೂವರ ಕೋಣೆಯ ಸಂತತಿಯ ಗುರುಗಳು ಸಹಜ ವಾಗಿ ವಿದ್ಯಾ ವ್ಯಾಸಂಗಕ್ಕೆ ಒಲಿದಿರಬೇಕು.

ಬಳ್ಳಿಗಾವೆಯ ಕೆಲವು ಶಾಸನಗಳು ಪಿರಿಯಮಠ ಅಥವಾ ಹಿರಿಯಮಠ ವನ್ನು ಉಲ್ಲೇಖಿಸಿವೆ. ಈ ಹಿರಿಯಮಠವು ಯಾವುದುಎಂದು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಭೇರುಂಡೇಶ್ವರ ಮತ್ತು ಜಗದೇಕ ಮಲ್ಲೇಶ್ವರ ವನ್ನೂ ಹಿರಿಯ ಮಠ ಎಂದೇ ಕೆಲವು ಶಾಸನಗಳು ದಾಖಲಿಸಿವೆ. ಹಿರಿಯ ಮಠದ ಗುರುಪರಂಪರೆಯನ್ನು ಶಾಸನಗಳ ಮೂಲಕ ಕೆಳಕಂಡಂತೆ ಗುರುತಿಸಲಾಗಿದೆ. ಹಿರಿಯಮಠವೇ ಬಳ್ಳಿಗಾವೆಯ ಮೂಲಸ್ಥಾನ. ಇಲ್ಲಿನ ಗುರುಪರಂಪರೆಯು ತಮ್ಮನ್ನು ತಾವು ಮೂಲಿಗರು ಎಂದೇ ಗುರುತಿಸಿಕೊಂಡಿದ್ದಾರೆ. ಹಿರಿಯ ಮಠದ ಮೂಲಸ್ಥಾನದ ಗುರು ಪರಂಪರೆ ಕೆಳಕಂಡಂತಿದೆ.

೧) ಮೂಲಿಗ ಶಿವಶಕ್ತಿಪಂಡಿತ (ಕ್ರಿ. ಶ. (೧೦೯೯)



೨) ಪಟ್ಟಣದ ಮೂಲಿಗ ಜ್ಞಾನಶಿವದೇವ (ಕ್ರಿ. ಶ. ೧೦೫೪)



೩) ಮೂಲಿಗ ಮಧುಕೇಶ್ವರ ಪಂಡಿತದೇವರ ಮಗ ಧರ್ಮಶಿವದೇವ (ಕ್ರಿ. ಶ. ೧೦೫೪)



೪) ಮೂಲಿಗ ಹೊಂನೆಯ ಜೀಯ (ಕ್ರಿ. ಶ. ೧೦೯೮)



೫) ಮೂಲಿಗ ಪೊನ್ನೆಯ ಜೀಯ (ಕ್ರಿ. ಶ. ೧೧೧೩)



೬) ಆಚಾರ್ಯ ಶಾನ್ತ ಶಿವಪಂಡಿತ (ಕ್ರಿ. ಶ. ೧೧೧೩)



೭) ಮೂಲಿಕ ಮಧುಕೇಶ್ವರ ಪಂಡಿತ (ಕ್ರಿ. ಶ. ೧೧೫೯)



೮) ಮೂಲಿಗ ಧರ್ಮಶಿವದೇವರು (ಕ್ರಿ. ಶ. ೧೧೮೧)

ಹಿರಿಯಮಠವು ಬಳ್ಳಿಗಾವೆಯ ಮೂಲಸ್ಥಾನವಾಗಿದ್ದು, ಅಲ್ಲಿಯ ಆಚಾರ್ಯ ರನ್ನು ಮೂಲಸ್ಥಾನದವರೆಂಬ ಕಾರಣದಿಂದಾಗಿ ಮೂಲಿಗರು ಎಂದು ಸಂಬೋಧಿಸಿರು ವಂತಿದೆ. ಒಂದು ಶಾಸನವು ಭೇರುಂಡೇಶ್ವರವನ್ನೇ ಹಿರಿಯಮಠ ಎಂದು ಅನುಮಾನಿಸಲು ಅವಕಾಶ ನೀಡುತ್ತದೆ. ಕ್ರಿ. ಶ. ೧೦೫೪ ರಲ್ಲಿ ಹಿರಿಯ ಮಠ

ಮತ್ತು ಹಿರಿಯ ಮಠ ಭೇರುಂಡೇಶ್ವರ ಎರಡರಲ್ಲೂ ಆಚಾರ್ಯರಾಗಿದ್ದವರು ಮಧುಕೇಶ್ವರ ಪಂಡಿತರು ಮತ್ತು ಕ್ರಿ.ಶ. ೧೧೮೨ ರಲ್ಲಿ ಭೇರುಂಡೇಶ್ವರದ ಆಚಾರ್ಯ ರಾಗಿದ್ದವರು ಮೂಲಿಗ ಪಾದಶಿವವೇವರು, ಆದ್ದರಿಂದ ಭೇರುಂಡೇಶ್ವರವನ್ನೇ ಹಿರಿಯಮಠ ಎಂದು ತಿಳಿಯಬಹುದು. ಶಾಸನಗಳಿಂದ ತಿಳಿದು ಬಂದಿರುವಂತೆ ಭೇರುಂಡೇಶ್ವರದ ಗುರುಪರಂಪರೆಯು ಹೀಗಿದೆ.

೧) ಅನನ್ತ ಶಿವಾಚಾರ್ಯ (ಕ್ರಿ. ಶ. ೧೦೪೭)



೨) ಮಧುಕೇಶ್ವರ ಪಂಡಿತ (ಕ್ರಿ. ಶ. ೧೦೫೪)



೩) ಗೌಳ ಪಂಡಿತ (ಕ್ರಿ. ಶ. ೧೦೯೮)



೪) ಮೂಲಿಗ ಪಾದಶಿವದೇವ (ಕ್ರಿ. ಶ. ೧೧೮೨)

ಪಂಚಲಿಂಗ ಮಠದ ಗುರುಪರಂಪರೆಯು ಕೆಳಗಿನಂತಿದೆ.

೧) ಸರ್ಬೇಶ್ವರ (ಕ್ರಿ. ಶ. ೧೦೫೪)



೨) ಕಮಳಾಸನ ಪಂಡಿತ (ಕ್ರಿ. ಶ. ೧೦೭೮)



೩) ಶ್ರೀಕಂಠ ಪಂಡಿತ (ಕ್ರಿ. ಶ. ೧೦೯೮)



೪) ಕ್ರಿಯಾಶಕ್ತಿ ಪಂಡಿತ (ಕ್ರಿ. ಶ. ೧೧೧೩)



೫) ಸರ್ವೇಶ್ವರ ಪಂಡಿತ (ಕ್ರಿ. ಶ. ೧೧೫೯)



೬) ರುದ್ರಶಕ್ತಿ (ಕ್ರಿ. ಶ. ೧೧೮೧)

ತ್ರಿಪುರಾಂತಕ ದೇವರಮಠದ ಗುರು ಪರಂಪರೆಯನ್ನು ಶಾಸನಗಳ ಆಧಾರ ದಿಂದ ಹೀಗೆ ಗುರುತಿಸಬಹುದು.

೧) ಜ್ಞಾನಶಕ್ತಿ (ಕ್ರಿ. ಶ. ೧೦೫೪)



೨) ಚತುರಾನನ ಪಂಡಿತ (ಕ್ರಿ. ಶ. ೧೦೯೮)



೩) ಕ್ರಿಯಾಶಕ್ತಿ ಪಂಡಿತ (ಕ್ರಿ. ಶ. ೧೧೧೩)



೪) ಜ್ಞಾನಶಕ್ತಿ ಪಂಡಿತ (ಕ್ರಿ. ಶ. ೧೧೫೯)

ಸರ್ವೇಶ್ವರ ದೇವರ ಮಠದ ಗುರುಪರಂಪರೆಯು ಹೀಗಿತ್ತು.

೧) ಕಾಶ್ಮೀರ ದೇವ (?)



೨) ತ್ರಿಲೋಚನ (?)



೩) ವರೇಶ್ವರ ಪಂಡಿತ (ಕ್ರಿ. ಶ. ೧೦೯೬)

ಬಳ್ಳಿಗಾವೆಯಲ್ಲಿ ಬಹಳ ಪ್ರಖ್ಯಾತವಾದ ಕೋಡಿಯ ಮಠದ ಗುರು ಪರಂಪರೆಯು ಲಕುಳೀಶ್ವರನಿಂದ ಆರಂಭವಾಗುತ್ತದೆ. ಕಾಳಾಮುಖದ ಪ್ರಮುಖ ಗುರುಪರಂಪರೆಯನ್ನು ಇಲ್ಲಿ ಕಾಣಬಹುದು. ಕೋಡಿಯ ಮಠದ ವ್ಯಾಪ್ತಿಗೇ ನಖರೇಶ್ವರವೂ ಸೇರಿತ್ತು. ಕೋಡಿಯ ಮಠ ಅಥವಾ ಕೇದಾರ ಮಠದ ಗುರು ಪರಂಪರೆಯನ್ನು ಹೀಗೆ ಗುರುತಿಸಲಾಗಿದೆ.

೧) ಲಕುಳೀಶ್ವರ (ಕ್ರಿ. ಶ. ೧೦೩೬)



೨) ಕ್ರಿಯಾಶಕ್ತಿ (?)



೩) ಕೇದಾರ ಶಕ್ತಿ (?)



೪) ರುದ್ರಾಭರಣ (?)



೫) ವಾಲ್ಮೀಕಿ ?



೬) ಕೇದಾರಶಕ್ತಿ (?)



೭) ಶ್ರೀ ಕಂಠ ಪಂಡಿತ






ಸೋಮೇಶ್ವರ ಸೂರಿಗಳ ಶಿಷ್ಯ ವಿದ್ಯಾಭರಣನು ವಿದ್ಯಾಭರಣ ವ್ಯಾಸಂಗವನ್ನು ಮಾತ್ರ ಬಯಸಿ ಮಠ ವ್ಯಾಸಂಗವನ್ನು ಒಲ್ಲೆನೆಂದಾಗ ವಾಮಶಕ್ತಿ ಮುನಿಯನ್ನು ಮಠವ್ಯಾಸಂಗಕ್ಕೆ ನಿಯೋಜಿಸಿದಂತೆ ಶಾಸನವು ಸೂಚಿಸಿದೆ. ಇದರಿಂದ ವ್ಯಾಸಂಗದಲ್ಲಿ ಎರಡು ಪದ್ಧತಿಗಳು ಇದ್ದಂತೆ ತಿಳಿಯುತ್ತದೆ. ಅವುಗಳಲ್ಲಿ ಒಂದು ಮಠ ವ್ಯಾಸಂಗ ; ಮತ್ತೊಂದು ಶುದ್ಧ ವಿದ್ಯೆ. ಮಠ ವ್ಯಾಸಂಗವು ಆಡಳಿತಾತ್ಮಕ ವಿಷಯಗಳಿಗೆ ಒತ್ತು ಕೊಡುತ್ತಿತ್ತೆಂದು ಭಾವಿಸಬಹುದು.

ಬಳ್ಳಿಗಾವೆಯ ಪ್ರಾಚೀನ ಮಠವು ಹಿರಿಯ ಮಠ ಅಥವಾ ಭೇರುಂಡೇಶ್ವರ ವಾದರೂ (ಕ್ರಿ ಶ. ೧೦೯೯), ಕೇದಾರ ಮಠದ (ಕ್ರಿ. ಶ. ೧೦೩೬) ಗುರುಗಳು ಬಹಳ ಪ್ರಭಾವಶಾಲಿಗಳಾಗಿದ್ದರು. ಕ್ರಿ. ಶ. ಸು. ೧೦೩೬ ರಿಂದ ಕ್ರಿ. ಶ. ಸು. ೧೨ನೆಯ ಶತಮಾನದ ಅಂತ್ಯದವರೆಗೂ ದೀರ್ಘಕಾಲ ಬಳ್ಳಿಗಾವೆಯನ್ನು ಸಾಂಸ್ಕೃತಿಕ ವಾಗಿ ಮತ್ತು ಧಾರ್ಮಿಕವಾಗಿ ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದ ಕೇದಾರ ಮಠದ ಗುರುಗಳು, ಬಳ್ಳಿಗಾವೆಗೆ ಮಹತ್ವ ತಂದು ಕೊಟ್ಟರು.

ಮೇಲೆ ಉಲ್ಲೇಖಿಸಿದ ಗುರುಪರಂಪರೆಯಲ್ಲದೆ ಲಕ್ಷ್ಮಣೇಶ್ವರದ ಶಿವಪಂಡಿತ, ನಾರಸಿಂಹದೇವರ ಪೂರ್ಣಾನಂದ ಭಟ್ಟಾರಕ ಮತ್ತು ಹರಿಹರಾದಿತ್ಯರ ಗುಣಗಳ್ಳ ಯೋಗಿಗಳ ಹೆಸರನ್ನೂ ಶಾಸನಗಳು ಉಲ್ಲೇಖಿಸಿವೆ.

೦

ಆರ್. ವೆಂಕಟೇಶಮೂರ್ತಿ

# ಮಳೂರಿನ ಶಾಸನಗಳು-ಒಂದು ಸಾಂಸ್ಕೃತಿಕ ಅಧ್ಯಯನ

ಚನ್ನಪಟ್ಟಣ ತಾಲ್ಲೂಕಿನ ಮಳೂರು ಗ್ರಾಮವನ್ನು ಶಾಸನಗಳಲ್ಲಿ ಮಳವೂರು, ಮಳಲೂರು, ಮಣಲೂರು, ಇತ್ಯಾದಿಯಾಗಿ ಹೆಸರಿಸಲಾಗಿದೆ. ಇಲ್ಲಿ ಒಟ್ಟು ೫೬ ಶಾಸನ ಗಳಿದ್ದು, ಅವುಗಳಲ್ಲಿ ೪೦ ಶಾಸನಗಳು ಗ್ರಂಥ ಮತ್ತು ಅರವಕ್ಷರ ದಲ್ಲಿವೆ. ೧೬ ಶಾಸನಗಳು ಕನ್ನಡದ್ದಾಗಿವೆ.

ಕ್ರಿ. ಶ. ೧೦೦೦ ದಲ್ಲಿ ರಾಜ ರಾಜ ಚೋಳನ ಕಾಲದಲ್ಲಿ ಅಥವಾ ಅದಕ್ಕೂ ಸ್ವಲ್ಪ ಮುನ್ನ ಮಳೂರಿನ ಒಂದು ಭಾಗ ವನ್ನು "ದೊಡ್ಡಮಳೂರು" ಎನ್ನುವ ಅಗ್ರಹಾರವಾಗಿ ಮಾಡ ಲಾಗಿದೆ. ಇದಕ್ಕೆ ರಾಜೇಂದ್ರ ಸಿಂಹ ಚತುರ್ವೇದಿ ಮಂಗಲ ಎನ್ನುವ ಮತ್ತೊಂದು ಹೆಸರೂ ಕೂಡ ಇದೆ. ಇಲ್ಲಿನ 'ರಾಜೇಂದ್ರ ಸಿಂಹ ಈಶ್ವರಮುಡೈಯಾರ್' ದೇವಾಲಯದಲ್ಲಿ ರಾಜರಾಜನ ಸೇನಾಧಿಪತಿಯಾದ ಶಿವನಾಂನ ಗಂಡರಾದಿಟ್ಟ ಎಂಬುವನು ಉಮಾ ಮಹೇಶ್ವರ ಸಹಿತ 'ಗಂಡರಾದಿಟ್ಟ ವಿಡಂಗಾರ್' ಎಂಬ ದೇವರನ್ನು ಸ್ಥಾಪಿಸಿ, ಈ ದೇವರಿಗಾಗಿ ವಿಜಯಪಾಲನ್ ಎಂಬುವನಿಂದ ೧೨ ಗಚ್ಚಾಣಗಳಿಗೆ ಭೂಮಿ ಯನ್ನು ಕೊಂಡು ದಾನ ಮಾಡಿದ್ದಾನೆ.[1]

ಗ್ರಾಮಾಧಿಕಾರಿ ಇವ್ವಾಯ್ಯಿಕೊಣ್ಣೆಯ ಎಂಬುವನು ಆಲ್ಲಿನ ಸಭಾಸದಸ್ಯರಿಂದ ಭೂಮಿಯನ್ನು ಕೊಂಡು

---

1. ಎ. ಕ.—ಸಂಖ್ಯೆ 92

ಶ್ರೀ ಕೈಲಾಸ ಮುಡೈಯ ಪರಮಸ್ವಾಮಿಗಳ್' ದೇವರಿಗೆ ದೀಪಕ್ಕಾಗಿ ದಾನ ನೀಡಿದ್ದಾನೆ. ಎಂಬುದು ಕ್ರಿ. ಶ. ೧೧೧೪ರ ಶಾಸನದಿಂದ ತಿಳಿದು ಬರುತ್ತದೆ.[2] ಅಲ್ಲದೆ ಈ ಭೂಮಿಯನ್ನು ಮೇಲ್ಕಂಡ ದೇವರ ಪೂಜಾರಿಗಳಿಗೆ ನೀಡಿ ಈ ಭೂಮಿಯನ್ನು ಪೂರ್ತಿಯಾಗಿ ಅನುಭವಿಸಿಕೊಂಡು ಇಷ್ಟವಾದಂಥ ಬೆಳೆಯನ್ನು ಬೆಳೆದುಕೊಳ್ಳಬಹುದು. ಆದರೆ ದೇವರ ದೀಪಕ್ಕಾಗಿ ಪ್ರತಿದಿನ ಎಣ್ಣೆಯನ್ನು ಒದಗಿಸಲೇಬೇಕು ಎಂಬ ನಿಬಂಧನೆಯನ್ನೂ ಹಾಕಿದ್ದಾನೆ.

ಪುಲಿಯೂರ್‌ನ ಮುಖ್ಯಸ್ಥನಾದ ವಿಂಗಳಕೂಟ್ಟನ್ ಎಂಬುವನು ರಾಜೇಂದ್ರ ಸಿಂಹ ಈಶ್ವರ ದೇವಾಲಯದಲ್ಲಿ ಪ್ರತಿಷ್ಠಾಪಿಸಿದ 'ಆಡವಳ ರಾಜೇಂದ್ರ ಶೋಳ ಸಿಂಗರ್' ದೇವರಿಗೆ ಮತ್ತು ಅದರ ಜೊತೆಯಲ್ಲಿರುವ ದೇವರಿಗೆ ಎಲ್ಲಾ ತೆರಿಗೆಗಳನ್ನು ಮನ್ನಾ ಮಾಡಿದ ಭೂಮಿಯನ್ನು ನೀಡಿ ನೈವೇದ್ಯಕ್ಕಾಗಿ ಅಕ್ಕಿ, ತರಕಾರಿ, ತುಪ್ಪ, ವೀಳ್ಯದೆಲೆ ಮತ್ತು ಅಡಿಕೆಯನ್ನು, ಒಂದು ವರ್ಷಕ್ಕೆ ಒಟ್ಟು ಲೆಕ್ಕಾಚಾರ ಮಾಡಿದ ಭತ್ತದ ಅಳತೆಯಲ್ಲಿ ನೀಡಬೇಕೆಂಬ ಸೂಚನೆ ನೀಡಿರುವುದು ಕ್ರಿ. ಶ. ೧೦೩೪ ರ ಶಾಸನದಲ್ಲಿ ದಾಖಲಾಗಿದೆ.[3]

ಮಳವೂರಿನ ಮಹಾಸಭೆಯ ಸದಸ್ಯರು 'ಮಣವಾಳಾಳ್ವಾರ್' ದೇವರ ಉತ್ಸವದ ಸಮಯದಲ್ಲಿ ಪ್ರಸಾದಕ್ಕಾಗಿ ಅಕ್ಕಿಯನ್ನು ನೀಡುವ ಸಲುವಾಗಿ ೩೮೦ ಕುಟಿ ಭೂಮಿಯನ್ನು ಕೊಡುಗೆಯಾಗಿ ನೀಡಿದ್ದಾರೆ.[4]

ದೊಡ್ಡಮಳವೂರಿನ ಗೋಷ್ಠಿಯ ಸದಸ್ಯರೆಲ್ಲರೂ ಹಾಜರಿದ್ದು ರಾಜೇಂದ್ರ ಸಿಂಹ ಈಶ್ವರ ಮುಡೈಯ ಮಹಾದೇವರ್ ದೇವಾಲಯದಲ್ಲಿ ಸೇರಿ, ಆ ದೇವರಿಗೆ ದೀಪವನ್ನು ಬೆಳಗಿಸಲು ದೊಡ್ಡಮಳೂರು ಗ್ರಾಮದಲ್ಲಿರುವ ಅಂಗಡಿಗಳ ಕಿರು ತೆರಿಗೆಯನ್ನು ಕೊಡುಗೆಯಾಗಿ ನೀಡಿ, ಈ ತೆರಿಗೆಯನ್ನು ಇಲ್ಲಿನ ಪೂಜಾರಿಗಳೇ ವಿಧಿಸಬಹುದು ಎಂಬ ಅಧಿಕಾರವನ್ನು ನೀಡಿರುತ್ತಾರೆ.[5] ಇದೇ ದೇವರಿಗೆ ವೆಂಗಿಪುರದ ತಿರುವರಂಗ ಮಾಳಭಟ್ಟಾನ್ ಎಂಬುವನು ಬೆಳಿಗ್ಗೆಯ ನೈವೇದ್ಯಕ್ಕಾಗಿ ೩ ಕೊಳಗ ಅಕ್ಕಿಯನ್ನು ನೀಡಿದ್ದಾನೆ ಮತ್ತು ಒಂದು ನಂದಾದೀಪವನ್ನು ಕೊಡುಗೆಯಾಗಿ ನೀಡಿದ್ದಾನೆ.[6] ದೊಡ್ಡ ಮಳೂರಿನ ಗೋಷ್ಠಿಯ ಸದಸ್ಯರಲ್ಲಿ ಒಬ್ಬನಾದ

---

2. ಅದೇ—88 (c)
3. ಅದೇ—82ಮತ್ತು83
4. ಅದೇ—95, ಕ್ರಿ. ಶ. 1034
5. ಅದೇ—77, ಕ್ರಿ. ಶ. 1086
6. ಅದೇ—94, ಕ್ರಿ. ಶ. 1137

'ಅಂಗಿಪುಐಂ'ನ (ಹಿಂದಿನ ಶಾಸನದಲ್ಲಿ 'ವೆಂಗಿಪುರಂ' ಎಂದು ಕರೆಯಲಾಗಿದೆ) –ತಿರುವರಂಗ ಮಾಲಿಭಟ್ಟನ್ ಎಂಬುವನು ಕ್ರಿ. ಶ. ೧೧೩೯ರಲ್ಲಿ ದೇವಾಲಯದಲ್ಲಿ ಭೂಮಿಯನ್ನು ಪಡೆದಿರುವ ದೇವಪಿಟಿತ್ಟ್ಯ ಮತ್ತು ಶಿವಲೋಕಮುಡೈಯನ್ ಎಂಬುವರ ಬಳಿ ಒಂದು ಗಚ್ಚಾಣವನ್ನು ಠೇವಣಿಯಾಗಿಟ್ಟು ಇದರ ಬಡ್ಡಿಯಿಂದ ಶಾಶ್ವತವಾಗಿ ದೀಪಕ್ಕೆ ಎಣ್ಣೆಯನ್ನು ನೀಡಬೇಕೆಂದೂ ದಾಖಲಿಸಿರುವುದು ಕಂಡು ಬರುತ್ತದೆ.[7]

ಮಹಾದೇವನ್ ಎಂಬುವನು ಈ ದೇವಾಲಯದಲ್ಲಿ ಶಾಶ್ವತವಾಗಿ ದೀಪವನ್ನು ಉರಿಸುವುದಕ್ಕಾಗಿ ನೂರು ಕುಟಿ ಭೂಮಿಯನ್ನು ಕೊಡುಗೆಯಾಗಿ ನೀಡಿದ್ದಾನೆ.[8]

ವಿರೋಧಿ ಸಂವತ್ಸರದ ಥೈಮಾಸದಲ್ಲಿ ನಡುವಿಲ್ ನಾಡಿನ ಮುಡಿಯಾರ್‌ನ ಆ ವಡೈಯಾಂಡಿ ಎಂಬುವನು ಕೈಲಾಸಮುಡೈಯಾರ್ ದೇವರ ಪೂಜಾರಿಯಾದ ತಿಲ್ಲನಾಯಕಭಟ್ಟನ್ ಎಂಬುವನಿಗೆ ನಾಲ್ಕು ಪಣ (ಹಣ)ವನ್ನು ನೀಡಿ ಇದಕ್ಕೆ ಬಡ್ಡಿಯ ಒಂದು ತಿಂಗಳಿಗೆ ಒಂದು ಪಾಗವೆಂದೂ ತಿಳಿಸಿ ಈ ಬಡ್ಡಿಯು ಹಣದಿಂದ ದೇವರಿಗೆ ದೀಪವನ್ನು ಬೆಳಗಿಸಬೇಕೆಂದು ತಿಳಿಸಿರುವುದನ್ನು ಕ್ರಿ. ಶ. ೧೧೬೪ರ ಶಾಸನ ದಾಖಲಿಸಿದೆ.[9]

ಕೈಲಾಸ ಮುಡೈಯ ಮಹಾದೇವರ್ ದೇವಾಲಯಕ್ಕೆ ಕೊಡುಗೆಗಳನ್ನು ನೀಡಿ ಅಲ್ಲಿನ ಪೂಜಾ ಕೈಂಕರ್ಯಗಳು ಅನೂಚಾನವಾಗಿ ನಡೆಯಲು ಅನುಕೂಲ ಮಾಡಿ ರುವುದಲ್ಲದೆ ಅಲ್ಲಿನ ಪೂಜಾರಿಗಳಿಗೂ ಸಹ ಕೊಡುಗೆ ನೀಡಿರುವುದು ಕಂಡು ಬರು ತ್ತದೆ. ಕ್ರಿ. ಶ. ೧೧೭೭ರ ಶಾಸನವೊಂದು ಮಳವೂರಿನ ಮಹಾಜನರು ತೆರಿಗೆ ರಹಿತವಾದ ಭೂಮಿಯನ್ನು ಸತ್ಯಾನಂದ ಸ್ವಾಮಿಗಳ ಮಗ ನೀಲಕಂಠ ದೇವರ್ ಎಂಬುವನಿಗೆ ಕೊಡುಗೆಯಾಗಿ ನೀಡಿರುವುದನ್ನು ದಾಖಲಿಸಿದರೆ,[10] ಕ್ರಿ. ಶ. ೧೧೬೬ರ ಶಾಸನವು ನೀಲಕಂಠದೇವರ್ ಕೆರೆಯ ದುರಸ್ತಿಗಾಗಿ ೨೬೫ ಗಚ್ಚಾಣವನ್ನು ನೀಡಿದ್ದ ಕ್ಕಾಗಿ ಈತನಿಗೆ ಮನೆ ಮತ್ತು ಭೂಮಿಗಳನ್ನು ಕೊಡುಗೆಯಾಗಿ ನೀಡಿ, ಈ ಮನೆ ಗಳ ಬಗ್ಗೆಯೇ ಆಗಲಿ ಅಥವಾ ವ್ಯವಸಾಯಕ್ಕಾಗಿ ಕೆರೆಯ ನೀರನ್ನು ಬಳಸಿ ಕೊಂಡಾಗಲೇ ಆಗಲೀ ಅವಿಧೇಯತೆಯಿಂದ ಯಾರೂ ನಡೆದುಕೊಳ್ಳಬಾರದು ಎಂದು ತಿಳಿಸಿರುವ ವಿಷಯವನ್ನು ದಾಖಲಿಸಿದೆ.[11]

---

7. ಅದೇ—88 (a)
8. ಅದೇ—78 ಕ್ರಿ. ಶ. 1163
9. ಅದೇ—88 (b)
10. ಅದೇ—80
11. ಅದೇ—97 (a)

ದೊಡ್ಡಮಳೂರಿನ ಮಹಾಜನರೂ, ಮಹಾಪ್ರಧಾನಿಯಾದ ಜಾತ್ರಿಯ ದಣ್ಣಾಯಕನ ಮಗ ಕೇಸಪ್ಪನೂ ಕೈಲಾಸೇಶ್ವರ ದೇವಾಲಯದ ಸ್ಥಾನಪತಿಯ ಮಗ ಶ್ರೀ ಕೃತ್ತಿವಾಸಹೃದಯ ಎಂಬುವನಿಗೆ ಪರಾಭವ ಸಂವತ್ಸರದ ಪಾಲ್ಗುಣ ಬಹುಳ ಗಿರಲ್ಲು ದಾನ ನೀಡಿರುವುದು ತಿಳಿಯುತ್ತದೆ.[12]

ಈಗ ಮಳೂರು ಪಟ್ಟಣ ಎಂದು ಪ್ರಸಿದ್ಧವಾಗಿರುವ ಊರು ಹಿಂದೆ 'ಸಿಗರಿಲಿ ಚೋಳಪುರಂ' ಎಂದು ಪ್ರಸಿದ್ಧಿಯಾಗಿತ್ತು. ಇಲ್ಲಿ ಕ್ರಿ.ಶ. ೧೦೦೭ರಲ್ಲಿ 'ಜಯಂಗೊಂಡ ಶೋಳ ವಿಣ್ಣಗರ್ ಆಳ್ವಾರ್' ಎಂಬ ದೇವರನ್ನು ಪ್ರತಿಷ್ಠಾಪಿಸಿ, ದೇವಾಲಯಕ್ಕೆ ಅನೇಕ ಕೊಡುಗೆ, ದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ. ಪ್ರಸ್ತುತ ಇದನ್ನು ನಾರಾಯಣಸ್ವಾಮಿ ದೇವಾಲಯ ಎಂದು ಕರೆಯುತ್ತಾರೆ. ಈ ದೇವಾಲಯಕ್ಕೆ ನೀಡಲಾಗಿರುವ ಕೊಡುಗೆಗಳ ಉಲ್ಲೇಖವಿರುವ ಹಲವಾರು ಶಾಸನಗಳು ದೇವಾಲಯದ ಸುತ್ತಲೂ ಗೋಡೆಗಳ ಮೇಲೆ ಕೆತ್ತಲ್ಪಟ್ಟಿವೆ.

ಕ್ರಿ. ಶ. ೧೦೦೦ದಲ್ಲಿ ಮಳೂರಿನ ಒಂದು ಭಾಗವಾಗಿ 'ದೊಡ್ಡಮಳೂರು' ಎಂಬ ಅಗ್ರಹಾರವಾದ ನಂತರ ಕ್ರಿ. ಶ. ೧೦೦೭ರಲ್ಲಿ 'ಸಿಗರಿಲಿ ಚೋಳಪುರಂ' ಎಂದು ಮತ್ತೊಂದು ಅಗ್ರಹಾರವಾಗಿರುವುದು ಈ ಶಾಸನಗಳಿಂದ ತಿಳಿದುಬರುತ್ತದೆ.

ದೊಡ್ಡಮಳೂರಿನ ಸಭಾ ಸದಸ್ಯರು ಈ ದೇವರಿಗೆ ೨ ನಾಟಿ ಅಕ್ಕಿಯನ್ನು ಪ್ರತಿದಿನದ ನೈವೇದ್ಯಕ್ಕಾಗಿ ನೀಡುವ ಉದ್ದೇಶದಿಂದ ಭೂಮಿಯನ್ನು ದಾನ ನೀಡಿ, ಆ ಭೂಮಿಯನ್ನು ತಾವೇ ಸ್ವತಃ ಉತ್ತು, ಬಿತ್ತು, ಶುದ್ಧ ಮಾಡಿದ ಭತ್ತವನ್ನು ದೇವಾಲಯಕ್ಕೆ ತಂದು 'ಮರಕ್ಕಾಲ್' ಎಂಬ ಅಳತೆಯ ಸಾಧನದಲ್ಲಿ ಅಳತೆ ಮಾಡಿ-ಕೊಡುವುದಾಗಿ ನಿಬಂಧನೆಯನ್ನು ಹಾಕಿಕೊಂಡಿದ್ದಾರೆ.[13] ಪುಂಗನೂರಿನ ಸಭಾ ಸದಸ್ಯರು ಪ್ರತಿದಿನದ ನೈವೇದ್ಯಕ್ಕಾಗಿ ೨ ನಾಟಿ ಅಕ್ಕಿಯನ್ನು ನೀಡುವ ಸಲುವಾಗಿ ೨೩೫೦ ಕುಟಿ ಭೂಮಿಯನ್ನು ದಾನ ನೀಡಿದ್ದಾರೆ.[14]

ವಂಡೂರ್ ಯಾ ಚೋಳ ಮಾದೇವಿ ಚತುರ್ವೇದಿ ಮಂಗಲಂನ ಸಭಾ ಸದಸ್ಯರು, ಈ ದೇವಾಲಯದಲ್ಲಿ ಸಭೆ ಸೇರಿ ಪ್ರತಿನಿತ್ಯದ ನೈವೇದ್ಯಕ್ಕಾಗಿ ೨ ನಾಟಿ ಅಕ್ಕಿಯನ್ನು ನೀಡುವ ಉದ್ದೇಶದಿಂದ ತೆರಿಗೆ ಮನ್ನಾ ಮಾಡಿದ ಭೂಮಿಗಳನ್ನು ದೇವದಾನವಾಗಿ

12. ಅದೇ—88(ಬಿ)
13. ಅದೇ—128—ಕ್ರಿ. ಶ.—1008
14. ಅದೇ—130—ಕ್ರಿ. ಶ. 1007

ನೀಡಿ ಅವುಗಳನ್ನು ತಮ್ಮ ಗ್ರಾಮದ ಕೆರೆ ಮತ್ತು ಬಾವಿಗಳಿಂದ ವ್ಯವಸಾಯ ಮಾಡಲು ಅನುಮತಿಯನ್ನು ನೀಡಿದ್ದಾರೆ.[15]

ಈ ಮೇಲ್ಕಂಡ ದಾನಗಳೆಲ್ಲವೂ 'ಜಯಂಗೊಂಡ ಶೋಳ ವಿಣ್ಣಗರ್ ಆಳ್ವಾರ್' ದೇವರನ್ನು ಪ್ರತಿಷ್ಠಾಪಿಸಿದ ದಿನವೇ ನೀಡಿರುವುದನ್ನು ಗಮನಿಸಬಹುದು.

ಮಣಲೂರಿನ ಗಾವುಂಡರಾದ ಕೊಟ್ಟಯನ್ ಉತ್ತಮನ್ ಅಥವಾ ಶೋಳ ವಿಚ್ಚಾದಿರ ಗಾವುಂಡನ್ ಮತ್ತು ಇಡವ ಗಾವುಂಡನ್ ಎಂಬುವರು ಪುಂಗನೂರಿನ ಸಭಾ ಸದಸ್ಯರು ದೇವದಾನವಾಗಿ ನೀಡಿರುವ ತೆರಿಗೆರಹಿತ ಭೂಮಿಯನ್ನು ಸ್ವೀಕರಿಸಿ, ಈ ಭೂಮಿಯನ್ನು ಮಣಲೂರಿನ ಕೆರೆಯ ಸಹಾಯದಿಂದ ಬೇಸಾಯ ಮಾಡಲು ಅನುಮತಿಯನ್ನು ನೀಡಿ, ಇದಕ್ಕೆ ಯಾರಾದರೂ ಅಡ್ಡಿ ಮಾಡಿದರೆ ಅಂಥವರಿಗೆ ೫೦ ಕಟಿಂಜುವಿನ ದಂಡವನ್ನು ವಿಧಿಸುವ ಹಕ್ಕನ್ನು ದೇವಾಲಯದ ಅಧಿಕಾರಿಗಳಿಗೆ ನೀಡಿದ್ದಾರೆ.[16]

ಪ್ರಾಚೀನ ಕಾಲದಲ್ಲಿ ದೇವಾಲಯಗಳಲ್ಲಿನ ಕೆಲಸ ಕಾರ್ಯಗಳು ತಪ್ಪದಂತೆ ನಡೆಸಿಕೊಂಡು ಹೋಗಲು, ದೇವಾಲಯದ ಉಗ್ರಾಣದಿಂದ ಧಾನ್ಯವನ್ನೋ ಅಥವಾ ಖಜಾನೆಯಿಂದ ಹಣವನ್ನೋ ಸಾಲವಾಗಿ ನೀಡಿ ಅದಕ್ಕೆ ಬಡ್ಡಿಯ ರೂಪದಲ್ಲಿ ಧಾನ್ಯ ವನ್ನು ಸ್ವೀಕರಿಸುತ್ತಿದ್ದುದು ಕಂಡುಬರುತ್ತದೆ.

ಇದೇ 'ಜಯಂಗೊಂಡ ಶೋಳ ವಿಣ್ಣಗರ್ ಆಳ್ವಾರ್' ದೇವರ ಪೂಜಾರಿಗಳ ಮೂಲಕ ಚೋಳ ಮಾದೇವಿ ಚತುರ್ವೇದಿ ಮಂಗಲಂನ ಗೋಷ್ಠಿಯ ಸದಸ್ಯರು ದೇವರ ಖಜಾನೆಯಿಂದ ಧಾನ್ಯವನ್ನು ಸಾಲ ತೆಗೆದುಕೊಂಡು ಅವರಿಗೆ ಬರೆದು ಕೊಟ್ಟ ಒಡಂಬಡಿಕೆ ಪತ್ರದ ಕ್ರಮವನ್ನು ಗಮನಿಸಬಹುದು.

"ನಾವು ಮೇಲ್ಕಂಡ ದೇವರ ಉಗ್ರಾಣದಿಂದ ಪೂಜಾರಿಗಳ ಮುಖಾಂತರ 'ಮರಕ್ಕಾಲ್'ನಲ್ಲಿ ಅಳತೆ ಮಾಡಿದ ೩೨೦ ಕಲಂ ಭತ್ತವನ್ನು ತೆಗೆದುಕೊಂಡಿದ್ದೇವೆ. ಈ ಪರಿಮಾಣಕ್ಕೆ ಬಡ್ಡಿಯಾಗಿ ಒಂದು ವರ್ಷಕ್ಕೆ ೩ ಕುಱುಣಿ ಮತ್ತು ೨ ನಾಟಿ ದರದಂತೆ ಭತ್ತವನ್ನು ದೇವಸ್ಥಾನಕ್ಕೆ ತಂದು ಎಲ್ಲವನ್ನೂ ಮರಕ್ಕಾಲ್‌ನಲ್ಲಿ ಅಳತೆ ಮಾಡಿ ಸೂರ್ಯ ಚಂದ್ರರು ಇರುವವರೆಗೆ ನೀಡುತ್ತೇವೆ. ಕಲ್ಲು, ಮಣ್ಣು ಮತ್ತು ಮಣ್ಣಿನ ಹೆಂಟೆಗಳಿಂದ ಹೊರತುಪಡಿಸಿದ ೧೦೦ ಕಲಂ ಶುಚಿಯಾದ ಭತ್ತದ ಕ್ರಮ ಎಂತೆಂದರೆ–೫೦ ಕಲಂ ಬಿಳಿ ಭತ್ತ ವಸಂತ ಋತುವಿನ ಬೆಳೆಯಲ್ಲಿ ಮತ್ತು ೫೦ ಕಲಂ

15. ಅದೇ–132–ಕ್ರಿ. ಶ. 1007
16. ಅದೇ–127–ಕ್ರಿ. ಶ. 1014

ಕಪ್ಪು ಭತ್ತ ಬೇಸಿಗೆ ಬೇಳೆಯಲ್ಲಿ ಕೊಡುತ್ತೇವೆ. ನಾವು ಕೊಡುವ ಈ ಧಾನ್ಯ ವನ್ನು ಪಡೆಯಲು ಬರುವವರಿಗೆ ಪ್ರತಿದಿನ ಎರಡು ಹೊತ್ತಿನ ಊಟವನ್ನು ಕೊಡು ತ್ತೇವೆ. ಇದನ್ನು ಪಡೆಯಲು ಬರುವವರು ಜೆಂಕಿ ಮತ್ತು ನೀರನ್ನು ಹಳ್ಳಿಯೊಳಕ್ಕೆ ತರಕೂಡದು ; ಬೇರೆ ಹಳ್ಳಿಗಳ ಜೊತೆಯಲ್ಲಿ ಸಂಪರ್ಕವಿಟ್ಟುಕೊಳ್ಳಬಾರದು ಮತ್ತು ಮಸೂಲಾತಿಯ ದೃಷ್ಟಿಯಿಂದ ದನಗಳನ್ನು ಕರೆತರಬಾರದು. ಯಾರೇ ಆದರೂ ಅವರಿಗೆ ತೊಂದರೆ ಕೊಟ್ಟರೆ ಅದರಿಂದ ಉಂಟಾಗುವ ತೊಂದರೆಗಳಿಗೆ ತೊಂದರೆ ನೀಡಿ ದವರೇ ಜವಾಬ್ದಾರರಾಗುತ್ತಾರೆ. ಒಂದು ವೇಳೆ ನಾವು ಈ ಭತ್ತವನ್ನು ನೀಡಲು ತಪ್ಪಿದರೆ ಧರ್ಮವನ್ನು ಕಾಪಾಡುತ್ತಿರುವ ನೀವುಗಳೇ ೧೦೦ ಕಲಂಜುವಿನ ಚಿನ್ನವನ್ನು ದಂಡವಾಗಿ ಹಾಕುವುದು ಮತ್ತು ಭತ್ತವನ್ನು ತಲುಪಿಸಲು ಒತ್ತಾಯಿಸುವುದು"[17] ಎಂಬುದೇ ಒಡಂಬಡಿಕೆ ಪತ್ರದ ಕ್ರಮ*

ಕೂಡ್ಲೂರು ಉಪನಾಮ ರಾಜ ರಾಜ ಚತುರ್ವೇದಿ ಮಂಗಲಂನ ಗೋಷ್ಠಿಯ ಸದಸ್ಯರು–ಭೂಮಿಯನ್ನು ದಾನವಾಗಿ ನೀಡಿ, ಆ ಭೂಮಿಯನ್ನು ತಾವೇ ಬೇಸಾಯ ಮಾಡಿ ಪ್ರತಿದಿನ ೨ ನಾಬಿ ಅಕ್ಕಿಯನ್ನು ದೇವಾಲಯಕ್ಕೆ ತಂದು ಮರಕ್ಕಾಲ್‌ನಲ್ಲಿ ಅಳತೆ ಮಾಡಿಕೊಡುವುದಾಗಿ ತಿಳಿಸಿರುವುದನ್ನು ಕ್ರಿ ಶ. ೧೦೩೦ರ ಶಾಸನ ದಾಖಲಿ ಸಿದೆ.[18]

ದೇವಾಲಯವನ್ನು ಕಟ್ಟಿಸುವಾಗ ತಮ್ಮ ತಮ್ಮ ಶಕ್ತ್ಯಾನುಸಾರ ಜನಗಳು, ಅಧಿಕಾರಿಗಳು ದೇವಾಲಯದ ಯಾವುದಾದರೂ ಒಂದು ಭಾಗವನ್ನು ಕಟ್ಟಿಸಿಕೊಡುವ ಮೂಲಕ ತಮ್ಮ ಭಕ್ತಿಯನ್ನು ತೋರುತ್ತಿದ್ದರು. ಈ ವಿಷಯವನ್ನು ಹಲವಾರು ಶಾಸನಗಳು ತಿಳಿಸುತ್ತವೆ. ಇಲ್ಲಿಯೂ ಸಹ ಇದನ್ನು ಕಾಣಬಹುದಾಗಿದೆ.

ಇಲ್ಲಿನ ಗೋಪಾಲಸ್ವಾಮಿ ದೇವಾಲಯದಲ್ಲಿ ಒಬ್ಬೊಬ್ಬರು ಒಂದೊಂದು ಕಂಬ ವನ್ನು, ತೊಲೆಗಳನ್ನು ಹಾಕಿಸಿದ್ದಾರೆ. ತಿರುಮಾಯಿಳಾಪುರದ ತಿರುವಿರುಂದ ಪೆರುಮಾಳ್, ಕುಂಡೂರ್‌ನ ಸೂರಿಯ ದೇವರ್, ಓಡಲನ್ ಶೋಲನ್ ಮುಟ್ಟ–ಪಿಳ್ಳೈ, ಪಾವೂರ್‌ನ ಸೋಮಣ್ಣ ಇವರುಗಳು ಕಂಬಗಳನ್ನು ನೀಡಿದ್ದರೆ, ಮೇಲ್ಕಂಡ ತಿರುಮಾಯಿಳಾಪುರದ ತಿರುವಿರುಂದ ಪೆರುಮಾಳ್, ಪುಂಗನೂರಿನ ರಾಯಪ್ಪ

17. ಅದೇ—129 ಕ್ರಿ. ಶ. 1014

* 1993ರ ಇತಿಹಾಸ ಅಕಾದೆಮಿಯ 10ನೇ ವಾರ್ಷಿಕ ಸಮ್ಮೇಳನದಲ್ಲಿ "ಮುಳೂರಿನ ಶಾಸನಗಳಲ್ಲಿ ಕೃಷಿ ಮತ್ತು ವಾಣಿಜ್ಯ ಸಂಬಂಧನೆಗಳು" ಎಂಬ ಶೀರ್ಷಿಕೆಯಲ್ಲಿ ವಿವರವಾಗಿ ಸಂಬಂಧನೆಗಳ ಬಗ್ಗೆ ವ್ಯಾಖ್ಯಾನಿಸಲಾಗಿದೆ.

18. ಅದೇ—133

ಸೆಟ್ಟಿಯ ಮಗ ನೀಲಪ್ಪ ಸೆಟ್ಟಿಯಾರ್, ಇರುಗಂಡಿ ಪುರುಷೋತ್ತಮನ್ ಎಂಬುವರು ರಂಗಮಂಟಪದ ತೊಲೆಗಳನ್ನು ಮಾಡಿಸಿದ್ದಾರೆ.[19]

ದೊಡ್ಡ ಮಳೂರಿನ ಅಪ್ರಮೇಯಸ್ವಾಮಿ ದೇವಾಲಯವು ರಾಜರಾಜ ಚೋಳನ ಕಾಲದಲ್ಲಿ ಒಬ್ಬ ಅಧಿಕಾರಿಯಿಂದ ಸ್ಥಾಪಿಸಲ್ಪಟ್ಟಿತೆಂದು ಕಲಿಯೂರಿನ ಕ್ರಿ. ಶ. ೧೦೦೬ರ ಶಾಸನದ ಮೂಲಕ ಊಹೆ ಮಾಡಬಹುದು.[20]

ಮಳವೂರಿನ ಅಶೇಷ ಮಹಾಜನಗಳು ಸತ್ಯಾನಂದ ಸ್ವಾಮಿಗಳ ಮಗ ನೀಲಕಂಠ ದೇವರ್ ಎಂಬುವವನಿಗೆ ಕೊಡುಗೆ ನೀಡಿದ್ದಾರೆ ಮತ್ತು ಅಪ್ರಮೇಯ ಪೆರುಮಾಳ್ ದೇವಾಲಯಕ್ಕೆ ೨೫೦ ಗಚ್ಚಾಣವನ್ನು ಕೊಡುಗೆಯಾಗಿ ನೀಡಿರುವುದನ್ನು ಕ್ರಿ. ಶ. ೧೧೭೦ರ ಶಾಸನವು ದಾಖಲಿಸಿದೆ.[21] (ಮುಖ್ಯವಾದ ವಿಷಯಗಳಿರುವ ಅಕ್ಷರಗಳು ತ್ರುಟಿತವಾಗಿವೆ.)

ಅಪ್ರಮೇಯ ನಂಬಿಯಾರ್ ಎಂಬುವವನು ೩ ಗಚ್ಚಾಣವನ್ನು ನೀಡಿ ಈ ಹಣದ ಬಡ್ಡಿಯಿಂದ ಅಪ್ರಮೇಯ ಆಳ್ವಾರ್ ದೇವರಿಗೆ ಶಾಶ್ವತ ದೀಪಕ್ಕಾಗಿ ಎಣ್ಣೆಯನ್ನು ನೀಡಲು ನಿರ್ಧರಿಸಿದ್ದಾನೆ.[22]

ಇವ್ವೆಯ್ಯಿ ತೊಣ್ಣೆಯ ಗ್ರಾಮವಿಟ್ಟನ್ ಎಂಬುವನು ಅಪ್ರಮೇಯ ವಿನ್ನಗರ್ ಆಳ್ವಾರ್ ದೇವರ ಆರಾಧಕರಿಗೆ ಭೂಮಿಗಳನ್ನು ಕೊಡುಗೆಯಾಗಿ ನೀಡಿ ತಮಗೆ ಬೇಕಾದಂಥ ಬೆಳೆಯನ್ನು ಬೆಳೆದು ದೇವರಿಗೆ ಮಧ್ಯಾಹ್ನದ ನೈವೇದ್ಯಕ್ಕಾಗಿ ೨ ನಾಟಿ ಅಕ್ಕಿ ಮತ್ತು ತಿಂಗಳಿಗೆ ಬೇಕಾಗುವಷ್ಟು ತುಪ್ಪವನ್ನು ಒದಗಿಸಬೇಕು. ಅಲ್ಲದೆ ದೇವಾಲಯಕ್ಕೆ ಹೊಂದಿಕೊಂಡಂತಿರುವ ಹೂತೋಟದ ಕೆಲಸಗಾರರಾದ ಕರು-ಮಾಣಿಕ್ಕ ಎಂಬುವವನಿಗೆ ಸ್ವಲ್ಪ ಭಾಗ ನೈವೇದ್ಯದ ಅಕ್ಕಿಯನ್ನು ನೀಡಬೇಕು ಎಂದು ನಿಬಂಧನೆಯನ್ನು ಮಾಡಿದ್ದಾನೆ.[23]

ಮಾಡಕ್ಕುಡಿ ಸ್ಥಾನಮುಟ್ಟಿದೇವರ್ ಎಂಬುವನು ೫ ಪಣವನ್ನು ಠೇವಣಿಯಾಗಿಟ್ಟು ಇದರ ಬಡ್ಡಿಯಾಗಿ ೫ ವಿಟಿಕ್ಕು ಎಣ್ಣೆಯನ್ನು ದೇವಾಲಯದಲ್ಲಿ ನೀಡ-

---

19. ಅದೇ—101ರಿಂದ 107. ಕ್ರಿ. ಶ. 1100
20. Karnataka State Gazetteer-Bangalore Rural District-Page-50
21. ಎ. ಕ—IX, ಸಂಖ್ಯೆ : 81
22. ಅದೇ— 94 ; ಕ್ರಿ. ಶ. 1050
23. ಅದೇ— 88 (c) ; ಕ್ರಿ ಶ. 1014

ಬೇಕು. ಈ ದೀಪದ ಮೇಲ್ವಿಚಾರಣೆಯು ಪೂಜಾರಿಗಳಿಗೆ ಸೇರಿರುತ್ತದೆ ಎಂದು ಶಾಸನವನ್ನು ಹಾಕಿಸಿ ದಾಖಲಿಸಿದ್ದಾನೆ.[24]

ಪ್ರಸ್ತುತ ಮಳೂರುಪಟ್ಟಣದಲ್ಲಿರುವ ಅಮೃತೇಶ್ವರ ದೇವಾಲಯವು 'ಅರುಮೋಳೀ ದೇವೀಶ್ವರ ಮುಡೈಯ ಮಹಾದೇವರ್ ಎಂಬ ಹೆಸರಿನಲ್ಲಿ ಕ್ರಿ.ಶ. ೧೦೧೩ರಲ್ಲಿ ಕಾಣಸಿಗುತ್ತದೆ. ಈ ದೇವರನ್ನು ಅರ್ಕೇಶ್ವರ ಎಂಬುದಾಗಿಯೂ ಕರೆಯಲ್ಪಟ್ಟಿದೆ. ಈ ದೇವಾಲಯಕ್ಕೂ ಸಹ ಅನೇಕ ದಾನ ದತ್ತಿಗಳನ್ನು ನೀಡಲಾಗಿದೆ.

ಮಣಲೂರಿನ ಗಾವುಂಡರಾದ ಕೊಟ್ಟಿಯನ್ ಉತ್ತಮನ್ ಮತ್ತು ವಿಡಿಯನ್ ಕೊಟ್ಟಿಯನ್ ಮತ್ತಿತರರು ಪೆರುಂದಾಮ ಆದಿತ್ತನ್ ಕೊಟ್ಟಡಿ ಎಂಬುವನಿಂದ ಗಣಪತಿ ಹಬ್ಬದ ದಿನ ಅರುಮೋಳೀಶ್ವರ ದೇವರ ಉತ್ಸವ ನೆರವೇರಿಸಲು ಕೊಡುಗೆಯನ್ನು ಪಡೆದಿದ್ದಾರೆ.[25]

ಚೋಳ ಮಾದೇವಿ ಚತುರ್ವೇದಿಮಂಗಲಂನ ಸದಸ್ಯರಾದ ಏಚಲಯ್ಯನ ಮಗ ಮಾರಾಯನ್ ಮತ್ತಿತರರು ತೆರಿಗೆರಹಿತ ಭೂಮಿಯನ್ನು ದೇವದಾನವಾಗಿ ನೀಡಿದ್ದಾರೆ.[26]

ಕ್ರಿ. ಶ. ೧೧೫೦ರಲ್ಲಿ ಮರುಡಾಂತಕದೇವನ ಮಗ ಪಳ್ಳಿಪೆರಿಯಾನ್ ಎಂಬುವನು ಈ ದೇವರಿಗೆ ಗಂಟೆ ಮತ್ತು ಆರತಿ ತಟ್ಟೆಗಾಗಿ ೧ ಹೊನ್ನನ್ನು ನೀಡಿದ್ದಾನೆ.[27]

ಮೇರಪಾಡಿಯ ಮುಖ್ಯಸ್ಥನಾದ ಮಲ್ಲೈಯಾಂಡಾನ್ ಎಂಬುವನು ರಾತ್ರಿಯ ನೈವೇದ್ಯಕ್ಕಾಗಿ ಅಕ್ಕಿಯನ್ನು ಕೊಳ್ಳುವುದಕ್ಕಾಗಿ ಹಣವನ್ನು ನೀಡಿರುವ ವಿಷಯವನ್ನು ಕ್ರಿ. ಶ. ೧೧೫೭ರ ಶಾಸನ ದಾಖಲಿಸಿದರೆ, ಇದೇ ವ್ಯಕ್ತಿ ಶಾಶ್ವತವಾಗಿ ದೀಪವನ್ನು ಉರಿಸುವುದಕ್ಕಾಗಿ ೩ ಹೊನ್ನನ್ನು ನೀಡಿರುವ ವಿಷಯವನ್ನು ಕ್ರಿ. ಶ. ೧೧೫೮ರ ಶಾಸನ ದಾಖಲಿಸಿದೆ.[28]

ಉತ್ತಮ ಕಾರ್ಯಗಳನ್ನು ಮಾಡಿದಂತಹ ವ್ಯಕ್ತಿಗಳಿಗೆ ಕೊಡುಗೆ ನೀಡಿರುವುದನ್ನು ಇಲ್ಲಿನ ಕೆಲವು ಶಾಸನಗಳು ದಾಖಲಿಸಿವೆ.

---

24. ಅದೇ—97 (b)
25. ಅದೇ—135 ; ಕ್ರಿ. ಶ. 1013
26. ಅದೇ—139 ; ಕ್ರಿ. ಶ. 1015
27. ಅದೇ—138 ; ಕ್ರಿ. ಶ. 1050
28. ಅದೇ—136 ಮತ್ತು 137

ಪರರಾಜ್ಯದವರಿಂದ ಮಳವೂರು ಗ್ರಾಮದ ಮೇಲೆ ದಾಳಿ ನಡೆದಾಗ ಅಪ್ರ ಮೇಯಸ್ವಾಮಿಯ ೧೩೦ ಗಚ್ಚಾಣಗಳಷ್ಟು ಬೆಲೆ ಬಾಳುವ ಆಭರಣಗಳನ್ನು ಬಚ್ಚಿಟ್ಟಿದ್ದ ಜಾಗದಿಂದ ತೆಗೆದು ತಂದು ಹಿಂದಿರುಗಿಸಿದ್ದಕ್ಕಾಗಿ ಮಳವೂರಿನ ಮಹಾ ಜನರು ಸತ್ಯಾನಂದಸ್ವಾಮಿಗಳ ಮಗ ನೀಲಕಂಠದೇವರ್‌ಗೆ ಭೂಮಿಗಳನ್ನು ಕೊಡುಗೆಯಾಗಿ ನೀಡಿದ್ದಾರೆ.[29]

ಅಚ್ಯುತದೇವನ ಕೋಶಾಧಿಕಾರಿಯಾದ ತಿಮ್ಮಪ್ಪಯ್ಯನ ನಿರೂಪದಂತೆ ಮಾದ ರಸಯ್ಯ ಎಂಬುವನು ಮಳೂರಪಟ್ಟಣದ ಮಹಾಪ್ರಭು ಹಲಗೆಯಪ್ಪಗೌಡನಿಗೆ, ಮಳೂರು ಪಟ್ಟಣದ ಹಾರು ಕೇರಿಗೆ ಸೇರಿದ ಬೆಜ್ಜನೂ (ಸ್ಥಳವನ್ನು ?) 'ವೀರಾ ಪುರ' ಎಂಬ ಗ್ರಾಮವನ್ನಾಗಿ ಪ್ರತಿಷ್ಠಾಪಿಸಿ ಅಂದಣದ ಉಂಬಳಿಯಾಗಿ ನೀಡಿ ದ್ದಾನೆ.[30]

ಹೈದರಾಲಿಯು ಫಕೀರ ಸೈದು ಮಹಮದ್ ಅಕಲ್‌ಷಾ ಖಾದರಿ ಎಂಬುವನಿಗೆ ಆತನು ಮಾಡುತ್ತಿದ್ದ ಫಕೀರ ಧರ್ಮಕ್ಕಾಗಿ ಚನ್ನಪಟ್ಟಣ ಸ್ಥಳದ 'ಮಳೂರು ಪಟ್ಟಣ'ವನ್ನು ಬಹುಮಾನವಾಗಿ ನೀಡಿ, ಈ ಧರ್ಮವನ್ನು ಹಿಂದೂ ಧರ್ಮದ ಯಾರೇ ಆಗಲೀ ಅಡ್ಡಿ ಮಾಡಿದರೆ ಕಾಶಿಯಲ್ಲಿ ಗೋಹತ್ಯೆ ಮಾಡಿದಂತಾಗುತ್ತದೆ ಎಂಬ ಶಾಪಾಶಯವನ್ನೊಳಗೊಂಡ ವಿಷಯವನ್ನು ಕ್ರಿ. ಶ. ೧೭೬೩ರ ಶಾಸನ ದಾಖಲಿಸಿದೆ.[31]

ಶಾಸನೋಕ್ತ ವೀರಗಲ್ಲುಗಳನ್ನು ಗಮನಿಸಿದಾಗ ಬುಕ್ಕಣ ಒಡೆಯ ರಾಜ್ಯ ವಾಳುತ್ತಿದಾಗ ಬಲವಂಕಪ್ಪನಾಯಕನ ಮುಖ್ಯಸ್ಥನಾದ ರಾಯನಾಯಕ ಕೊಂಗು ನಾಡಿನ ಮಧ್ಯದಲ್ಲಿರುವ ಕುಂದಲೂರ (ಕೂಡ್ಲೂರು ?) ದುರ್ಗವನ್ನು ನೋಡಿ ಕೊಳ್ಳುತ್ತಿರಲು ಸೌಮ್ಯ ಸಂವತ್ಸರದ ಭಾದ್ರಪದ ಶುದ್ಧ ೧೨ ಬುಧವಾರ ರಾಯ ನಾಯಕನ ಗೋವುಗಳ ಹಿಂಡು ಕಾವೇರಿ ತೀರದಲ್ಲಿದ್ದಾಗ ತಿರುವಣಂಬಿಯ ಕಂಪಣ ಒಡೆಯನ ಸಂವರಣ ದಾಳಿ ಮಾಡಿ ಗೋವುಗಳನ್ನು ಹಿಡಿಯಲಾಗಿ ಮಳೂರು ಪಟ್ಟಣದ ಎಱೆಯಂಗ ಕುಲೋದ್ಧಾರ ಬೊಂಮಗವುಡನ ಮಗ ವಿಜಯಣ್ಣ ಎಂಬುವನು ರಾಯನಾಯಕನ ನಿರೂಪದಂತೆ ಶತೃಗಳೊಡನೆ ಹೋರಾಡಿ ಗೋವು ಗಳನ್ನು ಮರಳಿಸಿ ವೀರತನವನ್ನು ಮೆರೆದು ಸ್ವರ್ಗಸ್ಥನಾದನು. ಇವನ ಜ್ಞಾಪ

---

29. ಅದೇ—89 ; ಕ್ರಿ. ಶ. 1176
30. ಅದೇ—125 ; ಕ್ರಿ. ಶ. 1534
31. ಅದೇ—146

ಕಾರ್ಥವಾಗಿ ಈತನ ಅಣ್ಣ ರಾಮಗೌಡ ವೀರಗಲ್ಲನ್ನು ಹಾಕಿಸಿದ್ದಾನೆ ಎಂಬ ವಿಷಯವನ್ನು ಕ್ರಿ. ಶ. ೧೩೬೪ರ ಶಾಸನ ಉಲ್ಲೇಖಿಸಿದೆ.[32]

ಮಳಲೂರು ಪಟ್ಟಣದ ಕಿತ್ತಿಗೌಡನ ಮಕ್ಕಳು ಮಂಜಪ ಮತ್ತು ದೇವಗೌಡ ಎಂಬುವರು ಎಲೆಯ ಕೇರಿಯಲ್ಲಿ ಶಕವರುಷ ೧೩೩೬ನೆಯ ಜಯಸಂವತ್ಸರದ ಚೈತ್ರ ಬಹಳ ೨ ಶನಿವಾರದಂದು ನಡೆದುಹೋಗುತ್ತಿದ್ದಾಗ ಕಾಳತಂಮ ಹುಚ್ಚನವರು, ಬೊಂಮಕನ ಮಾರನಸಿಂಗ ಮುಂತಾದವರು ದಾಳಿ ಮಾಡಿದಾಗ, ಆ ಸಿಂಗನ ತಲೆಯನ್ನು ನೆಲಕ್ಕೆ ಉರುಳಿಸಿ ವೀರಸ್ವರ್ಗವನ್ನು ಏರಿದಾಗ, ಅವರ ತಮ್ಮ ಸೊಂಣ್ಣಪ್ಪ ಮತ್ತು ಇವನ ಮಕ್ಕಳಾದ ಚಿಕ್ಕ ಸೊಣ್ಣಪ್ಪ, ದೇವಪ್ಪನವರು ವೀರಗಲ್ಲನ್ನು ಪ್ರತಿಷ್ಠಾಪಿಸಿದ್ದಾರೆ.[33]

ಮಳಲೂರ ಪಟ್ಟಣದ ಗೌಡರ ಮಾಯಿದೇವನ ಮಗ ಮಾಯಿತಂಮ ಸಕವರುಷ ೧೩೫೩ನೆಯ ವಿರೋಧಿಕೃತು ಸಂವತ್ಸರದ ಮಾಘ ಬಹುಳ ೧೪ ಬುಧವಾರದಂದು ಶಿವರಾತ್ರಿ ಪ್ರಯುಕ್ತ ಉಪವಾಸವಿದ್ದು ಮಲ್ಲಯ್ಯ ದೇವರ ವನದಲ್ಲಿ ಜಾಗರಣೆ ನಡೆಸುತ್ತಿದ್ದಾಗ ಕಳ್ಳರು ದೇವಾಲಯವನ್ನು ಮುತ್ತಿಗೆ ಹಾಕಿದಾಗ ಅವರನ್ನು ಗಾಯಗೊಳಿಸಿ, ತಾನೂ ಗಾಯಗೊಂಡು, ಪಾಡ್ಯ ಶುಕ್ರವಾರದ ದಿನ ವೀರಸ್ವರ್ಗವನ್ನೇರಿದನು. ಇದಕ್ಕಾಗಿ ಆತನ ತಮ್ಮ ಮಂಚಿಯಣ್ಣ ವೀರಗಲ್ಲನ್ನು ನಿಲ್ಲಿಸಿದ್ದಾನೆ.[34]

ಮಳೂರು ಪಟ್ಟಣದ ಗಾಂವುಂಡ ದೊಡ್ಡ ಸೆಟ್ಟಿಯ ಮಗ ತಿರುಮಲೈಯ್ಯ ಎಂಬುವನು ಸಕ ವರುಷ ೧೩೫೩ನೆಯ ಪಿಂಗಳ ಸಂವತ್ಸರದ ವೈಶಾಖ ಶುದ್ಧ ೧ ಸೋಮವಾರದಂದು ಹೊಂಗನೂರಿನ ಕಾಳಗದಲ್ಲಿ ಮಡಿದಾಗ, ಈತನ ನೆನಪಿಗಾಗಿ ಅವನ ಅಣ್ಣಂದಿರು ವೀರಗಲ್ಲನ್ನು ಹಾಕಿಸಿದ್ದಾರೆ.[35]

---

32. ಅದೇ—150—ಈ ಶಾಸನದಲ್ಲಿ 'ಮಳೂರು ಪಟ್ಟಣ'ದ ಪ್ರಥಮ ಉಲ್ಲೇಖವಿದೆ.
33. ಅದೇ—148 ಕ್ರಿ. ಶ. 1414
34. ಅದೇ—149 ಕ್ರಿ. ಶ. 1432
35. ಅದೇ—147 ಕ್ರಿ. ಶ. 1437

**ವಸಂತಲಕ್ಷ್ಮೀ ಕೆ.**

# ಹಳೇಬೀಡಿನ ನಿಶಿಧಿ ಶಾಸನಗಳು

ಭಾರತದ ಪ್ರಾಚೀನ ಮತಗಳಲ್ಲಿ ಒಂದಾದ ಜೈನಮತವು ‘ಶ್ರಮಣ ಪಥ’ ವೆನಿಸಿದ್ದು, ಜನರಿಗೆ “ಶ್ರೇಷ್ಠವಾದ ಮಾನವ ಜನ್ಮ ದೊರೆತಿರುವಾಗ ಮತ್ತೆ ತಪ್ಪು ಮಾಡದೆ ಜನ್ಮಚಕ್ರದಿಂದ ಬಿಡುಗಡೆ ಪಡೆಯಲು ‘ಮುಕ್ತಿ ಸೋಪಾನ’ವನ್ನು ತೆರೆದಿಟ್ಟದೆ. ಸಾಮಾನ್ಯ ಜನರಿಗೆ ಮೋಹಪಾಶದಿಂದ ಬಿಡಿಸಿಕೊಳ್ಳಲು ಅನುವಾಗುವಂತೆ ಹಲವು ಸಣ್ಣ ಸಣ್ಣ ವ್ರತಗಳನ್ನು ನಿರೂಪಿಸಿ, ಇವುಗಳನ್ನಾಚರಿಸುವವರನ್ನು ‘ಶ್ರಾವಕ’ರೆಂದು ಕರೆದಿದೆ. ಶ್ರಾವಕನಾದವನು ‘ದಾನವ್ರತ’ದ ಮೂಲಕ ‘ತ್ಯಾಗ’ ಭಾವನೆಯನ್ನೂ, ಜಿನಪೂಜೆಯ ಮೂಲಕ ‘ಸದ್ಭಕ್ತಿ’ಯನ್ನೂ, ಉಪವಾಸದ ಮೂಲಕ ‘ದೇಹದಂಡನೆ’ಯನ್ನೂ ಒಡಮೂಡಿಸಿ ಕೊಂಡು, ಇವುಗಳ ನಿರಂತರ ಆಚರಣೆಯಿಂದ (ಶೀಲ) ಜಿನ ಮತದಲ್ಲಿ ಸ್ಥಿರಗೊಳ್ಳುತ್ತಾನೆ. ನಿಷ್ಠಾವಂತ ಜಿನಭಕ್ತನು ತನ್ನ ಮತದ ಬಗೆಗೆ ನಿಶ್ಚಲ ಜ್ಞಾನವನ್ನು (ಸಮ್ಯಕ್ ಜ್ಞಾನ), ನಿಶ್ಚಲವಾದ ನಂಬಿಕೆಯನ್ನು (ಸಮ್ಯಕ್ ದೃಷ್ಟಿ) ಹೊಂದಿ ನಿಶ್ಚಲವಾದ ಆಚರಣೆಯಲ್ಲಿ (ಸಮ್ಯಕ್ ಚಾರಿತ್ರ್ಯದಲ್ಲಿ) ತಲ್ಲೀನನಾಗಿ ‘ರತ್ನತ್ರಯಾರಾಧಕ’ ನೆನಿಸುತ್ತಾನೆ.

ಭೂಮಿಯಲ್ಲಿ ಜನಿಸಿದ ಪ್ರತಿಜೀವಿಗೂ ‘ಮರಣ’ ಕಟ್ಟಿಟ್ಟ ಬುತ್ತಿಯಾಗಿದೆ. ಬದುಕಿನಲ್ಲಿ ನಿರಂತರವಾಗಿ ಧರ್ಮಪಥದಲ್ಲಿ ಸಾಗಿ, ಸಾಯುವಾಗಲೂ ಧಾರ್ಮಿಕ ಮನೋಭಾವದಲ್ಲಿ ನಿರತನಾಗಿ ಸತ್ತರೆ ಮೋಕ್ಷಸಾಧ್ಯವೆಂದು ಜೈನಮತ ತಿಳಿಸುತ್ತದೆ. ಶ್ರಾವಕನು ತನ್ನ ಅಂತಿಮ ಕಾಲದಲ್ಲಿ ಈ ಮತದ ಶ್ರೇಷ್ಠ ‘ವ್ರತ’ವಾದ “ಸಲ್ಲೇಖನವ್ರತ”ವನ್ನು ಧರಿಸಿ ಜಿನಧ್ಯಾನದಲ್ಲಿ ನಿರತನಾಗಿ ‘ದೇಹತ್ಯಾಗ’ ಮಾಡಿ ಮೋಕ್ಷಗಳಿಸುತ್ತಾನೆ.

ಹೀಗೆ ಮೋಕ್ಷ ಸಾಧಿಸಿದ ಶ್ರೇಷ್ಠಸಾಧಕರ ಸ್ಮಾರಕಗಳನ್ನು ಜಿನಭಕ್ತರು ಪೂಜಿಸುತ್ತಾರೆ,

ಜೈನಮತದಲ್ಲಿ ಪರಮಶ್ರೇಷ್ಠರೆನ್ನಿಸಿರುವ ತೀರ್ಥಂಕರರೂ ಇಂಥ ಸಾಧಕರೇ ಆಗಿದ್ದು ಈ ಮತವು ಸಾಧನೆಗೆ ಹೆಚ್ಚಿನ ಮಹತ್ವವನ್ನಿತ್ತಿದೆ ಎಂಬುದು ಗಮನಾರ್ಹ ಸಂಗತಿಯಾಗಿದೆ. ಆದ್ದರಿಂದಲೇ ಜೈನಮತದ ಪವಿತ್ರಕ್ಷೇತ್ರಗಳಲ್ಲಿ ತೀರ್ಥಂಕರರ ಜೀವನ ಕ್ಕೆಸಂಬಂಧಿಸಿದ ಸ್ಥಳಗಳು, ಪವಾಡಗಳು ನಡೆದಿರುವ ಸ್ಥಳಗಳು 'ಅತಿಶಯ ಕ್ಷೇತ್ರ'ಗಳೆಂದು ಪ್ರಸಿದ್ಧವಾಗಿರುವಂತೆ ಜಿನಭಕ್ತರು ಸಾಧನೆಯಲ್ಲಿ ನಿರತರಾದ, ತಪೋನಿರತರಾಗಿ ಸಲ್ಲೇಖನಗೊಂಡ ಸ್ಥಳಗಳು 'ನಿರ್ವಾಣಕ್ಷೇತ್ರ'ಗಳಾಗಿ ಪುನೀತ ವಾಗಿವೆ. ದಕ್ಷಿಣ ಭಾರತದಲ್ಲಿ ಶ್ರವಣಬೆಳ್ಗೊಳ ಬಂಕಾಪುರ, ಕೊಪ್ಪಳ ಮೊದಲಾದವು ಪ್ರಾಚೀನ ನಿರ್ವಾಣಕ್ಷೇತ್ರಗಳೆನ್ನಿಸಿವೆ.

ರಾಷ್ಟ್ರಕೂಟರ ದೊರೆ ದೋರನು ಕಟ್ಟಿಸಿದ ಕೆರೆಯಿಂದ'ದೋರಸಮುದ್ರ'ವೆಂಬ ಹೆಸರು ಪಡೆದು ಪ್ರಸಿದ್ಧವಾಗಿದ್ದ ಹಳೆಯಬೀಡು ಗ್ರಾಮದಲ್ಲಿ ೧೦ನೇ ಶತಮಾನ ದಲ್ಲಿಯೇ 'ಪರೋಕ್ಷ ವಿನಯಕ್ಕಾಗಿ' ನಿಶಿಧಿಯನ್ನು ಹಾಕಿಸಿರುವುದನ್ನು ಗಮನಿಸಿದಾಗ ಆ ಕಾಲದ ಹೊತ್ತಿಗೆ ಇದು ಪ್ರಸಿದ್ಧ ಜಿನಕ್ಷೇತ್ರವಾಗಿತ್ತು ಎಂಬ ಅಂಶ ಸ್ಪಷ್ಟವಾಗು ತ್ತದೆ. ಸು. ೯-೧೦ನೇ ಶ.ದಲ್ಲಿ ಆದಿಕ್ಷೇತ್ರವೆಂದು ಪ್ರಖ್ಯಾತವಾಗಿದ್ದ ಕೆಲ್ಲಂಗೆರೆ ಬಸದಿಯಲ್ಲಿದ್ದ ಮೋನಿಭಟಾರರಿಗೆ ಕಿರಿಯ ಮೋನಿಭಟಾರರು ಹಳೆಬೀಡಿನಲ್ಲಿ 'ನಿಶಿಧಿ'ಯನ್ನು ನಿರ್ಮಿಸಿದ್ದಾರೆ. ಸಮೀಪದಲ್ಲಿರುವ ಶ್ರವಣಬೆಳ್ಗೊಳದಲ್ಲಿ ಇವರ ನಿಶಿಧಿ ಇಲ್ಲದಿರುವುದು, ೧೧ನೇ ಶತಮಾನದಲ್ಲಿ ಈ ಕ್ಷೇತ್ರವು 'ವರ್ಧಮಾನ ತೀರ್ಥ' ವೆಂದು ಪ್ರಖ್ಯಾತವಾಗಿರುವುದು, ೧೩-೧೪ನೇ ಶತಮಾನಗಳಲ್ಲಿ ಅನೇಕರು ಇಲ್ಲಿಯೇ 'ನೋಂತು' ಸಮಾಧಿಸ್ಥರಾಗಿರುವುದು ಈ ಎಲ್ಲವೂ ಈ ಕ್ಷೇತ್ರದ ಮಹಿಮೆಯನ್ನು ತಿಳಿಸುತ್ತವೆ. ೧೨ನೇ ಶತಮಾನದ ಶಾಸನವೊಂದು ಈ ವರ್ಧಮಾನ ಕ್ಷೇತ್ರದಲ್ಲಿ ಕೇವಳಿಗಳೂ, ಶ್ರುತಕೇವಳಿಗಳೂ, ಬುದ್ಧಿ ಪ್ರಾಪ್ತರು, ಹಲವರು ಸಿದ್ಧಸಾಧ್ಯರು ನೆಲೆಸಿದ್ದ ಪುಣ್ಯಕ್ಷೇತ್ರ[1]ವಾಗಿತ್ತೆಂದೂ ತಿಳಿಸಿದೆ. ೧೨-೧೩ನೇ ಶತಮಾನಗಳಲ್ಲಿ ದೋರ ಸಮುದ್ರದಲ್ಲಿ ಮಲ್ಲಿಷೇಣಮಲಧಾರಿ ಮುನಿಗಳು, ನೇಮಿಚಂದ್ರಾಚಾರ್ಯರು, ಬಾಳಚಂದ್ರ ಪಂಡಿತದೇವರು, ಹೇಮಚಂದ್ರ ತ್ರೈವಿದ್ಯದೇವರು, ರಾಮಚಂದ್ರ ಮಲಧಾರಿದೇವರು, ಅಭಯಚಂದ್ರಪಂಡಿತ ದೇವರು, ಕಣಕಣಂದಿ ದೇವರು, ಮಾಧವಚಂದ್ರ ದೇವರು, ಮಾಘಣಂದಿ ಭಟ್ಟಾರಕರು ಶ್ರುತಕೀರ್ತಿ ದೇವರು, ಮೊದಲಾದ ಮುನಿಗಳು ನೆಲೆಸಿದ್ದು ಇವರೆಲ್ಲರ ತಪಸ್ಸಾಧನೆಯಿಂದ ೧೨-೧೩ನೇ ಶತಮಾನದ ಸುಮಾರಿಗೆ ಈ ಕ್ಷೇತ್ರವು ನಿರ್ವಾಣಕ್ಷೇತ್ರವಾಗಿದ್ದಂತೆ ತಿಳಿಯುತ್ತದೆ.

---

1 ಎ.ಕ. 9 (ಕ.ಅ.ಸಂ.) ಬೇಲೂರು 106

'ಸಲ್ಲೇಖನ ವ್ರತ'ವು ಅಂತಿಮ ಕಾಲದಲ್ಲಿ ಪಂಚಪದಗಳನ್ನು ಸ್ಮರಿಸುತ್ತಾ ಪ್ರಸನ್ನಚಿತ್ತದಿಂದ ಹೇಗೆ ಮರಣವನ್ನು ಸ್ವಾಗತಿಸಬೇಕೆಂಬುದನ್ನು ತಿಳಿಸುವ ಆಚರಣೆಯಾಗಿದೆ. ಇದು ಆತ್ಮಹತ್ಯೆಯಲ್ಲ, ಬದಲಿಗೆ ಆತ್ಮವೇ ವ್ರತಸ್ಥನಾಗಿ ದೇವ ನಲ್ಲಿ ಐಕ್ಯವಾಗುವ ಸಂಧಾನವಾಗಿದೆ. ನಿಧಾನವಾಗಿ ಆಹಾರ, ನೀರುಗಳನ್ನು ತ್ಯಾಗ ಮಾಡಿ ದೇಹವನ್ನು ಕುಗ್ಗಿಸುತ್ತಾ, ನಿರಂತರ ಧ್ಯಾನದಿಂದ ಕಷಾಯಗಳನ್ನು ತ್ಯಜಿ ಸುತ್ತಾ, ಕಾತರದಿಂದ ಸಾವನ್ನು ನಿರೀಕ್ಷಿಸುವ ಈ ವ್ರತಧಾರಿಯನ್ನು ಶ್ರಾವಕಾ ಚಾರವು "ವೀರ, ಶೂರ, ಜ್ಞಾನಿ, ಧನ್ಯ" ಎಂದು ಹೊಗಳಿದೆ.[2] ಇಂಥವರ ಮರಣವನ್ನು 'ವೀರಮರಣ', 'ಸಮಾಧಿಮರಣ' ಎನ್ನುವರು. ಒಂದು ರೀತಿಯಲ್ಲಿ ಅನೇಕ ವ್ರತ ಗಳಲ್ಲಿ ತೊಡಗಿದ್ದಾಗ ರಾಗಗಳನ್ನು ಕುಗ್ಗಿಸುತ್ತಾ 'ನಿಯಮ'ವನ್ನು ಸಾಧಿಸುವ ನಿಷ್ಠಾವಂತ ಶ್ರಾವಕನ ನಿತ್ಯದ ದಿನಚರಿಯು 'ಜೀವಿತ ಸಲ್ಲೇಖನ' ವೆನ್ನಿಸಿದೆ. ಕೆಲವು ಗೃಹಸ್ಥರು, ನಿರಂತರವಾಗಿ ವ್ರತಾಚರಣೆಯಲ್ಲಿ ತೊಡಗಿರದೇ ಅಂತಿಮ ಕಾಲ ದಲ್ಲಿ ಗುರುವಿನ ಬಳಿ ದೀಕ್ಷೆವಹಿಸಿ ಪ್ರಾಯಶ್ಚಿತ್ತವನ್ನು ಸ್ವೀಕರಿಸಿ 'ಸಲ್ಲೇಖನವ್ರತ' ವನ್ನು ಕೈಗೊಳ್ಳುವರು. ಈ ವಿಧವನ್ನು 'ಜೀವಿತಾಂತ್ಯ ಸಲ್ಲೇಖನ'ವೆನ್ನುವರು. ಸಲ್ಲೇ ಖನದಿಂದ ಮರಣಗೊಂಡಾಗ ಶರೀರದ ಮೇಲೆ ಆತನು ಗಳಿಸಿದ ಜಯವೆಂದು ಬಗೆದು ಉತ್ಸವವನ್ನು ಆಚರಿಸಲಾಗುತ್ತದೆ. ಸಲ್ಲೇಖನವನ್ನು 'ಸನ್ಯಸನ'ವೆಂದೂ ಕರೆಯುವರು.

'ಸಲ್ಲೇಖನ'ವೆಂಬ ಪದವು 'ಸಮ್+ಲಹ್', ಎಂಬ ಧಾತುಗಳಿಂದಾಗಿದ್ದು ಇದರ ಅರ್ಥವು 'ಅಂತರಿಕ ಕಷಾಯ'ಗಳನ್ನು ಗೆಲ್ಲು' ಎಂದಾಗುತ್ತದೆಂದು ಟಿ ಕೆ. ತುಕೋಳ್‌ರವರು ತಿಳಿಸಿರುತ್ತಾರೆ.[3] ಶ್ರಾವಕಾಚಾರವು ಸತ್+ಲೇಖನ-ಸಲ್ಲೇಖನ ವೆಂದು ತಿಳಿಸುತ್ತಾ, ಪ್ರಶಂಸನೀಯ ಎಂಬರ್ಥದಲ್ಲಿ 'ಸತ್' ಎಂಬುದು 'ಕೃಶೀಕರಣ ಕ್ರಿಯೆ' ಎಂಬರ್ಥದಲ್ಲಿ ಲೇಖನವು ಸೇರಿದೆ ಎಂದಿದ್ದು, ಸಲ್ಲೇಖನವು ಕಾಯಕಷಾಯ ಗಳನ್ನು ಕ್ಷೀಣಗೊಳಿಸುವ ಕ್ರಿಯೆಯಾಗಿದೆ ಎನ್ನುತ್ತದೆ.

ಈ ವ್ರತಧಾರಿಗಳು ಬಸದಿಯಲ್ಲಿಯೇ ನೆಲೆಸಿದ್ದು, ಮೊದಲು ಆಹಾರ ತ್ಯಾಗ ಮಾಡಿ ಹಾಲು, ಮೊಸರು, ಮಜ್ಜಿಗೆ ಮೊದಲಾದ ಸ್ನಿಗ್ಧ ಪದಾರ್ಥಗಳನ್ನು ಸೇವಿಸು ವರು. ನಂತರ ಇವನ್ನೂ ಬಿಟ್ಟು ಕೇವಲ ಬಿಸಿ ನೀರನ್ನು ಸೇವಿಸುವರು. ಕೆಲಕಾಲಾ ನಂತರದಲ್ಲಿ ನೀರನ್ನು ಬಿಟ್ಟು, ನಿರಾಹಾರರಾಗಿದ್ದು ಆತ್ಮ ಸ್ವರೂಪ, ವಿಷಯ ಸ್ವರೂಪಗಳ ಬಗೆಗೆ ತಿಳಿಯುತ್ತಾ, ಪಂಚಪದ ಸ್ಮರಣೆ ಮಾಡುತ್ತಾ ದೇಹ ತ್ಯಾಗ ಮಾಡುವರು. ತಮಗೆ ಶಕ್ತಿ ಇರುವವರೆಗೆ 'ಣ' ಮೋಕಾರ ಮಂತ್ರ ಪಠಿಸುತ್ತಿದ್ದು

---

2. ಜೈನ ಆಚಾರ, ಪು. 129
3. ಅದೇ

ಕ್ಷೀಣರಾದಾಗ ಬಳಿಯಲ್ಲಿದ್ದ ಗುರು ಮಾಡಿದ ಮಂತ್ರ ಪಠನೆ ಕೇಳಿ ಮನದಲ್ಲಿ ಜಿನ ಧ್ಯಾನ ಮಾಡುತ್ತಾ ದೇಹತ್ಯಾಗಕ್ಕೆ ಸಿದ್ಧರಾಗುವರು. ಈ ದಿನಗಳಲ್ಲಿ ಅವರ ದೇಹದ ಭಂಗಿ, ಪರಿಸರಗಳನ್ನು ಗಮನಿಸಿ ಸಮಾಧಿಮರಣದ ವಿಶೇಷತೆಯಾಗಿ ಏಕ ಪಾರ್ಶ್ವ, ಪರ್ಯಂಕಾಸನ, ಪಾದೋಪದಾನ....ಮೊದಲಾಗಿ ಗುರುತಿಸುವರು. ಹೀಗೆ ಸಲ್ಲೇಖನಗೊಳ್ಳಲು ವ್ರತಧಾರಿಯು ನೆಲೆಸಿದ್ದ ಸ್ಥಳವನ್ನು 'ನಿಶಿಧಿ' ಎನ್ನುವರು. 'ನಿಶಿಧಿ' ಪದದ ಅರ್ಥದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆಯಾದರೂ, 'ಸಲ್ಲೇಖನ', 'ಸನ್ಯಸನ'ಗಳಿಗೆ ಪರ್ಯಾಯ ಪದವಾಗಿ 'ನಿಶಿಧಿ' ಪದವನ್ನು ಹಲವೆಡೆ ಬಳಸಲಾಗಿದೆ. ಭಗವತೀ ಆರಾಧನಾ ಗ್ರಂಥವು-"ವ್ರತಧಾರಿಯು ದೇಹ ತ್ಯಾಗ ಮಾಡಿದ ಸ್ಥಳವನ್ನು ನಿಶಿಧಿ ಎಂದು ಕರೆದಿದ್ದರೆ", ಆಚಾರಾಂಗ ಸೂತ್ರವು-"ವ್ರತ ಧಾರಿಯು ಆಗಮಗ್ರಂಥಗಳ ಪಠನಕ್ಕೆಂದು ಆರಿಸಿದ ಪವಿತ್ರ ಸ್ಥಳವನ್ನು, ಅವನು ೧೦ನೇ ಪರಿಷಹ (ಮಲಗುವ ರೀತಿ)ವನ್ನು ಗೆದ್ದ ಸ್ಥಳವನ್ನು ನಿಶಿಧಿ" ಎಂದು ಕರೆದಿದೆ. ಡಾ. ಪಿ. ಬಿ. ದೇಸಾಯಿಯವರು ಸ್ಪಷ್ಟವಾಗಿ-"ನಿಶಿಧಿಯು ಸತ್ತವರಿಗಾಗಿ ಕಟ್ಟಿದ ಸ್ಮಾರಕವಲ್ಲ, ವ್ರತಧಾರಿಯು ದೇಹತ್ಯಾಗ ಮಾಡಿದ ಸ್ಥಳ" ವೆಂದಿರುತ್ತಾರೆ. ಷ.ಶೆಟ್ಟರ್ ಅವರು'ನಿಶಿಧಿ' ಪದದ ಅರ್ಥವ್ಯಾಪಕತೆಯನ್ನು ಗಮನಿಸಿ ಈ ಪದವು "ಮುನಿಯು ಇದ್ದ ಸ್ಥಳವನ್ನು, ಧರಿಸಿದ್ದ ಭಂಗಿಯನ್ನು, ಅವನ ಮಾನಸಿಕ ಸ್ಥಿತಿಯನ್ನೂ, ಅವನ ದೇಹವನ್ನು ಸಂಸ್ಕರಿಸಿದ ಸ್ಥಳವನ್ನೂ ಪ್ರತಿನಿಧಿಸುತ್ತದೆ" ಎಂದಿದ್ದಾರೆ.[4]

ಸಲ್ಲೇಖನ ಧರಿಸಿ ದೇಹತ್ಯಾಗ ಮಾಡಿದವರ 'ಮರಣ'ವನ್ನು ಉಲ್ಲೇಖಿಸುವ ಅವರ ತಪದ ಮಹತ್ವವನ್ನು ದಾಖಲಿಸುವ ಸ್ಮಾರಕವೇ 'ನಿಶಿಧಿ ಶಾಸನ' ವೆನ್ನ ಬಹುದು. ವ್ರತಧಾರಿಯು ದೇಹತ್ಯಾಗ ಮಾಡಿದ ಸ್ಥಳದಲ್ಲೂ ಜಿನಮತದ ಪವಿತ್ರ ನಿರ್ವಾಣ ಕ್ಷೇತ್ರದಲ್ಲಿ ಪರೋಕ್ಷ ವಿನಯಾರ್ಥವಾಗಿ ಇವನ್ನು ನಿರ್ಮಿಸಿದ್ದಾರೆ. 'ಸದ್' ಧಾತುವಿನಿಂದಾದ ಈ ಪದಕ್ಕೆ ಕುಳಿತುಕೋ, ವಿರಮಿಸು ಎಂಬರ್ಥವಿದ್ದು ಇಲ್ಲಿ ಆತ್ಮವು ವಿರಮಿಸಿದ್ದನ್ನು ಸೂಚಿಸುತ್ತಿದೆ. ಶ್ರವಣಬೆಳ್ಗೊಳದಲ್ಲಿ ಭದ್ರಬಾಹು ಭಟಾರಕರ ನಿಶಿಧಿಯನ್ನು ಚಂದ್ರಗುಪ್ತಮುನಿ ಪೂಜಿಸುತ್ತಿದ್ದನೆಂಬುದು ತಿಳಿದಿದ್ದು, ಇದರ ಪ್ರಾಚೀನತೆ ಮತ್ತು ಮಹತ್ವವನ್ನು ಸೂಚಿಸುತ್ತದೆ.

ಹಳೇಬೀಡಿನ ನಿಶಿಧಿ ಶಾಸನಗಳನ್ನು ಗಮನಿಸುವಾಗ ಈ ಶಾಸನಗಳ ಪಾಠದಷ್ಟೇ ಶಾಸನ ಶಿಲ್ಪಗಳೂ ಗಮನಾರ್ಹವಾಗಿವೆ. ಆರಂಭಕಾಲದ ನಿಶಿಧಿ ಶಾಸನ ಗಳಲ್ಲಿ ಶಿಲ್ಪವಿರದೇ ಕೇವಲ ಪಾಠವನ್ನು ಮಾತ್ರ ಕಾಣುತ್ತೇವೆ. ಸು ೮-೯ನೇ ಶತಮಾನದ ನಿಶಿಧಿ ಶಾಸನಗಳ ಪಾಠವು ಕಾವ್ಯಮಯವಾಗಿ ದೀರ್ಘವಾಗಿರುತ್ತವೆ. ಹಲವು ನಿಸಿಧಿ ಸ್ತಂಭಶಾಸನಗಳೂ ನಿರ್ಮಿತವಾಗಿವೆ. ಈ ಕಾಲದಲ್ಲಿ ಜಿನ ಭಕ್ತರು,

---

4. ಡಾ|| ಷ. ಶೆಟ್ಟರ್ : ಇನ್ ವೈಟಿಂಗ್ ಡೆತ್, ಪು. 12

ಮುನಿಗಳು ರೂಪಿಸಿದ ನಿಶಿಧಿಯಾಗಿದ್ದಾಗ, ಸಾಧಾರಣವಾದ ಅತಿ ಎತ್ತರವಲ್ಲದ ಕಂಬವಾಗಿರುತ್ತದೆ. ಕಂಬದ ಮೇಲ್ಭಾಗದಲ್ಲಿನ ಕೂಟದಲ್ಲಿ ಆಸೀನ ಜಿನ ಬಿಂಬವನ್ನು ಕಾಣಬಹುದು. ಇಂತಹ ಸಾಮಾನ್ಯವಾದ ನಿಶಿಧಿ ಶಾಸನವೊಂದನ್ನು ಮೋನಿ ಭಟಾರಕರ ಸ್ಮಾರಕವಾಗಿ ನಿಲ್ಲಿಸಿರುವುದನ್ನು ಕಾಣಬಹುದು. ಇದರ ನಂತರ ೧೩ನೇ ಶತಮಾನದವರೆಗೆ ಹಳೇಬೀಡಿನಲ್ಲಿ ಬೇರಾವ ನಿಶಿಧಿ ಶಾಸನಗಳೂ ಲಭ್ಯವಿಲ್ಲದಿರುವುದು ಆಚ್ಚರಿಯ ಸಂಗತಿಯಾಗಿದೆ.

ಆದಿನಾಥ ಬಸದಿಯ ಮುಂದಿರುವ ನಿಶಿಧಿ ಶಾಸನದಲ್ಲಿ ಇಬ್ಬರು ದಿಗಂಬರ ಮುನಿಗಳನ್ನು ಕೆತ್ತಲಾಗಿದ್ದು, ಇವರಲ್ಲಿ ಎಡಭಾಗದ ಮುನಿ ವ್ಯಾಖ್ಯಾನ ಮಾಡುತ್ತಿದ್ದಾನೆ. ಬಲಭಾಗದಲ್ಲಿರುವ ಮುನಿ ಅಂಜಲೀಬದ್ಧನಾಗಿ ಕುಳಿತು ಕೇಳುತ್ತಿದ್ದಾನೆ. ಇವರಿಬ್ಬರ ನಡುವೆ ವ್ಯಾಸ ಪೀಠವಿದೆ. ಮುನಿಗಳ ತೊಡೆಯ ಮೇಲೆ ಪಿಂಛವಿದೆ. ಅವರ ಬಲಭಾಗದಲ್ಲಿ ಕಮಂಡಲವಿದೆ. ಸಾಮಾನ್ಯವಾಗಿ ಸಲ್ಲೇಖನ ವ್ರತಧಾರಿಯು ವ್ಯಾಸಪೀಠದ ಎಡಭಾಗದಲ್ಲಿ ಕುಳಿತು ಕೇಳುತ್ತಿರುತ್ತಾನೆ.ಆದರೆ ಇಲ್ಲಿ ವ್ರತಧಾರಿಯೇ ವ್ಯಾಖ್ಯಾನ ಮಾಡುತ್ತಿರುವಂತೆ ಕೆತ್ತಲಾಗಿದೆ. ಇದು ಬಾಳಚಂದ್ರ ಮುನಿಗಳ ನಿಶಿಧಿಯಾಗಿದ್ದು, ನೇಮಿಚಂದ್ರಾಚಾರ್ಯರು ಕೇಳುತ್ತಿರುವ ಮತ್ತೊಬ್ಬ ಮುನಿಯಾಗಿದ್ದಾರೆ. ಈ ಶಾಸನದ ಇನ್ನೊಂದು ಮುಖದಲ್ಲಿ ಬಾಳಚಂದ್ರ ಮುನಿಗಳಿಗೆ ಸಂಬಂಧಿಸಿದ ವಿವರಗಳಿವೆ. ಈ ನಿಶಿಧಿ ಶಾಸನವು ಚಿಕ್ಕ ಕೋಷ್ಟದ ವಿನ್ಯಾಸದಲ್ಲಿ ರಚಿತವಾಗಿದ್ದು, ಇದರ ಪ್ರಸ್ತರದ ತಳಗಳಲ್ಲಿ ಪಂಚ ಪರಮೇಷ್ಠಿಗಳನ್ನು ಕೆತ್ತಲಾಗಿದೆ. ದೇವಾಲಯದ ಮಧ್ಯ ಭಾಗದಲ್ಲಿ ದೊಡ್ಡದಾಗಿ ಮುನಿಯ ಬಿಂಬವನ್ನು ಬಿಡಿಸಲಾಗಿದ್ದು, ಅವನ ಬಳಿ ಪಿಂಛ ಮತ್ತು ಕಮಂಡಲವನ್ನು ಕೆತ್ತಲಾಗಿದೆ. ಇಲ್ಲಿ ಪ್ರಮುಖವಾಗಿ ಬಿಡಿಸಿರುವ ಈ ಮುನಿಯೇ ಸಲ್ಲೇಖನಗೊಂಡಿರುವ ಬಾಳಚಂದ್ರಮುನಿ ಎಂದು ತಿಳಿಯಬಹುದಾಗಿದೆ. ಈ ಶಾಸನದಲ್ಲಿ ಸಲ್ಲೇಖನದ ಹಂತಗಳನ್ನು ಶಿಲ್ಪವು ತೋರಿಸುತ್ತಿದ್ದು, ಮೊದಲು ತಾವೇ ವ್ಯಾಖ್ಯಾನ ಮಾಡುತ್ತಿರುವ ಮುನಿ ಎರಡನೇ ಮುಖದಲ್ಲಿ ಸಮಾಧಿಸ್ಥರಾಗಿ ಪಂಚಪರಮೇಷ್ಠಿಗಳಲ್ಲಿ ಒಬ್ಬರಾಗಿದ್ದಾರೆ.

ಶಾನ್ತಿನಾಥ ಬಸದಿಯ ನವರಂಗದಲ್ಲಿ ಎರಡು ನಿಶಿಧಿ ಶಾಸನಗಳಿವೆ. ಈ ಶಾಸನ ಶಿಲ್ಪದಲ್ಲಿ ಹಿಂದಿನ ಶಾಸನದಂತೆ ಕೋಷ್ಟದ ಪ್ರಸ್ತರದ ಭಾಗದಲ್ಲಿ ಪಂಚಪರಮೇಷ್ಠಿಗಳಲ್ಲಿ ನಾಲ್ವರನ್ನು ಮಾತ್ರ ಕೆತ್ತಿದ್ದು, ಜಿನೆಯ ಶಿಲ್ಪವನ್ನು ಮಧ್ಯದಲ್ಲಿ ಕೆತ್ತಿದ್ದು ಸಮಾದಿಸ್ಥರಾದ ಮುನಿಯಾಗಿದ್ದಾರೆ. ಇದು ಅಭಯಚಂದ್ರರ ನಿಶಿಧಿಯಾಗಿದೆ. ಪಂಚಪರಮೇಷ್ಠಿಗಳನ್ನುಳ್ಳ ಇಲ್ಲಿಯ ಮತ್ತೊಂದು ನಿಶಿಧಿಶಾಸನವು ರಾಮಚಂದ್ರ ಮಲಧಾರಿದೇವರ ನಿಶಿಧಿಯಾಗಿದೆ. ಹೀಗೆ ಹಳೇಬೀಡಿನ ಮುನಿಗಳು 'ಸಿದ್ಧಂ'ಸ್ಥಾನ

ಗಳಿಸಿರುವುದನ್ನು ಸೂಚಿಸುವ ಇಂಥ ನಿಶಿಧಿಗೆಗಳು ವಿಶೇಷವಾದುವಾಗಿವೆ. ಇಂಥ ಪಂಚಪರಮೇಷ್ಠಿಗಳ ಶಿಲ್ಪದೊಂದಿಗೆ ಇರುವ ನಿಶಿಧಿಗಳನ್ನು ಬೇರಾವ ಕ್ಷೇತ್ರದಲ್ಲಿ ಕಾಣಲಾಗುವುದಿಲ್ಲ.

ಹಳೇಬೀಡಿನಲ್ಲಿ ಒಟ್ಟು ಎಂಟು ನಿಶಿಧಿ ಶಾಸನಗಳು ಲಭ್ಯವಿದ್ದು, ಇವುಗಳಿಂದ ಅಲ್ಲಿದ್ದ ಜಿನ ಮುನಿಗಳ ಬಗೆಗೂ, ಅವರ ಗಣಗಳ ಬಗೆಗೂ ತಿಳಿಯುತ್ತದೆ. ಅವರು ಆಚರಿಸಿದ್ದ ಸಲ್ಲೇಖನ ವಿಧಿಯ ಬಗೆಗೂ ಕೆಲವು ವಿಚಾರಗಳು ಗೋಚರವಾಗುತ್ತವೆ. ಸು. ೧೩ನೇ ಶತಮಾನದಲ್ಲಿ ದೇಶಿಯಗಣದ ಸಕಳಚಂದ್ರ ಮುನಿಗಳು, ದೇಶೀಗಣದ ಶ್ರೀಸಂಘದ ಇಂಗಳೇಶ್ವರದ ಬಳಿಯ ಬಾಳಚಂದ್ರ ಸಿದ್ಧಾಂತದೇವರು, ರಾಮಚಂದ್ರ ಮಲಧಾರಿ ದೇವರು, ದ್ರವಿಳಸಂಘ ನಂದಿಗಣದ ವರ್ಧಮಾನ ಮಲಧಾರಿದೇವರು, ಮೂಲಸಂಘ ಕಾಣೂರ್‌ಗಣ, ತಿಂತ್ರಿಣಿಗಚ್ಛದ ಹೇಮಚಂದ್ರ ಮಲಧಾರಿ ದೇವರು ಹಳೇಬೀಡಿನಲ್ಲಿ 'ವ್ರತಧರಿಸಿ' ಸಲ್ಲೇಖನಗೊಂಡಿದ್ದಾರೆ,

**ಸಕಳ ಚಂದ್ರ ಯತಿಗಳು :** ಇವರು ಕೊಂಡಕುಂದಾನ್ವಯದ ದೇಶೀಯ ಗಣಾಗ್ರಣಿ ಎನ್ನಿಸಿದ್ದ ಬಾಹುಬಲಿ ಸಿದ್ಧಾಂತ ಭಟಾರಕರ ಅಗ್ರಶಿಷ್ಯರಾಗಿದ್ದರು. ಅಖಿಳಶಾಸ್ತ್ರ ಪಾರಂಗತರೂ, ಸ್ಯಾದ್ವಾದವಿದ್ಯಾಕುಶಲಿಯೂ ಆದ ಇವರು ವಿಹಾರಾರ್ಥವಾಗಿ ಹೋಗುತ್ತಿದ್ದಾಗ ಪಾಂಡ್ಯದೇಶದ ಬಿಳಿಚಿ ಗ್ರಾಮದ ಬಸದಿಯಲ್ಲಿ, ಅವಸಾನಕಾಲ ವರಿತು 'ಅನಶನ ವಿಧಿ'ಯನ್ನು ಕೈಗೊಳ್ಳುತ್ತಾರೆ. ಮೂರು ದಿನಗಳು ನೋಂತು ದೇಹತ್ಯಾಗ ಮಾಡಿದ ಇವರಿಗೆ, ಪರೋಕ್ಷ ವಿನಯಾರ್ಥವಾಗಿ ಇವರ ಶಿಷ್ಯರಾದ ಅರ್ಹಣಂದಿ ತ್ರೈವಿದ್ಯದೇವರು ಭವ್ಯಜನರಿಂದ ನಿಶಿಧಿಯನ್ನು ಮಾಡಿಸಿದ್ದಾರೆ. ಶಾಸನವು ಸಕಳಚಂದ್ರರ ಮಹಿಮೆಯನ್ನು.

> "ಇತ್ಥಂ ಭೂತೋಯಮೀಶೋ ವರಜಿನಮುನಿ ಸದ್ಬೃಂದ ಮಧ್ಯೇ ವಿರಾಜಿನ್
> ಷಡ್ವಿಂಶತ್ಸದ್ಧಿರ್ತೋರೂರ್ಜ್ಜಿತ ಚರಿತಪರ : ಸಪ್ತತತ್ವ ಪ್ರವೇದಿ
> ಪ್ರಾಯಶ್ಚಿತ್ತಾದಿ ಷಟ್ಕ ದ್ವಿಗುಣಿತ ಸುತಪಾಶ್ಚರ್ಯ್ಯವರ್ಯ್ಯ ಸಿದ್ಧೋ
> ದ್ವಾತ್ರಿಂಶದ್ಭಾಗ ಸದ್ಭಾವನಯುತ ಸಕಳೇನ್ದು ಬ್ರತೀನ್ದ್ರೋ ವಿಭಾತಿ||

ಎಂದು ಹೊಗಳಿದೆ.[5] ಸಲ್ಲೇಖನ ಧರಿಸಿದ ಮುನಿಗಳು ಸಂಘ ಪರಿತ್ಯಾಗವಾಡಿ, ದಿಗಂಬರರಾಗಿ ಮೂರು ಸಿದ್ಧ ಶಿಲಾಸ್ಥಳಗಳನ್ನು ಸಂದರ್ಶಿಸಲು ವಿಹಾರ ಕೈಗೊಳ್ಳುತ್ತಿದ್ದರು. ನಿರಂತರವಾಗಿ ಪಂಚ ಪದಸ್ಮರಣೆಯಲ್ಲಿ ತಲ್ಲೀನರಾಗಿರುತ್ತಿದ್ದ ಇವರು ಅಂತಹ ಒಂದು

5. ಎ. ಕ. 9 (ಕ. ಅ. ಸಂ) ಬೇಲೂರು 347

ಪವಿತ್ರ ಭೂಮಿಯಲ್ಲಿ ದೇಹತ್ಯಾಗ ಮಾಡುತ್ತಿದ್ದರೆಂದು ಜಿನಸೇನಾಚಾರ್ಯರು ತಿಳಿಸು ತ್ತಾರೆ. ಈ ಕಾರಣದಿಂದಾಗಿ ಹಳೇಬಿಡಿನ ಗುರುಗಳಲ್ಲೊಬ್ಬರಾದ ಸಕಳ ಚಂದ್ರರು ಬಿಳಿಚಿ ಗ್ರಾಮದಲ್ಲಿ ಸಮಾಧಿಸ್ಥರಾದರೆಂದು ತಿಳಿಯಬಹುದು.

**ಬಾಳಚಂದ್ರ ಸಿದ್ಧಾಂತ ದೇವ :** ಇವರು ಮೂಲಸಂಘದ ಕೊಂಡಕುಂದಾನ್ವಯದ ಇಂಗಳೇಶ್ವರ ಬಳಿಯ ಶ್ರೀ ಸಮುದಾಯದ ಮಾಘಣಂದಿ ಭಟಾರಕರ ಶಿಷ್ಯರಾಗಿ ದ್ದರು. ಈ ಬಾಳಚಂದ್ರದೇವರು ವ್ರತಧಾರಿಗಳಾದ ಮೇಲೆ ಮಾಡಿದ ಆಗಮ ಪಠನ, ವ್ಯಾಖ್ಯಾನಗಳನ್ನು ಕೇಳುತ್ತಿದ್ದ ನೇಮಿಚಂದ್ರ ಪಂಡಿತ ದೇವರು ಶೃತಗುರುಗಳಾಗಿ ದ್ದರು. ಇವರ ಪ್ರಿಯ ಶಿಷ್ಯರಾದ ಅಭಯಚಂದ್ರ ಪಂಡಿತ ದೇವರು ಗುರುಗಳಾದ ಬಾಳಚಂದ್ರರ ಕಾಯವು ಕ್ಷೀಣಿಸುತ್ತಿದ್ದಾಗ ಅವರಿಗೆ ಶಾಸ್ತ್ರಾಗಮಗಳನ್ನು ಬೋಧಿಸಿ 'ದೀಕ್ಷಾಗುರು' ಗಳಾದರೆಂದು ಮತ್ತೊಂದು ಶಾಸನದಿಂದ ತಿಳಿಯುತ್ತದೆ.[6] ಶಾಸನವು 'ಜಿನಮುಖದಿಂದ ಬರುತ್ತಿರುವಂತೆ ಇವರ ವದನದಿಂದ ಬರುವ ದಿವ್ಯವಾಣಿಯನ್ನು' ಕೇಳಿ ಮೆಚ್ಚಿ ಲೋಕದ ಕವಿಗಳೆಲ್ಲರೂ, ಇವರನ್ನು ಪರಮಾದರದಿಂದ ಕಾಣುತ್ತಿದ್ದ ರೆಂದಿದೆ. 'ಸಂಖ್ಯಾತೀತ ಗುಣಗಳಿಂದಾದ ಸೊಗಸಾದ ಧರ್ಮವೆಂಬ ಧನಸ್ಸಿನೊಂದಿಗೆ ಅನಂತ ಬಾಣಗಳನ್ನು ಹಿಡಿದು ನಿಂತಿದ್ದ ಇವರೆದುರಿಗೆ ಹರಿಹರವಿಧ್ವಂಸಕರನಾದ' ಪಂಚಬಾಣನೆನಿಸಿದ ಕಾಮನು ಹೋರಾಡಲು (ಹೆದರಿದನೆಂದು) ಆಶಿಸುತ್ತಾನೆಯೇ? ಎಂದು ಇವರ ಜಿತೇಂದ್ರಿಯತೆಯನ್ನು ಶ್ಲಾಘಿಸಿದೆ. ಈ ಶಾಸನ ಪಾಠದ ಭಾಗದಲ್ಲಿ ಜಿಹ್ವಾಮೂಲೀಯದ (ಧರ್ಮ× ಕ ಯೇಷ) ಪ್ರಯೋಗವಿದ್ದು, ೧೩ನೇ ಶತಮಾನ ದಲ್ಲಿ ಕನ್ನಡ ಭಾಷೆಯ ಸ್ಥಿತ್ಯಂತರದ ಘಟ್ಟವನ್ನು ಸೂಚಿಸುತ್ತದೆ. ಕೇಶಿರಾಜನ ಶಬ್ದಮಣಿ ದರ್ಪಣದ ನಿಯಮಗಳು ಜನಮನದಲ್ಲಿ ಇನ್ನೂ ನಾಟಿರಲಿಲ್ಲವೆಂಬುದನ್ನು ಇಲ್ಲಿ ಕಾಣಬಹುದಾಗಿದೆ. ಸುಜ್ಞಾನಿಗಳಾದ ಬಾಳಚಂದ್ರ ಯೋಗಿಗಳು ತಮ್ಮ ಬಳಿ ಇರುವ ಭವ್ಯ ಜನರಿಗೆ ಎಲ್ಲರಿಗೂ ಉಪಕಾರಿಯಾದ ವಿಹಿತಾಚಾರಗಳನ್ನು, ಶಾಸ್ತ್ರಗಳನ್ನು ಪ್ರೀತಿಯಿಂದ ಮಾಡಲು ಕಲಿಸಿ, ಆಪ್ತನಾದ ಮುಕ್ತಿ ಸಖನನ್ನು ಪಡೆಯಬೇಕಾದ 'ದ್ವಾದಶಾನು ಪ್ರೇಕ್ಷೆ'ಗಳನ್ನು ಬೋಧಿಸುತ್ತಿದ್ದರು. ಆದ್ದರಿಂದಲೇ ಇವರನ್ನು

> ಶ್ರೀ ಜೈನಾಗಮವಾರ್ಧಿ ವರ್ಧನ ವಿಧುಃ ಕಂದರ್ಪದರ್ಪಾಪಹೋ
> ಭಬ್ಯಾಂಭೋಜ ದಿವಾಕರೋ ಗುಣನಿಧಿ ಕಾರುಣ್ಯ ಸಾಧೋದಧಿಃ |
> ಸ ಶ್ರೀಮಾನಭಯೇಂದು ಸನ್ಮುನಿಪತಿ ಪ್ರಖ್ಯಾತ ಶಿಷ್ಯೋತ್ತಮೋ
> ಜೀಬ್ಯಾತ್ಕಾವನಿಶನ್ನಿಜಾತ್ಮಾನಿರತೋ ಬಾಲೇಂದು ಯೋಗೀಶ್ವ(ರೋ)||–
> ಎಂದಿದೆ.[7] [ಶಾ. ವಿಕ್ರೀಡಿತ]

6. ಅದೇ—ಬೇಲೂರು 402
7. ಅದೇ—ಬೇಲೂರು 401

ಇವರು ತಮ್ಮ ಸಾಧನೆಯಿಂದ ಅವಸಾನಕಾಲವನ್ನು ತಿಳಿದು, ಭಕ್ತ ಜನರನ್ನು, ಶಿಷ್ಯರನ್ನು ಕರೆದು ತಮಗೆ ಭಾದ್ರಪದ ಶುದ್ಧ ದ್ವಾದಶಿ ಬುಧವಾರದ ಮಧ್ಯಾಹ್ನ ಕಾಲದೊಳು ಸಮಾಧಿಯಾಗುವುದೆಂದು ತಿಳಿಸಿ ಅವರಿಗೆ ಧರ್ಮೋಪದೇಶ ಮಾಡುತ್ತಾರೆ. ತಾವು ಸನ್ಯಸನವನ್ನು ಧರಿಸುವ ಮೊದಲು, ತಮ್ಮಿಂದಾಗಿರಬಹುದಾದ ಲೋಪ ದೋಷಗಳನ್ನು (ಕ್ಷಮಿಸಲು ಕೇಳಿ) ಅರಿತು ಪಶ್ಚಾತ್ತಾಪ ಪಟ್ಟು ಸಂಘದ ಒಪ್ಪಿಗೆ ಪಡೆದು ಸಕಳ ನಿವೃತ್ತಿಯನ್ನು ಮಾಡಿ 'ಸನ್ಯಸನ'ವನ್ನು ಸ್ವೀಕರಿಸಿದರೆಂದು ತಿಳಿದು ಬರುತ್ತದೆ. ಇವರು ತಮ್ಮ ಮರಣದ ಬಗೆಗೆ ಖಚಿತವಾಗಿ ತಿಳಿದು ಕೊಂಡದ್ದನ್ನು ಉಲ್ಲೇಖಿಸುತ್ತಾ ಇವರನ್ನು ತಮ್ಮ ಕಣ್ಣಿನ ಪಕ್ಷ್ಮಗಳ ಸ್ಥಿತಿಯನ್ನು ಕಂಡು ಪ್ರಮಾಣಿಸಿ ತಿಳಿದುಕೊಂಡು ಸಮಾಧಿಸ್ಥರಾದ ದಕ್ಷರಾದಸನ್ಮುನಿಗಳೆಂದು ಹೊಗಳಿದೆ.[8] ಮಾಘಣಂದಿ ಮುನಿಯು ಮರಣ ವಿಭಕ್ತಿಯ ಬಗೆಗೆ ತಿಳಿಸುತ್ತಾ, ವ್ರತಧಾರಿಯು ತನ್ನ ಕಣ್ಣಿನ ದೀಪ್ತಿಯು ಕಾಂತಿಯು ಕುಂದುತ್ತಿರುವುದನ್ನು ಲೆಕ್ಕ ಹಾಕಿಕೊಂಡು ಮರಣದ ಸಮಯವನ್ನು ಖಚಿತವಾಗಿ ತಿಳಿದು ಸಮಾಧಿಸ್ಥನಾದ ನೆಂದು ತಿಳಿಸಿದ್ದಾರೆ.[9]

ಇದರಂತೆ ತಮ್ಮ ಕಾಲಾವಧಿಯನ್ನರಿತು ಪಂಚಪರಮೇಷ್ಠಿಗಳ ಸ್ವರೂಪವನ್ನು ಧ್ಯಾನಿಸುತ್ತಾ–"ಸ್ವಸಮಯ ಪರಸಮಯಗಳನ್ನು ಮೆಚ್ಚಿ ಉತ್ತಮ ಸಮಾಧಿ ಯನ್ನು" ಪಡೆಯುತ್ತಾರೆ. ಹೀಗೆ ನಿರ್ಮೋಹಸಂಪತ್ತಿಯನ್ನು ಗಳಿಸಿದವರ ಮರಣವು 'ಉತ್ತಮ ಸಮಾಧಿ' ಎನಿಸುವುದು. ತನ್ನ ಮರಣಕಾಲವನ್ನರಿತು ಸಲ್ಲೇಖನವ್ರತಧಾರಿಯಾಗಿ ಪಂಚ ಪರಮೇಷ್ಠಿಗಳ ಸ್ವರೂಪವನ್ನು ಧ್ಯಾನಿಸುತ್ತಾ, ಶರೀರವನ್ನು ಸವೆಸುತ್ತಾ ಶಾಂತಿಯಿಂದ ಪ್ರಾಣತ್ಯಾಗ ಮಾಡುವ ವಿಧವನ್ನು–ಭಕ್ತ ಪ್ರತ್ಯಾಖ್ಯಾನ ಮರಣವೆನ್ನುತ್ತಾರೆ. ಈ ರೀತಿಯ ಸಲ್ಲೇಖನವನ್ನು ಆಚರಿಸುವಾಗ ವ್ರತಧಾರಿಯು ತನ್ನ ಕಾಯ ಮತ್ತು ಕಷಾಯಗಳನ್ನು ಉತ್ತಮ ರೀತಿಯಲ್ಲಿ ಕೃಶಗೊಳಿಸುತ್ತಾನಲ್ಲದೆ, ತನ್ನ ಸಂಘದವರನ್ನೆಲ್ಲ ಕ್ಷಮಿಸಿ, ಆಚಾರ್ಯರಲ್ಲಿ ತಾನೂ ಕ್ಷಮೆ ಬೇಡುತ್ತಾನೆ. ಅನುಮತಿ ಬೇಡಿ, ವ್ರತ ಸ್ವೀಕರಿಸುತ್ತಾನೆ; ಹೀಗೆ ತನ್ನ 'ಮರಣ'ವನ್ನು ಖಚಿತವಾಗಿ ತಿಳಿದು ಸಂಘದ ವ್ಯವಸ್ಥೆಯನ್ನು ಅನುಗೊಳಿಸಿ, ಧರ್ಮೋಪದೇಶ ಮಾಡುತ್ತಾನೆ. ಸಂಘದ ಗಣಧರರಿಗೂ ಧರ್ಮೋಪದೇಶ ಮಾಡಿ, ಸಲ್ಲೇಖನಗೊಳ್ಳುವ ವಿಧವನ್ನು 'ಅನುಶಾಸನ ಮರಣ'ವೆಂದು ಕರೆಯುವರು[10]. ಭಗವತೀ ಆರಾಧನ ಗ್ರಂಥವು ಈ ವಿಧದ ಬಗೆಗೆ ಹೆಚ್ಚಿನ ವಿವರಗಳನ್ನು ನೀಡುತ್ತದೆ. ಹೀಗೆ ಉತ್ತಮ ಸಮಾಧಿಯನ್ನು ಸಾಧಿಸಿದ ಬಾಳಚಂದ್ರ ಮುನಿಗಳು ಮಂತ್ರ

---

8. ಅದೇ—ಬೇಲೂರು 402
9. ಪದಾರ್ಥಸಾರ, ಪು. 353
10. ಡಾ॥ ಷ ಸೆಟ್ಟಾರ್, ಪರ್ಸೂಯಿಂಗ್ ಡೆತ್, ಪು. 39

ತಂತ್ರಗಳಲ್ಲೂ ಸಿದ್ಧ ಹಸ್ತರಾಗಿದ್ದರೆಂಬುದನ್ನು ಶಾಸನವು ದೃಢೀಕರಿಸುತ್ತದೆ. ಇವರ ಸ್ಮಾರಕದಲ್ಲಿ–ಒಂದು ಸಿದ್ಧ ಚಕ್ರವಿದ್ದು ಇದರ ಬಳಿಯಲ್ಲಿ "ಓಂ ಹ್ರೀಂ ಹರ್ಪವ್." ಎಂಬ ಮಂತ್ರವನ್ನು ಕೆತ್ತಲಾಗಿದೆ. ಸಲ್ಲೇಖನದ ವಿಧಿ ವಿಚಾರಗಳನ್ನೊಳಗೊಂಡ ಈ ನಿಶಿಧಿ ಶಾಸನವು, ನಿಶಿಧಿಸ್ಮಾರಕಗಳ ಅಧ್ಯಯನದಲ್ಲಿ ಮಹತ್ವದ್ದಾಗಿದೆ ಮತ್ತು ಬಾಳ ಚಂದ್ರ ಮುನಿಗಳ ತಪಸ್ಸಾಧನೆಯ ಮಹತ್ವವನ್ನು ವಿವರಿಸಿದೆ.

**ವಿರ್ಧಮಾನ ಮಲಧಾರಿ ದೇವರು** :–ಶ್ರೀಮದ್ದ್ರಮಿಳಗಣದ ನಂದಿ ಸಂಘದ ಗಣಧರ ದೇವರ ಶಿಷ್ಯರಾದ ವರ್ಧಮಾನ ಮಲಧಾರಿದೇವರು ಭವ್ಯಜನರಿಗೆ ತಿಳಿಸಿ ಪರಿಗ್ರಹಗಳನ್ನಿಳಿಸಿ ಜಿನೇಂದ್ರನನ್ನು ಚಿತ್ತದೊಳು ಧರಿಸಿ ಸಮಾಧಿಸ್ಥರಾಗಿ ಇಂದ್ರ ಲೋಕವನ್ನು ಹೊಕ್ಕರೆಂದು ಶಾಸನ ತಿಳಿಸುತ್ತದೆ. ಇವರ ಮರಣ ಸಮಯದಲ್ಲಿ ಕಣಕಣಂದಿದೇವರು, ಚಂದ್ರಪ್ರಭ ಪಂಡಿತದೇವರು, ಭಾವಮಾಂದಿ ದೇವರು, ಪಾರಿಶ್ವ ದೇವರು ಸಮೀಪದಲ್ಲಿದ್ದರೆಂದು ತಿಳಿಯುತ್ತದೆ. ಇವರ ಶಿಷ್ಯರಾದ ವರಮಂತ್ರವಾದಿ ಎನಿಸಿದ್ದ ಆದಿದೇವಯೋಗಿವರನು ಭವ್ಯಜನರಿಂದ ನಿಶಿಧಿಯನ್ನು ಮಾಡಿಸಿದ್ದಾನೆ. ಈ ಶಾಸನದಿಂದ [ಬೇ. ೩೧೦] ವರ್ಧಮಾನ ಮುನಿಗಳು 'ಪಂಡಿತ ಮರಣ'ವನ್ನು ಸಾಧಿಸಿದರೆಂದು ತಿಳಿಯಬಹುದಾಗಿದೆ.

**ಹೇಮಚಂದ್ರ ತ್ರೈವಿದ್ಯ ದೇವರು** :–ಮೂಲಸಂಘದ ಕಾಣೂರುಗಣ ತಿಂತ್ರಿಣಿಗಚ್ಛದ ಶಿಖಾಮಣಿ ಎನಿಸಿದ ಹೇಮಚಂದ್ರ ತ್ರೈವಿದ್ಯ ದೇವರು 'ವಾದೀಭ ಕೇಸರಿ' ಎಂದೂ ಪ್ರಸಿದ್ಧರಾಗಿದ್ದರು. ಇವರು ಅಕ್ಷಯ ಸಂವತ್ಸರದ ಕಾರ್ತಿಕಮಾಸ, ಶುಕ್ಲಪಕ್ಷ ತ್ರಯೋದಶಿ ಗುರುವಾರದಂದು, —"ದೇಹ ಮತ್ತು ಆತ್ಮಗಳನ್ನು ಶುದ್ಧಗೊಳಿಸುತ್ತಾ, ಜಿನೇಂದ್ರನ ಸ್ಮರಣೆಯಲ್ಲಿ ಮುಳುಗಿ ಚೇತನವನ್ನು ನಿಶ್ಚಂಚಲ ಗೊಳಿಸಿದರು." ಶಾಸನವು [ಬೇ. ೩೮೩] ಇವರು ಅಸ್ತಂಗತರಾದುದನ್ನು ಕಂಡು 'ಕಾಮನು ಧೈರ್ಯದಿಂದ ತಲೆ ಎತ್ತಿ ಎದ್ದನೆಂದು, ಭೂಮಿಯಲ್ಲಿ (ಅಬೋಧತೆ) ಅವಿವೇಕವು ಹಬ್ಬಿ'ತೆಂದು, ಜನಜಳದಿಯು ಕದಡಿತೆಂದು ಸತ್ಯವು ಕೆಟ್ಟು ಹೋಗಿ (ದಾರಿ ತಪ್ಪಿ) ಧರ್ಮವು ಬೆದರಿ ಹಿಂಸರಿಯಿತೆಂದು, ಹೇಮಚಂದ್ರ ಮುನಿಯು ಆ ಕಾಲದಲ್ಲಿ ಜೈನಧರ್ಮಕ್ಕೆ ಕೋಟೆಯಂತಿದ್ದರೆಂದು ಬಣ್ಣಿಸಿದೆ. ಆದ್ದರಿಂದಲೇ ಇವರನ್ನು

"ಪ್ರದಾತಾ ಸೂಕ್ತಿರತ್ನಾನಾಂ ಶಾಸ್ತ್ರಾರೋಹಣ ಪರ್ವ್ವತಃ |
ಹೇಮಚಂದ್ರ ತ್ರಿವಿದ್ಯೇಮೇ ಗುರುಬ್ಭೂಯಾದ್ಭವೇ ಭವೇ ||–ಎಂದಿದೆ[11]

**ಅಭಯಚಂದ್ರ ಸಿದ್ಧಾಂತ ದೇವರು** :–ಮೂಲಸಂಘ ಕೊಂಡಕುಂದಾನ್ವಯದ ಪುಸ್ತಕಗಚ್ಛದ ಇಂಗುಳೇಶ್ವರ ಬಳಿಯ ಮಾಘನಂದಿಸಿದ್ಧಾಂತಕರ ಶಿಷ್ಯರಾದ ಅಭಯ ಚಂದ್ರ ಭಟ್ಟಾರಕರು ತಮ್ಮ ಅವಸಾನ ಕಾಲ ಪ್ರಾಪ್ತಿಯಾದುದನ್ನರಿತು ಸಲ್ಲೇಖನ

---

11. ಎ.ಕ. 9 (ಕ.ಅ.ಸಂ.), ಬೇಲೂರು 383

ವನ್ನು ಸ್ವೀಕರಿಸಿ-ಸರ್ವಾಹಾರವನ್ನು ತೊರೆದು, ಪರ್ಯಂಕಾಸನದಲ್ಲಿ ಕುಳಿತು ಜಗತ್ತು ಹೊಗಳುವಂತೆ ಅಕ್ಷೋಭತೆಯನ್ನು ಮೆರೆದರು. ಇವರು ಬಾಳಚಂದ್ರ ಮುನಿಗಳಂತೆಯೇ, ದೇಹತ್ಯಾಗಕ್ಕೆ ಮೊದಲು ತಮ್ಮ ಶಿಷ್ಯ ಬಾಳಚಂದ್ರ ಮುನಿಗೆ (ವಿನೆಯ) ಅನುಶಾಸನವನ್ನು ಮಾಡಿದ್ದಾರೆ. ಅಭಯ ಚಂದ್ರಯತಿಗಳನ್ನು ಶಾಸನವು,

> ಛಂದೋ ನ್ಯಾಯ ನಿಘಂಟು ಶಬ್ದ ಸಮಯಾಲಂಕಾರ ಷಟ್ಖಂಡವಾ
> ಗ್ಭೂಚಕ್ರಂ ವಿಸೃತಂ ಜಿನೇಂದ್ರ ಹಿಮವಜ್ಜಾತ ಪ್ರಮಾಣದ್ವಯೀ
> ಗಂಗಾ ಸಿಂಧುಯುಗೇನ ದುರ್ಮ್ಮತ ಖಗೋರ್ಬ್ಬೀ ಭೃದ್ಧಿ ವಾಯತ್ಸಗೀ
> ಚಕ್ರಾಕ್ರಾಂತ ಮತೋಭಯೆಂದು ಯತಿಪಃ ಸಿದ್ಧಾಂತ ಚಕ್ರಾಧಿಪ ||

ಎಂದಿದೆ.[12] ಇವರು, ತಮ್ಮ ಭವ್ಯಾಳಿಗೆ ಜಿನಾಗಮ ವಾಕ್ಸುಧೌಷಧವನ್ನು ಕೊಟ್ಟು, ಕಾರತ್ರಿದೋಷಗಳನ್ನು ಕಿತ್ತು ಹಾಕುತ್ತಿದ್ದರೆಂದು, ರತ್ನತ್ರಯ ರಕ್ಷೆ ಕಟ್ಟಿ ರಕ್ಷಿಸುವ 'ಭವರೋಗಸುವೈದ್ಯ' ರೆನ್ನಿಸಿದ್ದರು. ಈ ಮುಂದ್ರ ಸೈದ್ಧಾನ್ತಿಕರ ನಿಶಿಧಿಯನ್ನು ದೋರ ಸಮುದ್ರದ ಭವ್ಯನಖರರು ಮಾಡಿಸಿದ್ದಾರೆ.

**ರಾಮಚಂದ್ರ ಮಲಧಾರಿ ದೇವರು** :—ಇವರಿಗೆ ಮೇಲೆ ತಿಳಿಸಿರುವ, ಇಂಗಳೇಶ್ವರ ಬಳಿಯ ಶ್ರೀ ಸಮುದಾಯದ ಅಭಯಚಂದ್ರ ಸಿದ್ಧಾನ್ತ ದೇವರೇ ವಿದ್ಯಾಗುರುಗಳು ಮತ್ತು ಶ್ರುತಗುರುಗಳಾಗಿದ್ದರು. ಬಾಳಚಂದ್ರ ಪಂಡಿತರ ಪ್ರಿಯಾಗ್ರ ಶಿಷ್ಯರಾದ ರಾಮಚಂದ್ರ ಮಲಧಾರಿದೇವರು ತಮ್ಮ ತಪಸ್ಸಾಧನೆಯಿಂದ ತಮ್ಮ ಸಮಾಧಿಯ ಕಾಲವನ್ನು ತಿಳಿದು ಕೊಂಡು– 'ಶಾರ್ವರಿ ಸಂವತ್ಸರದ ಚೈತ್ರ ಬಹುಳ ತದಿಗೆ ಬೃಹವಾರದ ಅಪರಾಹ್ಣ ಕಾಲ'ದಲ್ಲಿ ತಮಗೆ ಸಮಾಧಿಯಾಗುವುದೆಂದು ಚಾತುರ್ವರ್ಣದವರಿಗೆ ತಿಳಿಸಿ ಎಲ್ಲರಿಗೂ ಧರ್ಮೋಪದೇಶ(ಅನುಶಾಸನ)ಮಾಡಿದರು. ಸನ್ಯಸನವನ್ನು ಸ್ವೀಕರಿಸುವ ಮೊದಲು 'ಕ್ಷಮಿತವ್ಯ'ವನ್ನು ಕೇಳಿ, ಸಂಘದ ಒಪ್ಪಿಗೆ ಪಡೆದು, ಸಕಳ ನಿವೃತ್ತಿ ಮಾಡಿ ಪಂಚ ಗುರು ಸ್ಮರಣೆ ಮಾಡುತ್ತ, ಪರ್ಯಂಕಾಸನದಲ್ಲಿ ಸಮಾಧಿಸ್ಥರಾದರು. ಇದು ಕೂಡ ಅನುಶಾಸನ ಮರಣವೇ ಆಗಿದ್ದು ಪಂಡಿತ ಮರಣದ ಭಕ್ತಪ್ರತ್ಯಾಖ್ಯಾನ ವಿಧದ ಸಲ್ಲೇಖನವಾಗಿದೆ. ಇವರನ್ನು ಶಾಸನವು

> ನಡೆವಡೆ ಬಾಹುದೂರದ ಯುಗಾಂತರಮಂ ನೆಱೆನೋಡದಾವಗಂ
> ನಡೆಯದ ಕಾಮನೀಕ ನಕಮಂ ಸಲೆ ಸೋಕದ ಕರ್ಕ್ಕಸಂಗಳಂ
> ನುಡಿಯದಹರ್ನ್ನಿಶಂ ವಿಕಥೆಯಂ ಮಱೆದಾಡದ ಮೋಹಪಾಶದೊಳು
> ತೊಡರದರಾ ಮಲಧಾರಿಯ....ಯಂ ವಿರಾಜಿಕುಂ ||

12. ಅದೇ, ಬೇಲೂರು 405

ಎಂದು ಹೊಗಳಿದೆ.[13] ಇವರು ಸಮಾಧಿಸ್ಥರಾಗುವ ಮೊದಲು ತಮ್ಮ ಪ್ರಿಯಾಗ್ರ ಶಿಷ್ಯರಾದ, ಶುಭಚಂದ್ರ ದೇವರಿಗೆ 'ಶ್ರೇಯೋಮಾರ್ಗೋಪದೇಶ'ವನ್ನು ಮಾಡಿ, ಸಂಘವನ್ನು ವ್ಯವಸ್ಥೆಗೊಳಿಸುತ್ತಾರೆ. ಇವರ ಗುರುಗಳಾದ ಬಾಳಚಂದ್ರ ಪಂಡಿತ ದೇವರು ಸಾರ ಚತುಷ್ಟಯಗ್ರಂಥಗಳನ್ನು ವ್ಯಾಖ್ಯಾನ ಮಾಡಿ, ವ್ರತಧಾರಿಯಲ್ಲಿ ಜಿನನಿಷ್ಠೆ ಬೆಳಗಿಸುತ್ತಾರೆ. ಹೀಗೆ ಪಂಡಿತಮರಣವನ್ನು ಸಾಧಿಸಿದ ರಾಮಚಂದ್ರ ಮಲಧಾರಿ ದೇವರ ನಿಶಿಧಿಯನ್ನು ಮಾಡಿಸುವಲ್ಲಿ ದೋರ ಸಮುದ್ರದ ಭವ್ಯ ಜನರು ಪಂಚ ಪರಮೇಷ್ಠಿಗಳ ಪ್ರತಿಮೆಯನ್ನು ಮಾಡಿಸಿ ಅವುಗಳಲ್ಲಿ ಸಮಾಧಿಸ್ಥರಾದ ಆಚಾರ್ಯರ ಪ್ರತಿ ಕೃತಿಯನ್ನು ಮಾಡಿಸಿ ಪ್ರತಿಷ್ಠಾಪನೆ ಮಾಡಿದ್ದಾರೆ. ಹೀಗೆ ಪಂಚಪರಮೇಷ್ಠಿಗಳಲ್ಲಿ 'ಆಚಾರ್ಯರ ಪ್ರತಿಕೃತಿ' ಯುಳ್ಳ ೨ ನಿಶಿಧಿಗೆಗಳು ಹಳೇಬೀಡಿನಲ್ಲಿದ್ದು, ಈ ಶಾಸನವು ನಿಶಿಧಿಗಳ ಅಧ್ಯಯನದಲ್ಲಿ 'ಪ್ರಮುಖಸ್ಥಾನ' ಗಳಿಸಿದೆ.

ಹಳೇಬೀಡಿನಲ್ಲಿ ಕೇವಲ ಮುನಿಗಳ ನಿಶಿಧಿಗಳೇ ಅಲ್ಲದೇ ಭವ್ಯರ ನಿಶಿಧಿಗಳೂ ದೊರೆಯುತ್ತವೆ. ೧೩ನೇ ಶತಮಾನದಲ್ಲಿದ್ದ ಮೂಲಸಂಘ ಕೊಂಡ ಕುಂದಾನ್ವಯದ ದೇಶೀಯ ಗಣಕ್ಕೆ ಸೇರಿದ್ದ ಮಂತ್ರನಯವಿದರೂ ಮಲಧಾರಿ ಪದ್ಮಪ್ರಭ ದೇವರ ಪ್ರಿಯ ಶಿಷ್ಯರಾದ ಮಾಧವಚಂದ್ರ ಮುನಿಗಳ ಗುಡ್ಡಿಯಾದ ಮಾರವ್ವೆ ದಣ್ಣಾಯಕಿತಿಯು ಇಲ್ಲಿ ನೋಂತು ದೇಹತ್ಯಾಗ ಮಾಡಿದ್ದಾಳೆ. ಇವಳ ಬಗೆಗೆ ಶಾಸನವು ಇಳಾ ವಿಖ್ಯಾತನಾದ ಕಲ್ಯಾಣ ದಂಡನಾಯಕ, ಕಾಳವ್ವೆಯರ ಮಗಳಾದ ಮಾರವ್ವೆಗೆ ವಿಜಯ ಪಾರ್ಶ್ವನಾಥ ದೇವರು ಪ್ರಿಯ ದೈವವಾಗಿದ್ದ ಮಾಧವ ಚಂದ್ರ ದೇವರನ್ನು ಗುರುವಾಗಿ ಪಡೆದು ಕೃತಾರ್ಥಳಾದಳೆಂದಿದೆ.[14] ಹೊಯ್ಸಳರ ಕಾಮ ದಂಡಾಧೀಶನ ಪತ್ನಿಯಾದ ಮಾರವ್ವೆಯೂ 'ಪಾವನ ಜಿನ ಚರಣ ಕಮಳ ಭೃಂಗೆ', 'ಮುನಿಗಳಾಹಾರಾಭಯ ಭೈಷಜ್ಯಶಾಸ್ತ್ರದಾನ ವಿನೋದೆ', 'ಬೋಧಾ ಬೋಧರತ್ನ ತ್ರಯಾರಾಧಕೆ' ಎಂದು ಬಣ್ಣಿಸಿದೆ.

ಇವಳಂತೆ 'ವಿಜಯಪಾರ್ಶ್ವಜಿನ ಪದರವಣ'ನಾದ, ಭವ್ಯಾವಳಿ ಮುಖ ಮಣಿ ನಿಕರನೂ ಜೀವದಯಾಪರಚರಿತನಾದ ತಿಪ್ಪಣನು ಇಲ್ಲಿ ಸಮಾಧಿಗಳಿಸಿದ್ದಾನೆ.[15] ಇವನು ಸರಸತಿ ಲೀಲಾದರ್ಪಣನೆನ್ನಿಸಿದ್ದು ಹೇಮಚಂದ್ರ ತ್ರೈವಿದ್ಯ ಗುರುಗಳ ನಿಶಿಧಿ ಯೊಂದಿಗೆ ಉಲ್ಲೇಖನಾಗಿರುವುದರಿಂದ ಅವರ ಗುಡ್ಡನಾಗಿದ್ದನೆಂದು ಊಹಿಸ

---

13 ಅದೇ, ಬೇಲೂರು 406

14. ಅದೇ, ಬೇಲೂರು, 381

15. ಆದೇ, ಬೇಲೂರು, 383

ಬಹುದಾಗಿದೆ. ಇದೇ ಶಾಸನವು ಹಳೇಬೀಡಿನ ಪಟ್ಟಣಾಧೀಶನಾದ ಆಡಕೆಯ ಪಾಯಸೆಟ್ಟಿಯು ಕ್ರೋಧನ ಸಂವತ್ಸರದ ಫಾಲ್ಗುಣ ಶುಕ್ಲ ಬಿದಿಗೆಯಂದು, ಸಲ್ಲೇಖನ ವಿಧಿಯನ್ನುತಾಳಿ 'ಪಂಚಪದ'ವನ್ನು ನೆನೆಯುತ್ತಾ ದೇಹತ್ಯಾಗ ಮಾಡಿದನೆಂದು ತಿಳಿಸುತ್ತದೆ. ಇವನ ಶಾಸನವು 'ವಿಜಯಪಾರ್ಶ್ವಜಿನ ಪದ ಪಾವನನಖ ಚಂದ್ರ'ನೆಂದೂ 'ಸಜ್ಜನ ಸಜೀವನಿಕರಹಿತ ಚರಿತ್ರ'ನೆಂದೂ ಹೊಗಳಿರುವುದಲ್ಲದೆ ಚಂದ್ರನ ಬೆಳದಿಂಗಳಿನಂತೆ ಸಂತೋಷವೀಯುತ್ತಿದ್ದ ಪಾಯ ದೇವನನ್ನು ಜೈನ ಮತದವರಾರು ತಾನೇ ಬಣ್ಣಿಸುವುದಿಲ್ಲವೆಂದು ಉದ್ಘೋಷಿಸಿದೆ. ಹೀಗೆ ಹಳೇಬೀಡು ಉತ್ತಮ ಭವ್ಯರು ನೆಲೆಸಿದ್ದ, ತಪೋಮಹಿಮೆಯಿಂದ ಕೂಡಿದ ಪವಿತ್ರ ಸ್ಥಳವಾಗಿತ್ತು. ಹಳೇಬೀಡಿನ ನಿಶಿಧಿ ಶಾಸನಗಳ ಅಧ್ಯಯನದಿಂದ ಒಟ್ಟಾರೆ ತಿಳಿದು ಬರುವುದೆಂದರೆ ಸಲ್ಲೇಖನಗೊಳ್ಳುವ ಮೊದಲು ಮುನಿಗಳು ತಮ್ಮ ಸಂಘದ ವ್ಯವಸ್ಥೆಯನ್ನು ನೇರ್ಪಡಿಸುತ್ತಿದ್ದರು, ಭವ್ಯ ಜನರಿಗೆ ಧರ್ಮೋಪದೇಶ ಮಾಡುತ್ತಿದ್ದರು.

೨) ಜಿನಮುನಿಗಳು ತಮ್ಮ ತಪಃಪ್ರಭಾವದಿಂದ– "ಅವಸಾನಕಾಲವನ್ನರಿತು 'ಸಲ್ಲೇಖನ' ಸ್ವೀಕರಿಸುತ್ತಿದ್ದರು ; ಸಲ್ಲೇಖನದ ಅವಧಿಯಲ್ಲಿ ಗ್ರಂಥಗಳ ಅಧ್ಯಯನ, ಪಠನ, ಚರ್ಚೆಗಳಾಗುತ್ತಿದ್ದವು.ಇದರಿಂದ ಇವರಿಲ್ಲದ ಸಮಯದಲ್ಲೂ ಜನರು ಜಾಗೃತರಾಗಿರಲು ಸಾಧ್ಯವಾಗುತ್ತಿತ್ತು. 'ಪಂಚ ಪದ'ಗಳ ಸ್ಮರಣೆ ಮಾಡುತ್ತ, ಆತ್ಮ ಸ್ವರೂಪವನ್ನರಿಯುತ್ತಾ, ಜಿನಸ್ಮರಣೆಯಲ್ಲಿ ದೇಹತ್ಯಾಗ ಮಾಡುತ್ತಿದ್ದರು.

೩) ಸಲ್ಲೇಖನಗೊಳ್ಳುವಾಗ ಅನೇಕ ಶಿಷ್ಯರು ಸಮೀಪದಲ್ಲಿರುತ್ತಿದ್ದರು. ನಿಶಿಧಿ ಪದ್ಯವನ್ನು ರಚಿಸಿದವರನ್ನು ಜಿನಸಭೆಯುಲ್ಲಿ ಗೌರವಿಸಲಾಗುತಿತ್ತು. ವರ್ಧಮಾನ ಮಲಧಾರಿ ದೇವರ ನಿಶಿಧಿ ಪದ್ಯವನ್ನು ರಚಿಸಿ ವರಕವಿ ಪದ್ಮನು 'ಅಗ್ರಪೂಜೆ' ಪಡೆದಿದ್ದಾನೆ.[16]

೪) ಮುನಿಗಳು ಭವ್ಯ ಜನರು ಒಟ್ಟಾಗಿ ಸೇರಿ ನಿಸಿದಿಗೆಗಳನ್ನು ಮಾಡಿಸುತ್ತಿದ್ದರು.[17] ಕೆಲವೊಮ್ಮೆ ಭವ್ಯರೇ ಮುಂದಾಗಿ ನಿಸಿದಿಗೆಗಳನ್ನು ಮಾಡುತ್ತಿದ್ದರೆಂದು ತಿಳಿಯುತ್ತದೆ[18] ನಿಸಿದಿಗೆಗಳನ್ನು ಮಾಡಿಸುವುದರಿಂದ ಪುಣ್ಯ ಪ್ರಾಪ್ತಿಯಾಗುತಿತ್ತು.

---

16. ಅದೇ, ಬೇಲೂರು 310

17 ಅದೇ,

18 ಬೇಲೂರು 406

೫) ಬಸದಿಯಲ್ಲಿ ನಿಸಿದಿಗೆಗಳನ್ನು ಕೆತ್ತಲು, ಜಿನ ಮೂರ್ತಿಗಳನ್ನು ನಿರ್ಮಿಸಲು ಬಸದಿ ಯೋಜರು ಇರುತ್ತಿದ್ದರು ; ಇಲ್ಲಿಯ ಶಾಸನವೊಂದು[19] 'ಪೊಲೆಯವ್ಮೋಜನ ಮಗ ಬಲ್ಲುಗ'ನನ್ನು ಉಲ್ಲೇಖಿಸಿದೆ.

೬) ಹಳೇಬೀಡಿನಲ್ಲಿ ವಾಸವಾಗಿದ್ದ ಮುನಿಗಳಲ್ಲಿ ಅನೇಕರು ಮಂತ್ರವಾದಿಗಳೂ ಇದ್ದರು, ಉದಾ. ಮುಲಧಾರಿ ಪದ್ಮ ಪ್ರಭಾದೇವರು, (೨) ಆದಿದೇವಯೋಗಿ ಗಳು ಮತ್ತೆ ಬಾಲಚಂದ್ರ ಪಂಡಿತ ದೇವರು....ಮೊದಲಾದವರು.

೭) ಹಳೇ ಬೀಡಿನಲ್ಲಿರುವ ನಿಶಿಧಿ ಸ್ಮಾರಕ ಶಿಲ್ಪಗಳು ವಿವಿಧ ಬಗೆಯುವಾಗಿದ್ದು ಕುತೂಹಲಕರವಾಗಿವೆ. ಶ್ರವಣ ಬೆಳ್ಗೊಳದಲ್ಲಿನೂರಾರು ನಿಶಿಧಿಶಾಸನಗಳು ಲಭ್ಯವಿದ್ದರೂ, ಅವು ಸಲ್ಲೇಖನ ದಾಖಲೆಗಳಾಗಿದ್ದು ಆದರ ವಿಧಿ ವಿಧಾನಗಳ ಬಗೆಗೆ ಹೆಚ್ಚು ವಿವರಗಳನ್ನು ನೀಡದಿರುವುದು, ಶಿಲ್ಪದ ದೃಷ್ಟಿಯಲ್ಲಿ ಒಂದೇ ರೀತಿಯಲ್ಲಿರುವುದನ್ನು ಕಂಡಾಗ ಹಳೇಬೀಡಿನ ನಿಶಿಧಿ ಶಾಸನಗಳ ಮಹತ್ವದ ಅರಿವಾಗುತ್ತದೆ. ನಿಶಿಧಿ ಸ್ಮಾರಕಗಳಲ್ಲಿ ಪಂಚ ಪರಮೇಷ್ಠಿಗಳೊಂದಿಗೆ ಆಚಾರ್ಯ ಪ್ರತಿಕೃತಿಯನ್ನೊಳಗೊಂಡ ಶಿಲ್ಪವು, ಪಂಚ ಪರಮೇಷ್ಠಿಗಳಲ್ಲೇ ಒಬ್ಬರನ್ನಾಗಿ 'ವ್ರತಧಾರಿ'ಯನ್ನು ಚಿತ್ರಿಸಿರುವ ಸ್ಮಾರಕಗಳೂ ಹಳೇಬೀಡನ್ನು 'ನಿರ್ವಾಣಕ್ಷೇತ್ರ'ಗಳಲ್ಲಿ ಒಂದಾಗಿಸಲು ಎಡೆ ಮಾಡಿಕೊಟ್ಟವೆ; 'ಸಲ್ಲೇಖನ'ದ ಬಗೆಗೆ ಅಧ್ಯಯನ ಮಾಡುವಲ್ಲಿ ಇವು ಗಮನಾರ್ಹವಾದ ಪ್ರಮುಖವಿಧದ ನಿಶಿಧಿ ಸ್ಮಾರಕಗಳಾಗಿವೆ.

○

---

19 ಅದೇ, ಬೇಲೂರು 388

ಡಾ|| ಜಿ. ಎಸ್. ದೀಕ್ಷಿತ್

# ವಿಜಯನಗರ ಸಾಮ್ರಾಜ್ಯ ಸ್ಥಾಪನೆ

ವಿಜಯನಗರ ಸಾಮ್ರಾಜ್ಯ ಸ್ಥಾಪಕರು ತೆಲುಗರು ಅಲ್ಲದಿದ್ದರೂ, ತೆಲುಗು ವಾದದಲ್ಲಿ ಎರಡು ಅಂಶಗಳಿಗೆ ಇತ್ತೀಚಿಗಿನ ಸಂಶೋಧನೆಯಿಂದ ಬೆಂಬಲ ಸಿಕ್ಕಿರುವುದನ್ನು ತೋರಿಸುವುದು ಈ ಲೇಖನದ ಉದ್ದೇಶ. ಈ ಅಂಶಗಳು ೧. ಸಂಗಮ ಸೋದರರು ಕಾಕತೀಯರ ಆಸ್ಥಾನದಲ್ಲಿ ಭಂಡಾರಿಗಳಾಗಿದ್ದರು. ೨) ಹೊಯ್ಸಳ–ಸಂಗಮರ ಸಂಬಂಧ ಮೈತ್ರಿಯುತವಾಗಿತ್ತೆಂಬುದರ ಬಗ್ಗೆ ಸಂಶಯ.

ಎನ್. ವೆಂಕಟರಮಣಯ್ಯನವರು ವಿಜಯನಗರ ಸ್ಥಾಪಕರು ತೆಲುಗರು ಎಂದು ವಾದಿಸಿದ್ದಾರೆ.[1] ಇವರ ವಾದದ ಪ್ರಕಾರ, ಸಂಗಮ ಸೋದರರು ಮೊದಲು ಕಾಕತೀಯರಲ್ಲಿ ಭಂಡಾರಿಗಳಾಗಿದ್ದರು. ೧೩೨೩ರಲ್ಲಿ ಆ ರಾಜ್ಯವು ನಶಿಸಿದ ಮೇಲೆ ಸಂಗಮರು ಕಂಪ್ಲಿ ರಾಜ್ಯದಲ್ಲಿ ಸೇವೆಗೈದರು. ಆ ರಾಜ್ಯಕ್ಕೂ ಹೊಯ್ಸಳರಿಗೂ ಯುದ್ಧವಾದಾಗ ಆ ಯುದ್ಧದಲ್ಲಿ ಸಂಗಮರು ಪಾಲ್ಗೊಂಡರು. ೧೩೨೭ರಲ್ಲಿ ಕಂಪ್ಲಿ ರಾಜ್ಯವು ನಾಶವಾದ ಮೇಲೆ ಸಂಗಮರು ಸ್ವತಂತ್ರರಾದಂತೆ ವರ್ತಿಸಿದರು. ಆಗಲೂ ಅವರು ಹೊಯ್ಸಳರ ಶತ್ರುಗಳಾಗಿ ಹೋರಾಡಿದರು. ಹೀಗೆ ಅವರು ಕಾಕತೀಯರ ಮಿತ್ರರು ಮತ್ತು ಹೊಯ್ಸಳರ ಶತ್ರುಗಳಾಗಿದ್ದುದಕ್ಕೆ ಕಾರಣ ಅವರು ತೆಲುಗರು ಎನ್ನುವುದು ವೆಂಕಟರಮಣಯ್ಯನವರ ಮತ.

ಎಸ್. ಕೆ. ಅಯ್ಯಂಗಾರ್, ಫಾದರ್ ಹೆರಾಸ್,

---

1. ಎನ್. ವೆಂಕಟರಮಣಯ್ಯ, Vijayanagara, origin of the city and the Empire, Madras, 1933

ಬಿ.ಎ. ಸಾಲೆತೊರೆ, ಪಿ. ಬಿ. ದೇಸಾಯಿ ಮತ್ತು ವಸುಂಧರಾ ಫಿಲಿಯೋಜಾ ಇವರು ಸಂಗಮ ಸೋದರರು ಕನ್ನಡಿಗರೆಂದು ವಾದಿಸಿದ್ದಾರೆ. ಈ ವಾದಕ್ಕೆ ಶಾಸನಗಳ ಆಧಾರವಿದೆ. ಈ ವಾದದ ಪ್ರಕಾರ ಸಂಗಮ ಸೋದರರು ಹಂಪೆಯ ಪರಿಸರ ದವರು.[2] ಅವರ ಶಾಸನಗಳು ಕನ್ನಡದಲ್ಲಿವೆ. ಹಂಪೆಯ ವಿರೂಪಾಕ್ಷ ಅವರ ಕುಲ ದೈವ. ಆದರ ಅಂಕಿತದಲ್ಲಿ ಇವರು ಆಳಿದರು. ಕನ್ನಡನಾಡು, ನುಡಿಗಳ ಬಗ್ಗೆ ಅವರಿಗೆ ಅಪಾರ ಪ್ರೀತಿ ಇತ್ತು. ಇವೆಲ್ಲಾ ಕಾರಣಗಳಿಂದ ಅವರು ಕನ್ನಡಿಗರೆನ್ನು ವುದು ಸ್ಪಷ್ಟ.

ತೆಲುಗುವಾದ ಆರಂಭವಾದದ್ದು ಕರ್ನಾಟಕದಲ್ಲಿ. ನಮ್ಮಲ್ಲಿ ಬರೆದಂಥ ವಿದ್ಯಾರಣ್ಯ ಕಾಲಜ್ಞಾನ, ಗುರುವಂಶ ಕಾವ್ಯ ಮತ್ತು ಕೆಳದಿ ನೃಪವಿಜಯ—ಈ ಗ್ರಂಥಗಳೆಲ್ಲಾ ವಿಜಯನಗರ ಸ್ಥಾಪನೆಯಾದ ೩೦೦–೪೦೦ ವರ್ಷಗಳ ನಂತರ ಬರೆದವು. ಇವುಗಳನ್ನು ಬರೆದ ಕಾಲಕ್ಕೆ ಇದ್ದ ವಿಜಯನಗರ ಅರಸರ ಸಂತತಿಯವರು ಆರವೀಡು ಮನೆತನದ ತೆಲುಗು ಜನರು. ಈ ಗ್ರಂಥಗಳ ಲೇಖಕರು ಈ ಕಾರಣದಿಂದ ಮೊದಲಿನಿಂದಲೂ ವಿಜಯನಗರದ ಅರಸರು ತೆಲುಗು ಜನರೆಂದು ಬರೆದಿರುವ ಹಾಗೆ ಕಾಣುತ್ತದೆ. ಈಗ ಹಾಗೆ ಹೇಳಲಿಕ್ಕೆ ಯಾವ ಕಾರಣವೂ ಇಲ್ಲ. ಅವರು ಓರಂಗಲ್ಲಿನಲ್ಲಿದ್ದಿರಬಹುದು. ಆದ್ದರಿಂದ ಅವರು ತೆಲುಗರು ಆಗುವುದಿಲ್ಲ.

ಸಂಗಮ ಸೋದರರ ಬಗ್ಗೆ ಈಗ ಯಾವುದಾದರೂ ವಾದವಿದ್ದರೆ, ಅದು ಅವರು ಎಲ್ಲಿಯವರು ಎಂದಲ್ಲ. ಅವರ ಬಗ್ಗೆ ಇತ್ಯರ್ಥವಾಗಬೇಕಾದ ಪ್ರಶ್ನೆ ಅವರಿಗೂ ಹೊಯ್ಸಳರಿಗೂ ಯಾವ ರೀತಿಯ ಸಂಬಂಧವಿತ್ತು ಎನ್ನುವುದು. ಅವರು ಕಂಪಿಲ ರಾಯನ ಅಧಿಕಾರಿಯಾಗಿದ್ದಾಗ ಹೊಯ್ಸಳರ ಜತೆಗೆ ಹೋರಾಡಿದರು. ಅದರ ಬಗ್ಗೆ ಪ್ರಶ್ನೆಯಿಲ್ಲ. ಅವರು ಕಂಪ್ಲಿಯಿಂದ ಹಂಪಿಗೆ ಬಂದು ಹೆಚ್ಚು ಕಡಿಮೆ ಸ್ವತಂತ್ರರಾಗಿ ಮೇಲುನೋಟಕ್ಕೆ ಹೊಯ್ಸಳರ ಅಧೀನರಾಗಿರಬೇಕಾದರೆ, ಅವರ ಸಂಬಂಧಗಳು ಹೇಗಿದ್ದವು ? ಲಭ್ಯವಿರುವ ಸಮಕಾಲೀನ ಆಧಾರಗಳಲ್ಲಿ ಇವರಿಬ್ಬರೂ ಸ್ಪಷ್ಟವಾಗಿ ಮಿತ್ರರೆಂದಾಗಲಿ ಅಥವಾ ಶತ್ರುಗಳೆಂದಾಗಲಿ ಹೇಳುವುದಿಲ್ಲ. ಬಹುಶಃ ರಾಜಕಾರಣ ದಲ್ಲಿ ಇಂತಹ ಪ್ರಶ್ನೆಗೆ ಉತ್ತರ ಸಿಗಲಿಕ್ಕಿಲ್ಲ. ಆದ್ದರಿಂದ ಅವರಿಬ್ಬರ ಮಧ್ಯೆ ನಡೆದ ವ್ಯವಹಾರಗಳಿಂದ ನಾವೇ ಊಹಿಸಬೇಕು. ಇತ್ತೀಚೆಗೆ ವಸುಂಧರಾ ಫಿಲಿಯೋಜಾ ಅವರು[3] ಇವರಿಬ್ಬರ ಸಂಬಂಧ ಅತ್ಯಂತ ಮೈತ್ರಿಯುತವಾಗಿತ್ತೆಂದು ಬರೆದಿದ್ದಾರೆ.

---

2. ಎ. ಕ. IV ಯಳಂದೂರು 46, ಕ್ರಿ. ಶ. 1376, ಪಂಪಾಪುರಿ ಪರಿಸರೇ ಭವ ಸಂಗಮಾಖ್ಯ !

3. ವಸುಂಧರಾ ಫಿಲಿಯೋಜಾ, ವಿಜಯನಗರ ಸಾಮ್ರಾಜ್ಯ ಸ್ಥಾಪನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1980

ಎಸ್. ರಾಜಶೇಖರರು[4] ಅವರು ಶತ್ರುಗಳಾಗಿ ಹೊಡೆದಾಡಿದರೆಂದು ಬರೆದಿದ್ದಾರೆ. ಒಂದನೆಯ ಹರಿಹರನು ಮಹಾಮಂಡಲೇಶ್ವರನೆಂಬ ಬಿರುದನ್ನು ಹೊತ್ತಿದ್ದನು. ಇದರಿಂದ ಈತನು ಹೊಯ್ಸಳರ ಮಹಾಮಂಡಲೇಶ್ವರನಾಗಿರಬೇಕೆಂದು ಕಾಣುತ್ತದೆ. ರಾಜಶೇಖರರ ಪ್ರಕಾರ ಈ ಬಿರುದಿಗೆ ಅರ್ಥವಿರಲಿಲ್ಲ. ಬಿರುದನ್ನು ಧರಿಸಿದ ಹೊಯ್ಸಳರು ಕಲ್ಯಾಣದ ಚಾಲುಕ್ಯರ ವಿರುದ್ಧ ಹೋರಾಡುತ್ತಿದ್ದರೆನ್ನುತ್ತಾರೆ. ಅದೇ ರೀತಿ ಸಂಗಮರು ಹೊಯ್ಸಳರ ಜತೆಗೆ ಯುದ್ಧ ಮಾಡಿ, ಅವರ ಅಧಿಕಾರಿಗಳನ್ನು ತಮ್ಮ ಕಡೆಗೆ ಮಾಡಿಕೊಂಡು, ಅವರ ಅಂತ್ಯಕ್ಕೆ ಇವರೇ ಕಾರಣರೆಂದು ಹೇಳುತ್ತಾರೆ. ಅವರು ಕೊಡುವ ನಿದರ್ಶನಗಳನ್ನು ನೋಡಿದರೆ, ಇವರಿಬ್ಬರ ನಡುವೆ ಘೋರ ಯುದ್ಧವಾಗಿಲ್ಲ; ಅದು ಅವಶ್ಯವೂ ಆಗಿರಲಿಲ್ಲ. ಹೊಯ್ಸಳರು ತಮ್ಮಷ್ಟಕ್ಕೆ ತಾವೇ ನಿರ್ಲಿಪ್ತರಾದರು. ಅವರ ಸ್ಥಳಕ್ಕೆ ಸಂಗಮರು ಅವಿರೋಧವಾಗಿ ನಿರಾಯಾಸವಾಗಿ ಬಂದರು. ಇಬ್ಬರ ನಡುವೆ ಘರ್ಷಣೆಗಳಾದವೆಂದು ಹೇಳುವುದಕ್ಕೆ ಸರಿಯಾದ ಪುರಾವೆ ಇಲ್ಲ.

ಹೊಯ್ಸಳರ ಮತ್ತು ಸಂಗಮರ ನಡುವೆ ಇದ್ದ ಇನ್ನೊಂದು ಸಮಸ್ಯೆ, ಹೊಯ್ಸಳ ಅಧಿಕಾರಿಗಳು ಸಂಗಮರ ಕಡೆಗೆ ಬಂದ ರೀತಿ. ರಾಜಶೇಖರರ ಪ್ರಕಾರ ಸಂಗಮರು ಹೊಯ್ಸಳರನ್ನು ಸೋಲಿಸಿದ್ದರಿಂದ ಹೊಯ್ಸಳರ ಅಧಿಕಾರಿಗಳು ಯುದ್ಧದಲ್ಲಿ ಗೆದ್ದಂಥ ಸಂಗಮರ ಅಧಿಕಾರಿಗಳಾದರು. ಫಿಲಿಯೋಜಾರವರು ಅನೇಕ ಹೊಯ್ಸಳ ಅಧಿಕಾರಿಗಳು ಶಾಂತಿಯುತವಾಗಿ ಸಂಗಮರ ಅಧಿಕಾರಿಗಳಾಗಿರುವುದಕ್ಕೆ ನಿದರ್ಶನಗಳನ್ನು ಕೊಟ್ಟಿದ್ದಾರೆ. ಅವರಲ್ಲಿ ಕೆಲವರು ಉದಾಹರಣೆಗೆ ಬಲ್ಲಪದಂಡನಾಯಕನಂಥವರು ಸಂಗಮರ ಜತೆಗೆ ರಕ್ತಸಂಬಂಧವನ್ನು ಬೆಳೆಸಿದ್ದು ಪ್ರಸಿದ್ಧವಾಗಿದೆ. ಇಂತಹ ಉದಾಹರಣೆ ಇನ್ನು ಒಂದು ಇರುವುದನ್ನು ಮುಂದೆ ನೋಡುತ್ತೇವೆ. ಫಿಲಿಯೋಜಾ ಅವರು ಹೊಯ್ಸಳರ ದಾನಗಳನ್ನು ಸಂಗಮರು ಮುಂದುವರಿಸಿದ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಕೆಲವೇ ವರ್ಷಗಳಲ್ಲಿ ಸಂಗಮರು ಪೂರ್ವ ಪಶ್ಚಿಮ ಸಮುದ್ರಾಧಿಪತಿಗಳಾಗಿರುವುದನ್ನು ನೋಡಿದರೆ ಸಂಗಮರಿಗೆ ಕರ್ನಾಟಕದಲ್ಲಿಯಾಗಲಿ ಆಂಧ್ರದಲ್ಲಿಯಾಗಲಿ ಯಾವ ವಿರೋಧವು ಇದ್ದ ಹಾಗೆ ಕಾಣುವುದಿಲ್ಲ. ಇಷ್ಟೇ ಅಲ್ಲ ಅವರಿಗೆ ಎಲ್ಲಾ ಧರ್ಮಗಳ ಗುರುಗಳಿಂದಲೂ, ಸಾರ್ವಜನಿಕರಿಂದಲೂ ಬೆಂಬಲವಿತ್ತೆಂದೂ ಹೇಳಬಹುದು. ಜೊತೆಗೆ ಹೊಯ್ಸಳರ ಮುಖ್ಯ ಅಧಿಕಾರಿಗಳನ್ನು ಒಲಿಸಿಕೊಳ್ಳುವ ಚಾತುರ್ಯವೂ ಅವರಲ್ಲಿತ್ತೆನ್ನುವುದನ್ನು ನಾವು ಊಹಿಸ

---

4. ಎಸ್. ರಾಜಶೇಖರ, ಹೊಯ್ಸಳ-ಸಂಗಮರ ಸಂಬಂಧ, ಕರ್ನಾಟಕ ಭಾರತಿ, ಸಂಪುಟ 6, ಸಂಚಿಕೆ 3, ಸಂಕ್ರಮಣ ಸಂಚಿಕೆ, 1974

ಬಹುದು ಇದಕ್ಕೆ ಸೀತಾರಾಮ ಜಾಗೀರದಾರರು[5] ಇತ್ತೀಚೆಗೆ ಹಳೇಬೀಡಿನ ಒಂದು ಶಾಸನವನ್ನು[6] ಮೊದಲಿಗಿಂತ ಬೇರೆ ವಿಧದಲ್ಲಿ ಅರ್ಥೈಸಿರುವುದು ಸಹಾಯಕ ವಾಗುತ್ತದೆ. ಈ ಶಾಸನ ಹೀಗಿದೆ.

ಶ್ರೀ ನಖರೇಶ್ವರದ ವೋರುಂಗಲ
ವೀರಭದ್ರದೇವರಿಗೆ ಶ್ರೀ ವೀರ ಹರಿ
ಹರ ಮಹಾರಾಯರ ಅಳಿಯ ಪುಲ್ಲ ಖಂಡ
ಸಿದರಾಜರು ಪಂಡಿತನಹಳ್ಳಿಯ ಕೆಳಗೆ
ಗದ್ದೆ (ಕೊಟ್ಟರು)

ಸಂಗಮ ಸೋದರರು ಓರಂಗಲ್ಲಿನಲ್ಲಿ ಕಾಕತೀಯರ ಆಸ್ಥಾನದಲ್ಲಿ ಭಂಡಾರಿಗಳಾಗಿದ್ದರೆಂದು ಪ್ರಬಲವಾದ ಐತಿಹ್ಯವಿದೆ. ಈ ಐತಿಹ್ಯದ ಸಮರ್ಥನೆಗೆ ಈಚೆಗೆ ಎರಡು ಶಾಸನಗಳು ದೊರಕಿವೆ. ಒಂದು ಕೊಡಮೂರು ಶಾಸನ.[7] ಇನ್ನೊಂದು ಮೇಲೆ ಹೇಳಿದ ಹಳೇಬೀಡಿನ ಶಾಸನ. ಹಳೇಬೀಡು ಶಾಸನದಿಂದ ಹರಿಹರ, ಓರಂಗಲ್ಲಿನಲ್ಲಿದ್ದುದಕ್ಕೆ ಸಮರ್ಥನೆ ಸಿಗಬಹುದು. ಇಷ್ಟು ದಿನ ಈ ಶಾಸನ ಎರಡನೆಯ ಹರಿಹರನಿಗೆ ಸಂಬಂಧಿಸಿದ್ದೆಂದು ಅದರ ಲಿಪಿಯ ಆಧಾರದ ಮೇಲೆ ನಿರ್ಧರಿಸಲಾಗಿತ್ತು. ಆದ್ದರಿಂದ ವಿಜಯನಗರ ಸ್ಥಾಪನೆಗೂ ಈ ಶಾಸನಕ್ಕೂ ಸಂಬಂಧವಿಲ್ಲವೆಂದು ತಿಳಿದಿದ್ದರು. ಆದರೆ ಈಚೆಗೆ ಸೀತಾರಾಮ ಜಾಗೀರದಾರರು ಈ ಶಾಸನವು ಒಂದನೆಯ ಹರಿಹರನ ಕಾಲದ್ದೆಂದು ಹೇಳಿದ್ದಾರೆ. ಅವರು ಹೇಳುವುದು ಸರಿಯೆಂದು ಒಪ್ಪಿಕೊಳ್ಳಬಹುದು. ನಾಣ್ಯಗಳಲ್ಲಿ ಎರಡನೆಯ ಹರಿಹರನನ್ನು ಪ್ರತಾಪ ಹರಿಹರನೆಂದೂ ಮೊದಲನೆ ಹರಿಹರನನ್ನು ವೀರ ಹರಿಹರನೆಂದೂ ಕರೆಯಲಾಗಿದೆ. ಈ ಶಾಸನದಲ್ಲಿ ವೀರ ಹರಿಹರನೆಂದು ಹೇಳಿರುವುದರಿಂದ ಇದು ಮೊದಲನೆ ಹರಿಹರನಿಗೆ ಸಂಬಂಧಪಟ್ಟದ್ದು. ಹಾಗಾದರೆ ಈ ಶಾಸನವು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ವಿಷಯಕ್ಕೆ ಉಪಯೋಗವಾಗುತ್ತದೆ. ಮೊದಲನೆ ಹರಿಹರನ ಅಳಿಯ ಪುಲ್ಲಖಂಡ ಸಿದ್ಧರಾಜನು ವೋರುಂಗಲ ವೀರಭದ್ರನ ಒಕ್ಕಲಾಗಿರಬೇಕು. ಆ ವೀರಭದ್ರನಿಗೆ ಹಳೇಬೀಡಿನ ನಖರೇಶ್ವರ ದೇವಸ್ಥಾನದ ಆವರಣದಲ್ಲಿ ಸಿದ್ಧರಾಜನು ದೇವಸ್ಥಾನವನ್ನು ಕಟ್ಟಿಸಿ ಆ ದೇವರಿಗೆ ದಾನ ಮಾಡಿದನು. ಆತನು ವೋರಂಗಲ್ಲಿನಿಂದ ಹಳೇಬೀಡಿಗೆ ಬಂದಿರಬೇಕು. ವೋರಂಗಲ್ಲಿನ ಪತನದ ನಂತರ ಹರಿಹರ ಹೇಗೆ

---

5. ಸೀತಾರಾಮ ಜಾಗೀರದಾರರು 13-4-1989ರಂದು ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ಮಾಡಿದ ಭಾಷಣ
6. ಎ. ಕ. XV ಬೇಲೂರು ನಂ. 356
7. Annual Report on Epigraphy, 1960-61, B. 32

ಪಂಪಾಪುರಿ ಪರಿಸರಕ್ಕೆ ಬಂದನೊ ಹಾಗೆ ಸಿದ್ಧರಾಜನು ಹೊಯ್ಸಳರ ಅಧಿಕಾರಿಯಾಗಿ ಹಳೇಬೀಡಿಗೆ ಬಂದು ನೆಲೆಸಿರಬೇಕು. ಹರಿಹರ ಮತ್ತು ಸಿದ್ಧರಾಜರ ಹಿನ್ನೆಲೆ ಒಂದೇ. ಇಬ್ಬರೂ ವೋರಂಗಲ್ಲಿನಲ್ಲಿ ಜತೆಗಿದ್ದಿರಬೇಕು. ಅಲ್ಲಿಂದ ಇಬ್ಬರೂ ಬಂದು ಹೊಯ್ಸಳರ ಸೇವೆಯನ್ನು ಅಂಗೀಕರಿಸಿರಬೇಕು. ಕೆಲವು ವರ್ಷ ಅಂದರೆ ೧೩೨೩ ರಿಂದ ೧೩೨೭ರ ವರೆಗೂ ಹರಿಹರ ಬುಕ್ಕರು ಕಂಪಿಲಿರಾಯನಲ್ಲಿ ಭಂಡಾರಿಗಳಾಗಿದ್ದಿರಬಹುದು ಆಗ ಹೊಯ್ಸಳರ ಜತೆಗೆ ಯುದ್ಧವನ್ನು ಮಾಡಿರಬಹುದು. ಕಂಪ್ಲಿಯ ಪತನದ ನಂತರ ಹೊಯ್ಸಳರ ಸೇವೆಗೆ ಸೇರುವುದು ಅನಿವಾರ್ಯವಾಗಿರಬೇಕು. ಕೆಲವರು ಸಂಗಮರು ಸ್ವತಂತ್ರರಾಗಿದ್ದರೆಂದು ಹೇಳುತ್ತಾರೆ. ಹೊಯ್ಸಳರ ಸೇನೆಯಲ್ಲಿದ್ದೆವೆಂದು ಹೇಳಿಕೊಂಡು ಸ್ವತಂತ್ರರಾಗಿ ವರ್ತಿಸಿರಬಹುದು. ಹರಿಹರ ಮತ್ತು ಪುಲ್ಲಖಂಡರ ಬಂಧುತ್ವ ಹೊಯ್ಸಳರ ಕಾಲದಲ್ಲಿ ಆಗಿರಬಹುದು. ಯಾವಾಗ ಬಂಧುತ್ವವಾಗಿದ್ದರೂ ನಮ್ಮ ವಾದಕ್ಕೆ ವ್ಯತ್ಯಯವಾಗುವುದಿಲ್ಲ. ಆ ವಾದವೆಂದರೆ, ಪುಲ್ಲಖಂಡ ಸಿದ್ಧರಾಜರ ಮನೆತನಕ್ಕೂ ಹರಿಹರನ ಮನೆತನಕ್ಕೂ ಸಖ್ಯವಾಗಿದ್ದು ಓರಂಗಲ್ಲಿನಲ್ಲಿರಬೇಕಾದರೆ ಆಗಿರಬೇಕು ಮತ್ತು ಆ ಬಂಧುತ್ವ ಇಬ್ಬರೂ ಹೊಯ್ಸಳರ ಸೇವೆಯಲ್ಲಿರಬೇಕಾದರೆ ಮುಂದುವರೆದಿರಬೇಕು. ಹರಿಹರ ಧೂರ್ತ. ಹೊಯ್ಸಳರ ಸರದಾರರನ್ನು ತನ್ನ ಕಡೆಗೆ ಸೆಳೆಯುತ್ತಿದ್ದ ಅಥವಾ ಅವರೇ ಇವರು ಹೊಯ್ಸಳರ ಉತ್ತರಾಧಿಕಾರಿಗಳೆಂದು ಇವರ ಕಡೆಗೆ ಬರುತ್ತಿದ್ದರು. ಅಂತೂ ಹಳೇಬೀಡಿನಲ್ಲಿ ಪುಲ್ಲಖಂಡ ಪ್ರತಿಷ್ಠಿತನಾಗಿರಬೇಕು. ಹೊಯ್ಸಳರ ಸಹಾಯದಿಂದ ಇರಬಹುದು ಅಥವಾ ಹರಿಹರನ ಸಹಾಯದಿಂದ ಇರಬಹುದು ಅವನು ಪ್ರತಿಷ್ಠಿತನಾಗಿದ್ದುದರಿಂದ ಅಲ್ಲಿ ಒಂದು ದೇವಸ್ಥಾನವನ್ನು ಕಟ್ಟಿಸಿದ, ಕೆರೆ ಕಟ್ಟಿಸಿದ ಮತ್ತು ಅದರ ಕೆಳಗಿನ ಭೂಮಿಯನ್ನು ಅಥವಾ ಹಳ್ಳಿಯನ್ನು ದಾನ ಮಾಡಿದ. ಹಳೇಬೀಡಿನ ಶಾಸನದಿಂದ ಸಂಗಮರು ವೋರಂಗಲ್ಲಿನಲ್ಲಿದ್ದರೆಂದು ಊಹಿಸಬಹುದಾದರೆ, ಇನ್ನೊಂದು ಶಾಸನದಿಂದ ಅದೇ ನಿರ್ಧಾರಕ್ಕೆ ಬರಬಹುದು. ಆ ಶಾಸನ ೧೩೪೮ರ ಕೊಡಮೂರಿನದು. ಈ ಶಾಸನದ ಪ್ರಕಾರ ಹರಿಹರ ಗುತ್ತಿಯಿಂದ ಆಳುತ್ತಿದ್ದ. ಇವನಿಗೆ ಈ ಶಾಸನದಲ್ಲಿ ಶ್ರೀ ಭಂಡಾರಿ ಎನ್ನುವ ಬಿರುದು ಇದೆ. ಇದರಿಂದ ಕಾಕತೀಯರಲ್ಲಿ ಸಂಗಮ ಸೋದರರ ಭಂಡಾರಿಗಳಾಗಿದ್ದುದು ಖಚಿತವೆಂದು ಹೇಳಬಹುದು.

ಹೀಗೆ ಹಳೇಬೀಡು ಮತ್ತು ಕೊಡಮೂರು ಶಾಸನಗಳಿಂದ ಅನೇಕ ದಂತಕಥೆಗಳಲ್ಲಿ ಹೇಳುವಂತೆ ಸಂಗಮ ಸೋದರರು ವೋರಂಗಲ್ಲಿನಲ್ಲಿ ಕಾಕತೀಯರಲ್ಲಿ ಮತ್ತು ನಂತರ ಕಂಪಿಲರಾಯನಲ್ಲಿ ಭಂಡಾರಿಗಳಾಗಿದ್ದರೆನ್ನಬಹುದು. ○

[ಈ ಲೇಖನವು ಕನ್ನಡ ಸಾಹಿತ್ಯ ಪರಿಷತ್ತಿನ ಸಂಶೋಧನ ಕೇಂದ್ರದಲ್ಲಿ 29-4-93ರಂದು ಮಾಡಿದ ಉಪನ್ಯಾಸದ ಸಾರಾಂಶ. ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ. ರು. ಚ ಮತ್ತು ಸಂಶೋಧನ ಕೇಂದ್ರದ ನಿರ್ದೇಶಕ ಡಾ॥ ಚಿದಾನಂದಮೂರ್ತಿ ಅವರಿಗೆ ಲೇಖಕರು ವಂದನೆ ಸಲ್ಲಿಸಿದ್ದಾರೆ.

ಡಾ|| ಡಿ.ವಿ. ದೇವರಾಜ್

# ವಿಜಯನಗರದ ಶಾಸನಗಳು

ದಕ್ಷಿಣ ಭಾರತದ ಅದರಲ್ಲೂ ಕರ್ನಾಟಕದ ರಾಜಕೀಯ ಇತಿಹಾಸ, ಸಮಾಜದ ವ್ಯವಸ್ಥೆ, ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಗಳನ್ನು, ಜನಸಾಮಾನ್ಯರ ಜೀವನವನ್ನು ಅರಿಯಲು ಶಾಸನಗಳು ಒಂದು ನಿಧಿ. ಒಂದು ಅಂದಾಜಿನಂತೆ ಕರ್ನಾಟಕದಲ್ಲಿ ೨೦೦೦೦ ಶಾಸನಗಳಾದರೂ ಲಭ್ಯವಿವೆ. ಹಳೆಯ ಮೈಸೂರು ರಾಜ್ಯದಲ್ಲಿ ಶಾಸನಗಳ ಸರ್ವೇಕ್ಷಣ ಕಾರ್ಯ ಮುಗಿದಂತೆ ತೋರಿದರೂ ಇನ್ನೂ ನೂರಾರು ಶಾಸನ ಗಳಾದರೂ ಲಭಿಸುವ ಸಾಧ್ಯತೆ ಇದೆ. ಈಗಿನ ಕರ್ನಾಟಕದ ಇನ್ನುಳಿದ ಜಿಲ್ಲೆಗಳಲ್ಲಿ ಸರ್ವೇಕ್ಷಣ ಕಾರ್ಯವೇ ತೃಪ್ತಿಕರವಾಗಿ ನಡೆದಿಲ್ಲ. ಹಲವಾರು ಕಾರಣಗಳಿಂದ ಅವುಗಳ ಪ್ರಕಟಣಾ ಕಾರ್ಯ ಸಹ ಹಿಂದುಳಿದಿದೆ.

ಶಾಸನಗಳು ಒಂದು ನಾಡಿನ ಕೇವಲ ರಾಜಕೀಯವನ್ನೇ ಅಲ್ಲದೆ, ಜನಜೀವನದ ಇತರ ಮುಖಗಳನ್ನು ಅರಿಯುವುದ ರಲ್ಲಿಯೂ ಸಹಾಯಕವಾಗುವ ಮೂಲಸಾಮಗ್ರಿಗಳಾಗಿವೆ. ವಿಜಯನಗರದ ಅರಸರ ಆಳ್ವಿಕೆಗೆ ಮೊದಲು ಹಲವಾರು ಅರಸರ ಶಾಸನಗಳು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಖಂಡರಿಸಲ್ಪಟ್ಟಿವೆ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ಮೇಲೆ ಕರ್ನಾಟಕದಲ್ಲಷ್ಟೇ ಅಲ್ಲದೆ ಅವರ ಅಧಿಕಾರ ದಕ್ಷಿಣ ಭಾರತದ ಎಲ್ಲಾ ಭಾಗಗಳಿಗೂ ವಿಸ್ತರಿಸಿತ್ತಾಗಿ ಆ ಅರಸರ, ಅವರ ಸಾಮಂತರ ಸುಮಾರು ೧೦೦೦೦ ಶಾಸನಗಳು ಸಧ್ಯಕ್ಕೆ ಲಭಿಸಿವೆ. ಕರ್ನಾಟಕದಲ್ಲಿಯೇ ಸುಮಾರು ೩೦೦೦ಕ್ಕೂ ಹೆಚ್ಚಿನ ಶಾಸನಗಳಿವೆ. ಇವು ಅಂದಿನ ರಾಜಕೀಯದ ಮೇಲಲ್ಲದೆ, ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗಳ ಮೇಲೆ

ವಿಶಿಷ್ಟವಾದ ಬೆಳಕನ್ನು ಚೆಲ್ಲಿ ಅಂದಿನ ಸಮಾಜದ ಚಿತ್ರಣಕ್ಕೆ ಮೂಲ, ಮುಖ್ಯ ಆಕರಗಳಾಗಿವೆ.

ಆಡಳಿತದ ಸೌಕರ್ಯಕ್ಕಾಗಿ ರಾಜ್ಯವನ್ನು ಚಾವಡಿ, ನಾಡು, ಸೀಮೆ, ಸ್ಥಳ ಗಳೆಂದು ವಿಂಗಡಿಸಲಾಗಿತ್ತು. ಹೋಬಳಿ, ವಳಿತಗಳೆಂಬ ವಿಭಾಗಗಳು ವಿಜಯ ನಗರದ ಕಾಲದಲ್ಲಿ ಹೊಸದಾಗಿ ಕಾಣಿಸಿಕೊಂಡ ವಿಭಾಗಗಳು. ಹಸ್ತಿನಾವತಿ ವಳಿತದಲ್ಲಿ ಮುಗನಾಡ–ವೇಂಠೆ ಒಂದು ಭಾಗ. ನಾಡು ಎಂಬುದು ವೇಂಠೆಗೂ ಹಿರಿದಾದ ಭಾಗವೆನಿಸುತ್ತದೆ. ಏಕೆಂದರೆ ಕೋಗಳ ವೇಂಠೆಯು ಪಾಂಡ್ಯನಾಡಿನ ಒಂದು ಭಾಗವಾಗಿದ್ದು, ಪಾಂಡ್ಯನಾಡ–ಹಸ್ತಿನಾವತಿಯ ವಳಿತಕ್ಕೆ ಸೇರಿತ್ತು. ಚಿಕ್ಕಮಗಳೂರು ಜಿಲ್ಲೆ ಹಾಗೂ ಸುತ್ತಲಿನ ಪ್ರದೇಶಗಳು ಅರಗ ರಾಜ್ಯಕ್ಕೆ ಸೇರಿದ್ದು, ಅದರೊಳಗೆ ಎಡವಳಿ, ಜೀವಣಿಗೆ, ಆಸಂದಿ, ಹೊಯಿಸಣ, ಸಾಂತವಳಿಗೆ, ಮಡವಡಿ, ಕುಪ್ಪವಳ್ಳಿ, ಮಲೆ ಮುಂತಾದ ನಾಡುಗಳಿದ್ದುವು. ಕೆಲವು ಶಾಸನ ಗಳಲ್ಲಿ ಹೊಯಿಸಣ ನಾಡು ಎಂಬುದು ಹೊಯಿಸಣ ರಾಜ್ಯವಾಗಿಯೂ ಕಾಣಿಸಿ ಕೊಂಡಿದೆ.

ಯಾವಾಗಲೂ ಸ್ವರಕ್ಷಣೆಗಾಗಿ ಅಥವಾ ರಾಜ್ಯವಿಸ್ತರಣೆಗಾಗಿ ಕದನಗಳಲ್ಲಿ ನಿರತವಾಗಿದ್ದ ಈ ಸಾಮ್ರಾಜ್ಯದ ಬೊಕ್ಕಸ ತತ್ಪರಿಣಾಮವಾಗಿ ಸದಾ ತುಂಬಿರ ಬೇಕಿತ್ತು. ಬಹಳಷ್ಟು ಧನವ್ಯಯ ಯುದ್ಧಗಳಿಗಾಗಿಯೇ ಮೀಸಲಾಗಿದ್ದ ಕಾರಣ, ಪ್ರಜಾಹಿತಕ್ಕಾಗಿ ಹೆಚ್ಚಿನ ಧನಸಂಗ್ರಹವನ್ನು ಮಾಡಬೇಕಾಗಿತ್ತು. ಇದು ಪ್ರಜೆಗಳಿಂದ ಬರುವ ಸುಂಕ, ತೆರಿಗೆ ಹಾಗೂ ಇತರ ಮೂಲಗಳಿಂದ ತಾನೇ ಬರಬೇಕಾಗಿತ್ತು! ಅದಕ್ಕಾಗಿ ಸುಮ್ಮನೆ ಬಲಾತ್ಕಾರವಾಗಿ ಪ್ರಜೆಗಳ ಮೇಲೆ ಆರ್ಥಿಕ ಹೊರೆ ಹೇರುವುದು ಒಳಿತಾಗಿರಲಿಲ್ಲ. ಆದುದರಿಂದ ಉತ್ಪನ್ನಗಳನ್ನು ಹೆಚ್ಚಿಸಿ ಪ್ರಜೆಗಳ ಆರ್ಥಿಕ ಸ್ಥಿತಿಯನ್ನು ಬಲಗೊಳಿಸಿ ನಂತರ ಅವರಿಂದ ಹಣವನ್ನು ಪಡೆಯುವುದು ರಾಜನೀತಿಯ ಒಂದು ಮುಖ ; ಎಂತಲೇ ಹೆಚ್ಚು ಹೆಚ್ಚು ಭೂಮಿ ಯನ್ನು ವ್ಯವಸಾಯಕ್ಕೆ ಬಳಸಿ, ನೀರಾವರಿ ಸೌಕರ್ಯಗಳನ್ನುಂಟುಮಾಡಿ, ಮೊದಲ ಕೆಲವು ವರ್ಷಗಳು ರೈತರಿಗೆ ರಿಯಾಯ್ತಿಗಳನ್ನು ನೀಡುವುದರ ಮೂಲಕ ಹೊಸ ನೆಲೆಗಳಲ್ಲಿ ಅವರನ್ನು ನೆಲೆಗೊಳಿಸುವುದು ಅವಶ್ಯಕವಾಗಿತ್ತು. ಭೂಮಿ ಯನ್ನು ಉತ್ತಮ, ಮಧ್ಯಮ, ಕನಿಷ್ಠಗಳೆಂದು ವಿಂಗಡಿಸಿ ಅದಕ್ಕನುಗುಣವಾಗಿ ತೆರಿಗೆಯನ್ನು ವಸೂಲು ಮಾಡಲಾಗುತ್ತಿತ್ತು. ಕೆರೆಗಳನ್ನು ತೋಡಿಸಿದವರಿಗೆ ಕೆರೆಯ ಕೆಳಗಿನ ನೀರಾವರಿ ಭೂಮಿಯ ಸ್ವಲ್ಪ ಭಾಗವನ್ನು ದತ್ತಿಯಾಗಿ ನೀಡಲಾಗುತ್ತಿತ್ತು. ಬಂಜರು ಭೂಮಿಯನ್ನು ನೀರಾವರಿಯ ಮೂಲಕ ಫಲವತ್ತಾಗಿಸಿದವರಿಗೆ ಕೆರೆಕಟ್ಟುಮಾನ್ಯವಾಗಿ ಎಂದರೆ ತೆರಿಗೆಗಳಿಂದ ಸ್ವಲ್ಪ ಕಾಲ

ಮುಕ್ತಗೊಳಿಸುವ ವ್ಯವಸ್ಥೆ ಮಾಡಲಾಯಿತೆಂದು ಕ್ರಿ.ಶ. ೧೫೫೯ನೆಯ ವರ್ಷದ (ಬಳ್ಳಾರಿ ತಾಲ್ಲೂಕಿನ ಹಾವಿನಹಾಳು ವೀರಾಪುರದ) ಶಾಸನದಲ್ಲಿ ಹೇಳಿದೆ. ಬೆಂಗಳೂರು ಜಿಲ್ಲೆಯ ಕೆಂಪಸಾಗರದ ಶಾಸನವು ಮುಮ್ಮಡಿ ಕೆಂಪೇಗೌಡಯ್ಯನು ೧೬೭೪ರಲ್ಲಿ ೨೧ ಖಂಡುಗ ಹೊಲವನ್ನು, ಕೆರೆಯ ಹೂಳನ್ನೆತ್ತಿ ಮುಂಜಾನೆಯಿಂದ ಸಂಜೆಯವರೆಗೆ ನಾಲ್ಕು ಎಮ್ಮೆಗಳ ನೆರವಿನಿಂದ ಹೊಸ ಮಣ್ಣನ್ನು ತುಂಬಿದ ದಾಸಬೋಯಿ ಎಂಬಾತನಿಗೆ ದಾನವಾಗಿ ನೀಡಿದನೆನ್ನುತ್ತದೆ. ಮಂಗಳೂರು ಜಿಲ್ಲೆಯ ಬಂಟ್ವಾಳ ಮುಡಾ ಗ್ರಾಮದಲ್ಲಿನ ಮೊದಲನೆಯ ಬುಕ್ಕನ ಕ್ರಿ.ಶ. ೧೩೬೪ನೆಯ ಶಾಸನದಲ್ಲಿ ಅರಸರ ಆಜ್ಞೆಯಂತೆ ಮಂಗಳೂರಿನ ಮಾದರಸನು ಹೊಸ ವಸಾಹತೊಂದನ್ನು ಸ್ಥಾಪಿಸಿ, ಅದನ್ನು ಅಗ್ರಹಾರವಾಗಿ ಪರಿವರ್ತಿಸಿ ಹಲವಾರು ಬ್ರಾಹ್ಮಣರು ಅಲ್ಲಿ ನೆಲಸಲು ಆಹ್ವಾನಿಸಿದನು. ಇದಕ್ಕಾಗಿ ಅವರು ನೀಡಬೇಕಾಗಿದ್ದ ಸೇಸೆ, ಸಿದ್ಧಾಯ, ಹದಿಕೆ, ಹೊದಕೆ, ವೊಸಗೆ, ಉಪಚಾರ ಮುಂತಾದ ಬಾಧೆಗಳಿಂದ ಅವರನ್ನು ಮುಕ್ತಗೊಳಿಸಿದ.

ವ್ಯಾಪಾರ, ವಾಣಿಜ್ಯಗಳು ಅಭಿವೃದ್ಧಿಗೊಂಡಂತೆಲ್ಲಾ ಗ್ರಾಮಗಳು, ಪೇಟೆಗಳಾದುವು. ಹಾಸನ ಜಿಲ್ಲೆಯ ಮೂಳೇನಹಳ್ಳಿ ಗ್ರಾಮದಲ್ಲಿನ ಕ್ರಿ.ಶ. ೧೫೭೬೧ರ ಶಾಸನದಲ್ಲಿ ಗೊರಲೂರಿನ ಹೆಬ್ಬಾರರು, ಗೌಡುಗಳು ಒಂದು ಕೌಲು-ಒಪ್ಪಂದ ಮಾಡಿಕೊಂಡಂತೆ ಆ ಗ್ರಾಮವನ್ನು ಚೆನ್ನಿಗರಾಯಪೇಟೆ ಎಂದು ಪರಿವರ್ತಿಸಿ ಚೆನ್ನಪ್ಪ ಶೆಟ್ಟಿಗೆ ಆ ಪೇಟೆಯ ಅಧಿಕಾರವನ್ನು ವಹಿಸಿದರು. ಮಗ್ಗದ ಮೇಲಿನ ತೆರಿಗೆ, ಮನೆಗಳ ಮೇಲಿನ ಸಿದ್ಧಾಯ-ಇತ್ಯಾದಿಗಳಿಂದ ಆ ಪೇಟೆಯನ್ನು ಮನ್ನಾ ಮಾಡಿ, ಅಲ್ಲಿನ ಚೆನ್ನಿಗರಾಯ ದೇವರಿಗೆ ಆ ಪೇಟೆಯ ನಿವಾಸಿಗಳು ೩೦ ವರಹಗಳ ಕಟ್ಟುಗುತ್ತಗೆಯನ್ನು ನೀಡಬೇಕೆಂದು ತೀರ್ಮಾನಿಸಿದರು. ಅಂತೆಯೇ ಸಂತೆಗಳನ್ನು ಏರ್ಪಡಿಸಿ, ಸುತ್ತಲಿನ ಗ್ರಾಮದ ಆಹಾರ ಸಾಮಗ್ರಿ ಹಾಗೂ ಇತರ ವಸ್ತುಗಳನ್ನು ವಿಕ್ರಯಿಸುವಂತೆ ಮಾಡಲಾಯಿತು. ಕ್ರಿ.ಶ. ೧೪೧೧ರಲ್ಲಿ ಜಕಮುದ್ದೆನಾಯಕನು ಹಿಮ್ಮರೆನಾಡಿನ ಬಲ್ಲ ಗೌಡನು ಸರ್ಜಾಪುರದಲ್ಲಿ ಸಂತೆಯನ್ನು ಸ್ಥಾಪಿಸುವಂತೆ ಮಾಡಿ ಅದರ ಒಡೆತನವನ್ನು ಹಲವರು ಸೆಟ್ಟಿಗಳಿಗೆ ನೀಡಿದನೆಂದೂ, ಅಲ್ಲಿನ ಗೌಡರು ಹಾಗೂ ಸೆಟ್ಟರ ಒಪ್ಪಿಗೆ ಪಡೆದು, ಆ ಗ್ರಾಮದವರಿಂದ ಬರಬೇಕಾಗಿದ್ದ ಸುಂಕಗಳಿಂದ ಮನ್ನಾ ಮಾಡಲಾಯಿತೆಂದೂ ಶಾಸನ ತಿಳಿಸುತ್ತದೆ. ಈ ಸಂದರ್ಭದಲ್ಲಿ ಈ ಕಾಲದಲ್ಲಿ ವಿಧಿಸಲಾದ ಹಲವಾರು ವಿನೂತನ ತೆರಿಗೆಗಳನ್ನೂ ಪ್ರಸ್ತಾಪಿಸಬಹುದು, ಉಭಯ ಮಾರ್ಗದ ಮೂಲೆವೀಸ, ಮಗಮೆ, ಸುಂಕ, ಊರ ತಪ್ಪು, ವೀಳೆಯದ ಮೇಲಿನ, ಧಾನ್ಯಗಳ ಮೇಲಿನ ತೆರಿಗೆಗಳು, ಆಮದು ಮಾಡಿಕೊಳ್ಳಲ್ಪಟ್ಟ ರಫ್ತು ಮಾಡಲಾದ ಸಾಮಗ್ರಿಗಳ ಮೇಲಿನ ತೆರಿಗೆಗಳು, ಕಬ್ಬನ್ನು ಅರೆಯುವ ಚಕ್ರದ ಮೇಲಿನ ಸುಂಕ ಇತ್ಯಾದಿಗಳು ಕೆಲವು ಉದಾಹರಣೆಗಳಷ್ಟೆ. ಮದುವೆಯ ಮೇಲೆ ಸುಂಕ

ಹೇರಿದ್ದನ್ನೂ ಪ್ರಜೆಗಳು ಸಹಿಸದೆ ತಮ್ಮ ಅಸಮ್ಮತಿ ಸೂಚಿಸಿದ ಸಂದರ್ಭಗಳಲ್ಲಿ ಆ ತೆರಿಗೆಯನ್ನು ಹಿಂತೆಗೆದುಕೊಳ್ಳಲಾಯಿತು ಎಂಬುದು ತಿಳಿದಿದೆ.

ಈ ಕಾಲದಲ್ಲಿ ಹಲವಾರು ವ್ಯಾವಹಾರಿಕ ಶಾಸನಗಳೂ ಕಾಣಿಸಿಕೊಳ್ಳುತ್ತವೆ. ನಾಗಣ್ಣಸೆಟ್ಟಿ ಮತ್ತು ಹಿರಿಯ ಆಲ್ಲಾಳಸೆಟ್ಟಿ ಎಂಬಿಬ್ಬರು ಸೋದರರು ಒಟ್ಟಾಗಿ ಭೂಮಿಯನ್ನು ಹೊಂದಿದ್ದರು. ಹಿರಿಯನಾದ ನಾಗಣ್ಣ ಸೆಟ್ಟಿಯು ತನ್ನ ಭಾಗಕ್ಕೆ ಬಂದ ಭೂಮಿಯಲ್ಲಿ ಬೆಳೆದ ಭತ್ತವನ್ನು ತಾನು ಕಟ್ಟಿಸಿದ ಮಠಕ್ಕೆ ದತ್ತಿಯಾಗಿ ನೀಡಿದನು. ತನ್ನ ಬಳಿಕ ತನ್ನ ಮನೆಯವರು ಈ ದತ್ತಿಯನ್ನು ನಡೆಸಿಕೊಂಡು ಹೋಗಬೇಕೆಂದೂ, ಅವರಿಂದ ಅದು ಸಾಧ್ಯವಾಗದಿದ್ದಲ್ಲಿ, ಮೂರುಕೇರಿ ಗ್ರಾಮದ ಹಿರಿಯರಾದ ಹಲವರು ಆ ದತ್ತಿಯನ್ನು ತಾವೇ ನಡೆಸಿಕೊಂಡು ಹೋಗಬೇಕೆಂದೂ ದತ್ತಿ ಶಾಸನದ ಕರಾರು ತಿಳಿಸುತ್ತದೆ. ಈ ಶಾಸನದಲ್ಲಿ ಮಠದ ಬೆಸವಿತ್ತಿ–ಎಂದರೆ ಗುಡಿಸಿ ಸಾರಿಸುವಾಕೆಗೂ ಸಹ ದೇವಸ್ಥಾನಕ್ಕೆ ನೀಡುವ ಭತ್ತದಲ್ಲಿ ಒಂದು ಪಾಲು ಕೊಡಬೇಕೆಂದು ಶಾಸನ ವಿಧಿಸಿದೆ. ಉಡುಪಭಟ್ಟ ಮತ್ತು ಕೊಮ್ಮೆಯ ಭಟ್ಟರೆಂಬ ಇಬ್ಬರು ತಿಮ್ಮಯನೆಂಬಾತನಿಂದ ೮೨ ದೊಡ್ಡ ವರಹ ಗದ್ಯಾಣಗಳನ್ನು ಸಾಲವಾಗಿ ಪಡೆದಿದ್ದರು. ಇದು ತಮ್ಮ 'ಕಳ' ಅಂದರೆ ಜೇಡುಮಣ್ಣಿನ ನೆಲವನ್ನು ಮಾರ್ಪಡಿಸಿ ಫಲವತ್ತಾಗಿಸಲೆಂದು ಮಾಡಿದ ಮೈಸಾಲ. ಈ ಭೂಮಿಯನ್ನು ಮೂಲತಃ ಅವರು ಗುತ್ತಿಗೆಗೆ ಪಡೆದಿದ್ದರು. ಅನಂತರ ಅದನ್ನು ತಾವೇ ಖರೀದಿಸಿ ತಮ್ಮದಾಗಿಸಿ ಕೊಳ್ಳಲು ಭೂಒಡೆಯನ ಬಳಿ ಪ್ರಸ್ತಾಪಿಸಿದಾಗ ಆತ ಕೆಲವು ಕರಾರುಗಳನ್ನು ಮುಂದೂಡಿದ. ಅದರಂತೆ ಅವರು ತಿರುಮಲ ದೇವನ ಪೂಜೆ–ಪುರಸ್ಕಾರಗಳಿಗಾಗಿ ನಿಗದಿತ ಹಣವನ್ನು ದತ್ತಿಯಾಗಿ ಕೊಡಬೇಕಾಗಿತ್ತು. ಇವುಗಳಿಗೆ ಒಪ್ಪಿ ಅವರು ಆ ಭೂಮಿಯನ್ನು ಕೊಂಡರು. ಈ ಕಾಲದಲ್ಲಿ ಇಂತಹ ಅನೇಕ ವ್ಯವಹಾರಗಳು ನಡೆಯುತ್ತಿದ್ದುವೆಂಬುದನ್ನು ಹಲವಾರು ಸಮಕಾಲೀನ ಶಾಸನಗಳಿಂದ ಕಂಡುಕೊಳ್ಳ ಬಹುದು. ಕೈಕಿಣಿ ಗ್ರಾಮದ ಪಾರ್ಶ್ವನಾಥ ಬಸದಿಗೆ ಮಾಡಲಾದ ಹಲವಾರು ದತ್ತಿಗಳ ಪ್ರಸ್ತಾಪ ಒಂದು ಶಾಸನದಲ್ಲಿದೆ. ಅದರಲ್ಲಿ ಒಂದು ಪುನರ್ದತ್ತಿ. ಹಿಂದೊಮ್ಮೆ ಕೃಷ್ಣದೇವರಸನೆಂಬಾತ ಬಸದಿಯಲ್ಲಿ ಅನ್ನಸಂತರ್ಪಣೆಗಾಗಿ ನೀಡಿದ ದತ್ತಿಯೊಂದು ಪರಕೀಯರ ದಾಳಿಗಳ ಪರಿಣಾಮವಾಗಿ ಲುಪ್ತವಾಗಿತ್ತು. ಕೊಡಕಣಿ ಗ್ರಾಮದ ಸೇನಬೋವನು ತನ್ನಲ್ಲಿದ್ದ ಕಾಗದಪತ್ರಗಳನ್ನು ಪುನಃ ಪರಿಶೀಲಿಸಿದ ನಂತರ ಆ ಮೂಲದತ್ತಿಯನ್ನು ಪುನರ್ದತ್ತಿಯಾಗಿ ನವೀಕರಿಸಲಾಯಿತು. ಇದರಿಂದ ನೂರಾರು ವರ್ಷಗಳ ಹಿಂದಿನ ವ್ಯವಹಾರಕ್ಕೆ ಸಂಬಂಧಿಸಿದ ದಾಖಲೆ ಪತ್ರಗಳನ್ನು ಅಧಿಕಾರೀ ವರ್ಗ ಜಾಗರೂಕತೆಯಿಂದ ಕಾಪಾಡಿಕೊಂಡು ಬರುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ.

ಬಡ್ಡಿ ವ್ಯವಹಾರ ಈ ಕಾಲದಲ್ಲಿ ಪ್ರಚಲಿತವಾಗಿತ್ತು. ಹಿಂದೆಯೂ ಇಂತಹ ವ್ಯವಹಾರಗಳು ಕಂಡು ಬರುತ್ತಿದ್ದುವಾದರೂ ಅವುಗಳ ಪ್ರಮಾಣ ಕಡಿಮೆ. ಬಡ್ಡಿ ದರವೂ ಸಹ ಆಗ ಹೆಚ್ಚಾಗಿದ್ದಂತೆ ತೋರುತ್ತದೆ. ಆನೆಗಲಿ ಗ್ರಾಮಸ್ಥರಿಗೆ ತಿಮ್ಮಣ್ಣ ಶೆಟ್ಟಿ ಮತ್ತು ಬೆಮಣಹೆಗ್ಗಡೆ ಎಂಬಿಬ್ಬರು ೩೫೦ ವರಹಗಳನ್ನು ಸಾಲವಾಗಿ ನೀಡಿ, ಅವರ ಮೇಲೆ ೩೫ ದೊಡ್ಡ ವರಹ, ಗದ್ಯಾಣಗಳನ್ನು ಬಡ್ಡಿಯಾಗಿ ಪಡೆಯುತ್ತಿದ್ದರು. ವರಹ, ದೊಡ್ಡ ವರಹ ಇವುಗಳ ಮೌಲ್ಯ ಒಂದೇ ಆಗಿದ್ದಲ್ಲಿ ಬಡ್ಡಿದರ ಶೇಕಡಾ ಹತ್ತು ಆದಂತಾಯಿತು.

ಆಡಳಿತ ಹೆಚ್ಚು ಜಟಿಲವೂ ಸಂಕೀರ್ಣವೂ ಆಗಿತ್ತು. ಅಧಿಕಾರ ವಿಕೇಂದ್ರೀಕರಣ ಅನಿವಾರ್ಯವಾಯಿತು. ಆದರೆ ಅದರ ಪರಿಣಾಮವಾಗಿ ಅಧಿಕಾರಿಗಳಲ್ಲಿ ದರ್ಪ ಮೂಡಿದಂತೆ ತೋರುತ್ತದೆ. ಅವ್ಯವಹಾರಗಳೂ ಆಗ್ಗೆ ಆರಂಭವಾಗಿದ್ದವೆನ್ನಲು ಹಲವಾರು ನಿದರ್ಶನಗಳೂ ಕಂಡು ಬಂದಿವೆ. ಅರಸ ವಿಶೇಷವಾಗಿ ಕದನಗಳಲ್ಲಿಯೂ ರಾಜಕೀಯ ಚಟುವಟಿಕೆಗಳಲ್ಲಿಯೂ ತೊಡಗಿದ್ದ ಕಾರಣ ಜನರೊಡನೆ ಸಂಪರ್ಕ ಕಡಿಮೆಯಾಗಿ, ಮಧ್ಯವರ್ತಿ ಅಧಿಕಾರಿಗಳ ಕೈವಾಡ ಹೆಚ್ಚತೊಡಗಿತ್ತು. ಈ ಕಾಲದ ಶಾಸನಗಳು ಕೌಲು, ಸೋಗಿನ ಧರ್ಮಶಾಸನ, ವ್ಯವಹಾರ ನಿರ್ಣಯ, ನಂಬುಗೆ ಶಾಸನ, ಜಯಪತ್ರ, ಸ್ಥಿರ ಶಾಸನ ಎಂದು ಹಲವಾರು ಹೆಸರುಗಳಲ್ಲಿನ ದಾಖಲೆಪತ್ರಗಳಾಗಿ ಕಾಣಿಸಿಕೊಳ್ಳುತ್ತವೆ.

ಹಲವಾರು ಧುರೀಣರೆನಿಸಿದ ವ್ಯಕ್ತಿಗಳು, ಅಧಿಕಾರಿಗಳು ಅವ್ಯವಹಾರದಲ್ಲಿ ತೊಡಗಿ, ಅದು ಬೆಳಕಿಗೆ ಬಂದಾಗ ಜನರು ಅರಸನಿಗೆ ದೂರು ನೀಡಿ, ಅರಸನೋ, ಆತನ ಪ್ರತಿನಿಧಿಯೋ ಮಧ್ಯೆ ಪ್ರವೇಶಿಸಿ ವ್ಯವಹಾರ ನಿರ್ಣಯ ಮಾಡುತ್ತಿದ್ದರು. ಮಣಿಹಗೌಡರೆಂಬ ಗ್ರಾಮಾಧಿಕಾರಿಗಳು ನ್ಯಾಯಸಮ್ಮತವಲ್ಲದ ತೆರಿಗೆಗಳನ್ನು ಅಗ್ರಹಾರದ ಮಹಾಜನರ ಮೇಲೆ ಹೇರಿದಾಗ ಮಹಾಜನರು ಅರಸನ ಮೊರೆ ಹೊಕ್ಕರು. ಅರಸ ತನ್ನ ನಂಬುಗೆಯ ಅಧಿಕಾರಿಗಳ ಮೂಲಕ ವಿವರಗಳನ್ನು ಪಡೆದುಕೊಂಡು, ಅನ್ಯಾಯದಿಂದ ವಸೂಲು ಮಾಡಿದ ಹಣವನ್ನು ವಿನಿಯೋಗಿಸಿ ಗ್ರಾಮದಲ್ಲಿ ದೇವಾಲಯ, ಕೆರೆಗಳನ್ನು ದುರಸ್ತಿಗೊಳಿಸಿದ. ಅಂತಹ ತೆರಿಗೆಗಳನ್ನು ಮುಂದೆ ನೀಡಬೇಕಾದುದಿಲ್ಲವೆಂದು ಆದೇಶಿಸಿ, ತಪ್ಪಿತಸ್ಥ ಅಧಿಕಾರಿಗಳು ದಂಡ ನೀಡುವಂತೆ ಆಜ್ಞೆ ನೀಡಿದ. ಪಡುವಕೋಣೆ ಗ್ರಾಮದ ನಾಡವರು ತಮ್ಮ ಭೂಮಿಗೆ ಹೊಂದಿಕೊಂಡಿದ್ದ, ಆದರೆ ತಮ್ಮದಲ್ಲದ ಬಂಜರು ಭೂಮಿಯನ್ನು ದುರಾಕ್ರಮಿಸಿಕೊಂಡಿದ್ದುದು ಅಲ್ಲಿನ ಪ್ರಾಂತಾಧಿಕಾರಿಯಾದ ನರಸಿಂಹದೇವ ಒಡೆಯನ ಮೂಲಕ ಅರಸನ ಗಮನಕ್ಕೆ ಬಂದಾಗ ಆತ ಆ ಭೂಮಿಯನ್ನೂ ನಾಡವರಿಗೆ ಕೊಡಲ್ಪಟ್ಟಿದ್ದ ಭೂಮಿಯನ್ನೂ ಹಿಂತೆಗೆದುಕೊಂಡು ಅದನ್ನು ಅಲ್ಲಿನ ದೇವಾಲಯಕ್ಕೆ ದಾನವಾಗಿ ನೀಡಿದನೆನ್ನುತ್ತದೆ ಕ್ರಿ.ಶ. ೧೪೬೫ನೆಯ ವರ್ಷದ ಶಾಸನ.

ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಧರ್ಮದ, ಮತದ ಪಾತ್ರ ವಿಶೇಷ ವಾಗಿತ್ತು. ಆದರೆ ಹಲವಾರು ಸಂದರ್ಭಗಳಲ್ಲಿ ಸಮಾಜ ಸಂಘರ್ಷಣೆಗಳುಂಟಾಗು ತ್ತಿದ್ದುವು. ಅಧಿಕಾರಿಗಳು ಮಧ್ಯೆ ಪ್ರವೇಶಿಸಿ ಸಮಸ್ಯೆಗಳಿಗೆ ಪರಿಹಾರ ಕಂಡು ಹಿಡಿಯುವುದು ಸಾಮಾನ್ಯವಾಗತೊಡಗಿತು. ೧೪೨೧ರಲ್ಲಿ ಹುಲ್ಲಿಗೆರೆಯ ಶಂಖ ಬಸದಿಯ ಹೇಮದೇವಾಚಾರ್ಯರಿಗೂ ಸೋಮದೇವಾಲಯದ ಆಚಾರ್ಯನಾದ ಶಿವರಾಮಯ್ಯನಿಗೂ ನಡುವೆ ತಮ್ಮ ದೇವಾಲಯಗಳಿಗೆ ಸೇರಿದ ಭೂಮಿಗಳ ಬಗೆಗೆ ವಾದಗಳೇರ್ಪಟ್ಟುವು. ಮಹಾಪ್ರಧಾನ ನಾಗಣ್ಣ ದಣ್ಣಾಯಕನು ಇದನ್ನು ವಿಚಾರಿಸಬೇಕೆಂದು ಅರಸನಿಂದ ಆದೇಶಿತನಾಗಿ, ಸಂಗಮ ದೇವನೆಂಬ ಅರ್ಚಕ ಹಾಗೂ ಅರಸನ ಆಸ್ಥಾನ ಪಂಡಿತರ ನೆರವಿನಿಂದ ಸಂಬಂಧಿಸಿದ ಕಾಗದ ಪತ್ರಗಳನ್ನು ಪರಿಶೀಲಿಸಿದ ಬಳಿಕ ಸೂಕ್ತ ನಿರ್ಣಯಗಳನ್ನು ನೀಡಿದ. ಅಪರೂಪವಾಗಿ ಕೌಟುಂಬಿಕ ವ್ಯವಹಾರಗಳೂ ಶಾಸನಗಳಲ್ಲಿ ನಿರೂಪಿತವಾಗಿವೆ. ಮೂಗಿನ ಮಲ್ಲಸೆಟ್ಟಿ ಮತ್ತು ಬ್ರಹ್ಮದೇವಸೆಟ್ಟಿ ಎಂಬ ಸೋದರರಲ್ಲಿ ಹಿರಿಯನನ್ನು ಲಾಯದ ಕೇರಿಯ ಮಲ್ಲ ಸೆಟ್ಟಿಯು ಕೊಂದ. ಸೇಡು ತೀರಿಸಿಕೊಳ್ಳಲೆಂಬಂತೆ ಮಲ್ಲಸೆಟ್ಟಿಯ ಮಗ ಸಾವಣ್ಣ ನನ್ನು ದೇವಿಯಹೊಸೂರಿನ ಮಲ್ಲಿಬೋವ ಇರಿದುಕೊಂದ. ಆ ಜಗಳದಲ್ಲಿ ಆತನೂ ಸಾವನ್ನಪ್ಪಿದ. ಆತನ ನೆನಪಿಗಾಗಿ ಒಂದು ಶಿಲಾಶಾಸನವನ್ನು ನೆಡ ಲಾಯಿತು.

ಸಾಮಾಜಿಕ ಸಾಮರಸ್ಯ ನೆಲೆಗೊಳಿಸಲು ಈ ಕಾಲದಲ್ಲಿ ದೇವಾಲಯಗಳಲ್ಲಿ ಹಲವಾರು ಪೂಜೆಗಳನ್ನೂ, ಹಬ್ಬಗಳನ್ನೂ ಆಚರಿಸುವ ಪದ್ಧತಿ ಆರಂಭವಾಯಿತು. ಡೋಲೋತ್ಸವ, ದೀಪೋತ್ಸವ, ರಥೋತ್ಸವ, ಕಾರ್ತಿಕಪೂಜೆ, ನವರಾತ್ರಿ, ಮಹಾ ನವಮಿ ಮುಂತಾದ ಹಬ್ಬಗಳನ್ನು ದೇವಾಲಯಗಳಲ್ಲಿ ಆಚರಿಸುವುದರ ಮೂಲಕ ಸರ್ವಜನರು, ಜನಸಾಮಾನ್ಯರು ಅಲ್ಲಿ ಸೇರಿ ಪರಸ್ಪರ ಸೌಹಾರ್ದಭಾವನೆಗಳನ್ನು ಹಂಚಿಕೊಳ್ಳಲು ಸಾಧ್ಯವಾಯಿತು. ಜೈನ ಬಸದಿಗಳಲ್ಲಿ ಹಾಲುಧಾರೆ, ಜೀವ ದಯಾಷ್ಟಮಿ, ಶ್ರುತಪಂಚಮಿ, ಅಷ್ಟಾಹ್ನಿಕ ದಶಲಕ್ಷಣ ಪೂಜೆ ಇತ್ಯಾದಿಗಳ ಆಚರಣೆ ಶಾಸನಗಳಲ್ಲಿ ಉಲ್ಲೇಖಗೊಂಡಿವೆ.

ಸಮಾಜದ ಹತ್ತು ಹಲವು ಮುಖಗಳ, ಸಮಸ್ಯೆಗಳ, ಪರಿಹಾರಗಳ ಪರಿಚಯ ನಮಗೆ ಶಾಸನಗಳಿಂದ ತಿಳಿದು ಬರುತ್ತವೆ. ರಾಜಕೀಯ ಚರಿತ್ರೆಯ ಚಿತ್ರಣ ಕ್ಕಿಂತಲೂ ಮಿಗಿಲಾಗಿ ಜನಸಾಮಾನ್ಯರ ಜೀವನದ ಹಲವಾರು ರೂಪಗಳ ಪರಿಚಯ ನಮಗೆ ಶಾಸನಗಳಿಂದಾಗುತ್ತವೆ. ○

ಸೀತಾರಾಮು ಜಾಗೀರ್‌ದಾರ್

# ಸಾಳುವ ಮನೆತನದ ಚರಿತ್ರೆಯ ಮೇಲೆ ಹೊಸ ಬೆಳಕು

ವಿಜಯನಗರ ಸಾಮ್ರಾಜ್ಯ ನಾಲ್ಕು ರಾಜಮನೆತನಗಳ (ಸಂಗಮ, ಸಾಳುವ, ತುಳುವ ಹಾಗೂ ಅರವೀಡು ಅಥವಾ ಅರವೀಟಿ) ಚರಿತ್ರೆಯಿಂದ ನೇಯಲ್ಪಟ್ಟಿದೆ. ಇವುಗಳಲ್ಲಿ ಈಗಾಗಲೇ ಸಂಗಮ ಹಾಗೂ ಅರವೀಡು ಮನೆತನಗಳು ಮೂಲತಃ 'ಕಲ್ಯಾಣದ ಚಾಳುಕ್ಯ' ಹಾಗೂ 'ಕಳಚುರಿ' ಮನೆತನಗಳ ಕುಡಿಗಳೆಂಬುದು ದಾಖಲೆಗಳಿಂದ ಸಾಬೀತಾಗಿದೆ.[1] ಮುಂದುವರಿದ ಅಧ್ಯಯನದಲ್ಲಿ ಹೆಗ್ಗಡದೇವನ ಕೋಟೆಯ ಶಾಸನದಿಂದ ಸಾಳುವ ಮನೆತನದ ಚರಿತ್ರೆಯ ಮೇಲೆ ಈಗ ಇನಿತು ಹೊಸ ಬೆಳಕು ಬೀಳುತ್ತಲಿದೆ.

ಸಾಳುವ ಮನೆತನ "ಒಡೆದು ಚೂರಾಗಿ ಹೋಗುವ ದುಸ್ಥಿತಿಯಿಂದ ಸಾಮ್ರಾಜ್ಯ ನೌಕೆಯನ್ನು ರಕ್ಷಿಸಿದ" ಮನೆತನ; ಈ ಕೀರ್ತಿ ಸಾಳುವ ನರಸಿಂಹನಿಗೆ ಸಲ್ಲಬೇಕು. ವ್ಯಸನಿಗಳೂ ದುರ್ಬಲರೂ ಆದ ಸಂಗಮ ವಂಶಜರನ್ನು ಬದಿಗೊತ್ತಿ, ಕುಂದುತ್ತಿದ್ದ ಸಾಮ್ರಾಜ್ಯದ ಪ್ರತಿಷ್ಠೆಯನ್ನು ಪುನರ್ಪ್ರಸ್ಥಾಪಿಸಿದ ಧೀಮಂತ ಸೇನಾನಿ ಆತ.[2] ಸಾಳುವ

---

1. a) ಸಂಗಮ ಮನೆತನ—ಎ. ಕ. ಸಂ. 9, ಪೀಠಿಕೆ ಪು. Lxvii-viii
   b) ಅರವೀಟಿ ಮನೆತನ—i) E. c. vol-10 (BLR) Mulabagil-60
   ii) E. c. vol-8 (1984) Hassan-9

ಈ ಸಂಗತಿಯ ಬಗೆಗೆ 'ಇತಿಹಾಸ ಚಂದ್ರಿಕೆ' ಪತ್ರಿಕೆಯಲ್ಲಿ ಇನಿತು ಬಂದಿದೆ.

2. ಡಾ. ಸೂರ್ಯನಾಥ ಕಾಮತ್ "ವಿಜಯನಗರ ಸಾಮ್ರಾಜ್ಯ" ಪು. 16 (1973)

ಮನೆತನದ ಇತಿಹಾಸವನ್ನು ಸಾಮಾನ್ಯವಾಗಿ ಸಾಳುವ ನರಸಿಂಹರಾಜನಿಂದ (ಕ್ರಿ.ಶ. ೧೪೮೫-೯೧) ಆರಂಭಿಸಲಾಗುತ್ತದೆ. ಸಾಮ್ರಾಜ್ಯದ ಸಿಂಹಾಸನವನ್ನು—ಆ ಆಡಳಿತದ ಕಡಿವಾಣವನ್ನು—ಆತ ಹಿಡಿದನೆನ್ನುವುದು ಬಹು ಮುಖ್ಯವಾದರೂ ಆತ ಆ ಅವಸ್ಥೆಗೆ ಬರಲು ಇದ್ದ ಪರಂಪರೆಯೂ ಅಷ್ಟೇ ಮುಖ್ಯ. ಯಾವುದೇ ಮನುಷ್ಯ ಒಮ್ಮಿಂದೊಮ್ಮೆಗೆ ಒಂದು ದೊಡ್ಡ ಸ್ಥಾನಕ್ಕೆ ಬರಲು ಸಾಧ್ಯವಿಲ್ಲ. ಆದರಲ್ಲೂ ಪ್ರಾಚೀನ ಕಾಲದಲ್ಲಿ ; ಹಂತ ಹಂತವಾಗಿ ಒಂದು ನಿಯಮದ ಕಟ್ಟಿನಲ್ಲಿ ಬೆಳವಣಿಗೆ ಇದ್ದ ಪದ್ಧತಿಯ ಕಾಲ ಅದು. ದಿಢೀರನೆ ಮಂತ್ರಿ ಪಟ್ಟಕ್ಕೆ—ಮಹಾಪ್ರಧಾನಿಯ ಪಟ್ಟಕ್ಕೆ—ಒಬ್ಬ ವ್ಯಕ್ತಿ ಏರುವಂತಿದ್ದಿಲ್ಲ. ಮಂಡಲೇಶ್ವರ, ಮಹಾಮಂಡಲೇಶ್ವರ, ಪದಕ್ಕೆ ಏರುವಷ್ಟರಲ್ಲಿ ಓರ್ವವ್ಯಕ್ತಿ ಸಾಕಷ್ಟು ದುಡಿದಿರ ಬೇಕಾಗಿತ್ತು; ಜೊತೆ ಜೊತೆಗೆ ಆ ವ್ಯಕ್ತಿಯ ಮನೆತನವೂ ತತ್ಪೂರ್ವದಲ್ಲಿ ಇನಿತು ಸೇವೆಯನ್ನು ಮಾಡಿರಬೇಕಿತ್ತು. ಈ ಹಿನ್ನಲೆಯಲ್ಲಿ ಸಾಳುವ ಮನೆ ತನದ—ನರಸಿಂಹನ—ಚರಿತ್ರೆಯನ್ನು ಇನಿತು ವಿಶ್ಲೇಷಿಸಬೇಕು. 'ಸಾಳುವ' ಮನೆತನ ಸೇವುಣರ ಕಾಲದಿಂದಲೇ ಪ್ರಸಿದ್ಧ. 'ಸಾಳುವ ತಿಕ್ಕಮ' ಸೇವುಣ ದೊರೆ ಯಾದವ ಚಕ್ರವರ್ತಿ ರಾಮಚಂದ್ರನ ಪ್ರಸಿದ್ಧ ಸೇನಾನಿ.[3] ಈ ತಿಕ್ಕ, ತಿಕ್ಕಮ (<ತ್ರಿವಿಕ್ರಮ)[4] ಸೇವುಣರ ಚರಿತ್ರೆಯಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾನೆ.

'ಸಾಳ್ವ ಭಾರತ', 'ರಸರತ್ನಾಕರ', 'ವೈದ್ಯಸಾಂಗತ್ಯ' ಹಾಗೂ 'ಶಾರದಾ ವಿಲಾಸ' ಎಂಬ ಕೃತಿಗಳನ್ನು ರಚಿಸಿದ 'ಸಾಳ್ವ' ಎಂಬ ಓರ್ವ ವ್ಯಕ್ತಿಯೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇದ್ದಾನೆ. ಇವನ ಕಾಲ ಸು. ಕ್ರಿ. ಶ. ೧೫೫೦ ಎಂದೂ ಇವನು 'ಸಾಳ್ವಮಲ್ಲ' ಎಂಬ ರಾಜನ ಆಶ್ರಯದಲ್ಲಿ ಇದ್ದನೆಂದೂ ವಿದ್ವಾಂಸರ ಅಭಿ ಪ್ರಾಯ. ನಮ್ಮ ವಿಜಯನಗರದ ಮನೆತನ ಹಾಗೂ 'ಸಾಳುವ ನರಸಿಂಹ' ದೊರೆ, ಕ್ರಿ. ಶ. ಸು. ೧೪೫೦-೯೧ರಲ್ಲಿ ಇದ್ದುದರಿಂದ ಈ ಕವಿಯ ಪ್ರಸಕ್ತಿ ಆನಂತರದ್ದು ಎಂಬುದು ಸ್ವಯಂವಿದಿತ. ಆದರೆ ಈತನಿಗೆ ಆಶ್ರಯವನ್ನಿತ್ತ 'ಸಾಳ್ವಮಲ್ಲ' ದೊರೆಯ ಚರಿತ್ರೆ ಮಾತ್ರ ನಮಗೆ ಬೇಕಾದದ್ದೇ. ಗೇರುಸೊಪ್ಪೆಯ ಸಾಳುವರು, ಹಾಡುವಳ್ಳಿಯ ಸಾಳುವರು ಎರಡು ಮನೆತನಗಳವೆರೆಂದು ಇತಿಹಾಸದಲ್ಲಿ ಕಾಣಿಸಿ

---

3. a) ಡಾ. ಎ. ವಿ. ನರಸಿಂಹಮೂರ್ತಿ "ಕರ್ನಾಟಕದ ಸೇವುಣರ ಇತಿಹಾಸ' ಪು. 69 (1971)
   b) A History of Karnataka, (PBD. SHR & BRG) P. 244 (1981)
4. ತಿಕ್ಕ <ತಿಕ್ಕಮ ಎಂಬುದು 'ತ್ರಿವಿಕ್ರಮ' ಶಬ್ದದ ಸಣ್ಣಿಸಿದರೂಪ. 'ತಿಕ್ಕಪಯ್ಯ'ವೂ ಅಷ್ಟೇ !

ಕೊಂಡಿದ್ದಾರೆ. ಈ ಎರಡೂ ಮನೆತನಗಳು ಒಂದಕ್ಕೊಂದು ಅನಿಕೊಂಡು ಕರಾವಳಿ ಗುಂಟ ರಾಜ್ಯಭಾರ ಮಾಡಿದವು. ಇವುಗಳ ಮಧ್ಯದ ಸಂಬಂಧದ ಕೊಂಡಿಗಳನ್ನು ಸಂಶೋಧನೆಯಲ್ಲಿ ಹುಡುಕಿ ಜೋಡಿಸಿ ಬೆಸೆಯಬೇಕಾಗಿದೆ. ಹೀಗೆಯೇ ಕೊಂಡಿಯನ್ನು ಕಳಚಿಕೊಂಡು ನಿಂತ ಮನೆತನ ನಮ್ಮ ವಿಜಯನಗರದ್ದು—ಸಾಳುವ ನರಸಿಂಹರಾಯನದು. ಹಾಡುವಳ್ಳಿಯ 'ಸಾಳುವ ಮಂಗಿ' ರಾಯ ಸಂಗಮ ಮನೆತನದ ಕುಮಾರ ಕಂಪಣ ದೇವನಿಗೆ 'ಮಧುರಾ ವಿಜಯ' ಕಾವ್ಯದ ಪ್ರಕಾರ ಮಧುರಾ (ದಕ್ಷಿಣ ಮದುರೈ) ನಗರವನ್ನು ಗೆಲ್ಲುವಲ್ಲಿ ಸಹಾಯ ಮಾಡಿದ್ದನೆಂದು ಡಾ. ಪಿ. ಗುರುರಾಜಭಟ್ಟರು ಬರೆದಿದ್ದಾರೆ.[5] ಈ ಸಂಗತಿಯನ್ನು 'A History of Karnataka' ಗ್ರಂಥವೂ ಒಪ್ಪಿಕೊಂಡಿದೆ ಅಥವಾ ಪೂರ್ವದಲ್ಲಿ ಅದೇ ನಿರೂಪಿಸಿರಲೂಬಹುದು.[6] ಏನೇ ಇರಲಿ ಇಲ್ಲಿ ನಮಗೆ ಒಂದೇ ಒಂದು ಎಳೆ 'ಮಂಗಿ' (ಸಾಳ್ವ ಮಂಗಿ)ರಾಯ ಒಂದನೆಯ ಬುಕ್ಕರಾಯನ ಮಗ ಕಂಪಣ್ಣನಿಗೆ ಯುದ್ಧದಲ್ಲಿ ಸಹಾಯಕನಾಗಿದ್ದ ಎಂಬುದು. ಈ ಕಂಪಣ್ಣ ದೊರೆ ಸ್ವರ್ಗಸ್ತನಾದ ಸಂದರ್ಭದಲ್ಲಿ ಆತನ ಪುತ್ರ ಕುಮಾರ ನಂಜಣ್ಣ ಒಡೆಯ ದಿ.ಶಾ.ಶ. ೧೨೯೬, ಆನಂದ ಪುಷ್ಯ ಬ ೫, ಸೋಮವಾರದಂದು (೨೪-೧೨-೧೩೭೪) ಗುಂಡ್ಲುಪೇಟೆ ತಾಲೂಕಿನ ಕುಡುಗನಾದ ಮಡೆಹಳ್ಳಿಯನ್ನು (ರಾಮನಾಥ ಪುರವಾಗಿಸಿ) ಧರ್ಮದತ್ತಿಯನ್ನು ಹಾಕಿಕೊಡುತ್ತಾನೆ.[7] ಈ ಘಟನೆಯನ್ನು ಗಣನೆಗೆ ತೆಗೆದುಕೊಂಡರೆ 'ಮಂಗಿದೇವ' ಕ್ರಿ.ಶ. ೧೩೭೪ರ ಎಡಬಲದಲ್ಲಿ ಬದುಕಿದ್ದ. ಮದುರೆಯನ್ನು ಕ್ರಿ.ಶ. ೧೩೭೧ರಲ್ಲಿ ಗೆಲ್ಲಲಾಯಿತೆಂಬುದು ಗಮನಾರ್ಹ ವಿಷಯ. ಇವನಿಗೆ ಸಹಾಯ ಮಾಡಿದ ಮಂಗಿಯು ಈ ಸಮಯಕ್ಕೆ ಸಾಕಷ್ಟು ಸಮರ್ಥ ಸೇನಾನಿ ಆಗಿದ್ದನೆಂಬುದು ಪರಿಶೀಲಿಸಬೇಕಾದ ಸಂಗತಿ. ಈ ಹಿನ್ನೆಲೆಯಲ್ಲಿ ನರಸಿಂಗನ ಪುತ್ರ ಇಮ್ಮಡಿ ನರಸಿಂಹನ ಚಾಕೇನಹಳ್ಳಿಯ (ದೇವ ಸಮುದ್ರದ) ಶಾಸನವನ್ನು ಈಗ ಪುನರಾವಲೋಕನೆಗೆ ಎತ್ತಿಕೊಳ್ಳಬೇಕು. ಈ ಶಾಸನವು ಸಾಳುವ ಮನೆತನದ ಚರಿತ್ರೆಯ ಮೇಲೆ ಅನೇಕ ಸಂಗತಿಗಳನ್ನು ತಿಳಿಸಿ ಹೊಸ ಬೆಳಕನ್ನು ಚೆಲ್ಲುತ್ತದೆ. ಇದರ ಕಾಲ ಶಾ.ಶ. ೧೪೧೪, ಪರಿಧಾವಿ, ಫಾಲ್ಗುಣ ಬ. ೭, ಆದಿತ್ಯವಾರ (೧೦-೩-೧೪೯೩ A.D.) ಪುರೂರವ ಉರ್ವಶೀಯರ ವಂಶ—

---

5 'ಕರ್ನಾಟಕ-ಕನ್ನಡ ವಿಷಯ ವಿಶ್ವಕೋಶ', ಪು. 1469A (1979)

6 ಪೂರ್ವೋಕ್ತ, 'A History of Karnataka' p. 374 (1980)

7 ಎ.ಕ.ಸಂ 3 (1974) ಗುಂಡ್ಲುಪೇಟೆ-18 ಪು. 19 ; ಈ ಶಾಸನದ ತೇದಿಯ ಪ್ರಕಾರ ದಿ. 24-12-74ರಂದು ಧರ್ಮದತ್ತಿಗಳನ್ನು ಸ್ವರ್ಗಸ್ತನಾದ ಪ್ರಯುಕ್ತ ಹಾಕಿಕೊಡುತ್ತಿರುವದರಿಂದ ಆತನ ಮರಣ 12-12-1374 ರಂದು ಸಂಭವಿಸಿತೆಂದು ಹೇಳಬಹುದು. ಏನೇ ಇದ್ದರೂ ಕಂಪಣ್ಣ 'A History of Karnataka', ಗ್ರಂಥದಲ್ಲಿ ಬರೆದಿರುವಂತೆ (ಪು. 359) ನವಂಬರ್ 1374ರಲ್ಲಿ ಅಲ್ಲ.

೨೨ ........| ತದ್ವಂಶೇ
೨೩ ಸಮುಭೂತ್ತುಂಗಮುಕ್ತಾಮಣಿರಿವೋಜ್ವಲಃ |ಗುಣಿ |
ಸುವೃತ್ತೋನಿರ್ದೋ
೨೪ ಷೋ ಗುಂಡದೇವೋ ಮಹಿಪತಿಃ | ಗುಂಡಬೊಮ್ಮೋ
ಮಾದಿರಾಜೋ ಗೌತಯೋ
೨೫ ವೀರಹೋಬಲಃ | ತಸ್ಮಾತ್ಸಾಳುವ ಸಾವಿತ್ರಿ ಮಂಗಿದೇವಾವಿ
೨೬ ಜಗ್ಣಿರೇ | ತೇಷಾಮಭೂತ್ಸಾಳುವಾದಿ ಮಂಗಿದೇವೋ ಗುಣೋತ್ತರಃ
೨೭ ತನ್ವನ್ಸುಮನಸಾಂ ಲಕ್ಷ್ಮೀಮೃತೂನಾಮಿವ ಮಾಧವಃ | ಸಾಂ
೨೮ ಯುಗಿನೇನಕೇಸಾಪಿಸಮಿತ್ಕಂಡೂಲ ಬಾಹುನಾ | ಸತ್ರಾಸ
೨೯ ಶಸ್ತ್ರಾಸ್ತ್ರಿ ಕೃತ್ವಾ ಯೋಗ್ರಹೀತ್ತತ್ಕಠಾರಿಕಾಂ | ಕಠಾರಿಸಾಳುವ
೩೦ ಇತಿ ಖ್ಯಾತಿರ್ಯಸ್ಯಾಥ ಪಪ್ರಥೇ | ಮಹೇಶ್ವರ ಇತಿ ಖ್ಯಾತಿರ್ಯ
೩೧ ಥಾಮನ್ಮಥಮಾಥಿನಃ | ಪ್ರತಿಗ್ನಾಯ ಪುರೋ ರಾಜ್ಞಾಮ್ಯಾಕಾರಂ
೩೨ ನಗರಾಹ್ವಯಂ | ಭಿತ್ವಾಪ್ರತ್ಯಗ್ರಹೀತ್ತತ್ರ ಕ್ಷಿಪ್ತಾಮ್ಯಃ ಕಹಲೀಂ
೩೩ ನಿಜಾಂ | ಸಮುಧೃತ ಸುರತ್ರಾಣ ಶಲ್ಯೇ ಯತ್ರಾವನೀಶ್ವರೇ |
ಯದ್ಯ
೩೪ ಶಃಪೂರಕಪೂರ್ಱೈ ರಾಶ್ಯಾಸೀದ್ದಕ್ಷಿಣಾಂ ದಿಶಾಂ | ವಿಲೀಕೃತ
೩೫ ತುರುಷ್ಕೈಃ ಪ್ರಾಕ್ಶ್ರೀರಂಗಮಪ್ಯವರುದ್ಧರನ್ | ಶ್ರೀರಂಗಸ್ಥಾಪನಾ
೩೬ ಚಾರ್ಯ ಇತ್ತಿಯಃ ಕೀರ್ತಿತೋ ಜನೈಃ | ಶ್ರೀರಂಗಸ್ಥಾ
ನಮಕರೋ
೩೭ ತ್ಶ್ರೀರಂಗಸ್ಥಾಪನೋಭವತ್ | ಸಾಲಗ್ರಾಮ ಸಹಸ್ರಸ್ಯ (ದಾ)
೩೮ ದಾತಾ ಯೋ ವಿದುಷಾಂ ದ್ವಿಷಾಂ | ಸುಪರ್ವರಾಮರಾಮೋ
ಚ್ಚೈಸ್ತನ
೩೯ ಗ್ರಾಮೋಪ್ಯಮೋಭವತ್ | ತಂ ದಕ್ಷಿಣ ಸುರತ್ರಾಣಂ ನಿಹತ್ಯ ಸ
೪೦ ಮರಾಂಕಣೇ | ಯಃ ಪ್ರತಿಜ್ಞಾಮವಿತಥಾಂ ಚಕಾರ ನಿಜ ವಿ
೪೧ ಕ್ರಮೈಃ | ಕೀರ್ತ್ತಿಃ ಕ್ಷೀರೋದ ಪೂಣೇರ್ಂದೋಃ ಗೌತಯೋ
ಸ್ಮಾನ್ಮಹೀ
೪೨ ಪತೇಃ | ಅಭೂದಭೂತಪೂರ್ವ ಶ್ರೀರ್ಜಯಂತ್ಯೆವ ವಾಸಾವಾತ್
೪೩ ಯಸ್ಯ ದಿಗ್ಜೈತ್ರ ಯಾತ್ರಾಸು ತನೋತಿಸ್ಮ ಚಮೂ [ರಜಃ]
ಪರಿಪಂಥಿ
೪೪ ವಧೂವಕ್ತ್ರೇ ಪದ್ಮಪ್ರಾಲೇಯ ವರ್ಷತಾಂ | ಗಣನಾಮುತ್ಸರಿಗು
೪೫ ಣಾತ್ಮಾಗತಯಾಮ್ನೃಪತೇಸ್ತತಃ | ಕೀರ್ತಿಮಾನ್ಗುಂಡಯೋ ಜಜ್ಞೇ
೪೬ ಕ್ಷೀರಾಬ್ಧೇರಿವ ಚಂದ್ರಮಾಃ | ಯಸ್ಮಿನ್ಜಗತಿ ರಾಜೇಂದ್ರಾತ

೪೭ ಗತೇ ನೀತಿ ಕೌಮುದೀಂ | ಕಲಿ ಶಾರ್ವರಗಂಧೋಪಿ ನಕೇನಾ
೪೮ ಪ್ಯನ್ವ ಭೂಯತ | ತತಃ ಕಾಲತ್ಬಹೋಸ್ತ್ರಪ್ತ್ವಾ ತಪಾಂಸಿ ಸಮ
೪೯ ಹೀಪತಿಃ । ನರಸಿಂಹ ಮಹಾರಾಯಂ ಲೇಭೇ ನರಹರೇರ್ವರಂ | ಚಾ
೫೦ ಪಕೋಟಿ ಸಮುತ್ಪಾತ ಸಕಲಾರಾತಿ ಭೂಭೃತಾ |

× × × ×

೮೬ ........| ಕಾಸಾರಾದಿವ
೮೭ ಕಲ್ಹಾರಂ ಕಾರುಣ್ಯಾದಿವ ಪಾಲನಂ | ನರಸಿಂಹಮಹಾರಾಜಾಜ್ಞಾ
೮೮ ತೋನಾಥಃ ಕ್ಷಮಾಭುಜಾಂ | ಯಿಮ್ಮಡಿ ಶ್ರೀನೃಸಿಂಹಾಖೋ
ರಾಯಃ ಶಾ
೮೯ ಸ್ತಿ ವಸುಂಧರಾಂ |........ಇತ್ಯಾದಿ

ಈ ಶಾಸನದ ಪ್ರಕಾರ ಆರಂಭದ ಸಂಗತಿಗಳು ಪೌರಾಣಿಕವಾದರೂ ಅನಂತರದ ಸಂಗತಿಗಳು ಐತಿಹಾಸಿಕವಾಗಿವೆ. ಪೌರಾಣಿಕ ವಿವರಗಳು ಚಂದ್ರ, ಅವನಿಂದ ಬುಧ ; ಅವನ ವಂಶದಲ್ಲಿ ಪುರೂರವ ಮತ್ತು ಉರ್ವಶಿ ದಂಪತಿಗಳು.ಅವರ ಅನಂತರ ಅನೇಕರು ಆ ವಂಶದಲ್ಲಿ ಆಗಿ ಹೋದರು.ಆ ಪುರೂರವನ ವಂಶದಲ್ಲಿಗುಂಡದೇವ ಭೂಪತಿ,ಗುಂಡ ದೇವ ಭೂಪತಿಗೆ ಗುಂಡಬೊಮ್ಮ, ಮಾದಿರಾಜ, ಗೌತಯ ಹಾಗೂ ವೀರಹೋಬಲ ಎಂಬುವರು ಮಕ್ಕಳು. ವೀರಹೋಬಲನಿಗೆ 'ಸಾಳುವ ಸಾವಿತ್ರಿ'(ಸಾಳುವ ಸೂರ್ಯ) ಎಂಬ ಬಿರುದಿನ 'ಮಂಗಿದೇವ' ಎಂಬ ಪುತ್ರನು ಜನಿಸಿದನು. ಈತನು ಬಹಳ ಶೂರ ನಾಗಿದ್ದನು ; ಯುದ್ಧದಲ್ಲಿ ಅವನು ವೈರಿಯ ಕೈಯ್ಯಲ್ಲಿಯ ಖಡ್ಗವನ್ನು ಚಾಕ ಚಕ್ಯತೆಯಿಂದ ಸೆಳೆದುಕೊಂಡು ಬಿಡುತ್ತಿದ್ದನು. ಹೀಗೆ ಖಡ್ಗ–ಕಠಾರಿ–ಆಯುಧ ಗಳನ್ನು ಕಿತ್ತುಕೊಂಡುದಕ್ಕೆ 'ಕಠಾರಿಸಾಳುವ' ಎಂಬ ಬಿರುದನ್ನು ಪಡೆದಿದ್ದನು. ಇವನು ದಕ್ಷಿಣ ದೇಶದಲ್ಲಿ ತುರುಕರು (ತುರುಷ್ಕೈಃ) ಹಾಳು ಮಾಡಿದ (ಖಿಲೀಕೃತ) ಶ್ರೀರಂಗವನ್ನು ಪುನರುದ್ಧರಿಸಿದ; ಶ್ರೀರಂಗಸ್ವಾಮಿಯನ್ನು ಪುನಃ ಪ್ರತಿಷ್ಠಾಪಿಸಿದ. ತನ್ನಿಮಿತ್ತ 'ಶ್ರೀರಂಗಸ್ಥಾಪನಾಚಾರ್ಯ' ಎಂದು ಜನರಿಂದ ಸ್ತುತಿಸಲ್ಪಟ್ಟ. ಸಹಸ್ರ ಸಾಲಗ್ರಾಮಗಳನ್ನು (<ಶಾಲಗ್ರಾಮ) ದಾನ ಮಾಡಿದ. 'ದಕ್ಷಿಣ ಸುರತ್ರಾಣ' ನನ್ನು (ಮದುರೆಯ ಸುಲ್ತಾನನ್ನು) ಕೊಂದು ತನ್ನ ವಿಕ್ರಮವನ್ನು ಸ್ಥಾಪಿಸಿದ. ಇವನಿಗೆ ಸಮುದ್ರ ಮಥನದಲ್ಲಿ ಚಂದ್ರನು ಹುಟ್ಟಿದ ಹಾಗೆ, ಇಂದ್ರನಿಗೆ ಜಯಂತನು ಹುಟ್ಟಿದ ಹಾಗೇ 'ಗೌತಯ' ಎಂಬ ಮಗನು ಹುಟ್ಟಿದನು. ಇವನೂ ಬಹು ಪರಾಕ್ರಮಿಯಾಗಿದ್ದ. ಇವನ ಜೈತ್ರ ಯಾತ್ರೆಯಲ್ಲಿ ಸೇನೆಯ ಪದಹತಿಯಿಂದ ಹುಟ್ಟಿದ ಧೂಳೀ ವೈರಿ ವನಿತೆಯರ ಕಣ್ಣಿಂದ ನೀರನ್ನು ಹರಿಸುತ್ತಿತ್ತು ! ಈತನಿಗೆ

'ಗುಂಡಯ' ಎಂಬ ಪುತ್ರನು ಜನಿಸಿದನು. ಈ ಗುಂಡಯನಿಗೆ ಬಹುಕಾಲದ ನಂತರ ಅವನ ತಪಸ್ಸಿನ ಫಲವಾಗಿ ಅಹೋಬಲ ನರಸಿಂಹ ಸ್ವಾಮಿಯ ಕೃಪೆಯಿಂದ 'ನರಸಿಂಹ ಮಹಾರಾಯ' ಜನಿಸಿದನು. ಈತನಿಗೆ 'ಸಾಳುವ' (?) 'ಮೇದಿನಿಮೀಸರ ಗಂಡ, 'ಧರಾವರಾಹ', ಮುಂತಾದ ಬಿರುದುಗಳಿದ್ದವು. ಈತನ ಹೆಂಡತಿ 'ರಂಗಮಾಂಬಿಕಾ'. ಈ ದಂಪತಿಗಳಿಗೆ 'ಇಮ್ಮಡಿ ನರಸಿಂಹ' ದೊರೆಯು ಜನಿಸಿದನು.[8] ಈ ಸಾಳುವ ನರಸಿಂಹ ಕ್ರಿ. ಶ. ೧೪೭೫ ರ ಸುಮಾರಿಗೇನೆ ಮಹಾರಾಜ ಎಂದು ಪರಿಗಣಿತನಾಗಿದ್ದ. ಈ ಸಂಬಂಧದಲ್ಲಿ ಗುಂಡ್ಲುಪೇಟೆ ತಾಲ್ಲೂಕಿನ ಪಂಚನಹಳ್ಳಿಯ ಶಾಸನವು ತುಂಬ ಮಹತ್ವದ್ದಾಗಿದೆ. ಅದು ಹೀಗೆ ಆರಂಭವಾಗಿದೆ.

೧ ಶುಭಮಸ್ತು ಮನ್ಮಥ ಸಂವತ್ಸರ ಕಾರ್ತೀಕ ಬ ೫ಲು ಶ್ರೀ ಮನ್ಮಹಾರಾ **ಜಾಧಿರಾಜ**

೨ ಸಾಳುವ ನರಸಿಂಗ ನಾಯಕಂಗೆ ಶ್ರೀ ಅಲ್ಲಾಳರಾಯ ಅರಸಿನವರ ನಿರೂಪದಿಂ

೩ ಗಉಡ ಪ್ರಜೆಗಳುಗೆ ಕೊಟ್ಟ ಶಿಲಾಶಾಸನ........ಇತ್ಯಾದಿ.[9]

ಈ ಶಾಸನದ ಭಾಷೆ ಸ್ವಲ್ಪ ದೋಷಪೂರ್ಣವಾದರೂ ನರಸಿಂಗರಾಯನ ಬಿರುದು 'ಮಹಾ ರಾಜಾಧಿರಾಜ' ಎಂಬುದು ಬಹಳ ಗಮನಾರ್ಹವಾಗಿದೆ. ಸಾಳುವ ಮನೆತನದ ದೊರೆಗಳು 'ಮಂಗು' ರಾಜನ ಕಾಲದಿಂದ ಕ್ರಮವಾಗಿ ದಕ್ಷಿಣಭಾರತದಲ್ಲಿ ತಮ್ಮ ಆಡಳಿತವನ್ನು ಜಮಾಯಿಸುತ್ತ ಬಂದರೆಂಬುದು ಈಗಾಗಲೇ ತಿಳಿದು ಬಂದಿದೆ. ಕ್ರಿ. ಶ. ೧೪೬೩ರ ಸುಮಾರಿಗೆ ನರಸಿಂಹನು ಆಂಧ್ರದ ಗಜಪತಿಯನ್ನು ಹಿಂದಕ್ಕಟ್ಟಿದ. ಕಪಿಲೇಂದ್ರನು ಸತ್ತ ಮೇಲೆ (ಸು. ಕ್ರಿ. ಶ. ೧೪೭೦) ಪೂರ್ವ ಕಡಲ ಕಿನಾರೆಯ ಆಂಧ್ರದ ಪ್ರದೇಶಗಳನ್ನು ವಿಜಯನಗರದ ಆಧಿಪತ್ಯಕ್ಕೆ ಸೇರಿಸಿದ. ಗಜಪತಿಗಳ ಹಾಗೂ ತಮಿಳುನಾಡ ರಾಜರುಗಳ ಗದ್ದಲದಲ್ಲಿ ಬಹಮನಿ ಸುಲ್ತಾನರು ತಮ್ಮ ಮೂಗನ್ನು ತೂರಿಸಿದ್ದರು. ಅವರನ್ನೂ ಸೋಲಿಸಿ ಉದಯಗಿರಿಯಿಂದ ಕಂಚಿಯ ವರೆಗೆ ನಾಡನ್ನು ತನ್ನ ಆಳ್ವಿಕೆಗೆ—ಆಧಿಪತ್ಯಕ್ಕೆ—ಸೇರಿಸಿದ. ಈ ಎಲ್ಲ ಕಾರ್ಯವನ್ನು ಆತ ಸಂಗಮ ಮನೆತನಕ್ಕೆ—ವಿಜಯನಗರ ರಾಜ್ಯಕ್ಕೆ—ನಿಷ್ಠೆಯಿಂದ ಮಾಡಿದ. ಸಂಗಮ ಮನೆತನದ ವಿರೂಪಾಕ್ಷ ಹಾಗೂ ಪ್ರೌಢದೇವರಾಯ ರಾಜರು ಅಯೋಗ್ಯರೂ, ಆಡಳಿತವನ್ನು ನಡೆಸಲು ಅಸಮರ್ಥರೂ ಆದಾಗ ಅನಿವಾರ್ಯವಾಗಿ ಸಿಂಹಾಸನವನ್ನು ಆಕ್ರಮಿಸಿದ. ಸು. ಕ್ರಿ. ಶ. ೧೪೫೨ ಆಡಳಿತದ ಕುದುರೆಯನ್ನೇರಿದ

---

8 ಎ. ಕ.ಸಂ, 3 (1974) ಹೆಕೋ: 89, ಪು, 484-487

9. ಅದೇ, ಗುಂಡ್ಲುಪೇಟೆ 96, ಪು. 72-73

ನರಸಿಂಹ (I) ಸು. ಕ್ರಿ. ಶ. ೧೪೯೧ರ ವರೆಗೆ ಆದನ್ನು ನಡೆಸಿ ಅಸ್ತಂಗವಿತನಾದ. ಸಾಯುವಾಗ ಚಿಕ್ಕ ಮಕ್ಕಳಾದ 'ತಿಮ್ಮ' ಹಾಗೂ 'ಇಮ್ಮಡಿ ನರಸಿಂಹ ಇವರನ್ನು ನರಸನಾಯಕ (ತುಳುವ ವಂಶದ) ಮಂತ್ರಿಗೆ ಒಪ್ಪಿಸಿದ. ನರಸನಾಯಕನು 'ತಿಮ್ಮ' ದೊರೆಯನ್ನು ಸಿಂಹಾಸನದ ಮೇಲೆ ಕೂಡಿಸಿದ. ಆದರೆ ಈತನನ್ನು 'ತಿಮ್ಮರಸ' ಮಂತ್ರಿಯು ಕೊಲ್ಲಿಸಿದ. ನರಸ ನಾಯಕನು ಆಗ 'ಇಮ್ಮಡಿ ನರಸಿಂಹ' ನನ್ನು ಪಟ್ಟಕ್ಕೆ ಕೂಡಿಸಿದ. ಆದರೆ ಇವನು ನರಸನಾಯಕನನ್ನು ವಿರೋಧಿಸಿದ. ಆಗ ನರಸನಾಯಕನು ಇಮ್ಮಡಿ ನರಸಿಂಹನನ್ನು ಪೆನುಗೊಂಡೆಯ ಕೋಟೆಯಲ್ಲಿ ಬಂದಿಯಾಗಿಟ್ಟನು. ನರಸನಾಯಕನ ಪುತ್ರ ತನ್ನ ತಂದೆಯ ತರುವಾಯ ಕ್ರಿ. ಶ. ೧೫೦೩ರಲ್ಲಿ ಆಡಳಿತವನ್ನು ಸ್ವೀಕರಿಸಿ ಕ್ರಿ. ಶ. ೧೫೦೫ರಲ್ಲಿ ಸಾಳ್ವ ಇಮ್ಮಡಿ ನರಸಿಂಹನನ್ನು ಸಂದೇಹಾಸ್ಪದ ರೀತಿಯಲ್ಲಿ ಮರಣಕ್ಕೀಡು ಮಾಡಿದ ಮೇಲೆ ಸ್ವತಃ ಸಾಮ್ರಾಟನಾದ.

ಸಾಮ್ರಾಜ್ಯದ ಆಡಳಿತ ರಾಜರಾಗಿ ಆಳುವ ಅವಕಾಶ ತಪ್ಪಿದರೂ ಸಾಳುವ ಮನೆತನಕ್ಕೆ ಅಧಿಕಾರವೇನು ತಪ್ಪಲಿಲ್ಲ. ಸಾಳುವ ರಾಚಿ (ರಾಜ) ರಾಜನ ಮಕ್ಕಳಾದ ತಿಮ್ಮರಸ ಹಾಗೂ ಆತನ ತಮ್ಮ ಗೋವಿಂದ ರಾಜ ಇವರು ಕೃಷ್ಣದೇವರಾಯನಿಗೆ ಮಹಾಪ್ರಧಾನರಾಗಿ ಆಡಳಿತ ನಡೆಸಿದರು. ಇದಕ್ಕೆ ಕಾರಣವೂ ಉಂಟು. ಆದೇನೆಂದರೆ ಕೃಷ್ಣದೇವರಾಯನು ಸಾಳುವ ನರಸಿಂಹ (I) ರಾಜನಿಗೆ ಸಂಬಂಧಿ :

೧ ಸ್ವಸ್ತಿ ಶ್ರೀ ಮನ್ಮಹಾರಾಜಾಧಿರಾಜ
೨ ರಾಜ ಪರಮೇಶ್ವರ ಶ್ರೀ ಮನ್ಮಹಾಮೇದಿನೀ ಮೀಸೆಯರ
೩ ಗಂಡ ಕಠಾರಿ ಸಾಳುವ ಶ್ರೀಮದಕ್ಷಿಣ ಸಮುದ್ರಾಧಿಪತಿ
೪ ನಾರಸಿಂಹ ವರ್ಮ್ಮ ಮಹಾಧಿರಾಜ ತತ್ಪುತ್ರ ಪಿತುರನ್ವಾಗತ
೫ ಸಕಲ....ಜನಾನಂದ ಸಂದೋಹ ಶೌರ್ಯ ಪರಾಕ್ರಮೋ
೬ ದಾರ ಸಕಲ ದೇಶಾಧೀಶ್ವರ ಮಣಿ ಮಕುಟ ಚರಣಾರವಿಂದ ಶ್ರೀ
೭ ಮತ್ಕೃಷ್ಣವರ್ಮ ಮಹಾರಾಜಂ ಪೃಥ್ವೀ ರಾಜ್ಯಂಗೆ
೮ ಯಿಉತ್ತರಲು ಶ್ರೀಮತು ದಕ್ಷಿಣವಾರಣಾಸಿಯಾ
೯ ದ ತ್ರಿಮಕೂಟದಲ್ಲಿ ಆಗಸ್ತ್ಯನಾಥ ದೇವರ ಸನ್ನಿಧಿಯಲು
೧೦ ಶಾಲಿವಾಹನ ಶಕವರುಷಂ ಗತೇಷು ೧೪೩೫ ಸಂದು ವ
೧೧ ರ್ತಮಾನ ಶ್ರೀಮುಖ ಸಂವತ್ಸರದ ಅಶ್ವಯುಜ ಶು ೧೦ ಆ
೧೨ ದಿವಾರದಲು ಶ್ರೀಕೃಷ್ಣದೇವ ಮಹಾರಾಯರ ನಿರೂಪ
೧೩ ದಿಂದ ಮಹಾಪ್ರಧಾನ ಸಾಳುವ ತಿಂಮರಸವೊಡೆ

೧೪ ಯರ ತಂಮಂದಿರಾದ ಸಾಳುವ ಗೋವಿಂದರಾಜವೊ
೧೫ ಡೆಯರು
೧೬ ಉಂಮತೂರ ತಿರುಮಲೆ
೧೭ ದೇವರ ಅಂಗರಂಗ ಭೋಗಕ್ಕೆ........ಇತ್ಯಾದಿ.[10]

ದಾನಬಿಟ್ಟ ವಿವರಗಳು ಶಾಸನದ ಕಾಲ ಅಕ್ಟೋಬರ್ ೯, ೧೫ ೧೩ (೯-೧೦-೧೫೧೩ AD)

ತುಳುವ ವಂಶದ ಮಹಾನ್ ಚಕ್ರವರ್ತಿ ಕೃಷ್ಣದೇವರಾಯನು ಸಾಳುವ ಇಮ್ಮಡಿ ನರಸಿಂಗರಾಯನ ಅಳಿಯ ಎಂಬುದು ಬೆಂಗಳೂರು ಬಳಿಯ ಹೊಸಕೋಟೆ ತಾಲೂಕಿನ ಮೋಗಟಗ್ರಾಮದ ಶಾಸನದಿಂದ ಇದೀಗ ನಮಗೆ ತಿಳಿದು ಬಂದಿದೆ. ಮೋಗಟ್ಟದ ವರದರಾಜರಾಜದೇವರಿಗೆ ನಳನಾಮ ಸಂವತ್ಸರ ಪುಷ್ಯ ಶು ೧೦, ಶುಕ್ರವಾರದಂದು ಕೃಷ್ಣದೇವರಾಯನು ದತ್ತಿ ಹಾಕಿಕೊಟ್ಟನು. ಈ ತೇದಿಯ ವಿವರಗಳು ಕ್ರಿ. ಶ. ೧೪೯೬-೯೭ ರಲ್ಲಿ ಬಂದ 'ಶ್ರೀಮುಖ' ಸಂವತ್ಸರಕ್ಕೆ ಸರಿ ಹೊಂದುತ್ತವೆ.[11] ರಾಜಕೀಯವಾದ ಅಧಿಕಾರದ ಅಗ್ನಿಯ ಕೋಲಾಹಲಕ್ಕೆ ತುತ್ತಾಗದೆ ಕೃಷ್ಣದೇವರಾಯನು ಉಳಿಯಲು ಸಾಳುವ ಮನೆತನದ ಜನತೆ ಸಾಕಷ್ಟು ಸಹಾಯ ಮಾಡಿದಂತೆ ಇದೆ. ಮಹಾ ಪ್ರಧಾನ ಸಾಳುವ ಗೋವಿಂದರಾಜಯ್ಯನ ಸುಮಾರು ಇಪ್ಪತ್ತೈದು ಶಾಸನಗಳು ಕರ್ನಾಟಕದಲ್ಲಿ ದೊರತಿವೆ. ಈ ದಿಶೆಯಲ್ಲಿ ಅಧ್ಯಯನ, ಸಂಶೋಧನೆ, ಇನ್ನೂ ಆಗಬೇಕು. ಸದ್ಯದ ಮಟ್ಟಿಗೆ ಇಲ್ಲಿನ ವಿಷಯ ಗಳು ಇತಿಹಾಸಗಳ—ಪುಸ್ತಕಗಳ—ಪುಟದಲ್ಲಿ ನಮೂದು ಆಗಿಲ್ಲ. ಸಾಳುವ ವಂಶದವರು ಗೋವಿಂದರಾಜಯ್ಯನ ಅನಂತರವೂ ಅಧಿಕಾರದಲ್ಲಿ ಇದ್ದರು. ತೆರಕಣಾಂಬಿ, ಶ್ರೀ ರಂಗಪಟ್ಟಣ ಇತ್ಯಾದಿಗಳು ಸಾಳುವ ಗೋವಿಂದರಾಜಯ್ಯನಿಗೆ ನಾಯಕತನಕ್ಕೆ ಸಂದ ನಾಡಾಗಿದ್ದವು.

---

10. ಎ. ಕ. ಸಂ. 3 (1974) ನಂಜನಗೂಡು-285, ಪು. 361
11. Ep. Car, vol. ix (suppl). ಹೊಸಕೋಟೆ-174 ; ಈ ಸಂಪುಟ ಮಾರಾಟಕ್ಕೆ ಬಂದಂತಿಲ್ಲ.

## ಅನುಬಂಧ

ಎ. ಕ. ಹೆಕೋ. ೮೯ ಪ್ರಕಾರ ಸಾಳುವ ವಂಶವೃಕ್ಷ

ಗುಂಡದೇವ



ಡಾ|| ಎಚ್. ಆರ್. ರಘುನಾಥ ಭಟ್

# ಗೇರುಸೊಪ್ಪೆಯಲ್ಲಿ ವಾದೀಂದ್ರ ವಿಶಾಲಕೀರ್ತಿಯ ನಿಶಿಧಿಕಾ-ಶೋಧನೆ

ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನಲ್ಲಿ ನಿತ್ಯ ಹರಿದ್ವರ್ಣಕಾಡಲ್ಲಿರುವ ಗೇರುಸೊಪ್ಪೆ ಮಧ್ಯಕಾಲೀನ ಕರಾವಳಿ-ಕರ್ನಾಟಕದಲ್ಲಿ ಒಂದು ಗಣ್ಯ ಜೈನ ಕೇಂದ್ರವಾಗಿತ್ತು.[1] ಇಲ್ಲಿಯ ಚತುರ್ಮುಖ-ಜೈನ ಬಸದಿ ಮತ್ತು ಅದರ ಸುತ್ತ-ಮುತ್ತ ಇರುವ ಜೈನ ವಾಸ್ತು-ಶಿಲ್ಪ-ಶಾಸನ ಮತ್ತಿತರ ಅವಶೇಷಗಳು ಇದನ್ನು ರುಜುವಾತು ಪಡಿಸುತ್ತವೆ. ನನ್ನ ಇತ್ತೀಚಿನ ಕ್ಷೇತ್ರ ಕಾರ್ಯದಲ್ಲಿ ಒಂದು ಶಿಲ್ಪಿತ-ಶಾಸನ ಪತ್ತೆಯಾಯಿತು. ಅದರ ಮಹತ್ವವನ್ನು ಸಂಗ್ರಹವಾಗಿ ತಿಳಿಸುವುದೇ ಈ ಸಂಪ್ರಬಂಧದ ಆಶಯವಾಗಿದೆ.

ಸಾಮಾನ್ಯವಾಗಿ ನಮಗೆ ಪರಿಚಿತವಿರುವ ನಿಶಿದಿಗೆಗಳಂತೆ ಇದಿಲ್ಲ. ೯೨ ಸೆಂ. ಮಿಾ. ಉದ್ದ ೩೯ ಸೆಂ. ಮಿಾ. ಅಗಲದ ಉದ್ದ ಶಿಲಾ ಫಲಕದ ಮೇಲೆ ಶಾಸನ ಮತ್ತು ವ್ಯಕ್ತಿ-ಶಿಲ್ಪಗಳನ್ನು ವೈಶಿಷ್ಟ್ಯಪೂರ್ಣವಾಗಿ ಕಂಡರಿಸಲಾಗಿದೆ. ಸಾಬೂನು ಕಲ್ಲ ಹಲಗೆಯ ಮಧ್ಯ ಭಾಗದಲ್ಲಿ ಪುಟ್ಟ ಸರ್ಪತೋರಣದ ಕೋಷ್ಠದಂತಿರುವ ಚೌಕಟ್ಟಿನೊಳಗೆ ಪಂಡಿತ-ಆಸನದಲ್ಲಿ

---

1. ಗೋವರ್ಧನಗಿರಿ ಹಾಗೂ ಸೋಂದಾ ತಾಮ್ರಪತ್ರಗಳಲ್ಲಿ ವರ್ಣಿಸಿದಂತೆ, ಗೇರುಸೊಪ್ಪೆಯಲ್ಲಿ ಜೈನಮತದ ಉನ್ನತಿಯಕಾಲದಲ್ಲಿ ಹಲವು ಸುಂದರ ಜೈನ ಚೈತ್ಯಾಲಯಗಳು ಮಿಂಚುವ ಕಲಶ-ಗೋಪುರಗಳಿಂದ ಶೋಭಿಸುತ್ತಿದ್ದವು. ಅದು ಜೈನಮುನಿಗಳ ಆಗರವಾಗಿತ್ತು ; ಜಿನಭಕ್ತರು ಬಂದು ಸೇವೆ ಸಲ್ಲಿಸುತ್ತಿದ್ದ ಕೇಂದ್ರವಾಗಿತ್ತು. (ನೋಡಿ. ಎ.ಕ. VII., ಸಾಗರ ೫೫ ಹಾಗೂ ಎಂ. ಎ. ಆರ್. 1916-ಪು. 19 ಮಾ.ಕ. 69.71 ಪು 27)

ಹಾಗೂ ಬೋಧನಾ ಮುದ್ರೆಯಲ್ಲಿ ಕುಳಿತ ವಾದೀಂದ್ರ ವಿಶಾಲ ಕೀರ್ತಿ ಮತ್ತು ರಾಜಋಷಿಯ ಶಿಷ್ಯರ ಉಬ್ಬು ಶಿಲ್ಪಗಳಿವೆ. ಈ ಚೌಕಟ್ಟಿನ ಆಚೀಚೆ ಶಾಸನ ಸಾಲುಗಳಿವೆ. ಈ ನಿಶಿದಿಗೆಯು ಪತ್ತೆಯಾದ ಸ್ಥಳದ ಸನಿಹದಲ್ಲೆ ಒಂದು ಭಗ್ನಸ್ಮಾರಕದ (ಮುನಿವಾಸ–ಸಮಾಧಿ ?) ಅವಶೇಷಗಳಿವೆ.

ಎಡ ಬಗಲ ಸಂಧಿಯಲ್ಲಿ ಮಯೂರ ಪಿಂಚವನ್ನು ಸಿಕ್ಕಿಸಿಕೊಂಡು, ಎಡ ತೊಡೆಯ ಮೇಲೆ ಬಲಗಾಲನ್ನು ಹೇರಿಕುಳಿತು, ಗಹನ ವಿಚಾರವನ್ನೇನೋ ಶಿಷ್ಯನಿಗೆ ಬೋಧಿಸುತ್ತಿರುವ ವ್ಯಾಖ್ಯಾನ ಮುದ್ರೆ ಮತ್ತು ಮುಖಭಾವ ವಿಶಾಲಕೀರ್ತಿಯ ಉನ್ನತ ಆಚಾರ್ಯತ್ವವನ್ನು ಸೂಚಿಸುತ್ತದೆ. ಇವರೆದುರು ವ್ಯಾಸಪೀಠ ಅದರ ಮೇಲೆ ತಾಡ ಓಲೆಗ್ರಂಥ–ಬದಿಯಲ್ಲಿ ಕಮಂಡಲುಗಳಿವೆ. ಈ ಮುನಿಗಳೆದುರು ಉನ್ನತ ರಾಜಾಸನದಲ್ಲಿ ಭಕ್ತಿಭಾವದಿಂದ ಕರಜೋಡಿಸಿ ಕುಳಿತ ಭಕ್ತನ ಠೀವಿ, ಹೊದೆದ ಶಾಲು ಉಟ್ಟ ಪಂಚೆ, ಓರೆ ಶಿಖೆಯ ಕೇಶಾಲಂಕಾರ ಗಳು ರಾಜಗಾಂಭೀರ್ಯಕ್ಕೆ ತಕ್ಕಂತಿವೆ. ಇದನ್ನು ಪುಷ್ಟೀಕರಿಸುವಂತೆ ಸರ್ಪ–ತೋರಣ ಮಂಟಪವನ್ನು ಕಂಡರಿಸಲಾಗಿದೆ. ಈ ಬಗೆಯ ಶಿಲ್ಪ ಸಂಯೋಜನೆ ಸಾಮಾನ್ಯ ವಾಗಿ ಶಿಲಾಫಲಕದ ಶೀರ್ಷ ಭಾಗದಲ್ಲಿರುತ್ತದೆ ; ಆದರೆ ಇಲ್ಲಿ ಶಾಸನ ಸಾಲುಗಳ ಮಧ್ಯದಲ್ಲಿ (ತಾಡವೋಲೆಯ ಮಧ್ಯದ ಚಿತ್ರದಂತೆ) ಕಂಡು ಬರುವುದು. ಆದ್ದರಿಂದ ಇದೊಂದು ವಿಶಿಷ್ಟ ಬಗೆಯ ನಿಶಿಧಿಗೆಯಾಗಿದೆ.

ಈ ಶಿಲ್ಪದಷ್ಟೆ ವೈಶಿಷ್ಟ್ಯಪೂರ್ಣವಾಗಿ ಶಾಸನವನ್ನು ಬರೆಯಲಾಗಿದೆ. ಇದು ೧೬ ನೆಯ ಶತಮಾನದ ಕನ್ನಡಲಿಪಿಯಲ್ಲಿ ಕಂಡರಿಸಿದ ಸಂಸ್ಕೃತ ಶಾಸನ ಮತ್ತು ಕೊನೆಯಲ್ಲಿ ಅದರ ಸಾರಾಂಶವನ್ನು ಕನ್ನಡದಲ್ಲಿ ಚಿಕ್ಕ ಅಕ್ಷರಗಳಲ್ಲಿ ಬರೆದಿದೆ. ಆದರೆ ತೀರ ಅಂಚಿನಲ್ಲಿರುವ ಅಕ್ಷರಗಳೆಲ್ಲ ಅಳಿದಿರುವುದರಿಂದ ಶಾಸನ ಪಾಠದ ಈ ಭಾಗವನ್ನು ಓದುವುದು ಕಷ್ಟಸಾಧ್ಯ. ಸಂಸ್ಕೃತ ಭಾಗ ಇಂತಿದೆ.

### ಶಾಸನ ಪಾಠ

೧ ಶ್ರೀಮತ್ಪರಮ ಗಂಭೀರಸ್ಯಾದ್ವಾದಾಮೋಘಲಾಂಛನಂ ಜೀಯಾತ್ ತ್ರೈಲೋಕ್ಯನಾಥಸ್ಯ

೨ ಶಾಸನಂ ಜಿನಶಾಸನಂ || ಶ್ರೀ ಮೂಲಸಂಘೇಜನಿ ನಂದಿಸಂಘಸ್ತಸ್ಮಿನ್ ಬಲಾತ್ಕಾರಗಣೋ

೩ ಸ್ತಿ ರಮ್ಯಃ || ತತ್ರಾಪಿ ಸಾರಸ್ವತನಾಮ್ನಿ ತತ್ ಶ್ರೀಕುಂದ ಕುಂದ್ಯಾರ್ಯ್ಯ ಮುನಿಃರ್ಬ್ಬಭೂವ ಶ್ರೀವಾದೀಂದ್ರವಿ

೪ ಶಾಲಕೀರ್ತಿರಭವಚ್ಛ್ರೀಕುಂದಕುಂದಾನ್ವಯೇ ವಿದ್ಯಾನಂದಮುನಿಸ್ಸ
ಮಂತ್ರನಿಪುಣೋ ದೇವೇಂದ್ರ ಕೀರ್ತಿರ್ಮ್ಮಹಾನ್ ವಿದ್ಯಾ

೫ ನಂದ ಮುನೀಶ್ವರೋ ಬುಧನ್ನುತ[ಃ] ಶ್ರೀ ಕೃಷ್ಣರಾಜಾರ್ಚಿತಃ ಶ್ರೀ
ವಾದೀಂದ್ರ ವಿಶಾಲಕೀರ್ತಿರಭವತ್ತ್ರೈವಿಧ್ಯ ಚಕ್ರೇಶ್ವರಃ | ಯೋ ಮಿಥ್ಯ

೬ ಮುದ ವಾರಿ ವಾರಣ ಹರಿಃ ಸಾಹಿತ್ಯ ಸಾಮ್ರಾಜ್ಯಭೂಬಂಧು ಬಂಧುರ
ವಿದುರ್ಯಸ್ಸಾಧು

೭ ರಾಜ[ತೇ] ಯುಜಯುಸ್ತಾತಾಭುವಿಸಾಗರೌದ್ರಭಯ ನೃಪಾಂಗಣಾನಾಂ
ಬಲಾತ್ಕಾರಾಭಿಖ್ಯಗಣೋ

೮ ಮಹಾಂ(ನ್ನ) ವಿಜಯತೇ ಭಟ್ಟಾಕಲಂಕೋದ್ಧೃತಃ || ಗಣಸ್ಸಭವಿಷ್ಯ.
ತಾರ್ಥ....ಪರಾಥೆ

೯ ವಾ ಶ್ರೀಮಾನ್ ಬಲಾತ್ಕಾರ ಗಣಂ ನ ಚೇತ್ || ಸ್ವಸ್ತಿ ಶಕವತ್ಸರೇ
ಗಿರಿವನಾಂಬೋಧೀಂದು ಸಂಖ್ಯಾಮಿತೊ

೧೦ ಕ್ರೋದ್ಯಬ್ದೆ ದವಲಕ್ಷ ಪಕ್ಷ ಸಹಿತಾ .. ಸಪ್ತಮಿಾ ತಿಥಿಯುತೇ ಶುದ್ಧಾಶಖ

೧೧ (ದ್ವಾದಶಃ) ಶ್ರೀ ವಾದೀಂದ್ರ ವಿಶಾಲ ಕೀರ್ತಿ.... ರಚಿತ || ಶ್ರೀ ಮಲಯ
ಖೇಟೌಖ್ಯ ಸಿಂಹಾಸನ

೧೨ ಶಿರೋಮಣಿಃ ವಿಶಾಲ ಕೀರ್ತಿಯತಿನಃ ಸ್ಸೇಯಂ ಜೀಯಾನ್ನಿಷಿದ್ದಿಕಾ||
ಶ್ರೀ ಶಕವರ್ಷ

೧೩ ೧೪೬೬ನೆಯ ಕ್ರೋಧಿ ಸಂವತ್ಸರದ.... ವಿದ್ಯಾನಂದ ವಿಶಾಲಕೀರ್ತಿ....

ಸಾಮಾನ್ಯವಾಗಿ ಎಲ್ಲ ಜೈನ ಶಾಸನಗಳಲ್ಲಿ ಕಂಡು ಬರುವಂತೆ ಆರಂಭದಲ್ಲಿ ಜಿನಸ್ತುತಿ ಶ್ಲೋಕವಿಲ್ಲಿದೆ. ಅನಂತರ ಇಡೀ ಶಾಸನದ ಆಶಯವನ್ನು ಸಂಸ್ಕೃತ ಭಾಷೆಯಲ್ಲಿ ನೀಡಲಾಗಿದೆ. ಇದು ವಾದೀಂದ್ರವಿಶಾಲಕೀರ್ತಿಯ ನಿಶಿದಿಗೆಯಾಗಿದೆ. ಅವರ ಕೀರ್ತಿಯನ್ನು ಬಹುವಾಗಿ ಪ್ರಶಂಸಿಸಲಾಗಿದೆ. ಮೂಲಸಂಘದಿಂದ ಜನಿಸಿದ ನಂದಿ ಸಂಘದ, ಬಲಾತ್ಕಾರಗಣದ, ಕುಂದಕುಂದಾನ್ವಯದ ವಿಶಾಲಕೀರ್ತಿಯು ಮಲಯಖೇಟದ ಸಿಂಹಾಸನಶಿರೋಮಣಿಗಳಾಗಿ ಶೋಭಿಸುತ್ತಾರೆ. ಈ ಸಂದರ್ಭದಲ್ಲೆ ಗೇರುಸೊಪ್ಪೆಯ ಜೈನಮುನಿ ಪರಂಪರೆಯನ್ನು ಗೌರವದಿಂದ ದಾಖಲಿಸಲಾಗಿದೆ. ಕುಂದ ಕುಂದಾಚಾರ್ಯ ; ವಿದ್ಯಾನಂದ ಅಥವಾ ವಾದಿವಿದ್ಯಾನಂದಮುನಿ, ದೇವೇಂದ್ರ ಕೀರ್ತಿ ಹಾಗೂ ಭಟ್ಟಾಕಳಂಕರನ್ನು ವಾದೀಂದ್ರ ವಿಶಾಲಕೀರ್ತಿಯ ಸ್ತುತಿ ಸಂದರ್ಭದಲ್ಲಿ ಹೆಸರಿಸಿರುವುದು ಇಲ್ಲಿ ಸ್ವಾರಸ್ಯಕರವಾಗಿದೆ. ಮಧ್ಯಕಾಲೀನ ಕರ್ನಾಟಕದಲ್ಲಿ ಈ ಜೈನಾಚಾರ್ಯರು ಹಲವು ಭಾಗ, ವಿಭಾಗ, ಉಪವಿಭಾಗಗಳನ್ನಲ್ಲದೆ ಅವರದೇ ಆದ ಪಂಥ, ಉಪಪಂಥಗಳನ್ನು ಆರಂಭಿಸಿದ್ದರೆಂದೂ ತಿಳಿದು ಬರುತ್ತದೆ. ಇದಕ್ಕಿಂತ ಹೆಚ್ಚಾಗಿ ಈ ಮುನಿಗಳೆಲ್ಲ ಶ್ರೇಷ್ಠ ಆಚಾರ್ಯರಾಗಿದ್ದರು.

ಕರ್ನಾಟಕದ ಸಂಸ್ಕೃತಿ–ಸಾಹಿತ್ಯ ಕ್ಷೇತ್ರಗಳಿಗೆ ತಮ್ಮದೇ ಆದ ಕೊಡುಗೆಗಳನ್ನು ಸಲ್ಲಿಸಿದರು. ವಾದೀಂದ್ರ ತ್ರೈವಿದ್ಯಚಕ್ರೇಶ್ವರ, ಸಾಹಿತ್ಯ ಸಾಮ್ರಾಜ್ಯ ಭೂಬಂಧು ಬಂಧುರ ಮುಂತಾದವು ಪಾಂಡಿತ್ಯ ಮತ್ತು ವಾಕ್ಪಟುತ್ವಗಳನ್ನು ಸಮರ್ಥವಾಗಿ ಸೂಚಿಸುತ್ತವೆ. ನಗರದ ಶಾಸನಗಳಲ್ಲಿ ಇವರನ್ನು 'ವರ್ಧಮಾನಮುನಿ' ಎಂದೇ ಹೆಸರಿಸಲಾಗಿದೆ. ಇಲ್ಲಿ ತುಸು ಉತ್ಪ್ರೇಕ್ಷೆಯ ಛಾಯೆಯಿರಬಹುದಾದರೂ ವಿಶಾಲ ಕೀರ್ತಿಯವರು ಆಳಪಾಂಡಿತ್ಯದಿಂದಾಗಿ 'ವಿದ್ವದ್ವಂದ್ಯ'ರಾಗಿದ್ದುದರಲ್ಲಿ ಅನುಮಾನ ವಿಲ್ಲ. ಗೇರುಸೊಪ್ಪೆಯ ಸಾಳುವ ಕೃಷ್ಣದೇವರಸನು ಈ ಮುನಿಶ್ರೇಷ್ಠರನ್ನು ಗೌರವಿಸಿದನು (**ಶ್ರೀ ಕೃಷ್ಣರಾಜಾರ್ಚಿತ ಶ್ರೀ ವಾದೀಂದ್ರ ವಿಶಾಲಕೀರ್ತಿ**). ಪ್ರಸ್ತುತ ನಿಶಿದಿಗೆಯಲ್ಲಿ ಶಿಲ್ಪಿತವಾಗಿರುವುದೂ ಬಹುಶಃ ಈ ಕೃಷ್ಣದೇವರಸನ ವ್ಯಕ್ತಿತ್ವದ ಚಿತ್ರಣವಿರಬಹುದು. ಬಲತ್ಕಾರಗಣದ ಕಾರಂಜಶಾಖೆಯ ಜೈನ ಪಟ್ಟಾವಳಿಯ ಪ್ರಕಾರ ಅಮರಕೀರ್ತಿ ಆಚಾರ್ಯರು ವಿಶಾಲಕೀರ್ತಿಯ ಗುರು ಗಳಾಗಿದ್ದರು. 'ಕಾವ್ಯಸಾರ' ಖ್ಯಾತಿಯ ವಿದ್ಯಾನಂದರು ಈ ಅಮರ ಕೀರ್ತಿಯ ಶಿಷ್ಯರೆಂಬುದೂ, ಭಟ್ಟಾಕಳಂಕರಿಂದ ಉಲ್ಲೇಖಿತರಾದವರೆಂಬುದೂ ಸ್ಪಷ್ಟ.

ಈ ಶಾಸನದಲ್ಲಿ ಉಲ್ಲೇಖಿತವಾದ **ಮಲಯಖೇಟವು** ಭಟ್ಟಾರಕ ಪೀಠವಾದ ಮಾನ್ಯಖೇಡ ಅಥವಾ ಮಾಳ್ಖೇಡ. ಹದಿನಾರನೆಯ ಶತಮಾನದಲ್ಲಿ ವಿಶಾಲ ಕೀರ್ತಿಯು ಈ ಪೀಠದ ಆಚಾರ್ಯರಾಗಿದ್ದರು. ಸುಮಾರು ೮೦ ವರ್ಷದವರೆಗೂ ಅವರು ಜೀವಿಸಿದ್ದರು. ಇದುವರೆಗೂ ಅವರ ಅಂತ್ಯ ಕಾಲ ಹಾಗೂ ಸಾವಿನ ಬಗೆಗೆ ಏನೇನೂ ಮಾಹಿತಿ ಸಿಕ್ಕಿರಲಿಲ್ಲ. ಗೇರುಸೊಪ್ಪೆಯ ದಟ್ಟ ಅರಣ್ಯದಲ್ಲಿ ಇದೀಗ ಶೋಧಿಸಲಾದ ನಿಶಿದಿಗೆ—ಶಾಸನ ಈ ಸಂಗತಿಯನ್ನು ಸ್ಪಷ್ಟಪಡಿಸುತ್ತದೆ. (೧೫೪೪–೪೫). ಗೇರುಸೊಪ್ಪೆಯ ಮುನಿ ಪರಂಪರೆಯ ಅಧ್ಯಯನದಲ್ಲಿ ಈ ಶಾಸನಕ್ಕೆ ಹೆಚ್ಚಿನ ಮಹತ್ವವಿದೆ. ಈ ನಿಶಿಧಿಗೆ ಸಿಕ್ಕ ಸ್ಥಳದಲ್ಲಿರುವ ಶಿಲಾಕೂಟ ಅಥವಾ ಶಿಲಾಭವನವೂ ನಮ್ಮ ಗಮನ ಸೆಳೆಯುತ್ತಿದೆ. ಜಂಬಿಟ್ಟಗೆಯ ಈ ಕಟ್ಟಡ ಹೆಚ್ಚಿನ ಮಟ್ಟಿಗೆ ಭಗ್ನಗೊಂಡಿದೆ. ಇದು ಸಿದ್ದಾಪುರ ತಾಲೂಕಿನಲ್ಲಿ (ಜಿಡ್ಡಿ ಯೆಂಬಲ್ಲಿ) ಪತ್ತೆಯಾದ ಶಿಲಾಕೂಟದಂತೆ ಇತ್ತೇನೊ. (ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದಿರೆಯಲ್ಲೂ ಈ ಬಗೆಯ ಸ್ಮಾರಕ ಭವನವಿದೆ). ಸ್ಥಳೀಯವಾಗಿ ಸಿಗುವ ಕಲ್ಲಲ್ಲಿ ನಿರ್ಮಿತವಾದ ಈ ಬಗೆಯ ಸಮಾಧಿಗಳಲ್ಲಿ ಪ್ರಾದೇಶಿಕ ಶೈಲಿಯ ಸೊಬಗೂ ಎದ್ದು ಕಾಣುತ್ತದೆ. ಗೇರುಸೊಪ್ಪೆ ಕಾಡಲ್ಲಿರುವ ಮಾರಿಗುಡ್ಡದ (ಅಲ್ಲೊಂದು ಮಾರಿಕಾಂಬೆಯ ಪುಟ್ಟಗುಡಿಯಿಂದಾಗಿ ಹೀಗೆ ಕರೆಯುತ್ತಾರೆ) ಅಂಚಿನಲ್ಲಿರುವ ಈ ಸ್ಮಾರಕ ಭವನ ತನ್ನ ಭಗ್ನ ಸ್ಥಿತಿಯಲ್ಲೂ ನಮ್ಮ ಗಮನವನ್ನು ತನ್ನತ್ತ ಸೆಳೆಯು ತ್ತದೆ. ಈ ಶಿಲಾಕೂಟಕ್ಕೆ ಅಂಟಿಕೊಂಡಿದ್ದ ಈ ಫಲಕವು ಕಾಲಗತಿಯಲ್ಲಿ ನೆಲ ಸೇರಿತ್ತು ; ಇದೀಗ ಪ್ರಯತ್ನ ಪೂರ್ವಕವಾಗಿ ಅದನ್ನು ಹೊರ ತೆಗೆಯಲಾಗಿದೆ.

ಅಂಬು ಶರಾವತಿಯ ತೀರದ ಈ ಪವಿತ್ರ ಸ್ಥಳ ಜೈನ ಚೈತ್ಯಾಲಯಗಳಿಗೆ ಹೇಗ ಪ್ರಸಿದ್ಧವಾಗಿದೆಯೋ, ಹಾಗೆ ಖ್ಯಾತ ಜೈನಾಚಾರ್ಯರ ಸಮಾಧಿಗಳಿಗೂ ಪ್ರಸಿದ್ಧವೆಂಬುದು ಈ ಶಿಲ್ಪ–ಶಾಸನ ಹಾಗೂ ಸ್ಮಾರಕ ಭವನದ ಭಗ್ನಾವಶೇಷಗಳು ಸೂಚಿಸುತ್ತವೆ[2].

2. ಗೇರುಸೊಪ್ಪೆ, ಹಾಡುವಳ್ಳಿ, ಕಾಯ್ಕಿಣಿ ಭಾಗದಲ್ಲಿ ಶ್ರುತಕೀರ್ತಿ, ಚಂದ್ರಪ್ರಭದೇವ, ನೇಮಿಚಂದ್ರದೇವ, ವಿದ್ಯಾನಂದವಾದಿ, ವಿಶಾಲಕೀರ್ತಿ, ವಾದೀಂದ್ರ ಮುಂತಾದವರು ಇದ್ದಿರಬೇಕು. ನೋಡಿ, ಪಿ. ಬಿ. ದೇಸಾಯಿ, ಜೈನ ಇನ್ಸ್ಕ್ರಿಪ್ಷನ್ಸ್ ಇನ್ ಸೌತ್ ಇಂಡಿಯ, ಸೊಲ್ಲಾಪುರ, 1957. ಈ ಶಾಸನ ವ್ಯಾಸಂಗದಲ್ಲಿ ನೆರವು ನೀಡಿದ ಪ್ರೊ। ಶ್ರೀನಿವಾಸರಿತ್ತಿ ಹಾಗೂ ದಿವಂಗತ ಡಾ। ಎಸ್. ಪಿ. ತಿವಾರಿಯವರನ್ನು ಕೃತಜ್ಞತೆಯಿಂದ ಸ್ಮರಿಸುವೆ.

ಬಿ. ರಾಜಶೇಖರಪ್ಪ

# ಅಜ್ಜಂಪುರದ ಒಂದು ತಾಮ್ರಪಟ*

ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ ಅಜ್ಜಂಪುರದ ವಾಸಿ ಶ್ರೀಮತಿ ಪಾಪಮ್ಮ (ಸು. ೫೫) ಎಂಬುವರ ಬಳಿಯಲ್ಲಿದ್ದ ಈ ತಾಮ್ರಪಟವು,[1] ತರೀಕೆರೆಯ ಎಸ್.ಜೆ.ಎಂ. ಕಾಲೇಜಿನಲ್ಲಿ ಕನ್ನಡ ಪ್ರವಾಚಕರಾಗಿರುವ ಶ್ರೀ ಟಿ. ಶಂಭು ಲಿಂಗಪ್ಪನವರ ಸಹಕಾರದಿಂದ ೧೯೮೯ರ ಫೆಬ್ರವರಿ ತಿಂಗಳಲ್ಲಿ ದೊರೆಯಿತು. ಈ ತಾಮ್ರಪಟವು ೩೦ ಸೆಂ. ಮೀ. ಉದ್ದ ಹಾಗೂ ೨೦ ಸೆಂ. ಮೀ. ಅಗಲ ಇದ್ದು, ಎರಡೂ ಬದಿಯಲ್ಲಿ ಕನ್ನಡದ ಶಾಸನ ಬರಹವನ್ನು ಹೊಂದಿದೆ. ತಾಮ್ರ ಪಟದ ಮುಂಬದಿಯ ಮೇಲ್ತುದಿಯಲ್ಲಿ ಸೂರ್ಯ, ಚಂದ್ರ, ಇವುಗಳ ಮಧ್ಯೆ ದುಂಡನೆಯ ಮೊಹರನ್ನು ಹೋಲುವ ಒಂದು ಚಿತ್ರ ಮತ್ತು ಗಣಪತಿ ; ಹಿಂಬದಿಯ ಮೇಲ್ತುದಿಯಲ್ಲಿ ಚಕ್ರ ಮತ್ತು ಶಂಖ—ಇವುಗಳನ್ನು ರೇಖಾರೂಪವಾಗಿ ಕೆತ್ತಲಾಗಿದೆ.

ಕನ್ನಡ ಲಿಪಿ ಮತ್ತು ಭಾಷೆಯಲ್ಲಿರುವ ಶಾಸನ ಬರಹ,

---

* 1990ರ ಜುಲೈ 21, 22ರಂದು ದಾವಣಗೆರೆಯಲ್ಲಿ ಜರುಗಿದ ‘ಕರ್ನಾಟಕ ಇತಿಹಾಸ ಅಕಾದೆಮಿ’ಯ 4ನೆಯ ವಾರ್ಷಿಕ ಸಮ್ಮೇಳನದಲ್ಲಿ ಸಾದರಪಡಿಸಿದ ಸಂಪ್ರಬಂಧ.

1. ಈ ತಾಮ್ರಪಟದ ಜತೆಗೆ ಅಲ್ಲಿ ಮತ್ತಿತರ ಕೆಲವೆಡೆಗಳಲ್ಲಿ ಇನ್ನು ಕೆಲವು ತಾಮ್ರ ಪಟಗಳೂ, ಕೆಲವು ಸನ್ನದುಗಳನ್ನು ಪ್ರತಿಮಾಡಿಕೊಂಡಿರುವ ಹಳೆಯ ಒಂದು ಕಾಗದದ ಪುಸ್ತಕವೂ, ಕೆಲವು ತಾಮ್ರಶಾಸನಗಳನ್ನು ಪ್ರತಿಮಾಡಿಕೊಂಡಿರುವ ತಾಳೆಗರಿಯ ಒಂದು ಕಟ್ಟೂ ದೊರೆತಿವೆ. ಇವುಗಳನ್ನು ಹೊಂದಿರುವವರು ‘ರಾಹುತರು’ ಎನ್ನುವ ಕುರುಬ ಜನಾಂಗದ ಒಂದು ಪಂಗಡದವರು. ಈ ಜನಾಂಗದ ಬಗ್ಗೆ ಮತ್ತು ಚರಿತ್ರೆಯ ಕೆಲವು ಅಜ್ಞಾತ ಮೂಲೆಗಳ ಮೇಲೆ ಬೆಳಕು ಚೆಲ್ಲುವಂತಿರುವ ಆ ಎಲ್ಲ ಬರಹಗಳನ್ನು ಕುರಿತು ನನ್ನ ಅಧ್ಯಯನ ನಡೆಯುತ್ತಿದ್ದು, ಮತ್ತೆ ಕೆಲವು ಲೇಖನಗಳು ಬರಲಿವೆ.

ಮುಂಬದಿಯಲ್ಲಿ ೨೮ ಪಂಕ್ತಿ, ಹಿಂಬದಿಯಲ್ಲಿ ೨೭ ಪಂಕ್ತಿ–ಹೀಗೆ ಒಟ್ಟು ೫೫ ಪಂಕ್ತಿಗಳಿವೆ. ಇಲ್ಲಿನ ಅಕ್ಷರ ಸ್ವರೂಪ ಮತ್ತು ಭಾಷೆ, ಹಿಂದೆ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆಯಲ್ಲಿ ದೊರೆತ ಹಾಗೂ ಚಿತ್ರದುರ್ಗದಲ್ಲಿ ದೊರೆತ ಕ್ರಿ. ಶ. ೧೬ ಮತ್ತು ೧೭ನೇ ಶತಮಾನದ ಎರಡು ತಾಮ್ರಶಾಸನಗಳ[2] ಅಕ್ಷರರೂಪ ಮತ್ತು ಭಾಷೆಯನ್ನು ಹೋಲುತ್ತವೆ. ಲಿಪಿದೃಷ್ಟಿಯಿಂದ ಇದರಲ್ಲಿ ಗಮನಿಸಬೇಕಾದ ಒಂದು ಮುಖ್ಯ ಅಂಶವೆಂದರೆ ಸ್ವರ 'ಉ' ಅನ್ನು ಒಂದೆಡೆಯಷ್ಟೆ 'ಉ' ಅಂತೆ (ಪಂಕ್ತಿ ೫೧), ಇನ್ನೊಂದೆಡೆ 'ಅ'ಕ್ಕೆ ಕೊಂಬು ಕೊಟ್ಟು 'ಅು' ಎಂಬಂತೆ (ಪಂಕ್ತಿ ೨೦) ಮತ್ತು ಉಳಿದೆಲ್ಲ ಕಡೆ 'ಇ'ಗೆ ಕೊಂಬು ಕೊಟ್ಟು 'ಇು' ಎಂಬಂತೆ ಬಿಡಿಸಿರುವುದು. ಆದರೆ ಎರಡು ಕಡೆ ಮಾತ್ರ 'ಇ'ಗೆ ಕೊಂಬು ಕೊಡುವುದು ಬಿಟ್ಟು ಹೋಗಿದೆ (ಪಂಕ್ತಿ ೪೯, ೫೩). ಹಾಗೆಯೇ ಇತ್ವ, ಎತ್ವ, ಒತ್ವಗಳ ದೀರ್ಘ ಸೂಚಿಸಲು 'ೀ' ಈ ಇಳಿಚಿಹ್ನೆಯನ್ನು ಎಲ್ಲೂ ಬಳಸಿಲ್ಲ. ಆದರೆ ಎರಡು ಕಡೆ ಇಳಿಯನ್ನು ಕೆತ್ತ ಹೋಗಿ ದಂಡವನ್ನು ಕೆತ್ತಿದಂತಿದೆ (ಪಂಕ್ತಿ ೨೬, ೨೯). ಅನೇಕ ಕಡೆ ವ್ಯಂಜನಾಕ್ಷರ 'ವು'ಗೆ ಸ್ವರ 'ಉ' ಎಂಬುದನ್ನೇ 'ಇು' ರೂಪದಲ್ಲಿ ಬಳಸಿದೆ.

ಕ್ರಿ. ಶ. ೧೭ನೇ ಶತಮಾನದಲ್ಲಿ ನಡೆದ ಒಂದು ಹೃದಯವಿದ್ರಾವಕವಾದ ಘಟನೆಯನ್ನೂ ಮತ್ತು ಅದರ ತರುವಾಯದ ಪರಿಣಾಮಗಳನ್ನೂ ಹೇಳುವ ತಾಮ್ರಪಟ ಇದು. ಈ ಶಾಸನದ ತಾತ್ಪರ್ಯವನ್ನು ಹೀಗೆ ಸಂಗ್ರಹಿಸಬಹುದು : ಚಿತ್ರಕಲ್ಲುದುರ್ಗದಲ್ಲಿ ಮೆದಕೇರಿನಾಯಕನು ಅರಸನಾಗಿ ಆಳುತ್ತಿದ್ದಾಗ, ಅದೇ ಪ್ರಾಂತ್ಯಕ್ಕೆ ಸೇರಿದ ಕೆನ್ನಳ್ಳಿ ಎಂಬ ಗ್ರಾಮದಲ್ಲಿ ಅಂಡೆದನುಗರ[3] ಜಾತಿಯ ತಿಮ್ಮರಾವುತ ಎಂಬುವನು ಆ ಗ್ರಾಮದ ಗೌಡನಾಗಿದ್ದನು. ಇವನ ಮಗಳು ಲಕ್ಕು[4] (<ಲಕ್ಷ್ಮಿ?). ಮೆದಕೇರಿನಾಯಕ ಅರಸ ಇವಳಲ್ಲಿ ಮನಸ್ಸಿಟ್ಟ ಕಾರಣ ಹೆಣ್ಣು ಕೇಳಲು ದಳವಾಯಿ

---

2. i) ಎ. ಕ. ಸಂಪುಟ 11 ; ಸಂ. ಬಿ. ಎಲ್. ರೈಸ್, 1903, ಹೊಳಲ್ಕೆರೆ 7 (ಕ್ರಿ. ಶ. 1568)
   ii) ಎಂ. ಎ. ಆರ್. 1929 ; ಸಂ. ಡಾ॥ ಎಂ. ಎಚ್. ಕೃಷ್ಣ ; ಸಂಖ್ಯೆ 7 (ಕ್ರಿ.ಶ. 1673)
   ಈ ಎರಡೂ ತಾಮ್ರಶಾಸನಗಳನ್ನು ಪರಿಶೀಲಿಸಲು ಒಪ್ಪಿಗೆ ನೀಡಿದ ಚಿತ್ರದುರ್ಗದ ರಾಜ್ಯ ಪ್ರಾಚ್ಯ ವಸ್ತುಸಂಗ್ರಹಾಲಯದ ಕ್ಯುರೇಟರ್ ಶ್ರೀ ಶಂಕರ್ ಎಸ್. ಅಥಣಿ ಅವರಿಗೆ ನನ್ನ ಕೃತಜ್ಞತೆಗಳು.
3. ಮೇಲೆ ಹೇಳಿದ ಹಳೆಯ ಕಾಗದ ಪುಸ್ತಕದಲ್ಲಿ ಈ ಜನಾಂಗದವರನ್ನು 'ಹಂಡೆ ವಜೀರ್' ಎಂದೂ 'ಆಲುಗುರ್ರುಬರ್ರು' (ಹಾಲು ಕುರುಬರು) ಎಂದೂ ಕೆನ್ನಳ್ಳಿಯನ್ನು 'ಕೆಂದನ ಕೆಂಸಳ್ಳಿ' ಎಂದೂ ಹೇಳಿರುವುದುಂಟು.
4. ಅದೇ ಪುಸ್ತಕದಲ್ಲಿ ಇವಳನ್ನು 'ಲಕ್ಕವ' (ಲಕ್ಕವ್ವ) ಎಂದೂ ಕರೆದಿದೆ.

ಗಳಾದ ಉಡುವಳ್ಳಿಯ ಹೊಟ್ಟೆಗಿರಿನಾಯಕ ಮತ್ತು ಕಾಟನಾಯಕ ಎಂಬುವರನ್ನು ಕಳಿಸಿದನು. ತಿಮ್ಮರಾವುತನು ಅಂಡೆದನುಗರ ಜಾತಿಯವರಲ್ಲಿ ವಾಲ್ಮೀಕ ಜಾತಿಯವರು ಹೆಣ್ಣು ಕೇಳಲಿಕ್ಕೆ ಹುಕುಮು (ಹಕ್ಕು) ಏನಿದೆ ಎಂದು ಪ್ರಶ್ನಿಸಿ ಕಡೆಗೆ ಹೆಣ್ಣು ಕೇಳಲು ಬಂದವರಿಗೆ ಕಾಲಿಗೆ ಹಗ್ಗ ಕಟ್ಟಿ ಗ್ರಾಮದಿಂದ ಹೊರಕ್ಕೆ ಎಳೆಸಿ ಹಾಕಿಸಿದನು. ಅವರು ಹೋಗಿ ಮೆದಕೇರಿನಾಯಕ ಅರಸನಲ್ಲಿ ಫಿರ್ಯಾದಿ ಹೇಳಿದ್ದರಿಂದ ಅವನು ೧೬೮ ಜನ ಜವಾನರನ್ನು ಕಳಿಸಿದನು. ಅವರು ಕೆನ್ನಳ್ಳಿ ಗ್ರಾಮಕ್ಕೆ ಬಂದವರೇ ಲೂಟಿಗೆ ತೊಡಗಿದರು ; ಬಣಬೆ ಬೇಲಿಗಳಿಗೆ ಬೆಂಕಿ ಹಚ್ಚಿದರು ; ಕಡೆಗೆ ತಿಮ್ಮರಾವುತನ ಮನೆಗೆ ಮುತ್ತಿಗೆ ಹಾಕಿ ಲಕ್ಕುವನ್ನು ಹಿಡಿದರು. ಆಗ ಕೆನ್ನಳ್ಳಿಯಲ್ಲಿದ್ದ ಹಿರಿಯ ರಾವುತರು ೫ ಜನ ಮತ್ತು ಅವರ ಮಕ್ಕಳು ೧೫ ಜನ ಕೂಡಿಕೊಂಡು, ಆ ೧೬೮ ಜವಾನರ ಮೇಲೆ ಬಿದ್ದರು. ಆಗ ನಡೆದ ಲಡಾಯಿದಲ್ಲಿ ಮೆದಕೇರಿ ನಾಯಕನ ಕಡೆಯವರಲ್ಲಿ ೧೧೨ ತಲೆಗಳು ಬಿದ್ದುವು. ರಾವುತರ ಕಡೆ ೯ ತಲೆಗಳು ಬಿದ್ದುವು. ಕಡೆಗೆ ಅರಸನ ಕಡೆಯವರು ಹಿಮ್ಮೆಟ್ಟ ಬೇಕಾಯಿತು. ಕೆನ್ನಳ್ಳಿಯ ರಾವುತರು ಸತ್ತ ತಮ್ಮ ೯ ಜನರಿಗೂ ಕಿಚ್ಚು ಹಾಕಿಸಿದಾಗ, ಲಕ್ಕು "ನನ್ನಿಂದಾಗಿ ನನ್ನ ಅಣ್ಣಂದಿರು ಪ್ರಾಣತೆತ್ತರು" ಎಂದು ಅದೇ ಕಿಚ್ಚಿಗೆ ಹಾರಿ ತಾನೂ ಪ್ರಾಣವನ್ನು ತೊರೆದಳು. ರಾವುತರು "ನಾಳೆ ನಮ್ಮ ಪ್ರಾಣಗಳೂ ಉಳಿಯಲಾರವು" ಎಂದುಕೊಂಡು, ತಮ್ಮ ರಂಗನಾಥ ಭೈರವ[5] ಮುಂತಾದ ದೇವರುಗಳ ಪ್ರತಿಮೆಗಳನ್ನು ಕಿತ್ತು ಬಂಡಿಯಲ್ಲಿ ಹಾಕಿಕೊಂಡು, ಚಿತ್ರ ಕಲ್ಲುದುರ್ಗದ ನಾಡನ್ನೇ ಬಿಟ್ಟು ಇಕ್ಕೇರಿ ಸೀಮೆಗೆ ಹೋಗಿ ಮರೆಬಿದ್ದರು.

ಆಗ ಇಕ್ಕೇರಿಯಲ್ಲಿ ಶಿವಪ್ಪನಾಯಕನು ಆಳುತ್ತಿದ್ದನು. ದುರ್ಗದ ಅರಸನು ಈಗ ಏನು ಮಾಡಿದನೆಂದರೆ "ಈ ರಾವುತರು ನಿಮ್ಮ ಪ್ರಾಂತಕ್ಕೆ ಬಂದು ಮರೆ ಬಿದ್ದಿದ್ದಾರೆ. ಅವರನ್ನು ಹಿಡಿದು ಚೆನ್ನಾಗಿ ಬುದ್ಧಿ ಕಲಿಸಿ, ನಮಗೆ ಒಪ್ಪಿಸು" ಎಂದು ಒಂದು ಪತ್ರವನ್ನು ಬರೆಸಿದನು. ಅದಕ್ಕೆ ಇಕ್ಕೇರಿ ಅರಸನು "ನಾವು ಇಕ್ಕೇರಿ ಯವರು. ಮರೆ ಬಿದ್ದವರನ್ನು ಬಿಟ್ಟು ಕೊಡುವವರಲ್ಲ. ಈ ರಾವುತರ ಪರಾ ಕ್ರಮಕ್ಕೆ ಮೆಚ್ಚಿದ್ದೇವೆ. ಲಕ್ಕು ಕೊಂಡಕ್ಕೆ ಬಿದ್ದದ್ದಕ್ಕೂ ಸಹ ಮೆಚ್ಚಿದ್ದೇವೆ" ಎಂದು ಉತ್ತರಿಸಿದನು. ಇಷ್ಟಲ್ಲದೆ ಶಿವಪ್ಪನಾಯಕ ಅರಸನು ರಾವುತರಿಗೆ, "ನಿಮಗೆ ಏನು ಇಷ್ಟವೋ ಅದನ್ನು ಬೇಡಿ" ಎಂದನು. ಆಗ ರಾವುತರು "ಡಿಳ್ಳಿ ಸೀಮೆಗೆ ಸೇರಿದ ತಿಮ್ಮನಕಟ್ಟೆ, ವಿಜಯನಗರ ಸೀಮೆಗೆ ಸೇರಿದ ಕೆಲಕೋಟೆಪುರ[6] ಮತ್ತು

---

5. ಇಲ್ಲಿ 'ಬೀರಲಿಂಗನು ಸಹ' ಎಂದು ಅದೇ ಪುಸ್ತಕದಲ್ಲಿ ಹೇಳಿದೆ.
6. ಅದೇ ಪುಸ್ತಕದಲ್ಲಿ ಇದನ್ನು 'ಕೋಟೆ ಕಲ್ಲಾಪುರ' ಎಂದೂ 'ಕಲ್ಲಾಕೋಟೆಪುರ' ಎಂದೂ ಹೇಳಿದೆ.

ಹಿಡಿಂಬದುರ್ಗ ಶೀವೊಗೆ ಕೆನ್ನಳ್ಳಿ—ಈ ಗ್ರಾಮುಗಳ ನಮ್ಮ ದೇವರುಗಳಿಗೆ ಯಾವ ಅಡ್ಡಿಯೂ ಬರದ ಹಾಗೆ, ನಮ್ಮ ಜಾತಿಯವರ ಲೋಪದೋಷಗಳು ಏನಿದ್ದರೂ ನಮ್ಮ ಜಾತಿಯವರಲ್ಲೇ—ದಂಡ ಶಿಕ್ಷೆ—ಬಗೆಹರಿಸಿಕೊಳ್ಳುವ ಹಾಗೆ ಹಿಂದೆ ಹುಕುಮು (ಹಕ್ಕು?) ಕೊಡಲಾಗಿತ್ತು. ಈಗ ಅದೇ ಪ್ರಕಾರ ಹುಕುಮು ಆಗ ಬೇಕು" ಎಂದು ಬೇಡಿಕೊಂಡರು. ಆಗ ಶಿವಪ್ಪನಾಯಕನು ರಾಮ ಪ್ರಧಾನ, ಶಿವಲಿಂಗ ಪ್ರಧಾನ-ಇವರ ಸಮಕ್ಷಮದಲ್ಲಿ ತಿಮ್ಮರಾವುತ, ಗಿರಿ ರಾವುತ, ಸಣ್ಣ ರಂಗ ರಾವುತ ಮತ್ತು ಸ್ಥಾನಿಕನಾದ ಅಜ್ಜಯ್ಯ ಇವರುಗಳಿಗೆ ಗ್ರಾಮ ನೇಮಕ ಮಾಡಿಕೊಟ್ಟು ಹೀಗೆ ಹೇಳಿದನು—"ಇಕ್ಕೇರಿ ರಾಜರಾದ ನಾವು ನೇಮಕ ಮಾಡಿ ಕೊಟ್ಟದ್ದು ಏನೆಂದರೆ ರಾವುತರಾದ ನೀವು ಬಂದು ನಿಂತ ಜಾಗದಲ್ಲಿ ಗ್ರಾಮಗಳನು ಕಟ್ಟಿಕೊಂಡು ಕೊಪ್ಪಲಹಳ್ಳಿ[7], ಗುಡ್ಡನಹಳ್ಳಿ ಎಂಬ ಹೆಸರಿಟ್ಟುಕೊಂಡಿದ್ದೀರಿ. ಈ ಎರಡೂ ಗ್ರಾಮಕ್ಕೆ ನಿಮ್ಮ ಮನೆ ದೇವರೆ ಗ್ರಾಮದ ದೇವರಾಗಿರುತ್ತವೆ. ಕೊಪ್ಪಲ ಹಳ್ಳಿಗೆ ಬೇಟೆ ರಂಗ, ಗುಡ್ಡನಹಳ್ಳಿಗೆ ಬೆಳಕ್ಕೆ ಕಲಕಂಬದ ರಂಗ[8]—ಈ ದೇವರುಗಳ ಪ್ರತಿಷ್ಠೆಯೂ ನಿಮ್ಮ ಕೈಯಿಂದ ಆಗಿದೆ. ಈ ಎರಡೂ ಗ್ರಾಮಗಳಲ್ಲಿ ಸಾಲುಕೇರಿ ಮೇಲು ಕೇರಿಯನ್ನು ಕಟ್ಟಿ, ಈ ಎರಡೂ ದೇವರ ದೃಷ್ಟಾಂತ ನ್ಯಾಯ ಇವುಗಳ ಮೂಲಕ ಸಾವಿರ ವರಹ ಸಂಗ್ರಹ ಆದರೂ, ಇದಕ್ಕೆ ಯಾವೊಬ್ಬನೂ ಅಡ್ಡಿ ತರ ಕೂಡದು. ಅನ್ಯಾಯ ಚರಾದಾಯ ಏನಿದ್ದರೂ ನಿಮ್ಮ ಜಾತಿಯವರೇ ತೆರಬೇಕು. ದೋಷ ದಂಡ ಏನಿದ್ದರೂ ನಿಮ್ಮಲೇ ತೀರುವಳಿಯಾಗುವುದು. ಮುಂದೆ ಯಾರೇ ಅರಸರು ಬಂದರೂ ಸೂರ್ಯ ಚಂದ್ರ ಇರುವ ಪರಿಯಂತರ ಇದನ್ನು ನಡೆಸಿಕೊಂಡು ಬರಬೇಕು. ಈ ಧರ್ಮ ನಿರೂಪಕ್ಕೆ ಯಾವನೊಬ್ಬನು ಅಡ್ಡಿ ಬಂದರೂ ಮಹಾ ಪಾಪಕ್ಕೆ ಹೋಗುತ್ತಾನೆ. ಇದಕ್ಕೆ ಸಹಕಾರಿಯಾದವನು ಪುಣ್ಯವಂತನಾಗುತ್ತಾನೆ." ಹೀಗೆ ಕಡೆಯಲ್ಲಿ ಕೆಲವು ಶಾಪಾಶಯಗಳೊಂದಿಗೆ ಮತ್ತು 'ಸ್ವದತ್ತಾ ದ್ವಿಗುಣಂ ಪುಣ್ಯಂ....' ಎಂಬ ಸಾಂಪ್ರದಾಯಿಕ ಸಂಸ್ಕೃತ ಶ್ಲೋಕದೊಂದಿಗೆ ಶಾಸನವು ಮುಗಿ ಯುತ್ತದೆ.

ಶಾಸನದಲ್ಲಿ ಹೇಳಿರುವ ಶಾಲಿವಾಹನ ಶಕ ೧೫೯೬ರ ಪ್ರಮಾದೀಚ ಸಂವತ್ಸರದ ವೈಶಾಖ ಬಹುಳ ೫ರ ಶುಕ್ರವಾರವು ಕ್ರಿ.ಶ. ೧೬೭೩ರ ಏಪ್ರಿಲ್ ೨೫ ಅಥವಾ ೨೬ಕ್ಕೆ ಸರಿ ಹೋಗುತ್ತದೆ. ಇದರಿಂದ ಇದರಲ್ಲಿ ಬರುವ ಮೆದಕೇರಿ ನಾಯಕನು ಕ್ರಿ.ಶ. ೧೬೫೨ ರಿಂದ ೭೪ರವರೆಗೆ ಚಿತ್ರದುರ್ಗವನ್ನು ಆಳಿದಂತೆ ಈವರೆಗೆ ತಿಳಿಯ ಲಾಗಿರುವ ಇಮ್ಮಡಿ ಮೆದಕೇರಿ ನಾಯಕ ಎನ್ನುವುದು ಸ್ಪಷ್ಟ. ಈ ಶಾಸನ ಹಾಕಿಸ

---

7. ಅದೇ ಪುಸ್ತಕದಲ್ಲಿ ಇದನ್ನು 'ಕೊಪ್ಪಾನ ಹುಳ್ಳಿ' ಎಂದು ಹೆಸರಿಸಿದೆ.
8. " " 'ಬೆಂಳಿಕಲ್ಲಾರಂಗ' 'ಬೀಳಿಕಲ್ಲಾರಂಗ' ಎಂದಿದೆ.

ಲಾದ ಕಾಲಕ್ಕೆ ಈ ನಾಯಕನು ಇನ್ನೂ ಇದ್ದ. ಇವನ ಸಮಕಾಲೀನನಾದ ದೊರೆ ಶಿವಪ್ಪ ನಾಯಕನು ಇಕ್ಕೇರಿಯನ್ನು ಆಳಿದ್ದು ಕ್ರಿ.ಶ. ೧೬೪೬ ರಿಂದ ೬೦ರವರೆಗೆ. ಆದುದರಿಂದ ಈ ಶಾಸನ ಹಾಕಿಸಲಾದ ಕಾಲಕ್ಕೆ ಅವನು ಇರಲಿಲ್ಲ ಎಂದಾಗುತ್ತದೆ. ಅಂದರೆ ಅವನ ಮರಣವಾದ ೧೨ ವರ್ಷಗಳ ನಂತರ ಈ ಶಾಸನವನ್ನು ಹಾಕಿಸಲಾಗಿದೆ. ಈ ಕಾಲಕ್ಕೆ ಇಕ್ಕೇರಿಯನ್ನು ಆಳುತ್ತಿದ್ದವಳು ರಾಣಿ ಚೆನ್ನಮ್ಮಾಜಿ. ಆದರೆ ಅವಳ ಉಲ್ಲೇಖ ಶಾಸನದಲ್ಲಿಲ್ಲ. ಹೀಗೆ ಶಾಸನದ ಕಾಲ ಮತ್ತು ಅದನ್ನು ಹಾಕಿ ಕೊಟ್ಟ ಶಿವಪ್ಪನಾಯಕನ ಕಾಲ ಹೊಂದಿಕೆಯಾಗುವಲ್ಲಿ ತೊಡಕು ಕಾಣಿಸುವುದರಿಂದ, ಈ ಶಾಸನವು ಶಿವಪ್ಪನಾಯಕ ಇದ್ದಾಗ ನಡೆದದ್ದನ್ನು—ಆಗ ನಡೆದಿದ್ದಂತೆಯೇ—ನಂತರದ ಸಮೀಪದ ಕಾಲದಲ್ಲಿ ದಾಖಲಿಸಿಕೊಂಡದ್ದು ಎನ್ನಬೇಕಾಗುತ್ತದೆ.[9] ಶಾಸನದ ರಚನೆ ಆದದ್ದು ಕ್ರಿ.ಶ. ೧೬೭೩ರಲ್ಲಿ. ಇದರಲ್ಲಿ ಬಂದಿರುವ ಘಟನೆಗಳೆಲ್ಲ ನಡೆದದ್ದು ಅದಕ್ಕೂ ೧೨ ವರ್ಷಗಳಿಗೂ ಹಿಂದೆ. ಅಂದರೆ ಕ್ರಿ.ಶ. ೧೬೫೨ ರಿಂದ ೬೦ರ ಮಧ್ಯಾವಧಿಯಲ್ಲಿ ಎಂದು ತಿಳಿಯಬೇಕಾಗುತ್ತದೆ.

ಚಿತ್ರದುರ್ಗ ಹಾಗೂ ಇಕ್ಕೇರಿಯ (ಕೆಳದಿಯ) ನಾಯಕರ ನಡುವೆ ಬಹು ಕಾಲ ವೈಷಮ್ಯವಿದ್ದಂತೆ ಚಾರಿತ್ರಿಕ ಬರಹಗಳು ಸೂಚಿಸುತ್ತವೆ. ಕೆಳದಿಯ ನಾಯಕರ ಬಗೆಗೆ ಬರೆಯಲಾದ "ಕೆಳದಿ ನೃಪ ವಿಜಯಂ"ದಲ್ಲಂತೂ ಚಿತ್ರದುರ್ಗದವರನ್ನು 'ಕಿರಾತರು' ಎಂದು ಕರೆಯಲಾಗಿದೆ. ಈವರಿಗೂ ತಿಳಿದಿರುವಂತೆ ಈ ಎರಡೂ ರಾಜ ಮನೆತನದವರ ಮಧ್ಯೆ, ಕ್ರಿ.ಶ. ೧೮ನೇ ಶತಮಾನದ ಆರಂಭದ ದಶಕಗಳ ಕಾಲಕ್ಕೆ (ಅಂದರೆ ಚಿತ್ರದುರ್ಗದ ಬರಮಣ್ಣನಾಯಕ ಮತ್ತು ಇಕ್ಕೇರಿಯ ಸೋಮಶೇಖರನಾಯಕ, ಇವರ ಕಾಲಕ್ಕೆ) ಈ ವೈಮನಸ್ಯ ಬೆಳೆದಂತೆ ಕಾಣುತ್ತದೆ. ಆದರೆ ಅದಕ್ಕೂ (ಕೆಲವು ದಶಕಗಳ) ಹಿಂದೆ, ಅಂದರೆ ಕ್ರಿ.ಶ. ೧೭ನೆಯ ಶತಮಾನದಲ್ಲೇ, ಈ ಎರಡೂ ಮನೆತನದವರ ನಡುವೆ ವೈಮನಸ್ಯ ಮೊಳಕೆಯೊಡೆಯಲು ಶಾಸನ ಹೇಳುವ ಈ ಒಂದು ಘಟನೆಯೂ ಸಹ ಕಾರಣವಾಗಿರಬೇಕು ಎನಿಸುತ್ತದೆ.

---

9. ಒಂದು ಘಟನೆ ಅದು ನಡೆದ ಕಾಲದಲ್ಲೇ ದಾಖಲಿಸಲ್ಪಡಬೇಕಾದುದು ಸಹಜ. ಅಂಥದು ಆಗಲೇ ದಾಖಲಿಸಲ್ಪಡಲಿಲ್ಲವೇಕೆ ? ಹಾಗೂ 12 ವರ್ಷಗಳ ತರುವಾಯದಲ್ಲಿ ಇದನ್ನು ದಾಖಲಿಸಲಾದುದೇಕೆ ? ರಾವುತ ಜನಾಂಗದವರ ಕುಲಾಚಾರ ಕಟ್ಟುಕಟ್ಟಳೆಗಳಲ್ಲಿ, ಅವರ ದೇವರು ಆಚರಣೆಗಳ ವಿಚಾರದಲ್ಲಿ ಅನ್ಯ ಜನಾಂಗದವರೇನಾದರೂ ಹಸ್ತಕ್ಷೇಪ ಮಾಡುವ ಸಂದರ್ಭವಿದ್ದು, ಆದರಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಮತ್ತು ಅವರನ್ನು ದೂರವಿಡಲು ರಾಜರಿಂದ ಕೊಡಲ್ಪಟ್ಟಿತ್ತೆನ್ನುವ ಇಂಥ ದಾಖಲೆಯೊಂದು ಅವರಿಗೆ ಅಗತ್ಯವೆನಿಸಿ (ಹೀಗೆ ದಾಖಲಿಸಿ)ರಬಹುದೆ?—ಇವೇ ಮುಂತಾದ ಪ್ರಶ್ನೆಗಳು ಸಹಜವಾಗಿಯೆ ಬರುತ್ತವೆ.

ಇದರಲ್ಲಿ ಬರುವ ಇಬ್ಬರು ಪ್ರಧಾನರುಗಳಲ್ಲಿ ರಾಮಪ್ರಧಾನನ ಬಗೆಗೆ ಯಾವ ವಿವರಗಳೂ ಸದ್ಯಕ್ಕೆ ತಿಳಿಯದು. ಈ ಹೆಸರಿನ ಒಬ್ಬ ಪ್ರಧಾನ ಶಿವಪ್ಪನಾಯಕನ ಕಾಲದಲ್ಲಿದ್ದ ಎಂಬುದು ಇದರಿಂದ ತಿಳಿಯುವಂತಾಗಿದೆ. ಇನ್ನು ಶಿವಲಿಂಗ ಪ್ರಧಾನ "ಕೆಳದಿನೃಪವಿಜಯ"ವು 'ಶಿವಲಿಂಗನಾಯಕ' 'ಶಿವಲಿಂಗಯ್ಯ' ಎಂದು ಹೇಳುವ, ಶಿವಪ್ಪನಾಯಕನ ಸೋದರಳಿಯ(ಅಂದರೆ ಅರಸನ ಸೋದರಿಯಾದ ಪರಮೇಶ್ವರಮ್ಮನ ಮಗ)[10] ಎಂದು ಕಾಣುತ್ತದೆ. ಈ ಶಿವಲಿಂಗ ನಾಯಕನು ಅರಸನ ಪರವಾಗಿ ಕೆಲವು ಕಾಳಗಗಳಲ್ಲಿ ಭಾಗವಹಿಸಿದ್ದಂತೆ ಮತ್ತು ಕಾಳಗವೊಂದರಲ್ಲಿ ಸಾವನ್ನಪ್ಪಿದಂತೆ ಅದೇ ಕೃತಿಯು ತಿಳಿಸುತ್ತದೆ.

'ಅಂಡೆ ದನುಗರು' ಅಥವಾ 'ಅಂಡೆ/ಹಂಡೆ ಕುರುಬರು' ಎಂಬುವರು ಕುರುಬರಲ್ಲಿ ಒಂದು ಪಂಗಡಕ್ಕೆ ಸೇರಿದವರು. 'ರಾವುತರು, 'ಅಂಡೆ/ಹಂಡೆ' ವಜೀರರು' ಎಂದು ಕರೆಯುವುದೂ ಇವರನ್ನೇ. ಈ ಜನಾಂಗಕ್ಕೆ ಸಂಬಂಧಿಸಿದಂತೆ ಈ ಶಾಸನವು ಕೆಲವು ಮಾಹಿತಿಯನ್ನು ನೀಡುತ್ತದೆ. ಇವರ ಕುಲಾಭಿಮಾನ, ಕುಲಪಾವಿತ್ರ್ಯರಕ್ಷಣೆಯ ಮನೋಭಾವ, ಧೈರ್ಯ, ಶೌರ್ಯ, ದೈವಶ್ರದ್ಧೆ ಮುಂತಾದುವು ಶಾಸನದಲ್ಲಿ ಚೆನ್ನಾಗಿ ಸೂಚಿತವಾಗಿವೆ. ಹೆಸರೇ ಹೇಳುವಂತೆ ರಾವುತರು ಸಾಮಾನ್ಯ ವಾಗಿ ಕುದುರೆಯ ಸೈನ್ಯದಲ್ಲಿ ಯೋಧರಾಗಿರುತ್ತಿದ್ದವರು. ಅವರು ಅಂಥ ಪರಿಣತ ಯೋಧರಿದ್ದುದರಿಂದಲೇ ೧೬೮ ಜವಾನರಲ್ಲಿ ೧೧೨ ಮಂದಿಯನ್ನು ಕೊಲ್ಲಲು ಸಾಧ್ಯ ವಾಗಿರಬೇಕು. ಅಂಥವರು ಅಲ್ಲಲ್ಲಿ ಕೆಲವು ಊರುಗಳ ಗೌಡಿಕೆಯನ್ನು ಕೂಡಾ ನಡೆಸಿಕೊಂಡು ಹೋಗುತ್ತಿದ್ದರೆಂಬ ಸಂಗತಿ ಈ ಶಾಸನದಿಂದ ವ್ಯಕ್ತವಾಗುತ್ತದೆ. ಚಿತ್ರದುರ್ಗದ ಅರಸ ಈ ಜನಾಂಗದ ಹೆಣ್ಣಿನಲ್ಲಿ ಮನಸ್ಸಿಟ್ಟ ಎಂಬುದನ್ನು ನೋಡಿದರೆ, ಬಹುಶಃ ಅರಸನಿಗೆ ಈ ಜನಾಂಗದವರ ಪರಿಚಯ, ಸಂಪರ್ಕ ಸಾಕಷ್ಟು ಚೆನ್ನಾಗಿಯೇ ಇದ್ದಿರಬೇಕೆಂದು ಕಾಣುತ್ತದೆ. ಶಿವಪ್ಪನಾಯಕನು ಇವರ ಸ್ವಾಭಿಮಾನ, ಶೌರ್ಯಗಳನ್ನು ಸಹಜವಾಗಿಯೆ ಮೆಚ್ಚಿಕೊಂಡಿರಬಹುದಾದರೂ, ಸಂದರ್ಭ ಬಂದಾಗ ಇವರ ಶೌರ್ಯದ ನೆರವು ಒದಗಬಹುದೆಂಬ ಎಣಿಕೆಯನ್ನು ಸಹ ಮಾಡಿದ್ದಿರಬಹುದು.

ಶಾಸನದ ಪೂರ್ವಾರ್ಧವು ಒಂದು ಕಥೆಯಂತೆ ಸಾಗಿದರೆ, ಉತ್ತರಾರ್ಧವು ಕೆಲವು ಕಟ್ಟುಪಾಡುಗಳನ್ನು ವಿವರಿಸುವ ಒಂದು ಕರಾರಿನಂತೆ (ದಸ್ತಾವೇಜಿನಂತೆ) ಸಾಗುತ್ತದೆ. ಜಾತಿ ಪಾವಿತ್ರ್ಯದ ಭಾವನೆ ಮತ್ತು ಅದರ ರಕ್ಷಣೆಯ ಪ್ರಯತ್ನ,

---

10. ಲಿಂಗಣ್ಣ ಕವಿಯ 'ಕೆಳದಿನೃಪವಿಜಯಂ' : ಅನು: ಕೆಳದಿ ಗುಂಡಾಜೋಯಿಸ್ ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1976, ಪು. 158, 171, 173, 175.

ಸ್ವಾಭಿಮಾನ, ಅನ್ಯಜಾತಿಯವರಿಗೆ ಸಿಕ್ಕಿ ಭ್ರಷ್ಟವಾಗಬಾರದೆನ್ನುವ ಶೀಲಪ್ರಜ್ಞೆ, ಈ ಮಧ್ಯೆಯೂ ದೇವರುಗಳನ್ನು ಬಿಡದ ಭಕ್ತಿ, ಮರೆಹೊಕ್ಕವರ ಸಂರಕ್ಷಣೆ, ಹೊಸ ಗ್ರಾಮಗಳ ಸ್ಥಾಪನೆ ಮತ್ತು ಜನಾಂಗವೊಂದರೊಳಗಿನ ಕಟ್ಟುಪಾಡುಗಳು— ಇವೆಲ್ಲವೂ ಒಂದು ಕಾಲಕ್ಕೆ ನಮ್ಮ ಜನರಿಗಿದ್ದ ನಂಬಿಕೆಗಳನ್ನೂ, ಶ್ರದ್ಧೆಗಳನ್ನೂ ಪದ್ಧತಿಗಳನ್ನೂ, ಒಟ್ಟಾರೆ ಅವರ ಜೀವನ ವಿಧಾನವನ್ನು ಈ ಶಾಸನ ಕಂಡರಿಸಿ ಟ್ಟಂತಿದೆ. ಹೀಗೆ ಸಾಂಸ್ಕೃತಿಕ ದೃಷ್ಟಿಯಿಂದಂತೂ ಇದೊಂದು ಬಹು ಮುಖ್ಯವಾದ ಶಾಸನ ಎನ್ನಬಹುದು.

ಪ್ರಸ್ತುತ ಶಾಸನದಲ್ಲಿ ಮೊದಲಿಗೆ ನಿರೂಪಿತವಾಗಿರುವ ರೀತಿಯ ಹಲ್ಲೆ ಮತ್ತು ಹಿಂಸೆಯ ಘಟನೆಗಳು ಅಧಿಕಾರ, ಬಲ, ಇವನ್ನು ಹೊಂದಿರುವಂಥವರ ಸಂದರ್ಭದಲ್ಲಿ ಸುಲಭವಾಗಿ ಘಟಿಸಬಹುದಾದವು. ಅಂಥ ಬಲಿಷ್ಠರ ಬಲದ ಭಯದಿಂದ ಇಂಥ ಪ್ರಕರಣಗಳು ಎಲ್ಲೂ ಕಾಲಗರ್ಭದಲ್ಲಿ ಮುಚ್ಚಿಹೋಗುತ್ತಿದ್ದ ಸಂಭವವೇ ಹೆಚ್ಚು ಎನ್ನಬಹುದು. ಹಾಗಿದ್ದೂ ಕೆಲವಾದರೂ ಹೀಗೆ ಶಾಸನ ರೂಪ ಪಡೆದು ದಾಖ ಲಾಗುತ್ತಿದ್ದವೆಂಬುದಕ್ಕೆ ಪ್ರಸ್ತುತ ಶಾಸನ ಒಂದು ಸಾಕ್ಷಿಯಾಗಿದೆ. ಬಲಿಷ್ಠರಿಗೆ ಸಾಮಾನ್ಯರ ವಿಷಯದಲ್ಲಿ ತಮ್ಮ ಬಲ ಪ್ರದರ್ಶನ ಮಾಡುವುದು ಅಷ್ಟೊಂದು ದೊಡ್ಡ ವಿಷಯವೇನಲ್ಲ.ಆದರೆ ಸಾಮಾನ್ಯರು ತಮ್ಮ ಕುಲಾಭಿಮಾನದಿಂದಾಗಲಿ ಮತ್ತೊಂದು ಕಾರಣದಿಂದಾಗಲಿ, ಮುಂದಿನ ಪರಿಣಾಮಗಳ ಅರಿವಿದ್ದೂ, ಬಲಿಷ್ಠರನ್ನು ಅದರಲ್ಲೂ ರಾಜರಂಥವರನ್ನು ಎದುರುಹಾಕಿಕೊಳ್ಳುವುದು ಸಣ್ಣ ಸಂಗತಿಯಲ್ಲ. ತಮ್ಮ ಕುಲ ಪಾವಿತ್ರ್ಯಕ್ಕಾಗಿ ನಮ್ಮ ಪ್ರಾಚೀನ ಜನರು ಪ್ರಾಣಕ್ಕಿಂತಲೂ ಹೆಚ್ಚು ಬೆಲೆ ಕೊಡುತ್ತಿದ್ದ ರೆನ್ನುವುದಕ್ಕೆ, ಆದಕ್ಕಾಗಿಯೇ ಎಂಥ ಘೋರ ಅಪಾಯಗಳನ್ನೂ ಆಹ್ವಾನಿಸುತ್ತಿದ್ದ ರೆಂಬುದಕ್ಕೆ ಈ ಶಾಸನ ಒಳ್ಳೆಯ ನಿದರ್ಶನವಾಗಿದೆ.

ಇದರಲ್ಲಿ ಎಲ್ಲೂ ಯಾರನ್ನೂ ನಿಂದಿಸುವ ಅಥವಾ ಹೊಗಳುವ ಅಥವಾ ವಿಶ್ಲೇಷಿಸುವ ಪ್ರಯತ್ನವೇನನ್ನೂ ಮಾಡದೆ, ಉತ್ಕಟವಾದ ಸಂಗತಿಯನ್ನು ಸಂಯಮದಿಂದ ನಿರೂಪಿಸಿರುವ ಶಾಸನದ ಶೈಲಿ ಮನಸ್ಸಿಗೆ ಮುಟ್ಟುವಂತಿದೆ. ಹುಕುಮು, ಫಿರಿಯಾದಿ, ಜವಾನ, ಲುಟಾಯಿಸು, ಲಡಾಯ ಇಂಥ ಶಬ್ದಗಳು ಸೇರಿರುವ ಇದರ ಕನ್ನಡ ಭಾಷೆ ಸಮಕಾಲೀನವಾದ ಬಖೈರು, ನಾಮೆ, ಕೈಫಿ ಯುತ್ತುಗಳ ಭಾಷೆಯನ್ನು ಹೋಲುತ್ತದೆ. ಕೆಲವೆಡೆ ಕಾಗುಣಿತದ ದೋಷಗಳು ಉಳಿದಿವೆ.

ಈ ಶಾಸನದಲ್ಲಿ ಚಿತ್ರದುರ್ಗವನ್ನು ಹಿಡಿಂಬದುರ್ಗ ಎಂದೂ ಕರೆದಿರುವುದು ಗಮನಾರ್ಹವಾಗಿದೆ. ಇದರಲ್ಲಿ ಬರುವ ಸ್ಥಳಗಳಲ್ಲಿ ಕೆನ್ನಳ್ಳಿ, ಕೆಲಕೋಟೆಪುರ ಇವು

ಯಾವುವೋ ಸದ್ಯಕ್ಕೆ ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಈ ಬಗ್ಗೆ ಶೋಧ ಮುಂದುವರೆದಿದೆ. ಉಡುವಳ್ಳಿ ಎಂಬುದು ಮಾತ್ರ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನಲ್ಲಿ ಈಗಲೂ ಅದೇ ಹೆಸರಿನಲ್ಲಿರುವ ಗ್ರಾಮ ಎಂದು ತೋರುತ್ತದೆ. ಇನ್ನು ಡಿಳ್ಳಿ ಸೀಮೆಯದೆಂದು ಹೇಳಿರುವ ತಿಮ್ಮನಕಟ್ಟೆ—ಬಹುಶಃ ಒಂದು ಕಾಲಕ್ಕೆ ಸವಣೂರು ನವಾಬರ ಆಡಳಿತ ವ್ಯಾಪ್ತಿಗೆ ಸೇರಿದ್ದಿರಬಹುದಾದ ಮತ್ತು ಆ ಕಾರಣದಿಂದ ಡಿಳ್ಳಿ ಸೀಮೆ ಎಂದಿರಬಹುದಾದ—ಈಗಿನ ಧಾರವಾಡ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕಿನ ತುಮ್ಮಿನಕಟ್ಟೆ ಗ್ರಾಮ ಇರಬೇಕು. ಈ ಗ್ರಾಮದಲ್ಲಿ ಈಗ ರಾವುತ ಜನಾಂಗದವರು ಇದ್ದಾರೆಯೆ ಎಂಬುದು ಸದ್ಯಕ್ಕೆ ತಿಳಿಯದು. ಕೊಪ್ಪಲಹಳ್ಳಿ ಮತ್ತು ಗುಡ್ಡನಹಳ್ಳಿ ಗ್ರಾಮಗಳು ಈಗಿನ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿಗೆ ಸೇರಿದ ಕೊಪ್ಪದಹಳ್ಳಿ ಮತ್ತು ಗುಡ್ಡದಹಳ್ಳಿ ಗ್ರಾಮಗಳೆಂದು ತಿಳಿದು ಬರುತ್ತದೆ. ಈ ಗ್ರಾಮಗಳಲ್ಲಿ ಈಗಲೂ ರಾವುತ ಜನಾಂಗದವರಿದ್ದು, ಶಾಸನ ಹೇಳುವ ಘಟನೆಯ ಬಗ್ಗೆ ಅತ್ಯಂತ ಭಾವುಕರಾಗಿ ವರ್ಣಿಸುತ್ತಾರೆ.

[ಈ ತಾಮ್ರಶಾಸನವನ್ನು ನೀಡಿದವರು ಅಜ್ಜಂಪುರದಲ್ಲಿರುವ ರಾವುತರ ಮನೆತನದ ಶ್ರೀಮತಿ ಪಾಪಮ್ಮ (ಸು. ೫೫), ಗುಡ್ಡದಹಳ್ಳಿಯ ಇದೇ ಮನೆತನದ ದಳವಾಯಿ ಗೋವಿಂದಪ್ಪ (ಸು. ೬೦) ಮತ್ತು ದಳವಾಯಿ ರಂಗಪ್ಪ (ಸು.೬೫) ಇವರಿಗೂ, ಈ ಶಾಸನ ದೊರೆಯಲು ಕಾರಣರಾದ ಶ್ರೀ ಟಿ. ಶಂಭುಲಿಂಗಪ್ಪನವರಿಗೂ ಲೇಖಕರು ಅತ್ಯಂತ ಕೃತಜ್ಞರಾಗಿದ್ದಾರೆ.]

## ಶಾಸನದ ಪಾಠ

ಅ) ಮುಂಬದಿ

(ಸೂರ್ಯ) (ದುಂಡುಮೊಹರು) (ಗಣಪತಿ) (ಚಂದ್ರ)

೧ ಶ್ರೀ ಸ್ವಸ್ತಿ ವಿಜಯಾಭ್ಯುದಯಾ ಶಾಲಿವಾಹನ ಶಕ ವರ್ಷ ೧೫೭೬ ವರ್ತಮಾನಕೆ ಸಲುವ ಪ್ರಮದೀಚ

೨ ನಾಮ ಸಂವತ್ಸರದ ವೈಶಾಕ | ಭ ೫ ಯಲು ಕ್ರುತಿಕ ಪಾದ ಸುಕ್ರುವಾರ ಗಳಿಗೆ ೧೫ರಲು

೩ ಬಿದಿರುರ ಇಕೇರಿಯವರು ಸಿವಪ್ಪನಾಯ್ಕರವರು | ರಾಮ ಪ್ರದಾನ್ರು | ಸಿವಲಿಂಗ ಪ್ರದಾನ್ರು

೪ ಸಹ | ನರಸಿಂಹ್ವಸನ | ನರಪತಿ ವೀರರಾದಂತವರು | ಶ್ರೀ ಮತು | ಚಿತ್ರಕಲದುರ್ಗದ

೫ ಸೀಮೆ | ಕೆಂನಳಿ ಯಂಬ ಗ್ರಮದ ಅಂಡೆದನುಗರ ಕೆಂನಳಿ ಗ ಇು ಡ | ತಿಂಮರಾಇುತ

೬ ಗಿರಿ ರಾಇುತ | ಸಂಣ ರಂಗ ರಾಇುತಾ ಸ್ತನಿಕ ಅಜ್ಞೆಯಗು | ಸಹ ಇಕೇರಿ ಸೀಮೆಯ

೭ ಲು ಗ್ರಮ ನೇಮ್ಕ ಮಾಡಿ ಕೊಟ ಕ್ರಮ | ಚಿತ್ರಕಲ ಮೆದಿಕೇರಿ ಅರಸು | ಇ ತಿಂಮರಾಇು

೮ ತನ ಪುತ್ರೆ ಲಕು ಯಂಬ ಹೆಂಣಿನಲಿ ಮನವಿಟ ಕಾರಣ | ಇುಡುವಳ ಹೊಟಿಗಿ

೯ ರಿನಾಯ್ಕ | ಕಾಟನಾಇಕರಂನು ಕಳುಹಿ ಹೆಂಣ ಕೇಳಿಸಿದಲಿ | ಇ ನಾಯ್ಕರು ಅಂಡೆ

೧೦ ದನುಗರ ತಿಂಮ ರಇುತನ ಕುಲಕೆ ದಳವಾಇಗಳು ಯಂಬ ಸ್ಯಕವೇನು ವಾಲ್ಮೀಕ

೧೧ ರಿಗೆ ಹೆಂಣ ಕೇಳುಇುದಕೆ ಹುಕುಮು ಯೇನು ಇದೆ ಯಂದು ಹೆಂಣ ಕೇಳಿದವ

೧೨ ರಿಗೆ ಕಾಲಿಗೆ ಹಗ ಹಕಿಸಿ ಗ್ರಮ ಬಿಟು ಯಳಸಿದ ಕಾರಣ ಮೆದಿಕೇರಿ ಅರಸಿಗೆ ಪಿರಿ

೧೩ ಯಾದಿ ಹೇಳಿದರಿಂದ | ೧೬೮ ಜವನರಂನು ಕಳುಹಿ ಕೆಂನಳಿ ಗ್ರಮ ಲುಟ ಇಸಿ

೧೪ ಭಣಬೆ ಬೇಲಿಗೆ ಬೆಂಕಿ ಹಚಿ ಇ ನಇಕರ ಮನಗೆ ಮುತಿಗೆ ಮಾಡಿ ಲಕುಯ

೧೫ ೦ಬ ಹೆಂಣ ಹಿಡಿದ ಕಾರಣ | ಕೆಂನಳಿ ನಾಇಕರು ೫ ಜನ ಇವರ ಪುತ್ರರು ೧೫

೧೬ ಜನ ಕೂಡಿಕೊಂಡು | ೧೬೮ ಜವನರ ಮೇಲೆ ಬಿದು ಲಡಯ ಮಾಡಿದಲಿ ಅರಸಿ

೧೭ ನ ಜನ ೧೧೨ ತಲೆ ಬಿದು | ಕೆಂನಳಿ ರಾಇುತರ ಜನ ೯ ತಲೆ ದು | ದುರ್ಗದ ಜನ ಹಿಂ

೧೮ ಮುರಿಯಲಾಗಿ | ಇ ನಾಯ್ಕರು ಪಂಚತ್ವನೈದಿದವರು ೯ ಜನ ಕಿಚಿಗೆ ಹಾಕಿ

೧೯ ನನಿಂದ ನಂಮಂಣಂದಿರ ಪ್ರಣ ಹೋಇತೆಂದು ಲಕ್ಕು ಅದೇ ಕಿಚಿಗೆ ಬಿದಲಿ | ಇ ರ

೨೦ ಅುತರು ನಳೆ ನಂಮ ತೆಲೆ ಪ್ರಣ ಇುಳಿಯದೆಂದು | ಸಿಲಾದೇವರು ರಂಗ ನಾಥನ ಕಿ

೨೧ ತು ಬೈರ ದೇವರು ಸಹ ಭಂಡಿಗೆ ಹೇರಿಕೊಂಡು ಇಕೇರಿ ಸೀಮೆಗೆ ಮ

೨೨ ರೆ ಬಿದ ಕರಣ | ದುರ್ಗದವರು ಪುನಹ ಮಾಡಿದ ನಯ್ಕರು ನಿಂಮ
೨೩ ಸೀಮೆಗೆ ಮರೆಹೊಕು ಇದರೆ ಚಂನಗಿ ಬುದಿ ಕಲಿಸಿ ಹಿಡಿದುಕೊಡು
೨೪ ಯಂದು ಇತ್ರ ಬರದಲಿ | ನಿಉ ಇಕೇರಿಯುರು ಮರೆಬಿದವರ
೨೫ ಕೊಡುವಂತವರಲಾ | ಇ ರಾಇತರ ಪರಕ್ರಮಕೆ ಮೆಚಿ | ಇ ಲಕು ಕೊ
೨೬ ಂಡ ಹೊಕದಕು ಮೆಚಿದಇ | ಇಷ್ಟರ್ತ ಬೆ | ಡು ಯಂದಲಿ | ನೀಇ
೨೭ ಬೇಡಿಕೊಂಡದು | ಡಿಳಿ ಸೀಮೆ | ತಿಂಮನಕಟೆ | ವಿಜನಗರದ ಸೀಮೆ ಕೆಲ
೨೮ ಕೋಟೆಪುರ ಹಿಡಿಂಭದುರ್ಗದ ಸೀಮೆ ಕೆಂನಳಿ | ಇಉ ೩ ದೇಸದಲಿಯು

ಆ) ಹಿಂಬದಿ

(ಚಕ್ರ) (ಶಂಖ)

೨೯ ಗ್ರಮ ದೆ | ವರುಗೆ ಅಡಿ ಬರಡ ಹಾಗೆ ಹದರ ಅಂನ್ಯೆಯಕು ಅಪರದ ಇ
೩೦ ಸಹ ನಂನ ಜಾತಿಯುಲೆ ತೀರುವ ಹುಕುಮ ಕೊಟು ಯಿದರೆ | ಸ್ವಾಮಿ | ದೇವ
೩೧ ರವರು | ಅದೇ ಪ್ರಕಾರ ಹುಕುಮು ಅನಬೇಕು ಯುಂದು | ಸಮುಕದಲು
೩೨ ನಿಂತು ಬೇಡಿಕೊಂಡದರಿಂದ | ನಾಉ ಇಕೇರಿಯುರು ನೇಮುಕ ಮೊಡಿ
೩೩ ಕೊಟದು | ಇವರು ಯಿದ ಬಳಿ ಪಂಚಎ ಬುಮಿಗೆ | ಕೊಪಲಹಳ | ಗು
೩೪ ಡನಹಳ ಯುಂಬ ನಾಮಾಂಕಿತವಿಟು | ಇಉ ಎರಡು ಗಾಮಕೆ ಇ
೩೫ ವರ ಮನೆ ದೇವರೆ | ಗ್ರಾಮದ ದೇವರು | ಕೊಪಲಹಳಗೆ ಬೇಟಿರಂಗ
೩೬ ಇವರ ಕೈಂದ ಪ್ರತಿಷ್ಟೆ | ಗುಡನಹಳಗೆ ಬೆಳಕ್ಕೆ ಕಲಕಂಬದ ರಂಗ
೩೭ ಇ ನಾಯ್ಕರ ಕೈಇಂದ ಪ್ರತಿಷ್ಟೆ |ಇಉ ೨ಡು ಗ್ರಮಉ ತುಂಬ ಸಲಕೇರಿ
೩೮ ಮೇಲಕೇರಿ ಕಟದಲಿ | ಇಉ ೨ಡು ದೇವರ ದ್ರಿಷ್ಟಂತ್ರ ನ್ಯಾಜದ ಬಲುಮಿಂ
೩೯ ದ ಸವಿರ ವಕಲು | ಸವಿರ ವರ ಹಕಿ ಪಇತಿ ಆದಲಿ | ಅವವನೊಬನು ಅಡಿ ಬ
೪೦ ರಲಾಗದು | ಹದರ ಅಂನ್ಯಯ ಚರದಾಯ ಹೊರದಯ ಸಹ ಇವ
೪೧ ರ ಜಾತಿಯುಲೆ ತೀರುವದೂ | ಇ ರಾಇತರ ಜಾತಿಗೆ | ಇವರ ಕುಲ
೪೨ ವೆತ ಪುನಪು ವಿಚಾರಿಕೊಳುವದು | ರಾಜದಿರಜರದಂತವರು
೪೩ ಪುತ್ರಿ ಪಲಿಸುವರು ಸೂರ್ಯ್ಯ ಚಂದ್ರ ಯಿರುವ ಪರಿಯುಂತ್ರ ನಡ
೪೪ ಸಿ ಕೊಳುವದು ನಾಇ ಇಕೇರಿಯುವರು ನೇಮ್ಕ ಮಾಡಿಕೊಟ್ಟ ದರ್ಮ
೪೫ ನಿರುಪಕ್ಕೆ |ಅವನೊಬನು ಅಡಿ ಬಂದರೆ | ಕಾಸಿಯುಲಿ ಬ್ರಂಹಣ ಗೋ
೪೬ ಇಹತ್ಯ ಶ್ರೀಹತ್ಯ ಸಿಸುಹತ್ಯ ಮಾಡಿದ ಪಪಕೆ ಹೋಹನು ಕ್ಷೆತಿಯುಡಸಿ
೪೭ ನದಿಯುಲು ಮೇಕೆ ಕೊಂದ ಪಪಕೆ ಹೋಹನೂ ಮಕೆ ಸೂಕರನ ಕೊಂದ

೪೮ ಪಪಕೆ ಹೋಽಹನು ತಂಮು ಪಙುತ್ರರಿಗೆ ವಿಸ್ಯವ ಇಕಿದ ಪಪಕೆ ಹೋಽಹನೂ
೪೯ ದೇವಲೋಽಕ ಮತ್ಸ್ಯಲೋಽಕಕ್ಕೆ ವೊರಗು | ಇ ದರ್ಮ ನಿರುಪಕೆ ಅ
೫೦ ಡಿ ಬಂದವರಿಗೆ ಬುದಿಕಲಿಸಿದಲಿ ಪಲ | ಸಪ್ತ ಸಮುದ್ರದಲಿ ಸನ ಮಾಡಿ
೫೧ ಕಾಸಿ | ರಾಮೇಶ್ವರ | ಪರುವತ | ತಿರುಮಲೆ |ಸುಬ್ರಮುಂಣ್ಯ | ಉಡುಪಿ
೫೨ ಗೋಽಕರ್ಣ | ಇಂತ ಪುಂಣ್ಯತೀರ್ತಯಾತ್ರೆ ಮಾಡಿ ಪುತ್ರ ಪಙುತ್ರೆ
೫೩ ಇಷ್ಟರ್ತ ಸಙುಬಾಗ್ಯ ಪಡದಷ್ಟು ಪಲ ಬರವದೂ || ಗ್ರಂತ್ತ ||
೫೪ ಸ್ವದಾತಂ ದ್ವಿಗುಣಾ ಪುಣ್ಯಂ| ಪರದಾತನ ಪಾಲನಂ | ಪರದಾತ ಪುಹವ
೫೫ ರೇಣ ಸ್ವದತ್ತಂ ನಿಸ್ಪಲ ಬವತೆ ||

○

ಎಸ್. ರಾಜೇಂದ್ರಪ್ಪ

# ಅಸೂಟಿ ಗ್ರಾಮದ ಚಾರಿತ್ರಿಕ ಹಿನ್ನೆಲೆ

ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಧಾರವಾಡ ಜಿಲ್ಲೆ ಅನಾದಿ ಕಾಲದಿಂದಲೂ ಶ್ರೀಮಂತ ಪರಂಪರೆಯ ತವರಾಗಿತ್ತು. ಪ್ರಾಚೀನ ಕಾಲದ ಸಾಂಸ್ಕೃತಿಕ ಪರಂಪರೆಯ ಪಳಿಯುಳಿಕೆಗಳಾಗಿ ಉಳಿದುಬಂದಿರುವ ಶಾಸನಗಳು, ದೇವಾಲಯಗಳು, ಮೂರ್ತಿ-ಶಿಲ್ಪಗಳು, ವೀರಗಲ್ಲು-ಸತಿಗಲ್ಲುಗಳು ಅಧಿಕ ಪ್ರಮಾಣದಲ್ಲಿ ಧಾರವಾಡ ಜಿಲ್ಲೆಯ ವಿವಿಧ ಭಾಗಗಳಲ್ಲಿ ಲಭಿಸಿವೆ; ಲಭಿಸುತ್ತಿವೆ. ಅಮರಗೋಳ, ಉಣಕಲ್ಲು, ಗದಗ, ಅಣ್ಣಿಗೇರಿ, ನರಗುಂದ, ಕೊಣ್ಣೂರು, ಹಡ್ಲಿ, ಮೆಣಸಿಗಿ, ಹಿರೇಹಾಳ, ರೋಣ, ಸೂಡಿ, ನರೇಗಲ್ಲು, ನಿಡಗುಂದಿ, ಲಕ್ಕುಂಡಿ, ಡಂಬಳ, ಗುತ್ತಲ, ಮುಳಗುಂದ, ಲಕ್ಷ್ಮೇಶ್ವರ, ಗುಡಿಗೇರಿ, ಬಂಕಾಪುರ, ಹಾನಗಲ್, ಆಡೂರು, ಹಾವೇರಿ, ತಿಳವಳ್ಳಿ ಮುಂತಾದ ಸ್ಥಳಗಳನ್ನಿಲ್ಲಿ ಹೆಸರಿಸಬಹುದಾಗಿದೆ.

ರೋಣ ತಾಲ್ಲೂಕಿನಲ್ಲಿ ರೋಣ, ಕೋಡಿಕೊಪ್ಪ, ನರೇಗಲ್, ನಿಡಗುಂದಿ, ಅಬ್ಬಿಗೇರಿ, ಸೂಡಿ, ಇಟಗಿ, ರಾಜೂರು, ಗಜೇಂದ್ರಗಡ, ಹಿರೇಹಾಳ, ಮೆಣಸಿಗಿ, ಸವಡಿ ಗ್ರಾಮಗಳಲ್ಲಿ ರಾಷ್ಟ್ರಕೂಟ-ಕಲ್ಯಾಣಿ ಚಾಲುಕ್ಯ-ವಿಜಯನಗರ ಕಾಲಕ್ಕೆ ಸೇರಿದ ದೇವಾಲಯಗಳಿವೆ. ಅದೇ ರೀತಿ, ಬೆಳವಣಿಕೆ, ಯಾವಗಲ್, ಹಡಗಲಿ, ಕಾಜಗೇರಿ, ಕರಮುಡಿ, ಅಸೂಟಿ,

---

ಈ ಲೇಖನ ಸಿದ್ಧಪಡಿಸಲು ಸ್ಫೂರ್ತಿ ಆಸೂಟಿಯ ಶ್ರೀ ಫಲಾರೇಶ್ವರ ಮಠದ ಅಧಿಪತಿಗಳು. ಅಸೂಟಿ ಗ್ರಾಮದ ಚಾರಿತ್ರಿಕ ಅಧ್ಯಯನಕ್ಕೆ ಪೂರಕವಾಗಿ ಮಾಹಿತಿ ಸಂಗ್ರಹಿಸುವಲ್ಲಿ ನೆರವಾದ ವಿದ್ಯಾರ್ಥಿ ಶ್ರೀ ಬಿ. ಎಂ. ವೋಟಿ ಹಾಗೂ ಶ್ರೀ ಎಸ್. ಎಸ್. ಕಬಾಡರ್ ಹಾಗೂ ಆಸೂಟಿಯ ಮಾಜಿ ತಲಾಟಿಯವರು ಇವರಿಗೆಲ್ಲ ಲೇಖಕರು ಅಭಾರಿಯಾಗಿದ್ದಾರೆ.

ಅರೆಹುಣಸಿ, ಹುನಗುಂಡಿ, ಜಕ್ಕಲಿ, ಸಂಧಿಗವಾಡ, ಹಿರೇಮಣ್ಣೂರು ಮುಂತಾದ ಗ್ರಾಮಗಳಲ್ಲಿ ರಾಷ್ಟ್ರಕೂಟ-ಕಲ್ಯಾಣಿ ಚಾಲುಕ್ಯರ ಕಾಲದ ಮೂರ್ತಿಶಿಲ್ಪಗಳು, ಶಾಸನಗಳು ಹಾಗೂ ವೀರಗಲ್ಲುಗಳು ಲಭ್ಯವಿವೆ.* ಧಾರವಾಡ ಜಿಲ್ಲೆಯ ರೋಣ ತಾಲ್ಲೂಕು ನೆನ್ನೆ ಮೊನ್ನೆಯವರೆಗೂ ಕಡೆಗಣಿಸಲ್ಪಟ್ಟ ಪ್ರದೇಶವಾಗಿತ್ತು. ಇತ್ತೀಚೆಗೆ ಕೇಂದ್ರ ಸರ್ಕಾರದ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯವರು ಸೂಡಿಯ ಮಲ್ಲಿಕಾರ್ಜುನ ದೇವಾಲಯವನ್ನೂ, ರಾಜ್ಯ ಸರ್ಕಾರದ ಪ್ರಾಚ್ಯವಸ್ತು ನಿರ್ದೇಶನಾಲಯ ಜೋಡಿಕಳಶದೇವರ ಗುಡಿಯನ್ನೂ ರಾಷ್ಟ್ರೀಯ ಸಂರಕ್ಷಿತ ಸ್ಮಾರಕವೆಂದು ಘೋಷಿಸುವುದರೊಂದಿಗೆ ತಮ್ಮ ಕಾರ್ಯವ್ಯಾಪ್ತಿಗೆ ರೋಣ ತಾಲ್ಲೂಕನ್ನು ಒಳಪಡಿಸಿಕೊಂಡು, ಈ ಭಾಗದ ಜನರ ಬಹು ದಿನದ ಬಯಕೆಯನ್ನು ಪೂರೈಸಿದ್ದಾರೆ.

ಶ್ರೀಮಂತ ಸಾಂಸ್ಕೃತಿಕ ಪರಂಪರೆ ಹೊಂದಿರುವ ರೋಣ ತಾಲ್ಲೂಕಿನ ಅನೇಕ ಗ್ರಾಮಗಳಲ್ಲಿ ಅಸೂಟಿಯೂ ಒಂದು. ಹೊಳೆಆಲೂರು-ಬೆಳವಣಿಕೆ ನಡುವೆ ಇರುವ ಈ ಗ್ರಾಮ ಹೊಳೆಆಲೂರಿನಿಂದ ೧೦ ಕಿ. ಮೀ. ದೂರದಲ್ಲಿದೆ. ಹಿಂದೊಂದು ಕಾಲದಲ್ಲಿ ಪ್ರಸಿದ್ಧವಾಗಿದ್ದು, ಸಂಪದ್ಭರಿತವಾಗಿತ್ತೆಂದು ಸೂಚಿಸುವ ಪಾಳುಗುಡಿಗಳು, ಮುಕ್ಕಾಗಿ ಮರೆಯಾಗಿರುವ ಮೂರ್ತಿ-ಶಿಲ್ಪಗಳು, ಊರ ಚರಿತ್ರೆಯ ನೆನಪಾಗಿ ನಿಂತಿರುವ ಶಾಸನಗಳು, ವೀರಗಲ್ಲುಗಳಿಂದ ಕೂಡಿರುವ ಈ ಊರು, ಇಂದು, ಶ್ರೀ ಫಲಾರೇಶ್ವರ ಮಠದಿಂದಾಗಿ ಪ್ರಸಿದ್ಧಿಯಲ್ಲಿದೆ. ನಾನಾ ವಿಧವಾದ ಸಾಮಾಜಿಕ ಧಾರ್ಮಿಕ ಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಂಡಿರುವ ಈ ಮಠದ ಕಾರ್ಯವೈಖರಿ ಪ್ರಾಚೀನ ಮಠಗಳನ್ನು ನೆನಪಿಸುತ್ತದೆ.

ಅಸೂಟಿ ಗ್ರಾಮದ ಇತಿಹಾಸವನ್ನು ಇತಿಹಾಸ ಪೂರ್ವಕಾಲದ ಮಾನವನಷ್ಟು ಹಿಂದಕ್ಕೆ ಗುರುತಿಸಬಹುದಾಗಿದೆ. ಶಿಲೆಯಿಂದ ತಯಾರಿಸಿದ ಆಯುಧಗಳನ್ನು ಬಳಸುತ್ತ ಹೊಟ್ಟೆಪಾಡಿಗಾಗಿ ಪ್ರಾಣಿಗಳ ಬೇಟೆಯನ್ನೇ ಆಡುತ್ತಿದ್ದ ಇತಿಹಾಸ ಪೂರ್ವಕಾಲದ ಜನರು ಬಳಸಿ ಬಿಸಾಡಿರುವ ಶಿಲಾಯುಧಗಳು (ಚಕ್ಕೆ ಕಲ್ಲಿನವು) ಮಲಪ್ರಭಾ ನದಿ ಬಯಲಿನಲ್ಲಿ ಸಮೃದ್ಧವಾಗಿ ದೊರೆತಿದ್ದು, ಉಲ್ಲೇಖನ ದೃಷ್ಟಿಯಿಂದ ಹೊಳೆಆಲೂರು, ಬೂದಿಹಾಳ, ಕೌಜಗೇರಿ ಹಾಗೂ ತಮ್ಮಿನಹಾಳಗಳನ್ನು

---

* ಕ್ಷೇತ್ರಕಾರ್ಯದಲ್ಲಿ ಗಮನಿಸಿದ ಅಂಶಗಳಿವು.

ಹೆಸರಿಸಬಹುದಾಗಿದೆ.[1] ಈ ಅವಶೇಷಗಳು ಸುಮಾರು ಎರಡು ಲಕ್ಷ ವರ್ಷಗಳಷ್ಟು ಪುರಾತನವಾದುದೆಂದು ಪುರಾತತ್ವ ಶಾಸ್ತ್ರಜ್ಞರು[2] ಅಭಿಪ್ರಾಯ ಪಡುತ್ತಾರೆ. ನೂತನ ಶಿಲಾಯುಗದ ಮಾನವರ ಸಂಸ್ಕೃತಿಗೆ ಸೇರಿದ (ಕ್ರಿ. ಪೂ. ೨೦೦೦-೮೦೦) ಅವಶೇಷಗಳಾದ ಬೂದು ಬಣ್ಣದ ಮಣ್ಣಿನ ಮಡಕೆಯ ಚೂರುಗಳು, ಕುಡಗೋಲು, ಚಾಕು, ಕೊರೆಯುವ ಬೈರಿಗೆ ಮುಂತಾದವು ಹೊಳೆಆಲೂರು, ಹೊಳೆಮಣ್ಣೂರು, ಹಿರೇಹಾಳ, ಸವಡಿ, ಲಿಂಗದಾಳ, ಬಾಸರಕೋಡ್, ಕೌಜಗೇರಿ, ಯಾವಗಲ್, ಬೆಳವಣಿಕೆ, ಮೆಣಸಗಿ ಮುಂತಾದ ಗ್ರಾಮಗಳಲ್ಲಿ ಕಂಡುಬಂದಿವೆ.[3] ಈ ಎಲ್ಲಾ ಗ್ರಾಮಗಳೂ ಅಸೂಟಿಯ ಸಮೀಪದ ಗ್ರಾಮಗಳಾಗಿರುವುದರಿಂದ ಅಸೂಟಿ ಕೂಡ ಹಳೆಶಿಲಾಯುಗದ ಮಾನವರ ಸಂಪರ್ಕಕ್ಕೆ ಬಂದಿದ್ದಿರಬಹುದೆಂಬ ಅನುಮಾನ ಮೂಡುತ್ತದೆ.

ಅಸೂಟಿ ಗ್ರಾಮದ ಮೊದಲ ಉಲ್ಲೇಖ ನೆರೆಯ ಗ್ರಾಮವಾದ ಕೌಜಗೇರಿಯ ಶಿಲಾಶಾಸನದಲ್ಲಿ ಕಂಡುಬರುತ್ತದೆ.[4] ರಾಷ್ಟ್ರಕೂಟ ನಾಲ್ವಡಿ ಗೋವಿಂದನ ಕಾಲಕ್ಕೆ ಸೇರಿದ ಕ್ರಿ. ಶ. ೯೩೩ರ ಕೌಜಗೇರಿ ಶಿಲಾಶಾಸನ, ಕೌಜಗೇರಿಯ ಗಾಡ ಬಿಳ್ಳಜ್ಜನು ಕೌಜಗೇರಿಯಲ್ಲಿ ಐದು ದೇವಾಲಯಗಳನ್ನು ನಿರ್ಮಿಸಿದನೆಂದು ಹೇಳುತ್ತ, ಆ ಗಾಡ ಇತರ ಗ್ರಾಮಗಳಲ್ಲಿ ಕೈಗೊಂಡ ಧಾರ್ಮಿಕ ಕಾರ್ಯಗಳ ಬಗ್ಗೆ ಉಲ್ಲೇಖಿಸುತ್ತ ಪ್ರಾಸ್ತಾವಿಕವಾಗಿ ಅಸೂಟಿಯನ್ನು ಉಲ್ಲೇಖಿಸುತ್ತದೆ. ಈ ಉಲ್ಲೇಖದೊಂದಿಗೆ 'ಅಸೂಟಿ' ಹತ್ತನೆಯ ಶತಮಾನದಷ್ಟು ಪ್ರಾಚೀನ ಗ್ರಾಮವೆಂಬ ಅಂಶ ಸ್ಪಷ್ಟವಾಗುತ್ತದೆ. ಈ ಶಾಸನದಲ್ಲಿ ಗ್ರಾಮದ ಹೆಸರನ್ನು 'ಅಸುಪಟ್ಟಿಗ' ಎಂದೇ ಉಲ್ಲೇಖಿಸಲಾಗಿದೆ. ಅಸುಪಟ್ಟಿಗದ ದೇವಾಲಯವೊಂದಕ್ಕೆ ದಾನ ನೀಡಿದೆನೆಂದು ಬಿಳ್ಳಜ್ಜ ಕೌಜಗೇರಿ ಶಾಸನದಲ್ಲಿ ಹೇಳಿಕೊಂಡಿದ್ದಾನೆ. ಇದರಿಂದ 'ಅಸೂಟಿ'ಯ ಪ್ರಾಚೀನ ರೂಪ 'ಅಸುಪಟ್ಟಿಗ' ಆಗಿತ್ತೆಂಬ ಅಂಶ ಗೊತ್ತಾಗುತ್ತದೆ. ಕ್ರಮೇಣ ಅಸುಪಟ್ಟಿಗ> ಅಸೂಪಟಿ> ಅಸೂಪ್ಟಿ> ಅಸೂಟಿ ಎಂದು ರೂಪಾಂತರಗೊಂಡಿರಬೇಕು.

ಅಸುಪಟ್ಟಿಗ ಶಬ್ದನಿಷ್ಪತ್ತಿ ಹೇಗಾಯಿತು. ಅದರ ಅರ್ಥವೇನು ಎಂಬ ಪ್ರಶ್ನೆ ಏಳುತ್ತದೆ. ಇದನ್ನು ಮೂರು ರೀತಿಯಲ್ಲಿ ಅರ್ಥೈಸಬಹುದು.

೧. ಪರಶುಪಟ್ಟಿಕದಿಂದ ಅಸುಪಟ್ಟಿಗ ಬಂದಿರಬೇಕು. ಪರಶು (ಕೊಡಲಿ) ವಿನಿಂದ ಕಾಡನ್ನು ಕಡಿದು ವ್ಯವಸಾಯಕ್ಕೆ ಭೂಮಿಯನ್ನು (ಪಟ್ಟಿಕಾ) ಸಿದ್ಧಪಡಿಸಿರ

---

1, 2, 3 : ಡಾ|| ಎ. ಸುಂದರ (1978) ; ಯಾವಗಲ್ ಪರಿಸರ—ಸಾಂಸ್ಕೃತಿಕ ದರ್ಶನ. (ಪುಟ 22-27), ವೈ. ಎಸ್. ಹಿರೇಕೊಪ್ಪ (ಸಂ : 1978) : ಜೇನುಗಲ್ಲಿನ 'ಐಸಿರಿ' ಯಾವಗಲ್‌ನಲ್ಲಿ ಪ್ರಕಟವಾಗಿದೆ.

4. ಸೌ. ಇಂ. ಇ. XI—i. ಶಾಸನ ಸಂಖ್ಯೆ 35, ಪುಟ 21

ಬೇಕು. ಭಾಷಾ ವೃಷ್ಟಿಯಿಂದ ಕನ್ನಡ 'ಪ' 'ಹ' ಆಗುವುದು 'ಡ' 'ಪ' ಆಗುವುದು ಹೊಸದೇನಲ್ಲ.

೨. ಶಿವಾಲಯವನ್ನು ಸ್ಥಾಪಿಸಿ ಅದಕ್ಕೆ ಭೂಮಿಯನ್ನು (ಪಟ್ಟಿಕಾ) ದಾನ ಮಾಡಿದ್ದರಿಂದ ಈ ನಾಮ ಬಂದು ಕ್ರಮೇಣ ಅದೇ ಊರ ಹೆಸರಾಗಿ ಬಳಕೆಗೆ ಬಂದಿರಬೇಕು.

೩. ಅಸುಪಟ್ಟಗ ಮೂಲತಃ ಪಸುಪಟ್ಟಿಕಾದಿಂದ ಬಂದಿದ್ದು, ಇದು ಆರಂಭ ದಲ್ಲಿ ಗೋಮಾಳವಾಗಿರಬೇಕು. ಪಸು–ಹಸು/ಆಕಳು, ಪಟ್ಟಗಾ–ಭೂ ಮುಂದೆ ಇಲ್ಲಿ ಜನ ನಿಂತ ನಂತರ ಅದೇ ಹೆಸರು ಗ್ರಾಮಕ್ಕೂ ಅನ್ವಯವಾಗಿರಬೇಕು.

ಅಸೂಟಿ, ಪ್ರಾಚೀನ ಕಾಲದಲ್ಲಿ ಬೆಳ್ವವಣಿಕೆ–೧೨ ಆಡಳಿತ ಘಟಕದ ಒಂದು ಸದಸ್ಯ ಗ್ರಾಮವಾಗಿರಬೇಕು. ಬೆಳ್ವಣಿಕೆ–೧೨ ಒಂದು ಆಡಳಿತ ಘಟಕ ವಾಗಿದ್ದು, ಬೆಳ್ವೊಲ–೩೦೦ರ ಉಪಘಟಕವಾಗಿತ್ತೆಂಬ ಅಂಶವನ್ನು ಕೌಜಗೇರಿಯ ಕ್ರಿ. ಶ. ೯೧೨ರ ಮತ್ತೊಂದು ಶಾಸನ ವ್ಯಕ್ತಪಡಿಸುತ್ತದೆ.[5] ಇದರಿಂದ ಬೆಳ್ವಣಿಕೆ ೧೨, ಹನ್ನೆರಡು ಗ್ರಾಮಗಳ ಆಡಳಿತ ಘಟಕವಾಗಿದ್ದು, ಅಸೂಟಿ ಅದರ ಆಳ್ವಿಕೆಗೆ ಒಳಪಟ್ಟಿತ್ತೆಂಬ ಅಭಿಪ್ರಾಯಕ್ಕೆ ಬರಬಹುದಾಗಿದೆ.

ಅಸೂಟಿ ಗಾಮದಲ್ಲೇ ಇತ್ತೀಚೆಗೆ ಎರಡು ಶಾಸನಗಳನ್ನು ಗಮನಿಸಲಾಗಿದೆ. ಊರ ನಡುವೆ ಇರುವ ಹನುಮಂತನ ಗುಡಿಯ ಗೋಡೆಯಲ್ಲಿ ಸೇರಿಸಲ್ಪಟ್ಟಿರುವ ಶಿಲೆಯೊಂದರಲ್ಲಿ ಎರಡು ಸಾಲಿನ ಶಾಸನವನ್ನು ಪತ್ತೆಹಚ್ಚಲಾಗಿದೆ.[6] ಲಿಪ್ಯಾಧಾರದ ಮೇಲೆ ಕ್ರಿ. ಶ. ೧೧–೧೨ನೇ ಶತಮಾನಕ್ಕೆ ಸೇರುವ ಈ ಶಾಸನದ ಪೂರ್ಣ ಪಾಠ ಪಡೆದು ಅಭ್ಯಾಸ ಮಾಡಬೇಕಾಗಿದೆ. ಅದೇ ರೀತಿ ಕಲ್ಲೇಶ್ವರ ದೇವಾಲಯದ ಮುಂಭಾಗದ ಕಂಬವೊಂದರ ಮೇಲಿರುವ ೮ ಸಾಲಿನ ಶಾಸನವನ್ನು ಪತ್ತೆಹಚ್ಚ ಲಾಗಿದ್ದು ಲಿಪ್ಯಾಧಾರದ ಮೇಲೆ ಇದನ್ನು ಕ್ರಿ. ಶ. ೧೨ನೇ ಶತಮಾನಕ್ಕೆ ಗುರುತಿಸ ಬಹುದಾಗಿದೆ.[7]

---

5. ಸೌ. ಇಂ. ಇ. XI—i. ಶಾಸನಸಂಖ್ಯೆ 29, ಪುಟ 17
6. ಈ ಶಾಸನವನ್ನು ನನ್ನ ನಿರ್ದೇಶನದಂತೆ, ವಿದ್ಯಾರ್ಥಿಗಳಾದ ಶ್ರೀ ಮೋಟೆ ಹಾಗೂ ಕಬಾಡರ್ ಸ್ಥಳೀಕರ ಸಹಕಾರದೊಂದಿಗೆ,ಹನುಮಂತನ ಗುಡಿಯ ಗೋಡೆ ಒಡೆದು (ದಿನಾಂಕ 22-1-91)ರಂದು ಬೆಳಕಿಗೆ ತಂದರು.
7. ದಿನಾಂಕ 14-1-91ರಂದು ಕ್ಷೇತ್ರಕಾರ್ಯಕ್ಕೆಂದು ಅಸೂಟಿಗೆ ಹೋಗಿದ್ದಾಗ ಈ ಶಾಸನವನ್ನು ನನ್ನ ಗಮನಕ್ಕೆ ತಂದವರು ಗ್ರಾಮದ ಮಾಜಿ ತಲಾಟಿಯವರು. ಅವರಿಗೆ ಲೇಖಕರ ಕೃತಜ್ಞತೆಗಳು

ಇವುಗಳಿಗೆ ಪೂರಕವಾಗಿ, ಊರಿನ ಬಸ್ಸು ನಿಲ್ದಾಣದ ಸಮೀಪದಲ್ಲಿರುವ ಪಂಚಲಿಂಗೇಶ್ವರ ದೇವಾಲಯ ಇಂದು ಪೂರ್ಣ ಹಾಳಾಗಿದೆ. ಎತ್ತರದಲ್ಲಿದ್ದ ಈ ಗುಡಿಯ ಆವರಣದಲ್ಲಿ ಶಿವಲಿಂಗಗಳಿವೆ. ಅಲ್ಲಿರುವ ದುರ್ಗಿಯ ಮೂರ್ತಿಯೊಂದು ಉಲ್ಲೇಖನೀಯ. ದ್ಯಾಮವ್ವನ ಗುಡಿ ಮುಂಭಾಗದಲ್ಲಿ ೧೨ನೇ ಶತಮಾನದ ವಿಷ್ಣುವಿನ ಭಗ್ನ ಮೂರ್ತಿಯಿದೆ. ಕಾಯವ್ವನ ಗುಡಿ (ಈಗ ಅಂಗನವಾಡಿ)ಯಲ್ಲಿರುವ ದುರ್ಗಿಯ ಹಳೆಯ ಮೂರ್ತಿ ಶಿಲ್ಪ ಕಲ್ಪನೆ ದೃಷ್ಟಿಯಿಂದ ಮಹತ್ವದ್ದಾಗಿದೆ. ಅಷ್ಟ ಭುಜವುಳ್ಳ ಮಹಿಷಮರ್ದಿನಿ, ದುರ್ಗಿ, ಚಾಮುಂಡಿಯ ಈ ಶಿಲ್ಪ ಶ್ರೇಷ್ಠ ಕಲ್ಪನೆಗೆ ಉತ್ತಮ ನಿದರ್ಶನವಾಗಿದೆ. ಎಡಗಾಲಲ್ಲಿ ಮಹಿಷನನ್ನು ಮೆಟ್ಟಿ, ಬಲಗೈ ನಿಂದ ಇರಿದು ಕೊಲ್ಲುತ್ತಿರುವ ಭೀಕರ ದೃಶ್ಯವಿಲ್ಲಿದೆ. ಇದರಿಂದ ಈ ಭಾಗದಲ್ಲಿ ಕ್ರಿ. ಶ. ೧೧-೧೨ನೇ ಶತಮಾನದಲ್ಲಿ ಶಕ್ತಿದೇವತೆ ಆರಾಧನೆ ಪ್ರಚಲಿತವಿತ್ತೆಂಬ ಅಂಶ ಮನದಟ್ಟಾಗುತ್ತದೆ. ಇದಲ್ಲದೆ ದುರ್ಗಿಗುಡಿ, ದ್ಯಾಮವ್ವನ ಗುಡಿ, ಬಸವಣ್ಣ ಗುಡಿ, ಟಾಕವ್ವನ ಗುಡಿ, ರಾಮಲಿಂಗೇಶ್ವರ ಗುಡಿ, ಸಿದ್ಧಲಿಂಗೇಶ್ವರ ಗುಡಿ, ಕಾಡ ಸಿದ್ಧೇಶ್ವರ ಗುಡಿ, ಕೆರೆಯಮ್ಮನ ಗುಡಿಗಳಿದ್ದರೂ ಇವೆಲ್ಲ ಇತ್ತೀಚಿನ ಗುಡಿಗಳಾಗಿದ್ದು ಶಿಲ್ಪ ಕಲ್ಪನೆ ದೃಷ್ಟಿಯಿಂದ ಸರಳವಾಗಿವೆ.

ರಾಮದುರ್ಗ ಸಂಸ್ಥಾನಕ್ಕೆ ಸೇರಿದ್ದ ಅಸೂಟಿ ಗ್ರಾಮ ಸಂಸ್ಥಾನದೊಂದಿಗೆ ನಿಕಟ ಸಂಪರ್ಕ ಹೊಂದಿತ್ತೆಂಬ ಅಂಶವನ್ನು ಊರ ಹಿರಿಯರು ಸ್ಮರಿಸುತ್ತಾರೆ. ಇದನ್ನು ಆಧಾರಗಳ ಹಿನ್ನೆಲೆಯಲ್ಲಿ ಪರಿಶೀಲಿಸಬೇಕಾಗಿದೆ. ಈವರೆಗಿನ ನಮ್ಮ ಅಧ್ಯಯನಗಳಿಂದ 'ಅಸೂಟಿ' ಪುರಾತನ ಗ್ರಾಮಗಳಲ್ಲಿ ಒಂದಾಗಿತ್ತೆಂಬ ಅಂಶ ಸ್ಪಷ್ಟ ವಾಗುತ್ತದೆ. ಮೇಲಾಗಿ ಈ ಪ್ರದೇಶವನ್ನು ಮತ್ತಷ್ಟು ವಿಸ್ತೃತ ಕ್ಷೇತ್ರಕಾರ್ಯಕ್ಕೆ ಒಳಪಡಿಸುವುದರೊಂದಿಗೆ ಇನ್ನೂ ಮಹತ್ವದ ಸಂಗತಿಗಳನ್ನು ಅರಿಯಬಹುದಾಗಿದೆ.

○

ಡಾ|| ಎಂ. ಎಸ್. ಕೃಷ್ಣಮೂರ್ತಿ

# ರಾಷ್ಟ್ರಕೂಟ-ಚೋಳ ಸಂಘರ್ಷ-ಗಂಗರ ಪಾತ್ರ

ದಕ್ಷಿಣ ಭಾರತದ ಇತಿಹಾಸದಲ್ಲಿ ಕರ್ಣಾಟಕದ ಮತ್ತು ತಮಿಳುನಾಡಿನ ಪ್ರಬಲ ರಾಜಕೀಯ ವಂಶಗಳ ನಡುವಣ ವೈಷಮ್ಯ ಮೊದಲಿನಿಂದಲೂ ಬಂದದ್ದು. ಈ ರಾಜಕೀಯ ಶಕ್ತಿಗಳು ಎಷ್ಟರ ಮಟ್ಟಿಗೆ ಪರಸ್ಪರ ಹೊಡೆದಾಡುತ್ತಿದ್ದು ವೆಂದರೆ ಶಾಸನಗಳು ಇವರನ್ನು 'ಸ್ವಾಭಾವಿಕ ವೈರಿಗಳೆಂದು' ವರ್ಣಿಸುತ್ತವೆ. ಕ್ರಿ. ಶ. ೭ನೇ ಶತಮಾನದಲ್ಲಿ ಪ್ರಾರಂಭವಾದ ಈ ವೈಷಮ್ಯ ವಿಜಯನಗರದ ಕಾಲದವರೆಗೂ ಮುಂದುವರೆ ಯಿತು. ಈ ರಾಜಕೀಯ ದ್ವೇಷದ ಮಧ್ಯೆ ಕೆಲವು ಸಲ ಮೈತ್ರಿಯಿಂದಾಗಿ, ವೈವಾಹಿಕ ಸಂಬಂಧಗಳಿಂದಾಗಿ ಮಧುರ ಬಾಂಧವ್ಯ ಏರ್ಪಟ್ಟ ಸನ್ನಿವೇಶಗಳೂ ಇಲ್ಲದಿಲ್ಲ. ಹೀಗೆ ಅನೇಕ ಸಿಹಿ, ಕಹಿ ಅನುಭವಗಳೂ, ರಾಜಕೀಯ ಏರುಪೇರುಗಳೂ, ಪರಸ್ಪರ ಜಯಾಪಜಯಗಳೂ ಮುಂತಾದ ವೈವಿಧ್ಯಮಯ ಪ್ರಸಂಗಗಳನ್ನೊಳಗೊಂಡ ಕರ್ಣಾಟಕ್ಕೆ ತಮಿಳು ರಾಜ್ಯಗಳ ರಾಜಕೀಯ ಸಂಬಂಧ, ದಕ್ಷಿಣ ಭಾರತದ ಇತಿಹಾಸದಲ್ಲಿ ಒಂದು ಕುತೂಹಲ ಭರಿತ ಅಧ್ಯಾಯ. ಇಂತಹ ಪ್ರಸಂಗಗಳಲ್ಲಿ ರಾಷ್ಟ್ರಕೂಟ–ಚೋಳರ ನಡುವೆ ಕ್ರಿ. ಶ. ೧೦ನೇ ಶತಮಾನದಲ್ಲಿ ನಡೆದ ಸಂಘರ್ಷವು ದಕ್ಷಿಣ ಭಾರತದ ಇತಿಹಾಸದಲ್ಲಿ ಒಂದುಮೈಲಿಗಲ್ಲು ಎನ್ನಬಹುದು.

ಕ್ರಿ. ಶ. ೧೦ನೇ ಶತಮಾನದಲ್ಲಿ ಕರ್ಣಾಟಕದಲ್ಲಿ ರಾಷ್ಟ್ರಕೂಟ ವಂಶ ಅದರ ಬೆಳವಣಿಗೆಯ, ಶಕ್ತಿಯ, ಪರಾ ಕಾಷ್ಠತೆಯನ್ನು ಮುಟ್ಟಿತ್ತು. ಇಡೀ ದಖನ್ ಪ್ರಸ್ಥಭೂಮಿ ಮತ್ತು ಗುಜರಾತ್, ಮಧ್ಯಭಾರತ ಮುಂತಾದ ರಾಜ್ಯಗಳ ಕೆಲವು ಪ್ರದೇಶಗಳ ಮೇಲೂ ಅವರ ರಾಜ್ಯ ವಿಸ್ತರಿಸಿತ್ತು.

ದಕ್ಷಿಣ ಕರ್ಣಾಟಕದಲ್ಲಿ, ತಲಕಾಡಿನ ಗಂಗರೂ, ನೊಳಂಬವಾಡಿಯ ನೊಳಂಬರು ಮುಂತಾದ ಇತರ ಸಾಮಂತರು ಅವರ ಅಧೀನರಾಗಿ ರಾಜ್ಯವಾಳುತ್ತಿದ್ದರು. ಈ ಪ್ರಬಲ ಶಕ್ತಿಗೆ ಸಮನಾಗಿ ತಮಿಳು ನಾಡಿನಲ್ಲಿ ಚೋಳರು ಸ್ವತಂತ್ರ ಸಾರ್ವಭೌಮರಾಗಿ ಆಳುತ್ತಿದ್ದರು. ಕಂಚಿಯ ಪಲ್ಲವರನ್ನೂ, ಪಾಂಡ್ಯ, ಕೇರಳ ಮುಂತಾದ ರಾಜ್ಯಗಳನ್ನು ಗೆದ್ದು, ದಕ್ಷಿಣದಲ್ಲಿ ರಾಷ್ಟ್ರಕೂಟರಿಗೆ ಪ್ರಬಲ ಪ್ರತಿಸ್ಪರ್ಧಿಗಳಾಗಿ ಆಳುತ್ತಿದ್ದರು. ಈ ಎರಡು ಪ್ರಬಲ ಹಾಗೂ ವಿರುದ್ಧ ಶಕ್ತಿಗಳಿಂದಾಗಿ ದಕ್ಷಿಣ ಭಾರತದ ರಾಜಕೀಯದಲ್ಲಿ ಬಿಕ್ಕಟ್ಟಿನ ಪರಿಸ್ಥಿತಿ ಉಂಟಾಗಿತ್ತು. ರಾಷ್ಟ್ರಕೂಟ ವಂಶದಲ್ಲಿ ೩ನೇ ಅಮೋಘ ವರ್ಷನ (೯೩೫–೩೯) ಮಗನಾದ ೩ನೇ ಕೃಷ್ಣನು (೯೩೯–೬೬) ರಾಜ್ಯವಾಳುತ್ತಿದ್ದನು. ಈತನು ರಾಷ್ಟ್ರಕೂಟ ವಂಶದಲ್ಲೇ ಅತ್ಯಂತ ಮಹತ್ವಾಕಾಂಕ್ಷಿ ಹಾಗೂ ಪ್ರಬಲ ದೊರೆ. ಯುವರಾಜನಾಗಿದ್ದಾಗಲೇ ಉತ್ತರ ಭಾರತದ ದಂಡೆಯಾತ್ರೆಯನ್ನು ಕೈಗೊಂಡಿದ್ದನು. ಕೃಷ್ಣನ ಹೆಸರನ್ನು ಹೊಂದಿದ್ದರೂ ಚಾರಿತ್ರ್ಯದಲ್ಲಿ ಇವನು ರಾಮನಂತಿದ್ದನು ಎಂಬ ವಿಚಾರ ಈತನ ಮಧ್ಯ ಪ್ರದೇಶದ ಜೂರಾ ಪ್ರಶಸ್ತಿಯಿಂದ ವಿಶದವಾಗುತ್ತದೆ.

ರಾಷ್ಟ್ರಕೂಟ ಕೃಷ್ಣನ ಪ್ರತಿಸ್ಪರ್ಧಿ ಚೋಳ ಚಕ್ರವರ್ತಿ ಒಂದನೆಯ ಪರಾಂತಕ (೯೦೭–೫೫). ಈತ ಪಲ್ಲವರನ್ನೂ ಬಾಣರನ್ನೂ ಸೋಲಿಸಿದ್ದನು. ಪಾಂಡ್ಯ, ಕೇರಳ, ಸಿಂಹಳದ ಮೇಲೆ ಈತನ ರಾಜ್ಯ ವಿಸ್ತರಿಸಿತ್ತು. ಈ ಎರಡೂ ಚಕ್ರವರ್ತಿಗಳ ಸಹಜ ಪೌರುಷಾಕಾಂಕ್ಷೆ, ರಾಜ್ಯದಾಹ, ರಾಜಕೀಯ ಸ್ಥಿತಿಗತಿಗಳು ಹಾಗೂ ವೈಯುಕ್ತಿಕ ರಾಜಕೀಯ ನಿಲುವುಗಳು ಪರಸ್ಪರ ಯುದ್ಧಕ್ಕೆ ನಾಂದಿಯಾದುವು. ರಾಷ್ಟ್ರಕೂಟ ಕೃಷ್ಣನು ತನ್ನ ಪ್ರಬಲ ಮಿತ್ರರಾದ ಗಂಗರು, ನೊಳಂಬರೊಡಗೂಡಿ ಚೋಳರಾಜ್ಯದ ಮೇಲೆ ದಂಡೆತ್ತಿ ಹೋದನು. ಚತುರ ರಾಜಕೀಯ ಮುತ್ಸದ್ದಿಯಾದ ಪರಾಂತಕನು ಈ ಮೊದಲೇ ಕೃಷ್ಣನ ಧಾಳಿಯನ್ನು ನಿರೀಕ್ಷಿಸಿ ಸಕಲ ಸೈನಿಕ ಸಿದ್ಧತೆಗಳನ್ನು ಮಾಡಿಕೊಂಡಿದ್ದನು. ಇವರ ನಡುವೆ ಭೀಕರ ಕಾಳಗವೊಂದು ತಮಿಳುನಾಡಿನ ಅರಕೋಣಂ ಬಳಿಯಿರುವ ತಕ್ಕೋಳಂ ಎಂಬಲ್ಲಿ ನಡೆಯಿತು. ಈ ಯುದ್ಧದಲ್ಲಿ ಪರಾಂತಕನ ಮಗನೂ ಯುವರಾಜನೂ ಆದ ರಾಜಾದಿತ್ಯನನ್ನು, ಕೃಷ್ಣನ ಆಪ್ತಮಿತ್ರ ಗಂಗರಾಜ ೨ನೇ ಬೂತುಗನು ಕೊಂದನು. ಚೋಳರು ಸೋತು ಹಿಮ್ಮೆಟ್ಟಿದರು. ರಾಷ್ಟ್ರಕೂಟ ಕೃಷ್ಣನು ತನ್ನ ಸೈನ್ಯವನ್ನು ರಾಮೇಶ್ವರದವರೆಗೂ ಕೊಂಡೊಯ್ದು ಅಲ್ಲಿ ವಿಜಯ ಸ್ತಂಭವನ್ನು ಸ್ಥಾಪಿಸಿದನು. ಕೃಷ್ಣನು ಚೋಳ ಸಾಮ್ರಾಜ್ಯದ ಅನೇಕ ಭಾಗಗಳನ್ನು ತನ್ನ ಮಿತ್ರರಾಜರಿಗೆ ಹಂಚಿ, ಯೋಗ್ಯರಾದವರನ್ನು ಸಿಂಹಾಸನದಲ್ಲಿ ಪುನಃ ಪ್ರತಿಷ್ಠಾಪಿಸಿ ತನ್ನ ರಾಜಧಾನಿಗೆ ಹಿಂತಿರುಗಿದನು. ಹಿಂದೆಂದೂ ಸಂಭವಿಸದ ಭೀಕರ ಘಟನೆಯಿಂದಾಗಿ ಚೋಳರು ತತ್ತರಿಸಿಹೋದರು. ಚೋಳ ಸಾಮ್ರಾಜ್ಯ ಈ ಆಘಾತದಿಂದ ಚೇತರಿಸಿಕೊಳ್ಳಲು ಸುಮಾರು ಮೂರು ದಶಕಗಳೇ ಬೇಕಾಯಿತು.

**ರಾಷ್ಟ್ರಕೂಟ-ಚೋಳ ಸಂಘರ್ಷ-ಕಾರಣಗಳು** :-ರಾಷ್ಟ್ರಕೂಟ ಕೃಷ್ಣನು ಚೋಳ ಸಾಮ್ರಾಜ್ಯದ ಮೇಲೆ ದಂಡೆಯಾತ್ರೆ ನಡೆಸಲು ಕೇವಲ ಆತನ ಪೌರುಷ, ಶಕ್ತಿ, ಸಾಮರ್ಥ್ಯ, ರಾಜ್ಯಾಕಾಂಕ್ಷೆಗಳು ಮಾತ್ರವೇ ಕಾರಣವಾಗಿರಲಿಲ್ಲ. ಕೆಲವು ರಾಜಕೀಯ ಜವಾಬ್ದಾರಿಗಳೂ, ಮೈತ್ರಿಯ ದಾಕ್ಷಿಣ್ಯಗಳೂ, ವೈರಿಯ ರಾಜಕೀಯ ನಿಲುವುಗಳೂ ಸಹ ಕಾರಣವಾಗಿದ್ದುವು. ಈ ಮುಂಚೆ ಚೋಳರಾಜ ಪರಾಂತಕನು, ೨ನೇ ವಿಜಯಾದಿತ್ಯ ಪ್ರಭುಮೇರು ಮತ್ತು ಅವನ ಮಗ ೨ನೇ ವಿಕ್ರಮಾದಿತ್ಯನನ್ನು ರಾಜ್ಯಭ್ರಷ್ಟರನ್ನಾಗಿ ಮಾಡಿದ್ದನು. ಈ ರಾಜರು ಮಹಾಬಲಿ ಬಾಣ ವಂಶಕ್ಕೆ ಸೇರಿದವರು. ಅಸುರನೂ, ಶಿವನ ದ್ವಾರಪಾಲಕನೂ ಆದ ಮಹಾಬಲಿ ಈ ವಂಶದ ಮೂಲಪುರುಷನೆಂದು ಶಾಸನಗಳು ಹೇಳುತ್ತವೆ.[1] ನಂದಗಿರಿನಾಥ (ಕೋಲಾರ ಜಿಲ್ಲೆಯ ನಂದಿ)ರೆಂದೂ ಸಹ ತಮ್ಮನ್ನು ಇವರು ಕರೆದು ಕೊಂಡಿದ್ದಾರೆ.[2] ಇವರ ರಾಜ್ಯ ವಡುಗವಲಿ ೧೨,೦೦೦, ಅಥವಾ ಪೆರುಂಬಾಣಪ್ಪಾಡಿ.[3] ಈ ಭಾಗವು ಉತ್ತರ ಆರ್ಕಾಟ್ ಜಿಲ್ಲೆಯ ಉತ್ತರ ಭಾಗವಾಗತ್ತು.[4] ಈ ರಾಜ್ಯದ ರಾಜಧಾನಿ ಉತ್ತರ ಆರ್ಕಾಟ್ ಜಿಲ್ಲೆಯ ಗುಡಿಯಾಟಂ ತಾಲ್ಲೂಕಿನ ತಿರುವಲ್ಲಂ ಆಗಿತ್ತು.[5] ಇದರ ಮತ್ತೊಂದು ಹೆಸರು ವಾಣಪುರಂ. ಈ ಊರು ಪಾಲಾರ್‌ನ ಉಪನದಿಯಾದ ನೀವಾ ನದಿಯ ಪಶ್ಚಿಮ ದಂಡೆಯ ಮೇಲಿದೆ.

ಬಾಣರು ಮೊದಲಿಗೆ ಪಲ್ಲವರ ಮಾಂಡಳಿಕರಾಗಿದ್ದರು.[6] ಕ್ರಿ. ಶ. ೮೮೫ರಲ್ಲಿ ಪಲ್ಲವರಿಗೂ ಪಾಂಡ್ಯರಿಗೂ ನಡೆದ ಐತಿಹಾಸಿಕ ಶ್ರೀಪುರಾಂಬಿಯಂ ಕದನಾ ನಂತರ, ಪಲ್ಲವರ ಶಕ್ತಿ ಕುಂಠಿತವಾಗಿದ್ದಾಗ ಚೋಳರಾಜ ೧ನೇ ಆದಿತ್ಯನು ಪಲ್ಲವರನ್ನು ಸೋಲಿಸಿ ತೊಂಡೈಮಂಡಲವನ್ನು ಆಕ್ರಮಿಸಿದನು. ಪಲ್ಲವರ ಈ ಪತನದಿಂದಾಗಿ ಬಾಣರು ಸ್ವತಂತ್ರರಾದರು. ಬಾಣರನ್ನು ಸದೆ ಬಡಿಯಲು ೧ನೇ ಆದಿತ್ಯನು ಗಂಗರಾಜ ೨ನೇ ಪ್ರಥಿವೀಪತಿಯನ್ನು ಕಳುಹಿಸಿದನು.

ಈ ಪ್ರಥಿವೀಪತಿ ಯಾರೆಂದು ತಿಳಿಯುವುದು ಇಲ್ಲಿ ಸೂಕ್ತ. ತಲಕಾಡಿನ ಗಂಗದೊರೆ ಶ್ರೀ ಪುರುಷ. ಅವನ ಮಗ ೨ನೇ ಶಿವಮಾರ. ಈತನು ರಾಷ್ಟ್ರಕೂಟರ ಬಂಧಿಯಾಗಿಯೇ ತನ್ನ ಜೀವಿತದ ಬಹುಕಾಲ ಕಳೆದನು. ಈತನ ಮಗ

1. S. I. I., Vol., III, No. 44.
2. E. I. Vol, xi. p. 230.
3. ibid,
4. ibid, p. 231,
5. S. I. I. Vol. III, P. 89.
6. ibid, Mos. 42, 43 ; E. I, Vol. xi, PP. 224, 226-27.

ಮಾರಸಿಂಹನು ಯುವರಾಜನಾಗಿ ಗಂಗರಾಜ್ಯವನ್ನಾಳಿದನು. ಚಿಕ್ಕವಯಸ್ಸಿನಲ್ಲೇ ಈತನು ಮೃತನಾದನು. ಮಾರಸಿಂಹನ ಮಗ ೧ನೇ ಪ್ರಿಥಿವೀಪತಿ ಇನ್ನೂ ಚಿಕ್ಕ ಹುಡುಗನಾಗಿದ್ದುದರಿಂದ ಶಿವಮಾರನ ತಮ್ಮ ವಿಜಯಾದಿತ್ಯನು ರಾಜ್ಯವನ್ನಾಳುತ್ತಿದ್ದನು. ವಿಜಯಾದಿತ್ಯನ ನಂತರ ಆತನ ಮಗನಾದ ೧ನೇ ರಾಚಮಲ್ಲನು ಗಂಗ ರಾಜ್ಯಾಧಿಪತಿಯಾದನು. ಗಂಗ ಸಿಂಹಾಸನಕ್ಕೆ ನಿಜವಾದ ಹಕ್ಕುದಾರನಾದ ೧ನೇ ಪ್ರಿಥಿವೀಪತಿಯ ಹಕ್ಕನ್ನು ರಾಚಮಲ್ಲನು ತಳ್ಳಿಹಾಕಲು ಸಾಧ್ಯವಾಗಲಿಲ್ಲ. ಆದುದರಿಂದ ಗಂಗರಾಜ್ಯವನ್ನು ಎರಡು ಭಾಗ ಮಾಡಿ, ಕೋಲಾರ ಜಿಲ್ಲೆಯನ್ನೊಳಗೊಂಡ ಗಂಗರುಸಾಸಿರ ಪ್ರಾಂತ್ಯದ ಅಧಿಪತಿಯನ್ನಾಗಿ ಪ್ರಿಥಿವೀಪತಿಯನ್ನು ನಿಯಮಿಸಿದನು. ಪ್ರಿಥಿವೀಪತಿಗೆ ಗಂಗವಾಡಿಯ ಅಧಿಪತಿಯಾಗುವ ಮೋಹ ಇದ್ದೇ ಇತ್ತು. ಇದಕ್ಕಾಗಿ ಈತನು ತನ್ನ ನೆರೆಯವರಾದ ಬಾಣರು, ವೈಡುಂಬರು, ತನ್ಮೂಲಕ ಪಲ್ಲವರ ಮೈತ್ರಿಯನ್ನು ಸಂಪಾದಿಸಿ, ತನ್ನ ಜೀವಿತದ ಕೊನೆಯವರೆಗೂ ಅಲ್ಲಿಯೇ ಉಳಿದನು. ಕೊನೆಗೆ ಪಲ್ಲವರ ಮಿತ್ರನಾಗಿ ಶ್ರೀಪುರಾಂಬಿಯಂ ಕದನದಲ್ಲಿ ಕಾದು ಮಡಿದನು. ಈತನ ಮಗ ಮಾರಸಿಂಹ. ಅವನ ಮಗನೇ ೨ನೇ ಪ್ರಿಥಿವೀಪತಿ. ಪಲ್ಲವರ ಪತನಾನಂತರ ಈತನು ಚೋಳರ ಮೈತ್ರಿಯನ್ನು ಸಂಪಾದಿಸಿದನು. ಅಲ್ಲದೆ ಆದಿತ್ಯನ ಮಗನಾದ ಪರಾಂತಕನಿಗೆ ಬಾಣರನ್ನು ಸದೆಬಡಿಯಲು ಈತನು ಸಹಾಯ ಮಾಡಿದನು. ವಲ್ಲಾಳ ಎಂಬಲ್ಲಿ ನಡೆದ ಪ್ರಸಿದ್ಧವಾದ ಈ ಕಾಳಗ ಕ್ರಿ. ಶ. ೯೧೨–೧೩ ರಲ್ಲಿ ನಡೆಯಿತೆಂದು ಒಂದು ಅಭಿಪ್ರಾಯ.[7] ಈ ಯುದ್ಧದಲ್ಲಿ ಬಾಣರಿಗೆ ರಾಷ್ಟ್ರಕೂಟ ೨ನೇ ಕೃಷ್ಣನ ಸಹಾಯವಿತ್ತೆಂದೂ, ಮತ್ತು ಇದೇ ಯುದ್ಧದಲ್ಲಿ ಪರಾಂತಕನು ರಾಷ್ಟ್ರಕೂಟರನ್ನು ಸೋಲಿಸಿ 'ವೀರ ಚೋಳ'ನೆಂಬ ಬಿರುದನ್ನು ಪಡೆದನೆಂದೂ ಹೇಳಲಾಗಿದೆ.[8] ಪರಾಂತಕನು ಸೋಲಿಸಿದನೆಂದೇ ಶಾಸನದಲ್ಲಿ ಹೇಳಲಾದ 'ಕೃಷ್ಣರಾಜ'ನು ರಾಷ್ಟ್ರಕೂಟ ೨ನೇ ಕೃಷ್ಣನೆಂದೂ (೮೭೮–೯೧೨) ಒಂದು ಅಭಿಪ್ರಾಯ.[9] ಈ ಯುದ್ಧದಲ್ಲಿ ಜಯ ಚೋಳರ ಪರವಾಯಿತು. ಪರಾಂತಕನು ಬಾಣರನ್ನೂ ಮತ್ತು ಅವರ ನೆರೆಯವರಾದ ವೈಂದುಂಬರನ್ನು ಸೋಲಿಸಿ ಅವರ ರಾಜ್ಯವನ್ನು ೨ನೇ ಪ್ರಿಥಿವೀ ಪತಿಗೆ ಕೊಟ್ಟನು[10] ಇದರಿಂದಾಗಿ ಪ್ರಿಥಿವೀಪತಿಯು 'ಸೇಂಬಿಯನ್ ಮಹಾಬಲಿ ವಾಣರಾಯನ್' ('ಬಾಣ ರಾಜ್ಯಾಧಿಪತಿ') ಎಂಬ ಬಿರುವನ್ನು ಪಡೆದನು. ಶಾಸನಗಳು ಈತನನ್ನು

---

7. E. I. Vol, vxvi, pp 112-14.
8. E. I. Vol, xviii pp 52-53 ; ibid, Vol, IV, Pp.223-25
9. ibid, Vol. xxvi, P, 114.
10. ibid Vol., IV, PP. 223-25.

ಈ ಹೆಸರಿನಿಂದಲೇ ಸಂಬೋಧಿಸುತ್ತವೆ. ಈತನ ಶಾಸನಗಳು ಚಿತ್ತೂರು, ಉತ್ತರ ಆರ್ಕಾಟ್ ಜಿಲ್ಲೆಗಳಲ್ಲಿ ದೊರೆತಿವೆ.[11] ಪರಾಂತಕನಿಂದ ರಾಜ್ಯಭ್ರಷ್ಟರಾದ ಬಾಣರು, ವೈದುಂಬರು ಸಂಪೂರ್ಣವಾಗಿ ರಾಷ್ಟ್ರಕೂಟರ ಆಸರೆ ಸೇರಬೇಕಾಯಿತು. ಉದಯೇಂದಿರಂ ತಾಮ್ರ ಶಾಸನದಲ್ಲಿ[12] ಬಾಣರಾಜ ವಿಕ್ರಮಾದಿತ್ಯನನ್ನು 'ಕೃಷ್ಣ ರಾಜಪ್ರಿಯ' ಎಂದು ಸಂಬೋಧಿಸಲಾಗಿದೆ.

ರಾಷ್ಟ್ರಕೂಟ-ಚೋಳರ ವೈರಕ್ಕೆ ಮತ್ತೊಂದು ಕಾರಣವೂ ಇತ್ತು. ೧ನೇಪರಾಂತ ಕನ ರಾಣಿಯೊಬ್ಬಳಿದ್ದಳು. ಶಾಸನದಲ್ಲಿ 'ವಲ್ಲವರಾಯನ' ಮಗಳೆಂದೂ, ಚೋಳ ಪ್ಪೆರು ಮಾನಡಿಗಳ ಪಟ್ಟದರಸಿಯೆಂದೂ ಶಾಸನದಲ್ಲಿ ಹೇಳಿದೆ.[13] ಇವರ ಮಗನೇ ಕನ್ನರ ದೇವ. ಈತನ ಈ ಹೆಸರಿನ ಆಧಾರದ ಮೇಲೆ, ಈತನ ತಾಯಿಯು ರಾಷ್ಟ್ರಕೂಟ ೨ನೇ ಕೃಷ್ಣನ ಮಗಳಿರಬಹುದೆಂಬ ಊಹೆ ಇದೆ. ೧ನೇ ಆದಿತ್ಯನ ಮರಣಾನಂತರ ಅವನ ಹಿರಿಯ ರಾಣಿಯ ಮಗನಾದ ಕನ್ನರದೇವನು ಪಟ್ಟಕ್ಕೆ ಬರಬೇಕಾಗಿತ್ತು. ಆದರೆ ಮತ್ತೊಬ್ಬ ರಾಣಿಯ ಮಗನಾದ ಪರಾಂತಕನು ಚೋಳ ಸಿಂಹಾಸನವನ್ನೇರಿ ದನು. ಪ್ರಾಯಶಃ ಈ ಕಾರಣದಿಂದಾಗಿ ರಾಷ್ಟ್ರಕೂಟ ೨ನೇ ಕೃಷ್ಣನು ಚೋಳ ಪರಾಂತಕನ ಮೇಲೆ ಕ್ರಿ. ಶ. ೯೧೨ರಲ್ಲಿ ಯುದ್ಧ ಮಾಡಿರಬಹುದೆಂದು ಹೇಳ ಲಾಗಿದೆ.[15]

ರಾಷ್ಟ್ರಕೂಟ-ಚೋಳ ಸಂಘರ್ಷಕ್ಕೆ ಪ್ರೇರಣೆ ನೀಡಿದ ಮತ್ತೊಂದು ಪ್ರಮುಖ ಕಾರಣವೆಂದರೆ ರಾಜ್ಯಭ್ರಷ್ಟನಾದ ೪ನೇ ಗೋವಿಂದನಿಗೆ ಚೋಳರು ಆಸರೆ-ನೀಡಿದ್ದು ಮತ್ತು ಆತನನ್ನು ಪುನಃ ರಾಷ್ಟ್ರಕೂಟ ಸಿಂಹಾಸನದ ಮೇಲೆ ಪ್ರತಿಷ್ಠಾಪಿಸಲು ಪ್ರಯತ್ನಿಸಿದ್ದು. ಕ್ರಿ. ಶ. ೯೩೮ ರ ಎರಡು ತಕ್ಕೋಳಂ ಶಾಸನಗಳ.[16] ಚೋಳ

---

11. A.R.I.E NO. 170, 172 and 201 of 1932 : Nos. 327, 332 and 335 of 1912 ;
    No. 146 of 1943 ; No. 449 of 1905 ; No. 165 of 1844; S. I. I.--Vol XVII, Nos 286, 289 and 290 ; Ibid, Vol, VIII,
    No. 524 ;
    E.I., Vol. IV, p. 178.
12. E. I. Vol, III, p. 75
13. S. I.I, Vol XIII, No 323
14. E. I. Vol, XXVI, pp 233-34
15. Ibid.
16. Ibid, p. 230.

ಪ್ಪೆರುಮಾನಡಿಗಳ (ಪರಾಂತಕ) ಮಗಳೂ, ಗೋವಿಂದ ವಲ್ಲವರಾಯರ ಪತ್ನಿಯೂ ಆದ ವೀರ ಮಾದೇವಿಯರು ಮಹಾದೇವ ದೇವರಿಗೆ ಕೆಲವು ದಾನಗಳನ್ನು ಮಾಡಿದರೆಂದು ಹೇಳುತ್ತವೆ. ಗೋವಿಂದ ವಲ್ಲವರಾಯರು ಎಂದರೆ ನಿಸ್ಸಂದೇಹವಾಗಿಯೂ ರಾಷ್ಟ್ರಕೂಟ ದೊರೆ ೪ನೇ ಗೋವಿಂದ ಎಂದು ಹೇಳಬಹುದು. (ಕ್ರಿ. ಶ. ೯೩೦. ೩೫). ಆತನು ಚೋಳ ರಾಜಕುಮಾರಿಯನ್ನು ವಿವಾಹ ಮಾಡಿಕೊಂಡಿದ್ದನೆಂದು ಮೇಲೆ ಹೇಳಿದ ಶಾಸನಗಳಿಂದ ವಿದಿತವಾಗುತ್ತದೆ. ಗೋವಿಂದನು ರಾಷ್ಟ್ರಕೂಟ ದೊರೆಗಳಲ್ಲೆಲ್ಲಾ ಅತ್ಯಂತ ಲಾಲಸಿಯೂ, ಕುಪ್ರಸಿದ್ಧನೂ ಆದ ದೊರೆ. ಈತನು 'ಯಾವಾಗಲೂ ಪಾನಮತ್ತನಾಗಿ ಸ್ತ್ರೀಸಂಗದಲ್ಲಿರುತ್ತಿದ್ದನೆಂದು' ಹೇಳಲಾಗಿದೆ.[17] ಈ ದುಶ್ಚಟಗಳಿಂದಾಗಿ ಅಮೋಘವರ್ಷನ ಮಗನಾದ ೩ನೇ ಕೃಷ್ಣನು ಗೋವಿಂದನನ್ನು ಸಿಂಹಾಸನದಿಂದ ಇಳಿಸಿ, ತನ್ನ ತಂದೆ ೩ನೇ ಅಮೋಘವರ್ಷನನ್ನು ಸಿಂಹಾಸನದ ಮೇಲೆ ಕೂರಿಸಿದನು. ರಾಜ್ಯಭ್ರಷ್ಟನಾದ ಗೋವಿಂದನು ತನ್ನ ಮಾವನಾದ ೧ನೇ ಪರಾಂತಕನ ಮೊರೆ ಹೊಕ್ಕಿರಬೇಕು.[18] ಹಾಗೂ ಪರಾಂತಕನ ಸಹಾಯದಿಂದ ಅಮೋಘವರ್ಷನ ಮರಣಾನಂತರ ರಾಷ್ಟ್ರಕೂಟ ಸಿಂಹಾಸನವನ್ನು ಮರಳಿ ಪಡೆಯಲು ಪ್ರಯತ್ನಿಸಿರಬೇಕು. ಸೂಡಿ ತಾಮ್ರ ಶಾಸನದಲ್ಲಿ[19] ಮತ್ತು ಕೂಡಲೂರು ತಾಮ್ರ ಶಾಸನಗಳಲ್ಲಿ[20] "ಅಮೋಘವರ್ಷನು ದೇವಲೋಕದ ಇಂದ್ರನ ಸಂಪತ್ತನ್ನು ಸೂರೆ ಮಾಡಲು ಹೋಗಿರುವಾಗ (ಸ್ವರ್ಗಸ್ಥನಾದಾಗ) ಬೂತುಗನು (ಗಂಗಬೂತುಗ) ಲಲ್ಲೆಯ ಎಂಬುವನಿಂದ, ಆನೆಗಳು, ಕುದುರೆಗಳು, ಶ್ವೇತಛತ್ರವನ್ನು ಗೆದ್ದುಕೊಂಡು ಅವುಗಳನ್ನು (ರಾಷ್ಟ್ರಕೂಟ ಮೂರನೆಯ) ಕೃಷ್ಣನಿಗೆ ಒಪ್ಪಿಸಿದ"ನೆಂದು ಹೇಳಿದೆ.

ಕ್ರಿ. ಶ. ೯೪೦ರಲ್ಲಿ ಅಮೋಘವರ್ಷನು ಮರಣ ಹೊಂದಿದನು. ಆ ಸಮಯದಲ್ಲಿ ಆತನ ಮಗನಾದ ರಾಷ್ಟ್ರಕೂಟ ಕೃಷ್ಣನು ಉತ್ತರ ಭಾರತದ ದಂಡೆಯಾತ್ರೆಯಲ್ಲಿ ತೊಡಗಿದ್ದನು. ರಾಷ್ಟ್ರಕೂಟ ಸಾಮ್ರಾಜ್ಯದಲ್ಲಾದ ಈ ಗೊಂದಲದ ಸನ್ನಿವೇಶದ ಸದುಪಯೋಗ ಪಡೆಯಲು ರಾಜ್ಯಭ್ರಷ್ಟನಾದ ಲಲ್ಲೆಯನು (ಗೋವಿಂದನು) ಚೋಳ ಪರಾಂತಕನ ಸಹಾಯದಿಂದ ಸಿಂಹಾಸನವನ್ನು ಮರಳಿ ಪಡೆಯಲು ಪ್ರಯತ್ನಿಸಿರಬಹುದೆಂದು ಹೇಳಲಾಗಿದೆ.[21] ಈ ಪ್ರಯತ್ನದಲ್ಲಿ ಗೋವಿಂದನು ರಾಷ್ಟ್ರಕೂಟ

---

17. Altekar, A S. The Rashtrakutas and Theire times, Poona, 1967, P. 107
18. E.I. Vol III, P 183
19. Ibid.
20. M. A, R., 1921, pp. 18-29
21. E. I., Vol XXVI, p. 232.

ಸಿಂಹಾಸನದ ಆಸೆಯನ್ನು ಸಂಪೂರ್ಣವಾಗಿ ಕಳೆದುಕೊಳ್ಳಬೇಕಾಯಿತು. ಲಲ್ಲೆಯನ ಹಲ್ಲೆಯ ಸಮಯದಲ್ಲಿ ಗಂಗಬೂತುಗನು ತೋರಿದ ಶೌರ್ಯ, ಸಮಯಪ್ರಜ್ಞೆ ಮತ್ತು ಸ್ವಾಮಿ ನಿಷ್ಠೆ ರಾಷ್ಟ್ರಕೂಟ ಕೃಷ್ಣನಿಗೆ ಬಹಳ ಮೆಚ್ಚುಗೆಯಾಯಿತು. ಇದು ರಾಷ್ಟ್ರಕೂಟ–ಗಂಗರ ಮೈತ್ರಿಯಲ್ಲಿ ಒಂದು ತಿರುವಾಯಿತು. ಇದುವರೆಗೂ ಕೇವಲ ವೈವಾಹಿಕ ಮತ್ತು ರಾಜಕೀಯ ಬಾಂಧವ್ಯವನ್ನು ಹೊಂದಿದ್ದ ಈ ಸಂಬಂಧ ಅಚಲ, ಗಾಢ ಮೈತ್ರಿಯಿಂದ ಮತ್ತಷ್ಟು ನಿಕಟವೂ, ಪ್ರಬಲವೂ ಆಯಿತು.

ಈ ಘಟನೆಗಳಿಗೆ ಸಮಾನಾಂತರವಾಗಿ ರಾಷ್ಟ್ರಕೂಟ-ಗಂಗ ಸಾಮ್ರಾಜ್ಯದಲ್ಲಾದ ರಾಜಕೀಯ ಬದಲಾವಣೆಗಳನ್ನು ಇಲ್ಲಿ ಗಮನಿಸುವುದು ಸೂಕ್ತ. ರಾಷ್ಟ್ರಕೂಟ ೩ನೇ ಕೃಷ್ಣನು, ೪ನೇ ಗೋವಿಂದನನ್ನು ಸಿಂಹಾಸನದಿಂದ ತಳ್ಳಿ, ತನ್ನ ತಂದೆ ೩ನೇ ಅಮೋಘವರ್ಷನನ್ನು ಸಿಂಹಾಸನಕ್ಕೆ ತಂದನು. ಆ ಕಾಲದಲ್ಲಿ ರಾಷ್ಟ್ರಕೂಟ ಶಕ್ತಿ ಕುಗ್ಗಿತ್ತು. ಸಾಮಂತ ರಾಜರು ಸ್ವತಂತ್ರರಾಗಿದ್ದರು. ಯುವರಾಜನಾದ ಮೂರನೆಯ ಕೃಷ್ಣನ ಮೊದಲ ಪ್ರಯತ್ನವೆಂದರೆ ಸಾಮಂತರನ್ನು ಸದೆಬಡಿದು ಅಧೀನರನ್ನಾಗಿ ಮಾಡಿಕೊಂಡದ್ದು ಮತ್ತು ರಾಜ್ಯವಿಸ್ತರಣೆ ಮಾಡಿದ್ದು. ಗಂಗ ರಾಜ್ಯದಲ್ಲಿ ರಾಜಕೀಯ ಬಿಕ್ಕಟ್ಟಿನ ಪರಿಸ್ಥಿತಿ ತಲೆದೋರಿತ್ತು. ಗಂಗರಾಜ ನೀತಿಮಾರ್ಗ್ಗ ಎರೆಯಪ್ಪನು ಕ್ರಿ. ಶ. ೯೩೮ರಲ್ಲಿ ಮರಣ ಹೊಂದಿದನು. ಆ ಸಮಯದಲ್ಲೇ ವೆಂಗಿ ಚಾಲುಕ್ಯ ದೊರೆ ೨ನೇ ಬೀರ ಮಹೇಂದ್ರನು (೨ನೇ ಭೀಮ) ಬೆಂಗಳೂರಿನ ಬೇಗೂರಿನವರೆಗೂ ಧಾಳಿ ಮಾಡಿ ಹಿಂತಿರುಗಿ ಹೋಗಿದ್ದ. ಆತನನ್ನು ತುಂಬೇಪಾಡಿಯಲ್ಲಿ ಎದುರಿಸಿ, ಕಾಡು ನೊಳಂಬ ಅಯ್ಯಪ್ಪದೇವನು ಮರಣ ಹೊಂದಿದ್ದ.[22] ಅಯ್ಯಪ್ಪದೇವನ ನಂತರ ಆತನ ಮಗ ಬೀರ ನೊಳಂಬ ಅಣ್ಣಿಗ ಸಿಂಹಾಸನವನ್ನೇರಿದ್ದ. ಹಾಗಯೇ ಗಂಗ ನೀತಿಮಾರ್ಗ್ಗ ಎರೆಯಪ್ಪನ ಮಗ ೩ನೇ ರಾಚಮಲ್ಲನೂ ಸಿಂಹಾಸನವನ್ನೇರಿದ್ದ. ಇದರಿಂದ ರಾಚಮಲ್ಲನ ತಮ್ಮನಾದ ಎರಡನೇ ಬೂತುಗನು ಅತೃಪ್ತನಾಗಿದ್ದ. ಅಣ್ಣ–ತಮ್ಮಂದಿರ ನಡುವಣ ವೈಮನಸ್ಯ ದಿಂದಾಗಿ ಗಂಗ ರಾಜ್ಯದಲ್ಲಿ ಅಶಾಂತಿ ಜಾಸ್ತಿಯಾಗಿತ್ತು. ಬೀರನೊಳಂಬ ಅಣ್ಣಿಗನು ಈ ಸಮಯದ ಸದುಪಯೋಗ ಪಡಿಸಿಕೊಂಡು ಗಂಗವಾಡಿಯ ಮೇಲೆ ಆಕ್ರಮಣ ನಡೆಸಿದನು. ರಾಚಮಲ್ಲನು ಈ ಪ್ರಬಲ ಧಾಳಿಯನ್ನು ಯಸಸ್ವಿಯಾಗಿ ಎದುರಿಸಿ ಗೆದ್ದರೂ ರಾಜ್ಯದಲ್ಲಿ ಪರಿಸ್ಥಿತಿ ಇನ್ನೂ ಶಾಂತವಾಗಿರಲಿಲ್ಲ.

ಗಂಗ ಸಿಂಹಾಸನವನ್ನು ಪಡೆಯಲು ಬೂತುಗನು ರಾಷ್ಟ್ರಕೂಟರ ೩ನೇ ಕೃಷ್ಣನ

---

22. Krishna Murthy M.S., *The Nolambas*, Mysore 1980 P. 102 ff

ತಂಗಿಯೂ ಅಮೋಘವರ್ಷನ ಮಗಳೂ ಆದ ರೇವಕನಿಮ್ಮಡಿಯನ್ನು ಬೂತುಗನು ವಿವಾಹವಾದನು. ಇದರಿಂದ ಬೂತುಗನಿಗೆ ಗಂಗ ಸಿಂಹಾಸನವನ್ನು ದೊರಕಿಸಿ ಕೊಡಲು ರಾಷ್ಟ್ರಕೂಟ ಕೃಷ್ಣನು ಕಟಿಬದ್ಧನಾಗಿ ನಿಂತನು. ಈ ಪ್ರಯತ್ನದಲ್ಲಿ ಕೃಷ್ಣನು ಮೊದಲಿಗೆ ನೊಳಂಬವಾಡಿಯ ಮೇಲೆ ಬಂದನು. ಬೀರನೊಳಂಬ ಅಣ್ಣಿಗನು ಯಾವುದೇ ರೀತಿಯಲ್ಲಿ ಕೃಷ್ಣನಿಗೆ ಪ್ರಬಲ ಪ್ರತಿಸ್ಪರ್ಧಿಯಾಗಿರಲಿಲ್ಲ. ಕೃಷ್ಣನು ಅಣ್ಣಿಗನನ್ನು ಸುಲಭವಾಗಿ ಸೋಲಿಸಿದನು. ದೇವಲಿ ತಾಮ್ರಶಾಸನದಲ್ಲಿ[23] ಕೃಷ್ಣನು "ಅಣ್ಣಿಗನನ್ನು ಬಹಳ ದುಃಸ್ಥಿತಿಗೆ ತಂದನೆಂದು" ಹೇಳಿದೆ.

ನೊಳಂಬರನ್ನು ಸೋಲಿಸಿದ ಬಳಿಕ ಕೃಷ್ಣನು ತನ್ನ ಗಮನವನ್ನು ಗಂಗವಾಡಿಯತ್ತ ಹರಿಸಿದನು. ಕೃಷ್ಣನಿಗೆ ಗಂಗ ರಾಚಮಲ್ಲನನ್ನು ಸೋಲಿಸುವುದಕ್ಕೆ ಎರಡು ಸ್ಪಷ್ಟ ಉದ್ದೇಶಗಳಿದ್ದುವು. ಗಂಗ ರಾಚಮಲ್ಲನು ನೊಳಂಬರನ್ನು ಸೋಲಿಸಿ ಪ್ರಬಲನಾಗುತ್ತಿದ್ದನು. ಅದನ್ನು ತಡೆಗಟ್ಟುವುದು ಅವನ ಮೊದಲ ಉದ್ದೇಶವಾಗಿತ್ತು. ಎರಡನೆಯದಾಗಿ ಬೂತುಗನಿಗೆ ಗಂಗ ರಾಜ್ಯವನ್ನು ಕೊಡಿಸುವ ಉದ್ದೇಶವೂ ಅಷ್ಟೇ ಸ್ಪಷ್ಟವಾಗಿತ್ತು. ಕೃಷ್ಣನು ಗಂಗ ರಾಚಮಲ್ಲನನ್ನು ಸುಲಭವಾಗಿ ಸೋಲಿಸಿದನು. ಈ ಯುದ್ಧದಲ್ಲಿ ರಾಚಮಲ್ಲನು ಹತನಾದನು.[24] ರಾಚಮಲ್ಲನ ಮರಣ ಯಾವಾಗ ಯಾವ ರೀತಿಯಲ್ಲಿ ಸಂಭವಿಸಿತು ಎಂಬ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದ್ದರೂ ಬೂತುಗನು ಕ್ರಿ. ಶ. ೯೩೫-೩೬ರಲ್ಲಿ ಪಟ್ಟಕ್ಕೆ ಬಂದನೆಂದು ತೀರ್ಮಾನಿಸಬಹುದು. ಕೃಷ್ಣನು ಬೂತುಗನನ್ನು ಗಂಗ ಸಿಂಹಾಸನದ ಮೇಲೆ ಪ್ರತಿಷ್ಠಾಪಿಸಿ ತನ್ನ ರಾಜಧಾನಿಗೆ ಹಿಂತಿರುಗಿದನು.

ತದನಂತರ ರಾಷ್ಟ್ರಕೂಟ ಕೃಷ್ಣನು ಉತ್ತರ ಭಾರತದ ದಂಡಯಾತ್ರೆಯಲ್ಲಿ ತೊಡಗಿರುವಾಗ ರಾಷ್ಟ್ರಕೂಟ ಸಾಮ್ರಾಜ್ಯದ ಮೇಲೆ ಲಲ್ಲೆಯನು (ಗೋವಿಂದ) ಚೋಳ ಪರಾಂತಕನ ಸಹಾಯದಿಂದ ದಂಡೆತ್ತಿ ಬಂದನೆಂದು ಮೇಲೆ ಹೇಳಿದೆ. ಅಂತಹ ಕ್ಲಿಷ್ಟ ಪರಿಸ್ಥಿತಿಯಲ್ಲಿ ಗಂಗ ಬೂತುಗನು ಸ್ವಪ್ರೇರಣೆಯಿಂದ ಮುನ್ನುಗ್ಗಿ ಲಲ್ಲೆಯನನ್ನು ಸೋಲಿಸಿ, ಆಗಲಿದ್ದ ಅನಾಹುತವನ್ನು ತಪ್ಪಿಸಿದನು. ಬೂತುಗನ ಈ ಸಾಹಸ, ಸಮಯ ಪ್ರಜ್ಞೆಯನ್ನು ಕೃಷ್ಣನು ಬಹಳವಾಗಿ ಮೆಚ್ಚಿದನು, ಬೂತುಗನ ಈ ಸ್ವಾಮಿನಿಷ್ಠೆಗೆ ಬಹಳ ಆಭಾರಿಯಾದನು.

ಲಲ್ಲೆಯನ ಈ ಧಾಳಿಯಿಂದಾಗಿ ರಾಷ್ಟ್ರಕೂಟರು ಹಾಗೂ ಗಂಗರು ಎಚ್ಚೆತ್ತರು.

---

23. E. I., Vol V, PP. 188-97
24. Ibid, Vol. II, PP. 167-69 ; Ibid Vol V, P. 151 ; Ibid ; P. 191 ; Ibid Vol. IV P. 289

ದಕ್ಷಿಣದಲ್ಲಿ ಪ್ರಬಲನಾಗಿದ್ದ ಚೋಳ ಪರಾಂತಕನನ್ನು ಹತ್ತಿಕ್ಕಲು ಅವರು ಪಣ ತೊಟ್ಟರು. ಗಂಗರ ಸಾಮಂತನಾಗಿದ್ದ ಬೀರನೊಳಂಬ ಅಣ್ಣಿಗ, ಗಂಗರಿಂದ ಮತ್ತು ರಾಷ್ಟ್ರಕೂಟರಿಂದ ಸೋಲನ್ನನುಭವಿಸಿ ಅವಮಾನಿತನೂ, ಅತೃಪ್ತನೂ, ಆಗಿದ್ದ. ಗಂಗವಾಡಿಯನ್ನು ಆಕ್ರಮಿಸುವ ಪ್ರಯತ್ನದಲ್ಲಿ ವಿಫಲನಾಗಿದ್ದ. ಇಂತಹ ಅತೃಪ್ತ ಮಿತ್ರನನ್ನು ನಂಬುವುದು ಗಂಗರಿಗೆ ಸರಿತೋರಲಿಲ್ಲ. ಆದ್ದರಿಂದ ನೊಳಂಬ ಅಣ್ಣಿಗನ ತಮ್ಮನೂ, ಅಯ್ಯಪ್ಪದೇವನ ಮಗನೂ ಆಗಿದ್ದ ಇರಿವ ನೊಳಂಬ ದಿಲೀಪನನ್ನು ನೊಳಂಬವಾಡಿಯ ಅಧಿಪತಿಯನ್ನಾಗಿ ಮಾಡಿದರು.

ಬೀರನೊಳಂಬ ಅಣ್ಣಿಗನ ಪ್ರಾಪ್ತ ವಯಸ್ಕನಾದ ಇರುಳ ಚೋರನೆಂಬ ಮಗ ಕ್ರಿ. ಶ. ೯೪೧ರಲ್ಲೇ ಯುವರಾಜನಾಗಿ ರಾಜ್ಯವಾಳುತ್ತಿದ್ದ. ಅಣ್ಣಿಗನ ರಾಜ್ಯಭಾರದ ಅಂತ್ಯ ಹೇಗೆ ಆಯಿತು ಮತ್ತು ಅವನ ಮಗ ಇರುಳಚೋರನ ಸ್ಥಿತಿ ಏನಾಯಿತು ಎಂಬ ವಿಚಾರ ತಿಳಿಯದಾದರೂ, ರಾಜ್ಯ ಇರುಳಚೋರನಿಗೆ ಬರುವ ಬದಲು, ಅಣ್ಣಿಗನ ತಮ್ಮನಾದ ಇರಿವ ನೊಳಂಬ ದಿಲೀಪನಿಗೆ ಹೋದುದನ್ನು ಪರಿಶೀಲಿಸಿದಾಗ ಪ್ರಾಯಶಃ ಈ ಬದಲಾವಣೆಯಲ್ಲಿ ರಾಷ್ಟ್ರಕೂಟ–ಗಂಗರ ಕೈವಾಡವಿತ್ತೆಂದು ಊಹಿಸ ಬಹುದು. ಇದಕ್ಕೆ ಆಧಾರವಾಗಿ ಕೃಷ್ಣನ ಕರಾಡ್ ತಾಮುಶಾಸನವು[25] "ಚತುರ ರಾಜಕಾರಿಣಿಯಾದ ಕೃಷ್ಣನು ತಾನು ಸಾಮ್ರಾಟನಾಗಲು, ತನ್ನ ಅನೇಕ ಸಾಮಂತ ರಾಜರನ್ನು ಕೆಳಗಿಳಿಸಿ, ಅವರ ಬದಲಿಗೆ ಯೋಗ್ಯರಾದ ಬೇರೆಯವರನ್ನು ನೇಮಿಸಿದ ನೆಂದೂ, ಮಿತ್ರಭೇದದ ಮೂಲಕ ಕೆಲವರನ್ನು ಅಗಲಿಸಿದನೆಂದೂ ಮತ್ತೆ ಕೆಲ ವರನ್ನು ಒಂದುಗೂಡಿಸಿದನೆಂದೂ, ಹೀಗೆ ಮಾಡುವುದರ ಮೂಲಕ ತನ್ನ ಸಾಮಂತರನ್ನು ಮೇಲಿನ ಹಾಗೂ ಕೆಳಗಿನ ಮಟ್ಟದಲ್ಲಿ ಇರಿಸಿದನೆಂದೂ" ಹೇಳು ತ್ತದೆ.

ಇರಿವ ನೊಳಂಬ ದಿಲೀಪನು ಕೃಷ್ಣನ ಮಿತ್ರನಾಗಿ ಚೋಳರ ವಿರುದ್ಧ ಯುದ್ಧ ದಲ್ಲಿ ಪಾಲ್ಗೊಂಡನು.[26] ತದನಂತರ ತನ್ನ ಜೀವಿತದ ಕೊನೆಯವರೆಗೂ ರಾಷ್ಟ್ರಕೂಟ ಹಾಗೂ ಗಂಗರೊಂದಿಗೆ ಸ್ನೇಹದಿಂದಿದ್ದನು. ನೊಳಂಬರೊಂದಿಗೆ ಬಾಣರೂ, ವೈದುಂಬರೂ ಸಹ ರಾಷ್ಟ್ರಕೂಟರ ಪಕ್ಷ ವಹಿಸಿದರು. ಬಾಣರಾಜ ವಿಕ್ರಮಾದಿತ್ಯನು ಕೃಷ್ಣನ ಆಪ್ತಮಿತ್ರನಾಗಿದ್ದನೆಂದು ಮೇಲೆ ಹೇಳಿದೆ. ಹೀಗೆ ರಾಷ್ಟ್ರಕೂಟ ಕೃಷ್ಣನು ತನ್ನ ಮಿತ್ರರಾದ ಗಂಗರು, ನೊಳಂಬರು, ಬಾಣರು, ವೈದುಂಬರು, ಸಾಂತಾರರು ಮುಂತಾದ ರಾಜವಂಶಗಳ ಸಹಾಯದೊಂದಿಗೆ ಚೋಳನಾಡಿನ ಮೇಲೆ ದಂಡೆತ್ತಿ ಹೋಗಲು ಸನ್ನದ್ಧನಾದನು.

---

25. Ibid, Vol IV, P. 278ff
26. E. C., Vol XII, Si 35 ; S. I. I, Vol IX, Pt–I, No 25

ಚತುರ ರಾಜಕೀಯ ಪಟುವಾದ ಪರಾಂತಕನಿಗೆ ರಾಷ್ಟ್ರಕೂಟರಿಂದ ತನಗೆ ಎಂದೆಂದಿಗೂ ತೊಂದರೆ ಇದ್ದೇ ಇದೆ ಎನಿಸಿತ್ತು. ಆದಕ್ಕಾಗಿ ಆತನು ಮುಂಜಾಗ್ರತಾ ಕ್ರಮವಾಗಿ, ಸಾಕಷ್ಟು ಮುಂಚೆಯೇ (ಕ್ರಿ. ಶ. ೯೩೫-೯೬) ತನ್ನ ರಾಜ್ಯದ ಉತ್ತರ ಭಾಗವಾದ ತೊಂಡೈಮಂಡಲದ ಅಧಿಪತಿಯನ್ನಾಗಿ ತನ್ನ ಪುತ್ರ ರಾಜಾದಿತ್ಯನನ್ನು ನಿಯಮಿಸಿದ್ದನು.[27] ಪರಾಂತಕನ ಇನ್ನೊಬ್ಬ ಮಗನಾದ ಅರಿಂಜಯನೂ ಸಹ ತನ್ನ ಅಣ್ಣ ರಾಜಾದಿತ್ಯನಿಗೆ ಯುದ್ಧಕ್ಕೆ ಸಹಾಯಕನಾಗಿ ಆತನೊಡನಿದ್ದನು.[28]

ಎರಡೂ ರಾಜಕೀಯ ಶಕ್ತಿಗಳು ನಿರೀಕ್ಷಿಸುತ್ತಿದ್ದ ಯುದ್ಧ ಕೊನೆಗೂ ಪ್ರಾರಂಭ ವಾಯಿತು. ರಾಷ್ಟ್ರಕೂಟರೇ ಚೋಳ ರಾಜ್ಯದ ಮೇಲೆ ಧಾಳಿ ಮಾಡಿದರು. ಚೋಳರು ಮೊದಲಿನಿಂದಲೂ ರಕ್ಷಣಾತ್ಮಕವಾಗಿಯೇ ಉಳಿದರು. ಭೀಕರವಾದ ಕಾಳಗ ತಮಿಳುನಾಡಿನ ಅರಕೋಣಂ ಬಳಿಯಿರುವ ತಕ್ಕೋಳಂ ಎಂಬಲ್ಲಿ ಕ್ರಿ. ಶ. ೯೪೯ರಲ್ಲಿ ನಡೆಯಿತು.[29] ಈ ಕಾಳಗದಲ್ಲಿ ಚತುರಂಗ ಬಲದ ಉಪಯೋಗವಾದರೂ ಬಿಲ್ಲುಗಾರರ ಪ್ರಾಬಲ್ಯದಿಂದಾಗಿ ವಿಜಯಲಕ್ಷ್ಮಿ ರಾಷ್ಟ್ರಕೂಟರಿಗೆ ಒಲಿದಳು. ಗಜಾ ರೂಢನಾಗಿ ಯುದ್ಧ ಮಾಡುತ್ತಿದ್ದ ರಾಜಾದಿತ್ಯನು ಹತನಾದನು. ಈತನ ಹತ್ಯೆಯ ಬಗ್ಗೆ ಶಾಸನಗಳಲ್ಲಿ ವಿಭಿನ್ನವಾದ ಹೇಳಿಕೆ ಇದೆ. ದೊಡ್ಡ ಲೀಡನ್ ತಾಮ್ರ ಶಾಸನದಲ್ಲಿ[30] "ರಾಜಾದಿತ್ಯನು ತನ್ನ ಅಂಬಾರಿಯ ಮೇಲೆ ಕುಳಿತು ಕೃಷ್ಣರಾಜ ನೊಂದಿಗೆ ಯುದ್ಧ ಮಾಡುತ್ತಿದ್ದಾಗ, ಸುತ್ತಲೂ ಬಾಣಗಳ ಮಳೆ ಸುರಿಯುತ್ತಿರಲು ಕೃಷ್ಣರಾಜನ ಚೂಪಾದ ಬಾಣಗಳು ಆತನ ಎದೆಯನ್ನು ಸೀಳಲು ದೇವಲೋಕವನ್ನು ಸೇರಿದನು" ಎಂದು ಹೇಳಿದೆ. ಪ್ರಸಿದ್ಧ ಆತಕೂರು ಶಾಸನವು[31] "ಕನ್ನರದೇವನು ಚೋಳನೊಂದಿಗೆ ಯುದ್ಧ ಮಾಡುತ್ತಿದ್ದಾಗ ಬೂತುಗನು ರಾಜಾದಿತ್ಯನ ಅಂಬಾರಿ ಯನ್ನೇ ಯುದ್ಧಭೂಮಿಯನ್ನಾಗಿ ಮಾಡಿಕೊಂಡು ಖಡ್ಗದಿಂದಿರಿದು ಕೊಂದನು. ಇದರಿಂದ ಸಂತಸಗೊಂಡ ಕನ್ನರದೇವ, ಬನವಾಸೆ ೧೨,೦೦೦, ಬೆಳ್ವೊಲ ೩೦೦, ಪುರಿಗೆರೆ ೩೦೦, ಕಿಸುಕಾಡು ೭೦, ಬಾಗಿನಾಡು ೭೦ ಗಳನ್ನು ಮೆಚ್ಚಿಕೊಟ್ಟನು. ಬೂತುಗನ ಈ ಸಾಹಸದಲ್ಲಿ ಆತನ ಅಧಿಕಾರಿ ಮಣಲೇರನು ಸಹಭಾಗಿಯಾಗಿದ್ದನು. "ಮಣಲೇರನು ವೀರಲಕ್ಷ್ಮಿ ಎಂಬ ತನ್ನ ಕುದುರೆಯನ್ನೇರಿ ಸಿಂಹದಂತೆ ನುಗ್ಗಿ ರಾಜಾದಿತ್ಯನ ಆನೆಗೆ ತಲೆ ಬಿರಿಯುವಂತೆ ಹೊಡೆದನು. ಆ ಸಾಹಸ ಕಾರ್ಯಕ್ಕಾಗಿ

---

27. A. R. I. E. No. 180 of 1921 ; E. I., Vol IV, PP. 178-79 ; S. I. I., Vol. VII, Nos. 954-78
28. E. I., Vol, P. 141
29. E. C., Vol- III, Md. 31 ; E. I., Vol VI, P. 56
30. E. I., Vol. XXII, P. 256
31. Ibid Vol. II, PP. 167-69

ಬೂತುಗನು ಮಣಲೇರನಿಗೆ ಆತಕೂರು ೧೨ ಮತ್ತು ಬೆಳ್ವೊಲದ ಕಾದಿಯೂರನ್ನು ಬಾಳ್ಗಳ್ಚು ನೀಡಿದನು" ಎಂದು ಅದೇ ಆತಕೂರು ಶಾಸದದಲ್ಲಿ ಹೇಳಿದೆ.

ಶಾಸನಗಳ ಈ ವಿರುದ್ಧ ಹೇಳಿಕೆಯಿಂದಾಗಿ ಈ ವಿಷಯವಾಗಿ ಭಿನ್ನಾಭಿಪ್ರಾಯಗಳಿದ್ದರೂ, ಸಾಮಾನ್ಯವಾಗಿ ಆತಕೂರು ಶಾಸನದ ಹೇಳಿಕೆಯೇ ನಿಜವಾದುದೆಂದು ಬಹುಜನರ ಅಭಿಪ್ರಾಯ. ರಾಜಾದಿತ್ಯನ ಈ ಅನಿರೀಕ್ಷಿತ ಹತ್ಯೆಯಿಂದ ಚೋಳ ಸೈನ್ಯದಲ್ಲಿ ಅರಾಜಕತೆ ಉಂಟಾಯಿತು. ಬೂತುಗನ ಶೌರ್ಯ ಸಾಹಸದಿಂದ ಕೃಷ್ಣನಿಗೆ ಜಯ ಸುಲಭವಾಗಿ ಒದಗಿಬಂದಿತು. ಚೋಳ ಸೈನ್ಯವನ್ನು ರಾಷ್ಟ್ರಕೂಟ ಸೈನ್ಯ ಹಿಮ್ಮೆಟ್ಟಿಸಿಕೊಂಡು ಹೋಯಿತು. ಕೃಷ್ಣನು ರಾಮೇಶ್ವರದವರೆಗೂ ದಂಡ-ಯಾತ್ರೆಯನ್ನು ಮಾಡಿ ಅಲ್ಲಿ ವಿಜಯಸ್ತಂಭವನ್ನು ಸ್ಥಾಪಿಸಿದನು[32] ಮತ್ತು ಚೋಳ ರಾಜ್ಯದ ಕೆಲವು ಭಾಗಗಳನ್ನು ಸ್ವಾಧೀನಪಡಿಸಿಕೊಂಡು ರಾಜ್ಯವಾಳಿದನು. ಕ್ರಿ.ಶ. ೯೪೯–೫೪ರ ನಡುವಣ ಕಾಲದ ಕೃಷ್ಣನ ಅನೇಕ ಶಾಸನಗಳು ತೊಂಡೈಮಂಡಲದಲ್ಲಿ ದೊರೆತಿವೆ.[33]

ಚೋಳರ ಮೇಲೆ ನಡೆಸಿದ ಯಶಸ್ವೀ ವಿಜಯಯಾತ್ರೆಯ ನಂತರ ರಾಷ್ಟ್ರಕೂಟ ಕೃಷ್ಣನು ಸುಮಾರು ಒಂದು ದಶಕದ ಕಾಲ ಸುಖ, ಶಾಂತಿ, ನೆಮ್ಮದಿಯಿಂದ ರಾಜ್ಯವಾಳಿದನು. ಇವನು ಪರಮ ಮಿತ್ರ ಹಾಗೂ ಬಂಧುವಾದ ಬೂತುಗನೂ ಸಹ ೯೬೦ರ ವರೆಗೆ ಸುಖ ಶಾಂತಿಯಿಂದ ರಾಜ್ಯವಾಳಿದನು. ಕರ್ನಾಟಕದ ಎಲ್ಲ ರಾಜವಂಶಗಳೂ ಮೈತ್ರಿಯಿಂದ ಒಂದಾಗಿ ಇದ್ದ ಕಾಲವೆಂದರೆ ಪ್ರಾಯಶಃ ಈ ಕಾಲ. ಗಂಗ, ನೊಳಂಬ, ಬಾಣ, ವೈದುಂಬ, ಸಾಂತರ ಇತ್ಯಾದಿ ಎಲ್ಲ ರಾಜವಂಶಗಳೂ ಪರಸ್ಪರ ಕಾದಾಟವಿಲ್ಲದೆ ಒಗ್ಗಟ್ಟಿನಿಂದ ರಾಷ್ಟ್ರಕೂಟ ಲಾಂಛನದ ಅಡಿಯಲ್ಲಿ ಆಧಿಪತ್ಯ ನಡೆಸಿದವು. ಕರ್ನಾಟಕದ ಇತಿಹಾಸದಲ್ಲಿ ಅತ್ಯಂತ ಶಾಂತಿ ಸಮೃದ್ಧಿಯ ಕಾಲ ಇದು ಎಂದು ಹೇಳಬಹುದು. ಇದಕ್ಕೆ ಕಾರಣ ರಾಷ್ಟ್ರಕೂಟ-ಗಂಗರ ಮೈತ್ರಿ. ಈ ಮೈತ್ರಿಯಿಂದಾಗಿ ಚೋಳರ ಪ್ರಾಬಲ್ಯ ಸಂಪೂರ್ಣವಾಗಿ ಕುಗ್ಗಿತು. ಇದೇ ಮೈತ್ರಿ ಮುಂದೆ ಗಂಗ ಮಾರಸಿಂಹನ ಕಾಲದಲ್ಲಿ ಮುಂದುವರಿದುದರಿಂದಲೇ ರಾಷ್ಟ್ರಕೂಟ ಕೃಷ್ಣನು ತನ್ನ ಸಾಮ್ರಾಜ್ಯವನ್ನು ಗುಜರಾತ್ ಮಧ್ಯಪ್ರದೇಶದ ವರೆಗೂ ವಿಸ್ತರಿಸಲು ಸಹಾಯವಾಯಿತು. ○

---

32. Ibid. Vol, IV, P. 289
33. A. R. I. E. No. 87 of 1942 ; No. 179 of 1912 ; S. S. I. Vol. VII. No. 75

ಡಾ|| ಎಂ.ವಿ. ಶ್ರೀನಿವಾಸ್

# ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಪಾಳೆಯಗಾರರ ಪಾತ್ರ

ಕರ್ನಾಟಕದಲ್ಲಿ ಮತ್ತು ದ. ಭಾರತದ ಇತರೆಡೆ ಕೆಲ ಚಾರಿತ್ರಿಕ ಪರಿಸ್ಥಿತಿಯಿಂದ ಚಿಕ್ಕ-ಪುಟ್ಟ ಪ್ರದೇಶಗಳಲ್ಲಿ ಒಡೆತನವು ನಡೆಸುತ್ತಿದ್ದ ನಾಯಕರಿಗೆ ಪಾಳೆಯಗಾರರೆಂದು ಕರೆಯುತ್ತಾರೆ. ಮಧ್ಯಕಾಲೀನ ಕರ್ನಾಟಕದಲ್ಲಿ ಅದರಲ್ಲೂ ವಿಜಯನಗರ ಕಾಲದಲ್ಲಿ ಹದಿನೈದು ಮತ್ತು ಹದಿನಾರನೆಯ ಶತಮಾನಗಳ ನಂತರ ಆಳಿದ ಸಾಮಂತರು, ನಾಯಕರು, ಪಾಳೆಯಗಾರರೆಂಬ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆ. ಕರ್ನಾಟಕದಲ್ಲಿ ನಾಲ್ಕು ಶತಮಾನಗಳಿಗೂ ಹೆಚ್ಚು ಕಾಲ ಆಡಳಿತವನ್ನು ನಡೆಸಿದ ಈ ಪಾಳೆಯಗಾರರು ನಾಡಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಮತ್ತು ಸಾಂಸ್ಕೃತಿಕ ಜೀವನದ ಮೇಲೆ ತಮ್ಮ ಮುದ್ರೆಯನ್ನೊತ್ತಿದ್ದಾರೆ. ವಿಜಯನಗರದ ಪತನಾನಂತರ ಈ ಪಾಳೆಯಗಾರರು ಸಂಸ್ಕೃತಿ ಮತ್ತು ಪರಂಪರೆಯನ್ನು ರಕ್ಷಿಸಿ ಕಾಪಾಡಿಕೊಂಡು ಬಂದಿದ್ದಾರೆ.

ಪಾಳೆಯಗಾರರು ಮೂಲತಃ ಸಾಹಸಿಗರು, ಶೂರರು, ರಣಕಲಿಗಳು ಆಗಿದ್ದು ತಮ್ಮ ಶೌರ್ಯ ಸಾಹಸಗಳಿಂದ ಕ್ರಮ ಕ್ರಮವಾಗಿ ಕರ್ನಾಟಕದ ರಾಜಕೀಯದಲ್ಲಿ ಮೇಲೇರುತ್ತಾ ಬಂದರು. ಪಾಳೆಗಾರನೆಂದರೆ "ದಂಡಿನೊಡನೆ ಪಾಳೆಯವನ್ನು ಹಾಕಿ ಇಳಿದುಕೊಂಡು ಕದನಕ್ಕೆ ಸಿದ್ಧನಾಗಿರುವವನು" ಎಂದು ಎಂ.ಎಸ್. ಪುಟ್ಟಣ್ಣನವರು ಅರ್ಥೈಸುತ್ತಾರೆ. "ಪೊಲ್ಲಂ ಪ್ರದೇಶಕ್ಕೆ ನಾಯಕನಾಗಿದ್ದವನು" ಪಾಳೆಯಗಾರನೆಂದು ಹೆಸರು ಪಡೆದನು. ಪ್ರಾರಂಭದಲ್ಲಿ ಇವರು ಲೂಟಿ, ಸುಲಿಗೆ ಮಾಡಿ ಜೀವಿಸುತ್ತಿದ್ದು, ಸಾಕಷ್ಟು ಸಂಪತ್ತನ್ನು ಶೇಖರಿಸಿದನಂತರ ತಮ್ಮದೇ ಆದ ಪಾಳೆಯಪಟ್ಟುಗಳನ್ನು ರಚಿಸಿಕೊಳ್ಳಲು

ಸಮರ್ಥರಾದರು. ಇವರು ದುರ್ಗಮವಾದ ಅರಣ್ಯಗಳಲ್ಲಿ, ಗಿರಿದುರ್ಗಗಳಲ್ಲಿ ತಮ್ಮ ಕೋಟೆ-ಕೊತ್ತಲುಗಳನ್ನು ನಿರ್ಮಿಸಿಕೊಂಡಿದ್ದರು. ಕಾಲಕಳೆದಂತೆ ತಮಗೆ ಸಮೀಪವಿರುವ ಪ್ರದೇಶಗಳನ್ನು ವಶಪಡಿಸಿಕೊಂಡು ತಮ್ಮ ಪ್ರಾಬಲ್ಯವನ್ನು ಸ್ಥಾಪಿಸುತ್ತಾ ಹೋದರು. ಒಂದು ಬಣದಲ್ಲಿ ಸಮರ್ಥನಾದವನನ್ನು 'ನಾಯಕ' ಪದವಿಗೇರಿಸುತ್ತಿದ್ದರು. ನಾಯಕನ ಆಜ್ಞೆಯನ್ನು ಯಾರೂ ಮೀರುವಂತಿರಲಿಲ್ಲ. ನಾಯಕನಾದವನು ಸಮರ್ಥನೂ, ದಕ್ಷನೂ ಆಗಿ ಸೈನಿಕ ಮತ್ತು ರಾಜ್ಯಾಡಳಿತದಲ್ಲಿ ನಿಷ್ಣಾತನಾಗಿರುತ್ತಿದ್ದನು. ಇವರು ಬಲಿಷ್ಠವಾದ ಸೈನ್ಯದ ತುಕಡಿಯನ್ನು ಸದಾ ಸನ್ನದ್ಧವಾಗಿಟ್ಟುಕೊಂಡು ಯುದ್ಧಕ್ಕೆ ಕರೆಬಂದಾಗ ಶೌರ್ಯದಿಂದ ಹೋರಾಡಿ ತಮ್ಮ ಕಾರ್ಯವನ್ನು ಸಾಧಿಸುತ್ತಿದ್ದರು.

ಪಾಳೆಯಗಾರರಲ್ಲಿ ಅನೇಕರು 'ಬೇಡರ' ಜಾತಿಗೆ ಸೇರಿದವರಾಗಿದ್ದರು. ಈ ನಾಯಕರು ಯುದ್ಧ ವಿದ್ಯೆಯಲ್ಲಿ ನಿಷ್ಣಾತರಾಗಿದ್ದು, ತಮ್ಮ ಒಡೆಯನಿಗಾಗಿ ಪ್ರಾಣ ವನ್ನು ಮುಡಿಪಾಗಿಟ್ಟು ಕಾದುತ್ತಿದ್ದರು. ಕರ್ನಾಟಕದಲ್ಲಿ ಪಾಳೆಯಪಟ್ಟಗಳು ಹಲವಾರು ರೀತಿಯಲ್ಲಿ ಅಸ್ತಿತ್ವಕ್ಕೆ ಬಂದುದ್ದನ್ನು ನೋಡಬಹುದಾಗಿದೆ. ಕೆಲವು ಸಮರ್ಥರಾದ ನಾಯಕರು ಯಾವುದಾದರೂ ಒಂದು ಪ್ರದೇಶದಲ್ಲಿ ನೆಲೆಸಿ, ಅಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿ, ಅನಂತರ ಸಾಮ್ರಾಟರ ಅನುಮತಿಯನ್ನು, ಅನುಗ್ರಹವನ್ನು ಪಡೆದು ಕೊಳ್ಳುತ್ತಿದ್ದರು. ಮುಸಲ್ಮಾನರ ಧಾಳಿಯ ನಂತರ ಅನೇಕ ಪಾರಂಪರ್ಯಸಂಸ್ಥಾನಗಳು, ದೊಡ್ಡ ಸಾಮ್ರಾಜ್ಯಗಳು ಮರೆಯಾದಾಗ ಪಾಳೆಯಪಟ್ಟು ಗಳ ಏಳಿಗೆಗೆ ಅವಕಾಶ ದೊರೆಯಿತು. ರಾಜನೇ ಕೆಲವು ದಂಡನಾಯಕರಿಗೆ ಆಳುವ ಅಧಿಕಾರವನ್ನು ವಹಿಸಿಕೊಡುವ ರೂಢಿ ಬೆಳೆಯಿತು. ವಿಜಯನಗರದ ದೊರೆಗಳುಸಾಹಸಿ ಹಾಗೂ ಧೀಮಂತರಾದ ವ್ಯಕ್ತಿಗಳಿಗೆ ಅಮರ ಮಾರ್ಗಗಳನ್ನು ಕೊಟ್ಟು ಅವರನ್ನು ತಮ್ಮ ಸಾಮಂತರನ್ನಾಗಿ ಮಾಡಿಕೊಳ್ಳುತ್ತಿದ್ದರು. ಈ ನಾಯಕರು ಚಕ್ರವರ್ತಿಗಳಿಗೆ ನಿಗದಿಯಾದ ಪೊಗದಿಯನ್ನು ಕೊಡುತ್ತಿದ್ದು, ಅವರು ಆಜ್ಞೆ ಮಾಡಿದಾಗ ಶತ್ರುವಿನ ಮೇಲೆ ಯುದ್ಧವನ್ನು ಮಾಡಬೇಕಾಗುತ್ತಿದ್ದಿತು. ಈ ನಾಯಕರು ತಾವು ಆಳುವ ಪ್ರದೇಶಗಳಲ್ಲಿ ಸ್ವತಂತ್ರರಾಗಿ, ತಮ್ಮ ಪ್ರಜೆಗಳಿಗೆ ಚಕ್ರವರ್ತಿಯಂತಿರುತ್ತಿದ್ದರು. ಸಾರಿಗೆ-ಸಂಪರ್ಕ ಕನಿಷ್ಟ ಪ್ರಮಾಣದಲ್ಲಿದ್ದ ಆಗಿನ ಕಾಲದಲ್ಲಿ ಈ ಪಾಳೆಯಗಾರರು ಸ್ವತಂತ್ರರಾಗಿರುವುದಕ್ಕೆ ಪರಿಸ್ಥಿತಿ ಬಹು ಅನುಕೂಲಕರವಾಗಿದ್ದಿತು. ವಿಜಯನಗರದ ಪತನಾನಂತರ ಬಹುತೇಕ ಪಾಳೆಯಗಾರರು ಸ್ವತಂತ್ರರಾದರೂ ಆ ಸಾಮ್ರಾಜ್ಯಕ್ಕೆ ಪೂರ್ಣ ನಿಷ್ಠೆಯನ್ನು ಹೊಂದಿದ್ದರು. ಅರವೀಡು ಸಂತತಿಯ ಪತನಾನಂತರ ಬಹುತೇಕ ಪಾಳೆಗಾರರು ಪೂರ್ಣ ಸ್ವತಂತ್ರವನ್ನು ಪಡೆಯಲು ಸಾಧ್ಯವಾಯಿತು.

ಸಾಮಂತರ ಅಧೀನ ರಾಜರೂ ಆಗಿ ಆಳ್ವಿಕೆಯನ್ನು ಪ್ರಾರಂಭಿಸಿದ ಪಾಳೆಯ ಗಾರರು ಬಹುಬೇಗ ಬಲಿಷ್ಠರೂ ದಕ್ಷರೂ ಆದ ದೊರೆಗಳಾದರು. ಈ ಪಾಳೆಯಗಾರರು

ತಮ್ಮ ಪ್ರಭುಗಳಿಗೆ ನಿಷ್ಠರಾಗಿದ್ದುಕೊಂಡು ಅವರ ರಾಜ್ಯದ ರಕ್ಷಣೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು. ಇವರು ನಂಬಿದವರನ್ನು ಕಾಪಾಡಿ ರಕ್ಷಿಸುತ್ತಿದ್ದರು. ದಕ್ಷಿಣ ಭಾರತದ ಇತಿಹಾಸದಲ್ಲಿ ಇವರು ಬಹುಬೇಗ ಮಹತ್ವದ ಸ್ಥಾನವನ್ನು ಪಡೆದು ಕೊಂಡರು. ಎಂ.ಎಸ್. ಪುಟ್ಟಣ್ಣನವರು ಹೇಳುವಂತೆ ಈ "ಪಾಳೆಯಗಾರರಿಗೂ ಅನ್ಯರಾಜ್ಯಗಳಿಗೂ ಇದ್ದ ಸಂಬಂಧವು ತುಂಗಾಭದ್ರ ತೀರವಾಸಿಗಳಾಗಿದ್ದ ಚಕ್ರಾಧೀಶ್ವರರ ಆಳ್ವಿಕೆಯೊಳಗೆ ಎಷ್ಟರ ಮಟ್ಟಿಗೆ ಸೇರಿಕೊಂಡಿತ್ತೆಂದರೆ ಈ ಅಧೀನ ರಾಜರಿಲ್ಲದಿದ್ದರೆ ರಾಜಾಧಿರಾಜರೆಂದು ಖ್ಯಾತಿ ಪಡೆದಿದ್ದ ಆ ಚಕ್ರವರ್ತಿಗಳು ಚಿತ್ರದಲ್ಲಿ ಬರೆದ ಚಕ್ರವರ್ತಿಗಳಂತಾಗುತ್ತಿದ್ದರು. ದಕ್ಷಿಣ ಭಾರತದ ರಾಜಕೀಯ ಭದ್ರತೆಗೆ ಪಾಳೆಯಗಾರರು ಗಮನಾರ್ಹವಾದ ಸೇವೆಯನ್ನು ಸಲ್ಲಿಸಿದ್ದಾರೆ. ಹದಿನಾರು ಮತ್ತು ಹದಿನೇಳನೆಯ ಶತಮಾನದಲ್ಲಿ ವಿಜಯನಗರದ ಪತನಾನಂತರ ಅರಾಜ ಕತೆಯನ್ನು ತಡೆಗಟ್ಟಲು ಇವರು ಮುಖ್ಯ ಕಾರಣರಾಗಿದ್ದಾರೆ. "ಈ ಸಾಮಂತ ರಾಜರ, ಪಾಳೆಯಗಾರರ ಬೆಂಬಲದಿಂದಲೇ ಚಕ್ರವರ್ತಿಗಳು ತಮ್ಮ ಚಕ್ರಾಧಿಪತ್ಯ ವನ್ನು ಉಳಿಸಿಕೊಂಡು ಬಂದಿರುವುದು ಹಾಗೂ ಸಣ್ಣ ಪುಟ್ಟ ರಾಜರು ಶತ್ರು ಗಳಾದಾಗ ರಾಜ್ಯಾಧಿಪತ್ಯಕ್ಕೆ ಧಕ್ಕೆ ತಗಲಿಸುವುದು ಎಲ್ಲರಿಗೂ ತಿಳಿದ ವಿಷಯವೇ." ಇದಕ್ಕೂ ಹೆಚ್ಚಾಗಿ ದೊಡ್ಡ ರಾಜ್ಯಗಳು ರಾಜ್ಯವಿಸ್ತರಣೆಗಾಗಲಿ ರಾಜ್ಯದ ಸಂರಕ್ಷಣೆ ಗಾಗಲಿ ರಣರಂಗದಲ್ಲಿ ಕಾದುತ್ತಿದ್ದಾಗ ಸಣ್ಣ ಸಂಸ್ಥಾನಗಳು ರಾಷ್ಟ್ರಧರ್ಮವನ್ನು ಉಳಿಸಿಕೊಂಡು ಬರಲು ಮಾಡಿದ ಪ್ರಯತ್ನಗಳು ಅಷ್ಟಿಷ್ಟಲ್ಲ. ಒಂದು ದೃಷ್ಟಿಯಿಂದ ನೋಡಿದರೆ ಭಾರತದ ಪ್ರಾಚೀನ ಸಂಸ್ಕೃತಿಯ ಅಭಿವೃದ್ಧಿಗೆ ಸಾಮಂತರು ಹಿರಿದಾದ ಸೇವೆಯನ್ನು ಸಲ್ಲಿಸಿದ್ದಾರೆ. ತಾಳಿಕೋಟೆ ಯುದ್ಧದಲ್ಲಿ ಅನೇಕ ಪಾಳೆಯಗಾರರು ವಿಜಯನಗರದ ಪರವಾಗಿ ಹೋರಾಡಿದರೂ ವಿಜಯನಗರದ ಪತನಾನಂತರ, ಅನೇಕ ಅಧಿಕಾರಿಗಳು, ಪ್ರಮುಖ ಉದ್ಯೋಗಸ್ಥರು ಪಾಳೆಯಗಾರರ ಆಶ್ರಯವನ್ನು ಪಡೆದರು. ಹೀಗೆ ವಿಜಯನಗರದ ಪರಂಪರೆ ಮುಂದುವರಿಯಿತು.

ಈ ಪಾಳೆಯಗಾರರು ದಕ್ಷಿಣ ಭಾರತದಲ್ಲಿ ಪ್ರಬಲರಾಗಿ, ಭಾರತದಲ್ಲಿ ಮಾತ್ರವಲ್ಲದೇ ಅನೇಕ ವಿದೇಶೀಯರ ಮನ್ನಣೆಗೂ ಪಾತ್ರರಾಗಿದ್ದರು. ಕೆಳದಿಯ ದೊರೆಗಳು ವಿಜಯನಗರದ ನಂತರ ದಕ್ಷಿಣ ಭಾರತದಲ್ಲಿ ಪ್ರಬಲರಾಗುತ್ತಿದ್ದರೆಂಬುದನ್ನು ತನ್ನ ರಾಯಭಾರಿಯ ಮೂಲಕ ತಿಳಿದ ದೊರೆ ಎರಡನೆಯ ಫಿಲಿಪ್ ಅವರ ಪ್ರಾಬಲ್ಯವನ್ನು ಗುರುತಿಸಿದ್ದಾನೆ. "ಹದಿನಾರನೆಯ ಶತಮಾನದಿಂದ ಎರಡೂವರೆ ಶತಮಾನಗಳ ಕಾಲ ಸ್ವತಂತ್ರವಾಗಿ ಆಳುತ್ತಿದ್ದ ಕೆಳದಿಯ ದೊರೆಗಳು ಪಶ್ಚಿಮ ಸಮುದ್ರದ ಮೇಲೆ ನಿಯಂತ್ರಣವನ್ನು ಸ್ಥಾಪಿಸಿದ್ದರು". ಎಂದು ಪೆಟ್ರೋಡೆಲ್ಲಾವಲ್ಲೇ ತಿಳಿಸಿದ್ದಾನೆ. ಪೋರ್ಚುಗಲ್‌ನ ದೊರೆ ಕೆಳದಿಯ ಆಸ್ಥಾನಕ್ಕೆ ತನ್ನ ರಾಯಭಾರಿ ಯನ್ನು ಕಳುಹಿಸಿದ್ದನು. ಪಾಳೆಯಗಾರರು ಸಾಮಾನ್ಯವಾಗಿ ವಿಜಯನಗರದ ಆಡಳಿತ

ಪದ್ಧತಿಯನ್ನು ಅನುಸರಿಸಿದರು. ಆದರೆ ಇವರು ತಮ್ಮ ಸ್ಥಾನ, ರಾಜ್ಯದ ವಿಸ್ತೀರ್ಣ ಹಾಗೂ ಅಂದಿನ ರಾಜಕೀಯ ಪರಿಸ್ಥಿತಿಯನ್ನು ಅನುಸರಿಸಿ ತಮ್ಮ ಆಡಳಿತ ವ್ಯವಸ್ಥೆಯಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿಕೊಂಡಿದ್ದರು. ವಿಜಯನಗರದ ಆಡಳಿತಕ್ಕೂ ಪಾಳೆಯಗಾರರ ವ್ಯವಸ್ಥೆಗೂ ಇದ್ದ ಬಹುಮುಖ್ಯ ವ್ಯತ್ಯಾಸವೆಂದರೆ ಇವರು ದೊಡ್ಡ ಸಾಮ್ರಾಜ್ಯಗಳಲ್ಲಿ ಇದ್ದಂತಹ ಕೇಂದ್ರೀಕೃತ ಪದ್ಧತಿಯನ್ನು ಸಡಿಲಿಸಿದರು. ಪಾಳೆಯಗಾರರು ಜನಸಾಮಾನ್ಯರಿಂದ ಬಂದವರಾಗಿದ್ದರಿಂದ ಜನರಿಗೆ ಹೆಚ್ಚು ಸಮೀಪವಾಗಿದ್ದರು. ಇವರು ದೊಡ್ಡ ದೊಡ್ಡ ರಾಜಮನೆತನದವರಂತೆ ತಮ್ಮನ್ನು ದೈವಾಂಶಸಂಭೂತರೆಂದು ಭಾವಿಸಿಕೊಂಡು ಪ್ರಜೆಗಳಿಂದ ದೂರವಾಗಿ ಉಳಿಯದೇ ಸಾಮಾನ್ಯ ಜನರೊಡನೆ ನಿಕಟಸಂಪರ್ಕವನ್ನು ಹೊಂದಿದ್ದರು. ಈ ಕಾರಣದಿಂದಲೇ ಇವರು ಹೆಚ್ಚಿನ ವೈಭವ, ಅಟ್ಟಹಾಸ ಹಾಗೂ ದರ್ಪವನ್ನು ಪ್ರದರ್ಶಿಸಲು ಪ್ರಯತ್ನಿಸಲಿಲ್ಲ. ಪ್ರಜೆಗಳಿಗೆ ಸಮೀಪವಾದಂತೆ ಅವರ ಸಮಸ್ಯೆಗಳನ್ನು ಅರಿತುಕೊಂಡು ಅವರ ಕಷ್ಟಸುಖಗಳಲ್ಲಿ ಭಾಗಿಯಾಗುವುದು ಹೆಚ್ಚು ಸುಲಭವಾಯಿತು. ಈ ದೃಷ್ಟಿಯಿಂದ ಪಾಳೆಯಗಾರರ ಆಡಳಿತ ವ್ಯವಸ್ಥೆ ಭಿನ್ನವಾದ ಉದ್ದೇಶವನ್ನು ಹೊಂದಿದ್ದುದು ಕಂಡು ಬರುತ್ತದೆ.

ಅರಾಜಕತೆಯ ಭೀತಿಯಿಂದ ತತ್ತರಿಸುತ್ತಿದ್ದ ದಕ್ಷಿಣ ಭಾರತದ ಜನತೆಗೆ ರಾಜಕೀಯ ಭದ್ರತೆಯನ್ನು ನೀಡಿದ್ದು ಈ ಪಾಳೆಯಗಾರರ ಬಹು ಮುಖ್ಯವಾದ ಕೊಡುಗೆ. ಇವರು ತಾವು ನೆಲಸಿದ ಪ್ರದೇಶಗಳಲ್ಲಿ ಬಲಿಷ್ಠವಾದ ಕೋಟೆಕೊತ್ತಲುಗಳನ್ನು ನಿರ್ಮಿಸಿ ಜನರಿಗೆ ರಕ್ಷಣೆಯನ್ನು ಒದಗಿಸಿದರು. ಇವರ ರಾಜಧಾನಿಗಳು ಸುರಕ್ಷಿತವಾಗಿದ್ದು ಪ್ರಜೆಗಳು ಆಂತರಿಕ ಹಾಗೂ ಹೊರಗಿನವರ ಭಯವಿಲ್ಲದೆ ನೆಮ್ಮದಿಯಿಂದಬಾಳುತ್ತಿದ್ದರು. ಇವರ ಸೈನ್ಯ ವ್ಯವಸ್ಥೆಯು ಅಚ್ಚುಕಟ್ಟಾಗಿಯೂ ಆದರ್ಶಪ್ರಾಯವಾಗಿಯೂ ಇದ್ದಿತು. ಸಾಮಾನ್ಯವಾಗಿ ಈ ಪಾಳೆಯಗಾರರ ಸೈನಿಕರು ಶಿಸ್ತಿಗೂ ಸ್ವಾಮಿನಿಷ್ಠೆಗೂ ಹೆಸರಾಗಿದ್ದರು. ವಿಜಯನಗರದ ಅರಸರು ಬೃಹತ್ತಾದ ಸೇನೆಯನ್ನು ಹೊಂದಿದ್ದರು. ವಿಜಯನಗರದ ಕೊನೆಯ ದಿನಗಳಲ್ಲಿ ಸೈನ್ಯವು ಭೋಗ ಜೀವನಕ್ಕೆ ಬಲಿಯಾಗಿ ತನ್ನ ಮೊದಲಿನ ಶಿಸ್ತು, ದಕ್ಷತೆ ಮತ್ತು ಶೌರ್ಯವನ್ನು ಕಳೆದುಕೊಂಡಿತ್ತೆಂದು ಅನೇಕ ವಿದ್ವಾಂಸರು ಭಾವಿಸುತ್ತಾರೆ. ಇದೂ ಅಲ್ಲದೆ ಪ್ರಾರಂಭದಿಂದಲೂ ಶೌರ್ಯ ಸಾಹಸಗಳಿಗೆ ಹೆಸರಾಗಿದ್ದ ಪಾಳೆಯಗಾರರ ಸಹಾಯವನ್ನು ವಿಜಯನಗರದ ದೊರೆಗಳು ಪಡೆದುಕೊಳ್ಳುತ್ತಲೇ ಬಂದಿದ್ದರು. ಗುಲ್ಬರ್ಗದ ಕೋಟೆಯನ್ನು ಗೆಲ್ಲುವುದು ಸಾಧ್ಯವಾಗದಿದ್ದಾಗ ಅಪ್ರತಿಮ ವೀರನಾದ ಚಿತ್ರದುರ್ಗದ ಮತ್ತಿತಿಮ್ಮಣ್ಣನಾಯಕನನ್ನು ವಿಜಯನಗರದ ದೊರೆಗಳು ಕೇಳಿಕೊಂಡಾಗ ಅವನು ಅದನ್ನು ಸುಲಭವಾಗಿ ಸಾಧಿಸಿಕೊಟ್ಟನು. ಅದೇ ರೀತಿಯಲ್ಲಿ ಕೆಳದಿಯ ದೊರೆಗಳು ವಿಜಯನಗರದ ದೊರೆಗಳ ರಕ್ಷಣೆಗೆ ಧಾವಿಸಿ ಬಂದ ಸಂಗತಿ

ಸರ್ವವೇದ್ಯವಾದುದು. ಕೆಳದಿ ರಾಜ್ಯದ ಸ್ಥಾಪಕರಾದ ಚೌಡಪ್ಪ ಮತ್ತು ಭದ್ರಪ್ಪ ಹದಿನೈದನೆಯ ಶತಮಾನದಲ್ಲಿಯೇ ವಿಜಯನಗರದ ಸಾಮ್ರಾಜ್ಯದ ಪೂರ್ವಗಡಿಯಲ್ಲಿ ದಾಳಿ ಮಾಡಿದ ಮುಸಲ್ಮಾನ ಸೈನ್ಯವನ್ನು ಹೊಡೆದೋಡಿಸಿ ರಾಜರ ಕೃಪೆಗೆ ಪಾತ್ರ ರಾದರು. ವಿಜಯನಗರದ ದೊರೆಗಳು ಇವರ ಸೇವೆಗೆ ಮೆಚ್ಚಿ ಚಂದ್ರಗುತ್ತಿ, ಕೆಳದಿ, ಇಕ್ಕೇರಿ, ಪೆರ್ಬಯಲು, ಯಳಗಳಲೆ-ಮೊದಲಾದ ಪ್ರದೇಶಗಳನ್ನು ಕೊಟ್ಟು ಸಾಮ್ರಾಜ್ಯಕ್ಕೆ ನಿಷ್ಠೆಯಿಂದ ಸೇವೆಸಲ್ಲಿಸುವಂತೆ ತಿಳಿಸಿದರು. ೩ನೇ ದೊರೆಯಾದ ಸದಾಶಿವನಾಯಕನು ರಾಮರಾಯನ ನಿರೂಪವನ್ನು ಮನ್ನಿಸಿ ಬಿಜಾಪುರದ ನವಾಬನ ಸೈನ್ಯವನ್ನು ಸೋಲಿಸಿ ಕಲ್ಬುರ್ಗಿಯನ್ನು, ಕಲ್ಯಾಣ ದುರ್ಗವನ್ನು ವಶಪಡಿಸಿ ಕೊಂಡನು. ಈ ನಾಯಕನು ಅಲ್ಲಿಯ ನವಾಬರನ್ನು ಸೆರೆಹಿಡಿದು ವಿಜಯನಗರದ ಚಕ್ರವರ್ತಿಯ ಮುಂದೆ ನಿಲ್ಲಿಸಿದನೆಂದು ಹೇಳಲಾಗಿದೆ. ಹೀಗೆ ಸಾಮ್ರಾಜ್ಯ ವೈರಿ ಗಳನ್ನು ಸೋಲಿಸಿದ ಸದಾಶಿವನಾಯಕನಿಗೆ ಅಮೂಲ್ಯ ರತ್ನಾಭರಣಗಳನ್ನು, 'ಕೋಟಿ ಕೋಲಾಹಲ' ಎಂಬ ಬಿರುದನ್ನು ನೀಡಿ ಗೌರವಿಸಿದನು. ಇದರೊಂದಿಗೆ ಬಾರ್ಕೂರು ಮಂಗಳೂರು ಪ್ರಾಂತ್ಯಗಳನ್ನು ಅವನಿಗೆ ಕೊಟ್ಟು ಅವನ ಸ್ಥಾನಮಾನಗಳನ್ನು ಹೆಚ್ಚಿಸಿದನು.

ಸದಾಶಿವನಾಯಕನ ಅನಂತರ ಅಧಿಕಾರಕ್ಕೆ ಬಂದ ದೊಡ್ಡ ಸಂಕಣ್ಣ ನಾಯಕನು ವಿಜಯನಗರದ ದೊರೆಗಳಿಗೆ ತೊಂದರೆಯುಂಟು ಮಾಡುತ್ತಿದ್ದ ಪೋರ್ಚುಗೀಸರನ್ನು ಸೋಲಿಸಿ ಅವರ ಅಧಿಕಾರಿಗಳನ್ನು ಸೆರೆಹಿಡಿದುಕೊಟ್ಟನು. ಈ ನೆರವಿಗೆ ರಾಮರಾಯನು ಮಹಾದೇವಪುರವನ್ನು ಶಾಸನಪೂರ್ವಕವಾಗಿ ಬರೆ ಯಿಸಿಕೊಟ್ಟು ನಾಯಕರಿಗೆ "ಭುಜಕೀರ್ತಿ" ಎಂಬ ಬಿರುದು ನೀಡಿ ಸನ್ಮಾನಿಸಿದನು. ಕೆಳದಿಯ ಅರಸರು ಸ್ವತಂತ್ರರಾಗಿ ಪ್ರಬಲರಾಗಿ ಆಳ್ವಿಕೆ ನಡೆಸಿದರೂ ವಿಜಯನಗರ ಸಾಮ್ರಾಜ್ಯಕ್ಕೆ ತಮ್ಮ ನಿಷ್ಠೆಯನ್ನು ಬದಲಿಸಲಿಲ್ಲ. ಹದಿನೇಳನೆಯ ಶತಮಾನದ ಮಧ್ಯಭಾಗದಲ್ಲಿ ವಿಜಯನಗರವು ದುರ್ಬಲವಾಗಿದ್ದಾಗ ಗೋಲ್ಕೊಂಡದ ನವಾಬನು ಅರವೀಡು ಸಂತತಿಯ ಶ್ರೀರಂಗರಾಜನನ್ನು ಯುದ್ಧದಲ್ಲಿ ಸೋಲಿಸಿದನು. ಶತ್ರುಗಳಿಂದ ಪಾರಾಗಲು ಶ್ರೀರಂಗರಾಜನು ಬೇರೆಲ್ಲೂ ಆಶ್ರಯ ದೊರೆಯದಿದ್ದಾಗ ಬಿದನೂರಿನ ಶಿವಪ್ಪನಾಯಕನ ಆಶ್ರಯವನ್ನು ಬಯಸಿ ಬಂದನು. ಶಿವಪ್ಪನಾಯಕನು ಶ್ರೀರಂಗ ರಾಜನನ್ನು ಸ್ವಾಗತಿಸಿ ಅವನಿಗೆ ಬೇಲೂರು, ಸಕ್ಕರೆ ಪಟ್ಟಣಗಳನ್ನು ಕೊಡಿಸಿ ವಿಜಯ ನಗರದ ದೊರೆಗೆ ಆಶ್ರಯ ನೀಡಿದನು. ಶ್ರೀರಂಗರಾಜನು ಶಿವಪ್ಪನಾಯಕನಿಗೆ ಅನೇಕ ಬಿರುದುಗಳನ್ನು 'ರಾಮಬಾಣ' ಎಂಬ ಗಜವನ್ನು 'ಜಗತ್‌ಝಂಪ' ಎಂಬ ಛತ್ರವನ್ನು ನೀಡಿ ಗೌರವಿಸಿದನು. ಹೀಗೆ ಪಾಳೆಯಗಾರರು ಹಿಂದೆ ತಮಗೆ ಸಾರ್ವಭೌಮರಾಗಿದ್ದ ವಿಜಯನಗರದ ದೊರೆಗಳನ್ನು ರಕ್ಷಿಸಿ ಅವರ ಸ್ಥಾನ ಮಾನಗಳನ್ನು ಕಾಪಾಡಿಕೊಂಡು ಬಂದರು.

ವಿಜಯನಗರದ ಸಾಮಂತರಾಗಿದ್ದ ಯಲಹಂಕ ಪ್ರಭುಗಳು ಇದೇ ರೀತಿಯಲ್ಲಿಯೇ ತಮ್ಮ ಶೌರ್ಯ ಸಾಹಸಗಳಿಂದ ವಿಜಯನಗರದ ಅರಸರ ಸೇವೆಯನ್ನು ಮಾಡುತ್ತಾ ಬಂದಿದ್ದರು. ಇಮ್ಮಡಿಕೆಂಪೇಗೌಡನು ವಿಜಯನಗರದ ಅರಸರ ಆಜ್ಞೆಯ ಮೇರೆಗೆ ಗುಡೇಮಾರನಹಳ್ಳಿಯ ತಳವಾರ ಗಂಗನನ್ನು ಅಡಗಿಸಿ ಸಾವನದುರ್ಗ, ಮಾಗಡಿ-ದುರ್ಗಗಳನ್ನು ಗೆದ್ದು ವಶಪಡಿಸಿಕೊಂಡು ವಿಜಯನಗರಕ್ಕೆ ತನ್ನ ನಿಷ್ಠೆಯನ್ನು ಪ್ರದರ್ಶಿಸಿದನು. ಹೀಗೆ ಅಪ್ರತಿಮ ಶೌರ್ಯ-ಸಾಹಸ ತ್ಯಾಗ, ಸ್ವಾಮಿ ಭಕ್ತಿಗಳಿಗೆ ಪ್ರಸಿದ್ಧರಾಗಿದ್ದ ಪಾಳೇಗಾರರು ಕರ್ನಾಟಕ ಇತಿಹಾಸದ ಸಂದಿಗ್ಧ ಸಮಯಗಳಲ್ಲಿ ತಮ್ಮ ಸಾಹಸವನ್ನು, ಸ್ವಾಮಿ ನಿಷ್ಠೆಯನ್ನು ಪ್ರದರ್ಶಿಸಿ ಮಹತ್ವದ ಸೇವೆಯನ್ನು ಸಲ್ಲಿಸಿ ಕರ್ನಾಟಕದ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದ್ದಾರೆ.

ಪಾಳೆಯಗಾರರು ಸಾಮಾನ್ಯವಾಗಿ ವೈಭವ-ಭೋಗ ಜೀವನಗಳಲ್ಲಿ ನಿರತರಾಗದೆ ಜನಸಾಮಾನ್ಯರಿಗೆ ಉಪಯುಕ್ತವಾದ ಕಾರ್ಯಗಳನ್ನು ಕೈಗೊಂಡು ಪ್ರಜಾವಾತ್ಸಲ್ಯವನ್ನು ಗಳಿಸಿದ್ದರು. ಇವರ ಆಳ್ವಿಕೆಯಲ್ಲಿ ತೆರಿಗೆಗಳು ವಿಜಯನಗರಕ್ಕಿಂತಲೂ ಹಗುರವಾಗಿದ್ದವು. ಅನೇಕ ವೇಳೆ ಇವರು ತಮ್ಮ ಪ್ರಜೆಗಳಿಂದ ಶ್ರಮದಾನವನ್ನು ಮಾಡಿಸಿ ಕೋಟೆ-ಕೊತ್ತಲ, ಸಾರ್ವಜನಿಕ ಕಟ್ಟಡಗಳನ್ನು ನಿರ್ಮಿಸುತ್ತಿದ್ದರು. ದೊಡ್ಡ ದೊಡ್ಡ ಸಾರ್ವಭೌಮರಂತೆ ಭವ್ಯವಾದ ಅರಮನೆಗಳನ್ನು ನಿರ್ಮಿಸುವ ಬದಲು ಇವರು ಪ್ರಜೆಗಳಿಗೆ ಉಪಯುಕ್ತವಾಗುವಂತಹ ಕಾಮಗಾರಿ ಕೆಲಸಗಳನ್ನು ಕೈಗೊಳ್ಳುತ್ತಿದ್ದರು. ಸಾಮಾನ್ಯವಾಗಿ ಎಲ್ಲಾ ಪಾಳೆಯಗಾರರು ಕೆರೆ ಕಟ್ಟೆ ಕಾಲುವೆಗಳನ್ನು ನಿರ್ಮಿಸಿ ವ್ಯವಸಾಯಕ್ಕೆ ವಿಶೇಷವಾದ ಪ್ರೋತ್ಸಾಹ ನೀಡುತ್ತಿದ್ದರು. ಚಿತ್ರದುರ್ಗದ ಪಾಳೆಯಗಾರರು ಕಟ್ಟಿಸಿದ ಕೆರೆಗಳ ಸಂಖ್ಯೆಯನ್ನು ಗಮನಿಸಿದಾಗ ಅವರು ರೈತರ ಅನುಕೂಲಕ್ಕಾಗಿ ಎಷ್ಟು ಆಸಕ್ತಿಯನ್ನು ವಹಿಸಿದ್ದರೆಂಬುದು ತಿಳಿದುಬರುತ್ತದೆ. ಕೆಳದಿ ಅರಸರು ಜಾರಿಗೆ ತಂದಿದ್ದ ಭೂಕಂದಾಯ ಪದ್ಧತಿಯು ಬಹು ಸ್ಪಷ್ಟವಾಗಿ ಪ್ರಜೆಗಳಿಗೂ ಅಧಿಕಾರಿಗಳಿಗೂ ಅನುಸರಿಸಲು ಅನುಕೂಲಕರವಾಗಿತ್ತು. ಈ ಪದ್ಧತಿಯನ್ನು ಮುಂದೆ ಬಂದ ಅರಸರು ಅನುಸರಿಸಿಕೊಂಡು ಬಂದರೆಂಬ ಅಂಶವನ್ನು ಇಲ್ಲಿ ಗಮನಿಸಬೇಕಾಗಿದೆ. ಮಾಗಡಿ ಕೆಂಪೇಗೌಡ ಮತ್ತು ಈ ವಂಶದ ಪ್ರಭುಗಳು ವ್ಯವಸಾಯಕ್ಕೆ ಆದ್ಯ ಗಮನವನ್ನು ನೀಡಿ ರೈತರಿಗೆ ಅಗತ್ಯ ಅನುಕೂಲಗಳನ್ನು ಕಲ್ಪಿಸಿ ರಾಜ್ಯದಲ್ಲಿ ಸುಭಿಕ್ಷತೆಯುಂಟಾಗುವಂತೆ ಮಾಡಿದ್ದರು.

ಪಾಳೆಯಗಾರರ ಕಾಲದಲ್ಲಿ ಆರಕ್ಷಕ ವ್ಯವಸ್ಥೆಯು ಅಂದಿನ ಪರಿಸ್ಥಿತಿಗೆ ತಕ್ಕಂತೆ ರೂಪಿತವಾಗಿದ್ದು ಪ್ರಜೆಗಳಿಗೆ ಸಾಕಷ್ಟು ರಕ್ಷಣೆ ನೀಡಿದ್ದಿತ್ತು. ಈ ನಾಯಕರ

ಬಲಿಷ್ಠವಾದ ಸೈನ್ಯದೊಂದಿಗೆ ಆರಕ್ಷಕ ವ್ಯವಸ್ಥೆಯು ಕೂಡಿಕೊಂಡು ಅವರ ರಾಜ್ಯಗಳಲ್ಲಿ ಅರಾಜಕತೆ ಅವ್ಯವಸ್ಥೆಯನ್ನು ಹೋಗಲಾಡಿಸಿ ಶಾಂತಿ-ಭದ್ರತೆ ನೆಲಸುವಂತೆ ಮಾಡಿದ್ದಿತು. ಗ್ರಾಮಗಳಲ್ಲಿ ಹಿಂದಿನಿಂದಲೂ ರೂಢಿಯಲ್ಲಿದ್ದ ಸ್ಥಳೀಯ ಸಹಕಾರದಿಂದ ರಕ್ಷಣಾ ವ್ಯವಸ್ಥೆಯನ್ನು ಅನುಸರಿಸಿಕೊಂಡು ಬರುತ್ತಿದ್ದರು. ರಾಜಧಾನಿಯಲ್ಲೂ ಇತರ ನಗರಗಳಲ್ಲೂ ಗಡಿವಿಭಾಗಗಳಲ್ಲೂ ಬಿಗಿಯಾದ ರಕ್ಷಣಾ ವ್ಯವಸ್ಥೆಯು ಜಾರಿಯಲ್ಲಿದ್ದಿತ್ತು. ಗ್ರಾಮಗಳಲ್ಲಿ ಆಯಗಾರರು ತಮ್ಮ ವಿಶಿಷ್ಟ ಕರ್ತವ್ಯಗಳನ್ನು ನೇರವೇರಿಸುತ್ತಿದ್ದರು. ರಾಜ್ಯವು ವೆಂಥೆ, ಸೀಮೆ-ಭಾವಣೆ ಮೊದಲಾದ ವಿಭಾಗಗಳನ್ನು ಒಳಗೊಂಡಿದ್ದು ಪಾರುಪತ್ಯಗಾರ-ನಾಡಗೌಡ-ದಳವಾಯಿ ಮುಂತಾದ ಅಧಿಕಾರಿಗಳು ಕೆಲಸ ಮಾಡುತ್ತಿದ್ದರು. ಪಾಳೆಯಗಾರರ ಕಾಲದ ನ್ಯಾಯ ವ್ಯವಸ್ಥೆಯು ಉದಾರವಾಗಿದ್ದಿತು. ಮೋಸ-ವಂಚನೆಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಲಾಗುತ್ತಿತ್ತು. ಹನ್ನೆರಡು ಜನ ಕೈವಾಡದವರು ತಮ್ಮ ಅಭಿಪ್ರಾಯವನ್ನು ಕೊಡುವುದರ ಮೂಲಕ ತಪ್ಪಿತಸ್ಥರ ವಿಚಾರಣೆ ನಡೆಯುತ್ತಿತ್ತು. ವಿಚಾರಣೆ ಶೀಘ್ರವಾಗಿಯೂ ನೇರವಾಗಿಯೂ ನಡೆಯುತ್ತಿದ್ದು ನ್ಯಾಯವನ್ನು ಪಡೆಯಲು ಜನರು ಬಹುಕಾಲ ಕಾಯಬೇಕಾಗಿರಲಿಲ್ಲ. ಹಳೆಯ ಕಡತಗಳ ಪರಿಶೀಲನೆ, ದೃಷ್ಟಿದೀವಿಗೆ ಮೊದಲಾದ ಪದ್ಧತಿಗಳಿಂದಲೂ ನ್ಯಾಯವನ್ನು ನಿರ್ಧರಿಸಲಾಗುತ್ತಿತ್ತು. ತಪ್ಪಿತಸ್ಥರಿಗೆ ವಿಧಿಸುತ್ತಿದ್ದ ದಂಡ ಸರ್ಕಾರಕ್ಕೆ ಸೇರುತ್ತಿತ್ತು. ಒಟ್ಟಿನಲ್ಲಿ ದುಷ್ಟ ಶಿಕ್ಷಣ ಶಿಷ್ಟ ಪರಿಪಾಲನ ಕೆಲಸವನ್ನು ಪಾಳೆಯಗಾರರು ಸಾಕಷ್ಟು ತೃಪ್ತಿಕರವಾಗಿ ನಡೆಸಿಕೊಂಡು ಬಂದಿದ್ದರು.

ಕರ್ನಾಟಕದ ಪಾಳೆಯಗಾರರು ತಮ್ಮ ರಾಜ್ಯದಲ್ಲಿ ವ್ಯವಸಾಯದೊಂದಿಗೆ ವ್ಯಾಪಾರ-ಕೈಗಾರಿಕೆ ಕಲೆ-ಇವುಗಳನ್ನು ಪ್ರೋತ್ಸಾಹಿಸಿಕೊಂಡು ಬಂದಿದ್ದರು. ಚಿತ್ರದುರ್ಗ ಪಾಳೆಯಪಟ್ಟು ಹಲವಾರು ಕೈಗಾರಿಕೆಗಳಿಗೆ ಪ್ರಸಿದ್ಧಿಯಾಗಿದ್ದಿತು. ಕೆಳದಿಯ ದೊರೆಗಳ ಆಳ್ವಿಕೆಯಲ್ಲಿ ಯೂರೋಪಿಯನ್ನರು ಈ ದೊರೆಗಳೊಡನೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರು.

ಸಾಹಿತ್ಯ ಮತ್ತು ಲಲಿತ ಕಲೆಗಳಿಗೂ ಕರ್ನಾಟಕದ ಸಾಮಂತರು, ಪಾಳೆಗಾರರು ಸಾಕಷ್ಟು ಪ್ರೋತ್ಸಾಹ ನೀಡಿದರು. ಕೆಳದಿಯ ದೊರೆಗಳಲ್ಲಿ ಅನೇಕರು ಸ್ವತಹ ಕವಿಗಳೂ ವಿದ್ವಾಂಸರು ಆಗಿದ್ದರು. ಅವರ ಆಸ್ಥಾನದಲ್ಲಿ ಅನೇಕ ವಿದ್ವಾಂಸರಿದ್ದು ಅವರು ಸಂಸ್ಕೃತ ಕನ್ನಡ-ಮೊದಲಾದ ಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದರು. ಚಿತ್ರದುರ್ಗದ ಪಾಳೆಯಗಾರರು ಬೃಹತ್ತಾದ ಕೋಟೆಗಳನ್ನು, ಸುಂದರವಾದ ದೇವಾಲಯಗಳನ್ನು ನಿರ್ಮಿಸಿದ್ದರು. ಇವರು ಅನೇಕ ಮಠ ಮತ್ತು ಧಾರ್ಮಿಕ ಸಂಸ್ಥಾನಗಳಿಗೂ ಉದಾರವಾದ ದಾನ-ದತ್ತಿಗಳನ್ನು ನೀಡಿದರು. ಇವರ

ಆಳ್ವಿಕೆಯಲ್ಲಿ ಪಕ್ಷಪಾತ, ಶೋಷಣೆ ಅತ್ಯಲ್ಪವಾಗಿದ್ದಿತು ಎಂದು ಹೇಳಬಹುದು. ಪಾಳೆಯಗಾರರ ಆಳ್ವಿಕೆಯಲ್ಲಿ ಬಹುಮಟ್ಟಿಗೆ ಶಾಂತಿ, ಭದ್ರತೆ ನೆಲೆಸಿದ್ದು ಜನರು ನೆಮ್ಮದಿಯಿಂದ ಜೀವಿಸುತ್ತಿದ್ದರು. ಅವರು ಆಡಳಿತ ವ್ಯವಸ್ಥೆಯಲ್ಲಿ ಸುಖೀ ತತ್ವಗಳಿಗೆ ಹೆಚ್ಚು ಗಮನ ನೀಡಿದ್ದರು. ರಾಷ್ಟ್ರ ಧರ್ಮವನ್ನು ಉಳಿಸಿಕೊಂಡು ಬರುವಲ್ಲಿ ಈ ಪಾಳೆಯಗಾರರು ಉಪಯುಕ್ತವಾದ ಸೇವೆಯನ್ನು ಸಲ್ಲಿಸುತ್ತಿದ್ದರು.

ಹದಿನೇಳು ಮತ್ತು ಹದಿನೆಂಟನೆ ಶತಮಾನಗಳಲ್ಲಿ ಪಾಳೆಯಗಾರರಲ್ಲಿ ಬೆಳೆದ ಪರಸ್ಪರ ದ್ವೇಷ-ವೈಷಮ್ಯ, ಅಧಿಕಾರ ವಿಸ್ತರಣಾಕಾಂಕ್ಷೆ ಮೊದಲಾದ ಕಾರಣಗಳಿಂದ ಪಾಳೇಪಟ್ಟುಗಳು ಕ್ಷೀಣಿಸಿದವು. ಕೆಳದಿ, ಮೈಸೂರು ಮೊದಲಾದವು ರಾಜತ್ವದ ಸ್ಥಾನವನ್ನು ಪಡೆದವು. ಹೈದರ್ ಮತ್ತು ಟೀಪೂ ಮೈಸೂರು ರಾಜ್ಯವನ್ನು ವಿಸ್ತರಿಸಿ ಎಲ್ಲಾ ಪಾಳೆಯಪಟ್ಟುಗಳನ್ನು ಕೊನೆಗಾಣಿಸಿದರು.

ಯುರೋಪಿನ ಫ್ಯೂಡಲ್ ವ್ಯವಸ್ಥೆಗಿಂತ ಭಿನ್ನವಾಗಿದ್ದ ಪಾಳೆಯಗಾರರ ವ್ಯವಸ್ಥೆಯಲ್ಲಿ ಆಡಳಿತವು ದಕ್ಷತೆಯಿಂದ ಕೂಡಿದ್ದು ಜನರಲ್ಲಿ ಶಾಂತಿ, ಸುಭಿಕ್ಷಗಳು ನೆಲೆಸಿದ್ದವು. ವಿಜಯನಗರ ಸಾಮ್ರಾಟರ ಸಾಮಂತರಾಗಿ ಅಧಿಕಾರಕ್ಕೆ ಬಂದ ಅನೇಕ ಪಾಳೆಯಗಾರರು ಅವರಿಗೆ ಉಪಯುಕ್ತವಾದ ಸೇವೆಯನ್ನು ಸಲ್ಲಿಸಿದರು. ಅನೇಕ ವೇಳೆ ಅವರ ಸಾಮ್ರಾಜ್ಯವನ್ನು ರಕ್ಷಿಸಿದರು. ಎಲ್ಲಕ್ಕಿಂತ ಮಿಗಿಲಾಗಿ ವಿಜಯನಗರದ ಪರಂಪರೆಯನ್ನು ಕಾಪಾಡಿ ರಕ್ಷಿಸಿ ಬೆಳೆಸಿದರು.

ಮಧ್ಯಕಾಲೀನ ಯುಗದಲ್ಲಿ ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ ಪಾಳೆಯಗಾರರು ಆಧುನಿಕ ಯುಗದಲ್ಲೂ ಮಹತ್ವದ ಸೇವೆಯನ್ನು ಸಲ್ಲಿಸಿದರು. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಇವರು ತಮ್ಮದೇ ಆದ ಕೊಡುಗೆಯನ್ನು ಸಲ್ಲಿಸಿದ್ದಾರೆ. ಬ್ರಿಟಿಷರ ವಿರುದ್ಧ ದಂಗೆ ಎದ್ದವರಲ್ಲಿ ಪಾಳೆಯಗಾರರೇ ಮೊದಲಿಗರೆಂದು ಕೆಲವು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದಲ್ಲಿಯೂ ಇವರ ಪಾತ್ರ ಮಹತ್ತರವಾದುದು. ಸುರಪುರದ ಚಿಕ್ಕ ವೆಂಕಟಪ್ಪನಾಯಕ, ನರಗುಂದದ ಬಾಬಾಸಾಹೇಬ ಮೊದಲಾದ ನಾಯಕರು, ಮುಂಡರಗಿ ಭೀಮರಾಯನಂತಹ ವೀರರು ಹಲಗಲಿಯ ಬೇಡರು ಬ್ರಿಟಿಷರ ವಿರುದ್ಧ ಹೋರಾಟವನ್ನು ಪ್ರಾರಂಭಿಸಿ ಸ್ವಾತಂತ್ರ್ಯದ ಕಹಳೆಯನ್ನು ಮೊಳಗಿದರು.

○

ಡಾ. ಶ್ರೀನಿವಾಸ ಪಾಡಿಗಾರ

# ಬಳ್ಳಿಗವತ್ತಿರ್ಗೆ, ಕವತ್ತಿರ್ಗೆ : ಒಂದು ಟಿಪ್ಪಣಿ

ಚಾಲುಕ್ಯ ಇಮ್ಮಡಿ ವಿಕ್ರಮಾದಿತ್ಯನ ಕಾಲದ ಪಟ್ಟದ ಕಲ್ಲಿನ ಎರಡು ಶಾಸನಗಳಲ್ಲಿ 'ಬಳ್ಳಿಗವತ್ತಿರ್ಗೆ' ಎಂಬ ಅಪರೂಪದ ಪದ ಬಳಕೆಯಾಗಿದೆ. ಬಳ್ಳಿ=ವೀಳೆಯದೆಲೆಯ ಬಳ್ಳಿ, ಕವರ್ತೆ=ತೆರಿಗೆ: ಅಂತಾಗಿ ಬಳ್ಳಿ+ಕವರ್ತೆ= ಬಳ್ಳಿಗವರ್ತೆ="ವೀಳೆಯದೆಲೆಯ ಮೇಲೆ ಹಾಕುತ್ತಿದ್ದ ತೆರಿಗೆ" ಎಂಬರ್ಥವನ್ನು ಕನ್ನಡ ನಿಘಂಟು ನೀಡಿದೆ.[1] ಆದರೆ ಶಾಸನಗಳಲ್ಲಿ 'ಬಳ್ಳಿಗವತ್ತಿರ್ಗೆ' ಬಳಸಲ್ಪಟ್ಟಿರುವ ಸಂದರ್ಭ ಮಾತ್ರ ನಿಘಂಟು ನೀಡುವ ಅರ್ಥವನ್ನು ಪುಷ್ಟೀಕರಿಸುವಂತೆ ಕಾಣುವದಿಲ್ಲ.

ಪ್ರಸ್ತುತ ಪದಪ್ರಯೋಗ ಸಂದರ್ಭ ಇಂತಿದೆ :

೧. ಸ್ವಸ್ತಿ ಶ್ರೀ ವಿಕ್ರಮಾದಿತ್ಯಭಟಾರಮ್ಮೂರ್ಮೆ ಕಂಚಿಯಾನ್ಮೂಮೆ ಪರಾಜಿಸಿದೊರಾ ಶ್ರೀ ಲೋಕಮಹಾದೇವಿಯರಾ ಈ ಲೋಕೇಶ್ವರ ಮಾಡಿದ ಸೂತ್ರಧಾರಿಗೆ ಮೂಮೆ ಪೆರ್ಜ್ಜೆಱಿಪುಗೆಯ್ದು ಬಟ್ಟೆಕ್ಕೆ ಈ ವಿಷಯದ ಬಿನ್ನಾಣಿಗಳಾ ಬಳ್ಳಿಗವತ್ತಿರ್ಗೆಯನುಬಿಪಿದ.....[2]

೨. ಶ್ರೀ ಸ್ವಸ್ತಿ ವಿಕ್ರಮಾದಿತ್ಯ ಶ್ರೀ ಪ್ರಿಥಿವೀವಲ್ಲಭ ಮಹಾದೇವಿಯರಾ ದೇಗುಲವಾನ್ ಮಾಡಿದ ಸೂತ್ರ

1. ಕನ್ನಡ ನಿಘಂಟು, ಸಂಪುಟ VI (ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1990), ಪು 6336
2. ಇಂಡಿಯನ್ ಆ್ಯಂಟಿಕ್ವೇರಿ, ಸಂಪುಟ X, ಪು. 164

ಧಾರಿ ಶ್ರೀ ಗುಣ್ಡನ್ ಅನಿವಾರಿತಾಚಾರಿಗೆ ಮೂವೆ ಪೆರ್ಜ್ಜೆಱೆ ಪು ಪಟ್ಟವಮುಂ ತ್ರಿಭುವನಾಚಾರಿಯೆನ್ದು ಪೆಸರಿತ್ತು ಪ್ರಾಸಾದಜ‌ಕ್ಕೆಯ್ದ ಪ್ರಿಥಿವಿಯಾ ಬಿನ್ನಾಣಿಗಳಾ ಬಳ್ಳಿಗವಾತ್ತ್ರ್ ಇಲ್ಲ ...[3]

ಮೇಲಿನ ಎರಡೂ ಸಂದರ್ಭಗಳಲ್ಲಿ "ದೇಗುಲಮಾನ್ ಮಾಡಿದ ಸೂತ್ರಧಾರಿ", "ಪ್ರಾಸಾದಜ‌ಕ್ಕೆಯ್ದ ಬಿನ್ನಾಣಿಗಳ"ಗೆ ಸಂಬಂಧಿಸಿದಂತೆ "ಬಳ್ಳಿಗವತ್ತ್ರ್" ಉಲ್ಲಿಖಿತವಾಗಿರುವದು ಸ್ಪಷ್ಟವಿದೆ. 'ಬಿನ್ನಾಣಿ' ಎಂದರೆ ಚತುರ, ಜಾಣ, ಕರಕುಶಲಿ, ಕುಶಲ ಕಾರ್ಯಗಳಲ್ಲಿ ನೈಪುಣ್ಯವುಳ್ಳವ, ಇತ್ಯಾದಿ.[4] ಶಾಸನೋಲ್ಲಿಖಿತ ಬಿನ್ನಾಣಿಗಳು ದೇಗುಲ ನಿರ್ಮಾಣ ಕಾರ್ಯದಲ್ಲಿ ಪಾಲ್ಗೊಂಡ ಸೂತ್ರಧಾರಿ–ರೂಪಾರಿವರ್ಗದವರು. 'ಬಳ್ಳಿ', 'ಬಳಿ', 'ಬೞಿ' ಪದಕ್ಕೆ ವಂಶ, ಕುಲ, ಮನೆತನ ಎಂಬರ್ಥವಿರುವದು ತಿಳಿದ ಸಂಗತಿ. ಪದ ಪ್ರಯೋಗ ಸಂದರ್ಭದ ದೃಷ್ಟಿಕೋನದಿಂದ ಲೋಕಮಹಾದೇವಿಯ ಲೋಕೇಶ್ವರ (ಈಗಿನ ವಿರೂಪಾಕ್ಷ) ದೇವಾಲಯವನ್ನು ಸಫಲ ಸುಂದರವಾಗಿ ನಿರ್ಮಿಸಿದ ಸಾಧನೆಗಾಗಿ ಆರಸನು ಆದರ ಸೂತ್ರಧಾರಿಗಳ ಮನೆತನದ ಮೇಲಿನ ತೆರಿಗೆಯನ್ನು ಬಿಟ್ಟನೆಂದು ಅರ್ಥವಿಸುವದು ಇಲ್ಲಿ ಸಮಂಜಸವಾದೀತು.

'ಕವತ್ತ್ರ್'ಗೆ ಅನ್ವಯಿಸುವಂತೆ ಇನ್ನೊಂದು ವಿಷಯವನ್ನಿಲ್ಲಿ ಪ್ರಸ್ತಾಪಿಸಬೇಕು. ಒಂದು ರೀತಿಯ 'ತೆರಿಗೆ' ಎಂಬರ್ಥದಲ್ಲಿ ಕೆಲವು ಶಾಸನಗಳಲ್ಲಿದ್ದು ಬಳಸಲ್ಪಟ್ಟಿದೆ. "ದಣ್ಣಡೊಳಂ **ಕವತ್ತ್ರೆಯೊಳವಪುತ್ರಿಕ** ದ್ರವ್ಯದ ದಶವನದೊಳಂ ಪುಟ್ಟಿದ ದ್ರವ್ಯಮಂ ...ದೇಯಿಂಗೆಱೆಗೆ ..."[5], "ಮನೆದೆಱೆ ಮದುವೆದೆಱೆ....ಕವತ್ತ್ರ್ ಸೇಸೆ ಒಸಗೆ...."[6] ಮುಂತಾದ ಪ್ರಯೋಗಗಳಲ್ಲಿ 'ಕವತ್ತ್ರ್' ನಿರ್ದಿಷ್ಟ ರೀತಿಯ ತೆರಿಗೆಯಾಗಿತ್ತೆಂದು ಸೂಚನೆಯಿದೆ. ಬಾದಾಮಿಯ ಜಂಬುಲಿಂಗ ದೇವಾಲಯದ ಕಂಬದಲ್ಲಿರುವ ಕ್ರಿ. ಶ. ೭–೮ ನೇ ಶತಮಾನದ ಒಂದು ಶಾಸನದಲ್ಲಿ ಆ ಊರ "ಸಮ್ಮಗಾಱರಾ ಕವಱ್ತ"ಯನ್ನು ಬಿಟ್ಟ

3. ಅದೇ, ಪು 164-165
4. ಕನ್ನಡ ನಿಘಂಟು, ಸಂಪುಟ VI, ಪು. 6467
5. ಎಪಿಗ್ರಾಫಿಯಾ ಇಂಡಿಕಾ, ಸಂಪುಟ XX, ಪು 68, ಸಾಲು 40 (ಕ್ರಿ. ಶ. 1012)
6. ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್ 1932, ಪು. 172, ಸಾಲು 30 (ಕ್ರಿ. ಶ. 1069)

ವಿಷಯ ಹೇಳಲ್ಪಟ್ಟಿದೆ.[7] “ಬಿನ್ನಾಣಿಗಳಾ ಬಳ್ಳಿಗವರ್ತ್ತಿ”, “ಸಮ್ಮಗಾಱರಾ ಕವಟ್ತಿ” ಎಂಬೀ ಪ್ರಯೋಗಗಳು “ಕವರ್ತ್ತಿ” ಬಹುಶಃ ಕುರಕುಶಲಕಾರ್ಮಿಕ ವೃತ್ತಿಯನ್ನವಲಂಬಿಸಿದ್ದ ಓಜರು, ಸಮಗಾರರು, ಕಂಬಾರರು ಮುಂತಾದವರ ಮನೆತನದ ಮೇಲಿನ “ವೃತ್ತಿ ತೆರಿಗೆ” ಎಂಬರ್ಥದೆಡೆಗೆ ಬೆರಳು ತೋರುತ್ತವೆ.

○

---

7. ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್, ಸಂಪುಟ I, ನಂ. 4, ಪು. 9.

ಕ್ಯಾತನಹಳ್ಳಿ ರಾಮಣ್ಣ

# ಜಾನಪದ ಕ್ಷೇತ್ರಕಾರ್ಯದ ಕೆಲವು ವಿಶಿಷ್ಟ ಅನುಭವಗಳು

ಉತ್ತರ ಕರ್ನಾಟಕ ಭಾಗಕ್ಕೆ ಅನೇಕ ಸಲ ಜಾನಪದ ಕ್ಷೇತ್ರಕಾರ್ಯಕ್ಕಾಗಿ ಹೋಗಿ ಬಂದಿದ್ದೇನೆ. ಆ ಸಂದರ್ಭಗಳಲ್ಲಿ, ಸಾಹಿತ್ಯ ಸಂಗ್ರಹಣೆಯ ನಡುವೆ ಅನೇಕ ಬಗೆಯ ಇತರ ಅನುಭವಗಳೂ ಆಗಿವೆ. ಅಂಥವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ದಾಖಲಿಸುತ್ತಿದ್ದೇನೆ.

ಗುಲ್ಬರ್ಗ ನಗರದಲ್ಲಿ ಒಮ್ಮೆ ಅಗತ್ಯ ಮಾಹಿತಿಗಾಗಿ ಅಲೆಯುತ್ತಿದ್ದಾಗ ಒಂದು ಆಶ್ಚರ್ಯಕರ ಸಂಗತಿ ತಿಳಿದು ಬಂದಿತು. ಯಕ್ಷಗಾನ ವೇಷಭೂಷಣಗಳದೇ ಒಂದು ಅಂಗಡಿ ಯಾದ್ಗೀರ್‌ನಲ್ಲಿದೆ ಎಂಬುದೇ ಆ ಸಂಗತಿ. 'ನೀಂವ್ ಯಾದ್ಗೀರ್‌ಗಿ ಹ್ವಾದ್ರಿ ಅಂದ್ರ, ಅಲ್ಲಿ ಚಕ್ರಗಟ್ಟೆ ಮೈನ್‌ರೋಡ್‌ದಾಗ ಬೈಲಾಟ್ ದುಕಾನ್ ಐತ್ರಿ, ನಿಮಗ ಮಾಹಿತಿ ಏನರೆ ತಿಳಿಯೂದಿತ್ತಂದ್ರ ಅಲ್ಲಿ ಹ್ವಾಗ್ರಿ'—ಎಂದರು ಒಬ್ಬರು. ಅಲ್ಲೇ ಹೊರಪೇಟೆಯಲ್ಲಿ ಎಪ್ಪತ್ತೈದು ವರ್ಷ ವಯಸ್ಸಿನ ಅಂಬಿಗರ ರಾಯಪ್ಪ ಎಂಬ ಮುತ್ಯಾ ಇರುವುದಾಗಿಯೂ, ಅವನು ಸುರಪುರದ ಅರಸ ಮೊಂಡುಗೈ ವೆಂಕಟಪ್ಪ ನಾಯಕನನ್ನು ಕುರಿತ ಲಾವಣಿ ಹಾಡುವುದಾಗಿಯೂ ಅವರು ಹೇಳಿದರು.

ಯಾದ್ಗೀರ್ ತಲುಪಿದಾಗ ಕತ್ತಲಾಗಿತ್ತು. ಯಾವುದೋ ಒಂದು ಕೊಳಕು ಲಾಡ್ಜ್‌ನಲ್ಲಿ ತಂಗಿದೆ. ಮರುದಿನ ಬೆಳಿಗ್ಗೆ ಎದ್ದವನೇ ನಿತ್ಯವಿಧಿಗಳನ್ನು ಮುಗಿಸಿ ಹೊರಟೆ. ನಾನು ತಂಗಿದ್ದುದು ಬಸ್ ನಿಲ್ದಾಣಕ್ಕೂ ರೈಲು ನಿಲ್ದಾಣಕ್ಕೂ ನಡುವೆ ಇರುವ ಜಾಗ. ಊರು ಅಲ್ಲಿಂದ ಎರಡು ಮೈಲಿ ದೂರವಿತ್ತು. ಊರು ಯಾವ ದಿಕ್ಕಿನಲ್ಲಿದೆ ಎಂದು ಕೇಳಿ ಆ ದಿಕ್ಕಿನಲ್ಲಿ

ನಡೆಯತೊಡಗಿದೆ. ದೂರದಲ್ಲಿ ಒಂದು ಗುಡ್ಡ ಕಾಣಿಸಿತು. ಹತ್ತಿರ ಹೋದಹಾಗೆಲ್ಲ ಆ ಗುಡ್ಡದ ಮೇಲೆ ಆಕರ್ಷಕವೆನಿಸುವ ಕೋಟೆ ಕಾಣಿಸಿತು. ಇಲ್ಲಿ ಹಿಂದೆ ಯಾರೋ ಆಳಿದು ಹೋಗಿರಬೇಕು, ವಿಚಾರಿಸೋಣ ಎಂದುಕೊಂಡೆ. ಸಿಟಿಬಸ್‌ನ ವ್ಯವಸ್ಥೆ ಇದ್ದರೂ ಸ್ಥಳ ಪರಿಚಯಕ್ಕಾಗಿ ನಡೆದೇ ಹೊರಟಿದ್ದೆ. ಆ ಗುಡ್ಡದ ಬುಡದಲ್ಲಿ ಊರು ಇರಬೇಕೆಂಬ ನನ್ನ ಊಹೆ ನಿಜವಾಗಿತ್ತು. ಆದರೆ ಅದು ಗುಡ್ಡದ ಸುತ್ತಲೂ ಹರಡಿಕೊಂಡಿತ್ತು. ನಡೆಯುತ್ತಿದ್ದ ರಸ್ತೆಯಲ್ಲೇ ನಡೆಯುತ್ತಿದ್ದರೂ, ಅಂಬೇಡ್ಕರ್ ಚೌಕ, ಅನಂತರ ಬಜಾರು, ಬಜಾರಿನ ನಡುವೆ ಅಲ್ಲೊಂದು ಕಡೆ ಗಾಂಧಿ ಪ್ರತಿಮೆ, ಹೀಗೆ ಗುಡ್ಡವನ್ನೇ ಗಮನಿಸುತ್ತ ನಡೆದಿದ್ದಾಗ ವಾಸ್ತವವಾಗಿ ಗುಡ್ಡವನ್ನು ಸುತ್ತು ಹಾಕತೊಡಗಿದ್ದೆ ! ಕಡೆಗೆ ನಾನು ಬಂದ ಸ್ಥಳಕ್ಕೇ ಹೋಗುತ್ತಿದ್ದೇನೇನೊ ಎಂಬ ಸಂಶಯ ಬಂದಾಗ ರಸ್ತೆಯ ಬದಿಯಲ್ಲಿ ಉರುಳಿಬಿದ್ದ ಮರದ ಕಾಂಡದ ಮೇಲೆ ಕುಳಿತಿದ್ದ ವಯಸ್ಸಾದವರೊಬ್ಬರನ್ನು ವಿಚಾರಿಸಿದೆ—ಈ ಗುಡ್ಡದ ಕೋಟೆಯ ಬಗ್ಗೆ ಏನಾದರೂ ಗೊತ್ತೆ ಅಂತ. ಅವನು 'ನನಗಷ್ಟ ಖೂನಿಲ್ರಿ. ರಾಯಪ್ಪ ಅಂತ್ಹೇಳಿ ಒಬ್ಬ ಮುತ್ಯಾ ಅದಾನ. ಅವಂಗ ಖೂನದ ನೋಡ್ರಿ'—ಎಂದು ಹೇಳಿ, ಒಬ್ಬ ಹುಡುಗ ನನ್ನು ಕರೆದು ರಾಯಪ್ಪನ ಮನೆ ತೋರಿಸುವಂತೆ ಹೇಳಿದ. ಅಷ್ಟು ಹೊತ್ತಿಗೆ ದೂರ ದಲ್ಲಿ ಕಾಣಿಸಿದ ಒಬ್ಬ ಮುದುಕನನ್ನು ತೋರಿಸಿ 'ಕಗೋ ಅಲ್ಲೆ ಅದಾನ್ನೋಡ್ರಿ. ಅಂವನಃ ರಾಯಪ್ಪ, ಅಂದ. 'ಸರಿ. ನಾ ನೋಡ್ತೀನ್ರಿ' ಅಂತ ಹೇಳಿ ಎದ್ದು ಬಿರ ಬಿರನೆ ನಡೆದು ರಾಯಪ್ಪನನ್ನು ಸಮೀಪಿಸಿದೆ.

ಆಗಂತುಕನಂತೆ ತೋರುತ್ತಿದ್ದುದರಿಂದಲೋ ಏನೋ ರಾಯಪ್ಪ ನನ್ನನ್ನೇ ಮಿಕಿಮಿಕಿ ನೋಡುತ್ತಿದ್ದ. ಹತ್ತಿರ ಹೋಗಿ ನಿಂತೆ. ಹಾಗೇ ನೋಡುತ್ತಿದ್ದ. 'ಯಾವ ಕಡೆ ನಡದಿದೀರಿ ಯಜಮಾನ್ರೇ ?' ಎಂದು ಕೇಳಿದೆ. ಯಜಮಾನರೇ ಎಂಬ ಶಬ್ದ ಕೇಳಿ ಅವನಿಗೆ ಆಶ್ಚರ್ಯವಾಗಿರಬೇಕು. ಮಾತು ಹೊರಡಲಿಲ್ಲ. ದಿಗ್ಭ್ರಮೆಗೊಂಡವನಂತೆ ಹಾಗೇ ನೋಡುತ್ತನಿಂತ. ಮತ್ತೆ ಅದೇ ಪ್ರಶ್ನೆ ಹಾಕಿದೆ. 'ಪತ್ತಾ ಹತ್ತಿಲ್ರೀ ಯಪ್ಪ' ಅಂದ. 'ಇದೇ ಮೊದಲು ನೋಡ್ತಾ ಇರೋದು. ಇನ್ನು ಪತ್ತಾ ಆದ್ರೂ ಹ್ಯಾಂಗ್ ಹತ್ತ್ಯೆತ್ರಿ ?' ಅಂದೆ. ಸುಮ್ಮನೆ ನಿಂತ. 'ನಿಮ್ಮನ್ನು ನೋಡುವ ಸಲುವಾಗಿ ಮೈಸೂರಿನಿಂದ ಬಂದಿದೀನ್ರಿ' ಅಂದೆ. 'ಮೈಸೂರು ! ಮೈಸೂರು !!' ಎಂದು ಉಚ್ಚರಿಸುತ್ತಾ, ನಾಟಕೀಯವಾಗಿ 'ಆಹಾ, ದೊರೆಗಳು ! ದೊರೆಗಳು !' ಎಂದು ಹೇಳುತ್ತಾ, ಊರಿ ನಿಂತಿದ್ದ ದೊಣ್ಣೆಯನ್ನು ಬಗಲಿಗೆ ಸಿಕ್ಕಿಸಿಕೊಂಡು ನನ್ನ-ಪಾದ ಹಿಡಿಯಲು ಬಗ್ಗಿದ. ಅವನ ಈ ಬಗೆಯ ವರ್ತನೆ ನನಗೆ ಅನಿರೀಕ್ಷಿತವಾಗಿತ್ತು. 'ಛೆ ಛೆ. ಏನು ಮಾಡ್ತಿದ್ದೀರ್ರಿ ಯಜಮಾನ್ರೆ? ಬೇಡಿ ಬೇಡಿ, ಏಳಿ, ಏಳಿ' ಎಂದು ಹೇಳುತ್ತ ಅವನ ತೋಳುಗಳನ್ನು ಹಿಡಿದು ಎಬ್ಬಿಸಿದೆ. ಎದ್ದು ನೆಟ್ಟಗೆ ನಿಂತಮೇಲೆ 'ನೀವು ದೊಡ್ಡವರು, ಹಿಂಗೆಲ್ಲಾ ಮಾಡ

ಬಾರದು' ಅಂದೆ. 'ಐ, ತಗೀರಿ ತಗೀರಿ. ನೀಂವು ಮೈಸೂರ್ನಿಂದ ಬಂದೀರಿ, ದೊರೆಗಳು' ಎಂದು ಮತ್ತೆ ಬಗ್ಗಲು ಯತ್ನಿಸಿದ. ನಾನು ಬಿಡಲಿಲ್ಲ. ಎರಡೂ ತೋಳುಗಳನ್ನು ಹಿಡಿದು 'ನಿಮ್ಮ ಹತ್ರ ಸ್ವಲ್ಪ ಮಾತಾಡಬೇಕಿತ್ತು' ಅಂದೆ. 'ಬರ್ರಿ ಕೂಡಾಣು' ಎಂದು ಹೇಳುತ್ತ ತನ್ನ ಗುಡಿಸಿಲತ್ತ ಹೊರಟ. 'ಬರ್ರಿ ಸ್ವಲ್ಪ ಚಾ ಕುಡಿದು ಬರೋಣ' ಅಂದೆ.

ನಾನು ಬಂದ ದಾರಿಯಲ್ಲಿಯೇ ಮತ್ತೆ ಹಿಂದಕ್ಕೆ ಪೇಟೆ ಬೀದಿಯ ಕಡೆಗೆ ಹೊರಟೆವು. ಹೋಟೆಲಲ್ಲಿ ನನ್ನ ಸಮದಲ್ಲಿ ಕೂರಲು ಒಪ್ಪದೆ, ಬೇರೆ ಕಡೆ ಸ್ಥಳವಿಲ್ಲದೆ, ಹಾಗೇ ನಿಂತ. 'ಬರ್ರಿ ಇಲ್ಲೆ' ಅಂದೆ. 'ಐ' ಎಂದು ದನಿ ಎಳೆಯುತ್ತ ಒಂದು ಬಗೆಯ ದೀನ ಭಂಗಿಯಲ್ಲಿ ನಿಂತ. ಎದ್ದು ಕೈ ಹಿಡಿದು 'ಬರ್ರಿ ಬರ್ರಿ' ಎಂದು ಹೇಳುತ್ತ ಪಕ್ಕದಲ್ಲಿ ಕೂರಿಸಿಕೊಂಡೆ. ಉಳಿದ ಮಂದಿ ನಮ್ಮಿಬ್ಬರ ಕಡೆಗೇ ನೋಡುತ್ತಿದ್ದರು. ನನ್ನ ನಡವಳಿಕೆಯಿಂದ ಅಲ್ಲಿದ್ದವರೆಲ್ಲ ಅಚ್ಚರಿಗೊಂಡಂತಿತ್ತು. ರಾಯಪ್ಪ ಅತ್ಯಂತ ಸಂಕೋಚದಿಂದ ನಾಚಿಕೆಯಿಂದ ಮೈಯನ್ನೆಲ್ಲ ಮುದುರಿಕೊಂಡು ಮದುವೆಯ ಹೆಣ್ಣಿನಂತೆ ಹಿಡಿಯಾಗಿ ಕೂತ. ಚಾ ಗೆ ಹೇಳಿದ.

'ಏನಾದರೂ ತಿನ್ರಿ' ಅಂದೆ. ರಾಯಪ್ಪ ಏನೂ ಮಾತಾಡಲಿಲ್ಲ. 'ಏನಿದೇರಿ ?' ಎಂದು ಹೋಟೆಲಿನವನನ್ನು ಕೇಳಿದೆ. 'ಏನೂ ಇಲ್ರಿ. ಬಗಲ್ ದುಕಾನ್ದಾಗ ಬ್ರೆಡ್ ಐತ್ರಿ. ಕುಡ್ಲೇನ್ರಿ ?' ಅಂದ. 'ಕೊಡ್ರಿ' ಅಂದೆ. ಒಂದು ಬನ್ ತಂದು ರಾಯಪ್ಪನ ಕೈಗೆ ಕೊಟ್ಟ. ಅದನ್ನು ಕೈಯಲ್ಲಿ ಹಿಡಿದು ರಾಯಪ್ಪ ನನ್ನ ಕಡೆಗೆ ನೋಡಿದ. 'ನೀವು ತಿನ್ರಿ, ನಂದು ಆಗಿದೆ' ಅಂದೆ. ಹಾಗೇ ಹಿಡಿದುಕೊಂಡು ಕುಳಿತ. ಟೀ ಬಂದ ಮೇಲೆ ನಿಧಾನವಾಗಿ ಮುರಿಯುತ್ತ ಅದ್ದಿಕೊಂಡು ತಿನ್ನತೊಡಗಿದ.

೭೦–೭೫ ವರ್ಷ ವಯಸ್ಸಿನ ರಾಯಪ್ಪನೊಡನೆ ಹೋಟೆಲಿನ ಕಡೆಗೆ ನಡೆಯುತ್ತಿದ್ದಾಗ ನಡೆದ ಮಾತುಕತೆ ಇಷ್ಟು :

"ಮಕ್ಕಳು ಎಷ್ಟು ಮಂದಿ ಇದ್ದಾರೆ ?"

"ಇಬ್ಬರ್ರಿ. ಒಬ್ಬಾಕಿ ಹೆಣಮಗಳು. ಆಕಿ ತನ್ ಗಂಡನ ಮನಿಯಾಗದಾಳ್ರಿ. ಒಬ್ಬ ಮಗ ಅದಾನ್ರಿ. ಅಂವ ಹೇಣ್ತಿ ಮಕ್ಕ ಮಾಡ್ಕೊಂಡಾನ್ರಿ"

"ಮತ್ತೆ ಈಗ ಮಗನ ಹತ್ರಾನೆ ಇದ್ದೀರಿ ಅನ್ರಿ ಹಾಗಾದ್ರೆ ?"

"ಐ, ಹ್ಯಾಂಗ್ರಿ, ಹ್ಯಾಂಗ್ರಿ. ಅಂವ ತನ್ ಹೇಣ್ತಿ ಮಕ್ಕ ನೋಡ್ತಾನ್ರಿ"

"ಮತ್ತೆ ನೀವು ? ನಿಮ್ಮ ಹೆಂಡತಿ ?"

"ಐ, ನನ್ ಹೇಣ್ತಿ ಎಲ್ಲದಾಳ್ರಿ ? ಆಕಿ ಸತ್‌ಹ್ವಾದಳ್ರಿ"

"ಯಾವಾಗ ?"

—ಈ ಪ್ರಶ್ನೆ ಕೇಳಿ, ನಡೆಯುತ್ತಿದ್ದವನು ತಟ್ಟನೆ ನಿಂತುಬಿಟ್ಟ. ಒಂದು ಕ್ಷಣ ಮೌನ. ಎತ್ತಲೋ ಶೂನ್ಯದೃಷ್ಟಿಯಿಂದ ನೋಡುತ್ತ, ಒಂದೆರಡು ನಿಮಿಷ ಆದಮೇಲೆ, ನನ್ನ ಕಡೆಗೆ ತಿರುಗುತ್ತ ಮೆಲ್ಲನೆ-

"ಆರೆಂಟೊರ್ಸ ಆಗಿದ್ದಾತ್ರಿ"

ಎಂದು ಹೇಳಿ, ಅಷ್ಟೇ ತಟ್ಟನೆ ನಡೆಯಲು ತೊಡಗಿದ.

"ಮತ್ತೆ ಈಗ ನಿಮ್ಮನ್ಯಾರ್ರಿ ನೋಡೋರು ?"

—ಈ ನನ್ನ ಪ್ರಶ್ನೆ ಕೇಳಿ ಮತ್ತೆ ನಿಂತ.

"ಯಾರ್ ನೋಡ್ತಾರ ಸಾಬ್ರs"

—ಎಂದು ಹೇಳುತ್ತ ಎರಡು ಕೈಗಳನ್ನೂ ಆಕಾಶದತ್ತ ನೀಡಿದ. ಅಲ್ಲಲ್ಲಿ ಹರಿದ ಅಂಗಿ ಕಚ್ಚೆ, ತಲೆಯ ಮೇಲೆ ಕೊಳಕಾದ ರುಮಾಲು, ಎಡ ಹೆಗಲ ಮೇಲೆ ಸವೆದು ಕಂದು ಬಣ್ಣಕ್ಕೆ ತಿರುಗುತ್ತಿದ್ದ ಹರಕು ಗೊಂಗಡಿ. 'ಅಯ್ಯೋ ಪಾಪ' ಅನ್ನಿಸಿದರೂ ನಾನು ತಾನೆ ಏನು ಮಾಡುವವನಿದ್ದೆ ?

ರಾಯಪ್ಪ ತುಂಬ ಸ್ವಾರಸ್ಯವಾಗಿ ಮಾತನಾಡುವ ಕಲೆಯನ್ನು ರೂಢಿಸಿ ಕೊಂಡಿದ್ದ. ಮಾತಿನ ನಡುವೆ ಭಾವಕ್ಕೆ ತಕ್ಕಂತೆ ನಟನೆ ಮಾಡುವುದಾಗಲಿ, ಹಲ್ಕಿರಿ ಕಚ್ಚಿ ಕಣ್ಣು ಮರಳಿಸಿ ಒಂದು ಥರಾ ಒತ್ತುಧಾಟಿಯಲ್ಲಿ 'ನ್ನವ್ವನ್ನಡ' ಅನ್ನುತ್ತಿದ್ದುದಾಗಲಿ, ತುಂಬ ಮೋಜಿನವಾಗಿದ್ದುವು. ಇರಲಿ. ಹೋಟೆಲಿಂದ ಬಂದು ಅವನ ಗುಡಿಸಿಲಿನ ಮುಂದೆ ಕುಳಿತಾಗ, ಅಲ್ಲಿನ ಭಾರೀ ಶ್ರೀಮಂತರಾದ ಗೌಡರ ವಂಶಾವಳಿಯನ್ನು ಹೇಳಿದ. ಆ ವಂಶಾವಳಿ ಸ್ವಲ್ಪಮಟ್ಟಿಗೆ ಸುರಪುರದ ಅರಸರಿಗೂ ಸಂಬಂಧಪಟ್ಟಿದ್ದುದರಿಂದ ಆಸಕ್ತಿಯಿಂದಲೇ ಕೇಳುತ್ತಿದ್ದೆ.

ಈಗ ಇರುವ ಗೌಡರ ತಂದೆಯವರು ಸುರಪುರದ ಅರಸ ಮೊಂಡುಗೈ ವೆಂಕಟಪ್ಪ ನಾಯಕರೊಂದಿಗೆ ಬೇಟೆಯಾಡಿದವರು. ಅವರ ಹೆಸರು ಕರಿಯಣ್ಣ ಗೌಡರು, ಜಾತಿಯಿಂದ ಈಡಿಗರು. ಅವರು ಹುಲಿ ಬೇಟೆಯಲ್ಲಿ ತುಂಬ ನಿಷ್ಣಾತ ರಂತೆ. ಅಂತೆಯೇ ತುಂಬ ಪ್ರಸಿದ್ಧರು ಕೂಡ. ಸುರಪುರದ ಅರಸರೊಂದಿಗೆ ಕರಿಯಣ್ಣಗೌಡರು ಬೇಟೆಯಾಡಲು ಹೊರಟಾಗ ಈ ರಾಯಪ್ಪನ ತಂದೆಯವರೇ ಎಷ್ಟೋ ಸಲ ಹೊಳೆ ದಾಟಿಸಿದ್ದರಂತೆ. ಇಂಥ ವಿಷಯಗಳನ್ನು ಎದೆ ತಟ್ಟಿ ಹೆಮ್ಮೆ ಯಿಂದ ಹೇಳಿಕೊಳ್ಳುವಾಗ ರಾಯಪ್ಪ ತುಂಬ ಭಾವಪೂರ್ಣ ಸ್ಥಿತಿಗೇರುತ್ತಿದ್ದ.

ತೀರಾ ಇತ್ತೀಚಿನವರೆಗೂ, ಅಂದರೆ ಸುರಪುರದ ಅರಸರ ಆಡಳಿತ ಕೊನೆಗೊಳ್ಳುವ ವರೆಗೂ, ಅರಸರಿಂದ, ಗೌಡರಿಂದ ಹಾಗೂ ನಿಜಾಮರಿಂದ, ಹೀಗೆ ಮೂರು ಕಡೆ ಯಿಂದಲೂ ಇವರ ಕುಟುಂಬಕ್ಕೆ ಇನಾಮು ದೊರೆಯುತ್ತಿದ್ದಿತಂತೆ. 'ಇನಾವ್ ದಾರ್ರ್ರದೀವ್ರಿ ನಾಂವ್' ಎಂದು ಎದೆ ತಟ್ಟಿಕೊಂಡ ರಾಯಪ್ಪ.

ಸುರಪುರದ ಕೊನೆಯ ಅರಸ ಮೊಂಡುಗೈ ವೆಂಕಟಪ್ಪನಾಯಕರ ಅಂತ್ಯ ವನ್ನು ರಾಯಪ್ಪ ತುಂಬ ನೋವಿನ ದನಿಯಲ್ಲಿ ಉಸುರಿದ. ಅರಸರ ಆಡಳಿತ ಕೊನೆಗೊಳ್ಳುವುದಕ್ಕೆ ಹಾಗೂ ಅರಸ ತಲೆಮರೆಸಿಕೊಂಡು ಬತ್ತಲಗುದರಿ ಹತ್ತಿ ಓಡಿ ಹೋಗುವುದಕ್ಕೆ, ಆ ಮೂಲಕ ಸುರಪುರದ ಅರಸೊತ್ತಿಗೆಯ ನಾಮಾವ ಶೇಷಕ್ಕೆ, ಅರಸರ ಬಳಿಯೇ ಮಂತ್ರಿಯಾಗಿದ್ದವರ ಪಿತೂರಿಯೇ ಕಾರಣವಾಯಿತೆಂಬ ಸಂಗತಿಯನ್ನು ತಿಳಿಸಿದ ರಾಯಪ್ಪ, ಸುರಪುರದ ಅರಸರನ್ನು ಸುಭಾಷ್‌ಚಂದ್ರ ಬೋಸ್ ಅವರಿಗೆ ಹೋಲಿಸಿದ. ಬೋಸರಂತೆಯೇ ಅರಸರ ಅಂತ್ಯ ಕೂಡ ಕೊನೆಗೂ ರಹಸ್ಯವಾಗಿಯೇ ಉಳಿದದ್ದನ್ನು ನೆನೆದುಕೊಂಡ ವಿಷಾದದಿಂದ.

ಕರ್ನಾಟಕದ ಬ್ರಿಟಿಷರ ಕಾಲದ ಚರಿತ್ರೆಯಲ್ಲಿ ಪ್ರಧಾನವೂ ವಿಶಿಷ್ಟವೂ ಆದ ಶೌರ್ಯ ಸಾಹಸಗಳನ್ನು ಮೆರೆದ ಬೇಡ ಜನಾಂಗಕ್ಕೆ ಚರಿತ್ರೆಯಲ್ಲಿ ಸಹಜವಾಗಿ ಸಿಕ್ಕ ಬೇಕಾದ ಸ್ಥಾನ ಸಿಕ್ಕದೆ ವಂಚಿತ ಜನಾಂಗಗಳ ಪಟ್ಟಿಯಲ್ಲಿ ಸೇರಿಹೋಗಲು ಎಂಥ ಪಿತೂರಿ ನಡೆದಿದ್ದಿರಬೇಕು ಎಂಬ ಯೋಚನೆ ಬಂದಾಗ ಆ ಧೀರರ ಬಗ್ಗೆ ಅನುಕಂಪೆಯ ಭಾವವಲ್ಲದೆ ನನ್ನ ಮನಸ್ಸಿನಲ್ಲಿ ಮತ್ತೇನು ತಾನೆ ಉದ್ಭವಿಸಲು ಸಾಧ್ಯವಿತ್ತು ?

ಆಮೇಲೆ, ಯಾದ್ಗಿರ್‌ನಲ್ಲೇ ಇದ್ದ ಬೇಡರ ಓಣಿಗೆ ನನ್ನನ್ನು ಕರೆದೊಯ್ಯು ವಂತೆ ರಾಯಪ್ಪನನ್ನು ಕೇಳಿಕೊಂಡೆ. ಅಲ್ಲಿ ಸುರಪುರದ ಇತಿಹಾಸವನ್ನು ಕುರಿತ್ವ ಲಾವಣಿಗಳೇನಾದರೂ ದೊರೆಯಬಹುದೆಂಬ ಆಶಯ ನನ್ನದಾಗಿತ್ತು. ಆದರೆ ಏನೂ ದೊರೆಯದೆ ಹೋದುದು-ಏನೂ ಇರಲಿಲ್ಲವೆಂದಲ್ಲ, ಸೂಕ್ತ ಸಮಯ ಆದಾಗಿರಲಿಲ್ಲ– ನನ್ನ ದುರದೃಷ್ಟ.

ರಾಯಪ್ಪ ಬೇಡರ ಓಣಿಗೆ ನನ್ನನ್ನು ಒಯ್ಯುವ ಹಾದಿಯಲ್ಲಿ, ನೂರು ವರ್ಷಗಳ ಹಿಂದೆ ಕಟ್ಟಲ್ಪಟ್ಟದ್ದ, ಅರಮನೆಯಂತಿದ್ದ, ಕರಿಯಣ್ಣಗೌಡರ ಮನೆಗೆ ಕರೆದುಕೊಂಡು ಹೋದ. ಅದರಲ್ಲೀಗ ಕರಿಯಣ್ಣಗೌಡರ ಮೊಮ್ಮಕ್ಕಳು ವಾಸಿಸುತ್ತಿದ್ದರು. ಆ ಗತ ವೈಭವವನ್ನು ಅಷ್ಟೇ ವೈಭವೋಪೇತವಾಗಿ ಈಗಿನವರು ಉಳಿಸಿಕೊಂಡು ಬಂದಿದ್ದರು. ಆ ವೈಭವವನ್ನು ಕಂಡು ಬೆರಗಾದೆ. ಹತ್ತನೆಯ

ತರಗತಿಯಲ್ಲಿ ಕಲಿಯುತ್ತಿದ್ದ ಆ ಮನೆಯ ಮಗ ರಂಗನಾಥ ಮನೆಯನ್ನೆಲ್ಲ ತೋರಿಸುತ್ತ ನಡೆದಾಗ ಸುರಂಗ ಮಾರ್ಗವೊಂದರ ಕಡೆಗೆ ಗಮನ ಸೆಳೆದ. ಆದರೆ ಅದೀಗ ಬಳಕೆಯಲ್ಲಿರಲಿಲ್ಲ. ಮುಚ್ಚಿ ಎಷ್ಟೋ ವರ್ಷಗಳಾಗಿದ್ದುವು. ಅಲ್ಲಿಂದ ಊರ ಹೊರಗಿನ ಗುಡ್ಡವೊಂದಕ್ಕೆ ಮಾರ್ಗವಿರುವುದಾಗಿ ಹೇಳಿದ.

'ನಾನು ಹೊರಡುತ್ತೇನೆ' ಅಂದಾಗ 'ನಿಮ್ಮನ ಮೈಸೂರ್ ತನ ಬಿಟ್ ಬರ್ತೇನು' ಎಂದು ಗಂಟುಬಿದ್ದ ರಾಯಪ್ಪ, ಕೊನೆಗೆ ನಿಲ್ದಾಣದವರೆಗಾದರೂ ಬರುತ್ತೇನೆಂದು ಹಟ ಮಾಡಿದ. ನಡೆದು ಹೋಗಬೇಕೆಂದಿದ್ದವನು ಆ ಮುಗ್ಧ ಜೀವವನ್ನು ದಣಿಸಲು ಮನಸ್ಸಾಗದೆ 'ಸಿಟಿ ಬಸ್ಸಿಗೆ ಹೋಗುತ್ತೇನೆ, ನೀವು ಮನೆಗೆ ನಡೆಯಿರಿ' ಅಂದಾಗ, 'ಬಸ್ ಏರಿಸ್ತೇನು ಹೀಂಗ ಬರ್ರಿ' ಎನ್ನುತ್ತ ದಾರಿ ತೋರುತ್ತ ಮುಂದೆ ನಡೆದ. ಅನ್ಯ ಮಾರ್ಗವಿಲ್ಲದೆ ಅವನನ್ನು ಅನುಸರಿಸಿದೆ. ಅಲ್ಲೊಂದು ಕಡೆ 'ಇಲ್ಲೆ ನಿಂದ್ರಬೇಕ್ರಿ ಬಸ್‌ಗಿ' ಅಂದ. ಮಧ್ಯಾಹ್ನ ಒಂದೂವರೆ ಗಂಟೆಯ ರಣರಣ ಬಿಸಿಲನ್ನು ತಡೆಯಲಾರದೆಯೋ, ಅಥವಾ ಅದುವರೆಗಿನ ಉತ್ಸಾಹ ಬತ್ತಿಯೋ, ಅಥವಾ ಸಾಹಿತ್ಯ ಸಿಗದ ನಿರಾಶೆಯೋ, ನನಗೂ ಯಾಕೋ ಸುಸ್ತಾದಂತಿತ್ತು. ರಾಯಪ್ಪ ನನ್ನನ್ನು ಗಮನಿಸಿದನೇನೋ, ಅಲ್ಲೇ ಹತ್ತಿರವಿದ್ದ ನೆರಳಿಗೆ ನನ್ನನ್ನು ದಬ್ಬಿ 'ಕೂಡ್ರಿ' ಎಂದು ಹೇಳಿ ತಾನೂ ಕುಕ್ಕರಗಾಲಿನಲ್ಲಿ ಕುಳಿತ, ನಾನು ಒಂದು ಕಲ್ಲಿನ ಮೇಲೆ ಕುಳಿತೆ. ಬಸ್ಸು ಬರುವವರೆಗೆ ಅವನು ಮಾತು ನಿಲ್ಲಿಸಲಿಲ್ಲ. ಕೊನೆಯಲ್ಲಿ ಅವನು ಹೇಳಿದ ಒಂದು ಮಾತು ಗಮನಾರ್ಹವಾಗಿತ್ತು. ಸುರಪುರದ ಅರಸರನ್ನು ಕುರಿತು ಹಾಡುವ ಬೇಡರು ಸುರಪುರ ತಾಲೂಕಿನ ಅಮ್ಮಾಪುರ ಎಂಬಲ್ಲಿ ಸಿಗುತ್ತಾರೆಂಬ ಮಾತನ್ನು ಪುನರುಚ್ಚರಿಸಿ, ಜೊತೆಗೆ ಒಂದು ಎಚ್ಚರಿಕೆಯ ಮಾತನ್ನು ಪೂರಕವಾಗಿ ಸೇರಿಸಿದ : "ಅಲ್ಲಿ ... ಎಲ್ಲಿ ? ಅಮ್ಮಾಪೂರ್ದಾಗ ಹ್ವಾಗಿ ಬ್ಯಾಡ್ರು ಅನಬ್ಯಾಡ್ರಿ ಮತ್ತ, ಹ್ರ್ಯಾ ಅಂದ್ಕಸಿ ಮ್ಯಾಲ್ ಬರ್ತಾರ್ರಿ. ದೊರೆ ಮಕ್ಳ ಅನ್ರಿ. ದೊರೆ ಮಕ್ಳ ಅಂದ್ರಿ ಅಂದ್ರ ಅವ್ರು ಛಲೋ ಮಾತಾಡ್ತಾರ್ರಿ ನೀಂವ್ ಏನ್ ಬೇಕಾದ್ ಕೆಲ್ಸ್ ಮಾಡಿಸ್ಕೋರಿ. ಮಾಡ್‌ಕುಡ್ತಾರ್ರಿ" ಎಂದು ತನ್ನದೇ ಆದ ವಿಶಿಷ್ಟ ಭಂಗಿಯಲ್ಲಿ ನನ್ನನ್ನು ನೋಡಿದ.

ದೂರದಲ್ಲಿ ಬರುತ್ತಿದ್ದ ಬಸ್ಸನ್ನು ನೋಡಿದೆ. 'ಬಸ್ ಬಂತ್ರೀ ರಾಯಪ್ಪ, ನಾ ಬರ್ಲೇ ನ್ರಿ ?' ಎಂದು ಹೇಳುತ್ತ ಎದ್ದುನಿಂತೆ. ಅವನು ನನಗಿಂತ ಮುಂದೆ ಓಡಿಹೋದ ಬಸ್ಸನ್ನು ತರುಬಲು. ಜೇಬಿಗೆ ಕೈಹಾಕಿದೆ. ಐದು ರೂಪಾಯಿನ ಒಂದು ನೋಟು ಮತ್ತು ಎರಡು ರೂಪಾಯಿನ ಒಂದು ನೋಟು ಹೊರಕ್ಕೆ ಬಂದುವು. ಯಾವುದೋ ಒಂದು ನೋಟನ್ನು ರಾಯಪ್ಪನ ಕೈಗೆ ತುರುಕಿದೆ. ಅವನು ಅದನ್ನು ನಿರೀಕ್ಷಿಸಿರಲಿಲ್ಲವೇನೋ, ಅವನ ಕಣ್ಣಂಚಿನಲ್ಲಿ ನೀರಾಡಿತು. ಅದನ್ನೆಲ್ಲ ದೀರ್ಘವಾಗಿ

ಗಮನಿಸುತ್ತ ನಿಲ್ಲಲು ಹೊತ್ತು ಇರಲಿಲ್ಲ. ಬಸ್ಸಿನಿಂದ ಇಳಿಯುವವರೆಲ್ಲ ಇಳಿದು ಹತ್ತುವವರೆಲ್ಲ ಹತ್ತಿ ಆಗಿತ್ತು. ಸರಸರನೆ ರಾಯಪ್ಪ ಜೋಡಿಸಿದ ಎರಡೂ ಕೈಗಳನ್ನು ಹಿಡಿದು ಹಣೆಗೊತ್ತಿಕೊಂಡು ಹೊರಟ್ಟಿದ ಬಸ್ಸಿನೊಳಕ್ಕೆ ಜಿಗಿದೆ.

೨

ಯಾದ್ಗೀರ್‌ನಿಂದ ನೇರವಾಗಿ ಅಮ್ಮಾಪುರಕ್ಕೆ ಹೋಗಲಿಲ್ಲ. ಎರಡು ವರ್ಷಗಳ ಹಿಂದೆ ಬಂದಿದ್ದಾಗ, ಆ ಸುತ್ತಿನಲ್ಲೆಲ್ಲ ಪ್ರಸಿದ್ಧಳಾಗಿದ್ದ ಕಲ್ಗಿ-ತುರಾ ಸಂಪ್ರದಾಯದ ಕಲಾವಿದೆಯಾದ ಮುಡ್ಡನಹಳ್ಳಿ ಭೀಮವ್ವನನ್ನು ಭೇಟಿ ಮಾಡುವ ಪ್ರಯತ್ನ ಯಶಸ್ವಿಯಾಗಿರಲಿಲ್ಲ. ಆ ಕಲಾವಿದೆಯ ಬಗ್ಗೆ ಸತತ ಕುತೂಹಲ ಇದ್ದುದರಿಂದ, ಪ್ರಯಾಣದ ಹಾದಿ ಬದಲಾಯಿಸಿದೆ. ಸಿಂಧಗಿ ತಲಪಿ, ಅಲ್ಲಿ ತಂಗಿ, ಮರುದಿನ ಮುಡ್ಡನಹಳ್ಳಿಗೆ ಪ್ರಯಾಣ ಮಾಡಬೇಕಿತ್ತು.

ಯಾದ್ಗೀರ್‌ನ ಬಸ್‌ನಿಲ್ದಾಣಕ್ಕೆ ಹೋಗಿ ಸಿಂಧಗಿಗೆ ಬಸ್ಸು ಎಷ್ಟು ಹೊತ್ತಿಗೆಂದು ವಿಚಾರಿಸಿದೆ. 'ಸವಾ ಎರಡಕ್ರಿ' ಎಂದರು ಒಬ್ಬರು. ಅದು ತಪ್ಪಿದರೆ ಮತ್ತೆ ನಾಳೆ ಅಷ್ಟು ಹೊತ್ತಿಗೇ. ಗಡಿಯಾರ ನೋಡಿದೆ. ಎರಡು ಸಮೀಪಿಸುತ್ತಿತ್ತು. ಕೂಡಲೇ ಬಿರಬಿರನೆ ನಡೆದು ಲಾಜಕ್ಕೆ ಬಂದು ಆತುರಾತುರವಾಗಿ ಎಲ್ಲವನ್ನೂ ಚೀಲಕ್ಕೆ ತುಂಬಿಕೊಂಡು ಹೊರಟುಬಿಟ್ಟೆ. ಸಿಂಧಗಿ ತಲಪಿದಾಗ ಸಂಜೆ ಆರೂವರೆ ಆಗಿತ್ತು. ಬೆಳಗ್ಗೆಯಿಂದ ಹೊಟ್ಟೆಗೆ ಸರಿಯಾಗಿ ತಿನ್ನದೆ ಇದ್ದುದರಿಂದಲೋ ಸತತವಾದ ಓಡಾಟದಿಂದಲೋ ಮೈ ತುಂಬ ಆಯಾಸವೆನಿಸಿ ಸುಸ್ತಾಗುತ್ತಿತ್ತು. ಹತ್ತಿರವೇ ಇದ್ದ ಲಾಜದಲ್ಲಿ ರೂಮ್ ತೆಗೆದುಕೊಂಡು, ಊಟ ಮಾಡಿ ಬಂದು ಮಲಗಿಬಿಟ್ಟೆ.

ಬೆಳಗ್ಗೆ ಎದ್ದವನೇ ಬೇಗ ಬೇಗ ಸ್ನಾನ ತಿಂಡಿ ಮುಗಿಸಿ ಇಂಡಿಗೆ ಹೋಗುವ ಬಸ್ ಹತ್ತಿ ಆಲ್‌ಮೇಲ್‌ನಲ್ಲಿ ಇಳಿದೆ. ಅಲ್ಲಿಂದ ಐದಾರು ಮೈಲಿ ನಡೆಯಬೇಕಾಗಬಹುದು ಎಂದುಕೊಂಡಿದ್ದೆ. ಆದರೆ ಅಲ್ಲಿಂದ ಅಫ್ಜಲ್‌ಪುರದ ಕಡೆಗೆ ಹೋಗುವ ಬಸ್‌ನಲ್ಲಿ ಹೋಗಿ ಮುಡ್ಡನಹಳ್ಳಿಯ ಬಳಿ ಇಳಿಯಬಹುದೆಂದೂ, ಅಲ್ಲಿಂದ ಸಮೀಪವಾಗುತ್ತದೆಂದೂ ತಿಳಿಯಿತು. ಸರಿ ನಡೆಯುವ ಹಾದಿ ಕಡಿಮೆಯಾದೀತೆಂಬ ಆಸೆಯಿಂದ ಬಸ್ಸಿಗಾಗಿ ಕಾದೆ. ಅರ್ಧ ಗಂಟೆ ಕಾದಮೇಲೆ, ಬಂದ ಬಸ್ಸಿಗೆ ಹತ್ತಿದೆ. ನನಗೆ ಕೂತುಕೊಳ್ಳಲು ಜಾಗ ಮಾಡಿಕೊಟ್ಟವರೂ ಮುಡ್ಡನಹಳ್ಳಿಯವರೇ ಆಗಿದ್ದುದರಿಂದ ನಿಶ್ಚಿಂತೆಯಿಂದ ಕೂತೆ.

ಊರು ಹತ್ತಿರ ಬಂದಾಗ ಅವರೊಂದಿಗೆ ಇಳಿದೆ. ಇಳಿದವರಲ್ಲಿ ಒಬ್ಬರು ಆಲ್‌ಮೇಲ್‌ದವರು. ಅಲ್ಲಿ ತಮ್ಮ ತೋಟ ಇರುವುದಾಗಿಯೂ ಆದಕ್ಕಾಗಿಯೇ

ಬಂದುದಾಗಿಯೂ ಹೇಳಿ ಅವರು ಬೇರೆ ಕಾಡುಹಾದಿ ಹಿಡಿದರು. ಇನ್ನೊಬ್ಬರು ಸಿದ್ಧರಾಮಪ್ಪಗೌಡರು ಆ ಊರಿನ ಪ್ರತಿಷ್ಠಿತ ವ್ಯಕ್ತಿ ಎಂಬುದು ಆಮೇಲೆ ತಿಳಿಯಿತು. ಸುಮಾರು ಎರಡು ಮೂರು ಕಿಲೋಮಿಟರ್ ದೂರದ ಹಾದಿ ಯುದ್ದಕ್ಕೂ ಅವರು ಸೊಗಸಾಗಿ ಭಾಷಣ ಬಿಗಿದರು. ಅವರ ಭಾಷಣದ ಸಾರಾಂಶ ಇಷ್ಟು: ಜೋಳದ ರೊಟ್ಟಿ ಆರೋಗ್ಯಕ್ಕೆ ತುಂಬಾ ಒಳ್ಳೆಯದು. ಬೇರೆ ಅಷ್ಟೇ ಒಳ್ಳೆಯ ಆಹಾರಗಳಲ್ಲೂ ಇಲ್ಲದಿರುವ ವಿಶಿಷ್ಟ ಗುಣ ಇದರಲ್ಲಿದೆ. ಉದಾಹರಣೆಗೆ, ಆಯುರ್ವೇದ ವೈದ್ಯದಲ್ಲಿಯೇ ಆಗಲಿ, ಯುನಾನಿಯಲ್ಲಿಯೇ ಆಗಲಿ, ಅಥವಾ ಇಂಗ್ಲೀಷ್ ವೈದ್ಯದಲ್ಲಿಯೇ ಆಗಲಿ, ರೋಗಕ್ಕೆ ತಕ್ಕ ಪಥ್ಯಗಳನ್ನು ವಿಧಿಸುತ್ತಾರೆ. ಆದರೆ ಯಾವ ಬಗೆಯ ವೈದ್ಯದಲ್ಲೂ ಜೋಳವನ್ನು ವರ್ಜ್ಯ ಎಂದು ಹೇಳುವುದಿಲ್ಲ!

ಗೌಡರು ಜೋಳದ ಬಗ್ಗೆ, ಅಂದರೆ ಅವರ ಆಹಾರದ ಬಗ್ಗೆ, ಬಹಳ ಅಭಿಮಾನದಿಂದ, ಒತ್ತಾಯ ಪೂರ್ವಕವಾಗಿ ವಾದಿಸುತ್ತಿದ್ದಂತಿತ್ತು. ಸಹಜ ಮಾತುಕತೆಯಂತೆ ಅವರ ಧಾಟಿ ಇರಲಿಲ್ಲ. ಯಾರೋ ದಕ್ಷಿಣ ಕರ್ನಾಟಕದ ಮಂದಿ ಈ ಭಾಗದ ಆಹಾರ ಪದ್ಧತಿಯ ಬಗ್ಗೆ ಹಗುರವಾಗಿ ಮಾತಾಡಿದ್ದಿರಬೇಕು, ಆದ್ದರಿಂದ ದಕ್ಷಿಣ ಕರ್ನಾಟಕದವರು ಸಿಕ್ಕಿದಾಗಲೆಲ್ಲ ಈ ಗೌಡರು ಆಹಾರದ ವಿಷಯ ಎತ್ತಿಕೊಂಡು ಜೋಳವನ್ನು ಸಮರ್ಥಿಸಿಕೊಳ್ಳುತ್ತಿದ್ದಿರಬೇಕು; ಎಂಬ ಭಾವ ನನ್ನ ಮನಸ್ಸಿನಲ್ಲಿ ಸಂಚರಿಸಿತು. ಅಂತೂ ಆಕರ್ಷಕವಾಗಿದ್ದ ಅವರ ಉತ್ಸಾಹದ ಮಾತುಗಳಿಗೆ ಭಂಗವುಂಟು ಮಾಡದೆ ಈಗಾಗಲೆ ಜೋಳದ ರೊಟ್ಟಿ ಚೆನ್ನಾಗಿ ಒಗ್ಗಿಹೋಗಿದ್ದ ನಾನು ನಡುನಡುವೆ ಅವರಿಗೆ ಪ್ರೋತ್ಸಾಹದ ಉದ್ಗಾರಗಳನ್ನು ವ್ಯಕ್ತಪಡಿಸುತ್ತ ನಡೆದಿದ್ದೆ.

ಊರು ಬಂದಾಗ, ಹರಿಜನ ಕೇರಿಯ ಕಡೆಗೆ ಕೈಮಾಡಿ, 'ಅಕಾ ನೋಡ್ರಿ, ಒಂಟಿ ಬಿಡಕಿ ಕಾಣ್ತಾ ಐತಲ್ರಿ. ಅದೇ ಭೀಮವ್ವನ ಮನಿ. ಮನಿಯಾಗ ಅದಾಳೋ ಹ್ಯಾಂಗ ನೋಡ್ರಿ. ಹಾಡ್ಕೋತ ಎಲ್ಲರೆ ಹೋಗಿದ್ದಾಳು. ನಿಮಗ ಏನು ಅನುಕೂಲ ಬೇಕೊ ನಾ ಮಾಡಿಕುಡ್ತೇನಿ. ಹೋಗಿ ಬರ್ರಿ' ಎಂದು ಹೇಳಿ ತಮ್ಮ ಕೇರಿಯ ಕಡೆಗೆ ನಡೆದು ಬಿಟ್ಟರು ಗೌಡರು. 'ತುಂಬಾ ಉಪಕಾರವಾಯಿತು ಸ್ವಾಮಿ' ಎಂದು ಹೇಳಿ ನಾನು ಹರಿಜನ ಕೇರಿಯ ಕಡೆಗೆ ನಡೆದೆ.

ಭೀಮವ್ವನ ಮನೆಯ ಮಗ್ಗುಲಲ್ಲೆ ಹೆಣಮಗಳೊಬ್ಬಳು ತನ್ನ ಮಗನೊಡನೆ ಅಡುಮರಿಗೆ ಅಂಟಿದ್ದ ಉಣ್ಣಿಗಳನ್ನು ಕೀಳುವ, ಔಷಧ ಹಚ್ಚುವ, ಕಾಯಕದಲ್ಲಿ ತೊಡಗಿದ್ದಳು. ಆಕೆಯನ್ನು ಕೇಳಿದೆ. ಹೀಗೇ ಹಾಡ್ಕೋತಾ ಹಾಡ್ಕೋತಾ ಹೋಗಿ ತಿಂಗಳಾಯಿತೆಂದೂ, ನೆನ್ನೆ ಅಂತರಗಂಗೆ ಎಂಬ ಊರಿನಲ್ಲಿ ಹಾಡಿಕೆ ಇತ್ತೆಂದೂ, ಅಲ್ಲಿಗೆ ಹೋದರೆ ಸಿಗಬಹುದೆಂದೂ, ಹೇಳಿದಳು. ಪಾನ್‌ಪೆಟ್ಟಿ

ಶಂಕರ್ ಎಂದೇ ಪ್ರಸಿದ್ಧನಾಗಿದ್ದ ಶಂಕರ್‌ಧೂಳ್‌ಖಾನ್ ಅವರ ಬಗ್ಗೆ ಕೇಳಿದೆ, 'ಅಂವ ಅಲ್ಲಿ ಫತ್ರುಸಾಬ್ರ ಮನಿದಲ್ಲಿ ಆದಾನ್ನೋಡ್ರಿ' ಎಂದಳು.

ಫತ್ರು ಸಾಬ್ರ ತೋಟಕ್ಕೆ ಹೋದೆ. ಸಾಹೇಬರು ಊರಾಚೆ ಇರುವ ತಮ್ಮ ಹೊಲದಲ್ಲಿ ದೊಡ್ಡದೊಂದು ಬಾವಿಯನ್ನೂ ಮನೆಯನ್ನೂ ಹೊಂದಿದ್ದವರು. ಅಲ್ಲೇ ವಾಸಿಸುತ್ತಿದ್ದವರು. ಸಾಹೇಬರ ಆಪ್ತಮಿತ್ರ ಶಂಕರ್. ಹಿಂದೊಮ್ಮೆ ಶಂಕರ್‌ರೇ ಇಲ್ಲಿಗೆ ಕರೆದುಕೊಂಡು ಬಂದಿದ್ದರು. ಅಲ್ಲಿ ಈಗ ಇಬ್ಬರೂ ಇರಲಿಲ್ಲ. ಫತ್ರು ಸಾಬ್ರ ತಾಯಿ, ಶಂಕರ್‌ರನ್ನು ಕೇಳಿದಾಗ, ಒಂದು ದಿಕ್ಕಿಗೆ ಕೈ ಮಾಡಿ 'ಅಲ್ಲಿ ಹೊಲದಾಗ ಎಡಿ ಹೊಡಿತಾನ್ನೋಡ್ರಿ' ಎಂದರು. ಅವರು ತೋರಿದ ದಿಕ್ಕಿನಲ್ಲಿ ನಡೆದೆ.

ಅಲ್ಲೊಂದು ಕಡೆ ಜಾಗ ತುಂಬಾ ತಂಪಾಗಿತ್ತು. ಮರಗಳು ಪೊದೆಗಳು ಒತ್ತೊತ್ತಾಗಿದ್ದು, ನೆಲ ತೀರಾ ಒಣನೆಲವಾಗಿರದೆ ಹಸುರು ಸೊಂಪು ಹಾಸಿತ್ತು. ಅಲ್ಲಿ ಸ್ವಲ್ಪ ಕುಳಿತು. ವಿಶ್ರಮಿಸೋಣವೆನ್ನಿಸಿತು. ಚೀಲವನ್ನು ಇಳುಕಿದೆ. ಜೇಬಿನಿಂದ ಒಂದು ಬೀಡಿ ತೆಗೆದು ಹಚ್ಚಿದೆ. (ಸಾಮಾನ್ಯವಾಗಿ ಬೀಡಿಯ ಕಟ್ಟು ಪ್ರವಾಸಪೂರ್ತಿ ನನ್ನ ಜೊತೆಗೆ ಇರುತ್ತದೆ. ಅನೇಕಸಲ ಕಲಾವಿದರನ್ನು ಅದು ಆಕರ್ಷಿಸುವುದೂ ಉಂಟು. ಅವರೊಂದಿಗೆ ನಾನೂ ಬೀಡಿ ಹಚ್ಚಿ ಹೊಗೆಯೆಳೆದು ಮಾತನಾಡತೊಡಗಿದೆನೆಂದರೆ ಕಲಾವಿದರು ಯಾಕೋ ಏನೋ ತುಂಬ ಆತ್ಮೀಯ ವಾಗಿ ವರ್ತಿಸತೊಡಗುತ್ತಿದ್ದರು.) ಆ ವಾತಾವರಣ ತಂಪಾಗಿತ್ತು, ಮತ್ತು ನೀರವವಾಗಿತ್ತು. ಎತ್ತಲೋ ನೋಡುತ್ತ ಬೀಡಿ ಸೇದುತ್ತ ಕೂತೆ. ರಪ್ಪನೆ ನನ್ನ ಮುಂದೆ ಏನೋ ಬಿದ್ದಂತಾಯಿತು. ನೋಡಿದರೆ ಒಂದು ಹಿಡಿ ಹಸುರಾಗಿದ್ದ ಹೆಸರು ಕಾಯಿ ನನ್ನ ಮುಂದೆ ಚೆಲ್ಲಾಪಿಲ್ಲಿಯಾಗಿ ಬಿದ್ದಿತ್ತು. ಯಾರೋ ಹೆಣ್ಮಗಳು ತನ್ನ ಮಡಿಲಲ್ಲಿ ಕಟ್ಟಿಕೊಂಡು ಹೋಗುತ್ತಿದ್ದುದರಲ್ಲಿ ಒಂದು ಹಿಡಿಯಷ್ಟನ್ನು ನನ್ನ ಮುಂದೆ ಎಸೆದು ಹತ್ತಾರು ಹೆಜ್ಜೆ ಮುಂದೆ ಹೋಗಿದ್ದಳು. ತಲೆಯ ಮೇಲೆ ಹೊರೆಯಿತ್ತು. ಆಕೆಯ ಹಿಂದೆ ನಾಲ್ಕೈದು ವರ್ಷದ ಮಗು ಹೆಜ್ಜೆ ಹಾಕುತ್ತಿತ್ತು. ಏನು ಮಾಡಬೇಕೆಂದು, ಏನು ಮಾತಾಡಬೇಕೆಂದು, ನನಗೆ ತೋಚಲಿಲ್ಲ. ಆ ಹೆಣ್ಮಗಳು ನನ್ನನ್ನು ಯಾರೋ ಭಿಕ್ಷುಕನಿರಬೇಕೆಂದು ಭಾವಿಸಿದಳೋ ಏನೋ. ಅದೂ ನಿಜವೇ. ನಾನು ನಿಜಕ್ಕೂ ಭಿಕ್ಷುಕನಾಗಿಯೇ ಪ್ರವಾಸ ಮಾಡುತ್ತಿದ್ದೆನಲ್ಲವೆ ? ಬೇಡುತ್ತಿದ್ದುದು ಸಾಹಿತ್ಯ ಭಿಕ್ಷೆಯಷ್ಟೆ ; ಜನಪದ ಸಾಹಿತ್ಯ ಭಿಕ್ಷೆ ! ಸಾಹಿತ್ಯ ದೊಂದಿಗೆ ಆಹಾರವೂ ಸಿಕ್ಕುವುದಾದರೆ ಯಾಕೆ ಬೇಡ ? ಜೊತೆಗೆ, ಹಸುರು ಹೆಸರುಕಾಯಿ ನನಗೆ ತುಂಬ ಇಷ್ಟವಾದ ತಿನಿಸು. ಬೀಡಿ ಬಿಸಾಡಿದೆ. ಹೆಸರು ಕಾಯಿಯನ್ನು ಬಳಿದು ಗುಡ್ಡೆ ಮಾಡಿದೆ. ಒಂದೊಂದಾಗಿ ಬಿಡಿಸಿ ಬಿಡಿಸಿ ತಿನ್ನ ತೊಡಗಿದೆ. ಎಲ್ಲ ಮುಗಿದ ಮೇಲೆ ಇನ್ನೊಂದು ಬೀಡಿ ಎಳೆದು, ಎದ್ದು ಹೊರಟೆ.

ಅಲ್ಲೊಂದು ಕಡೆ ಒಂದೇ ಜೊತೆ ಎತ್ತಿಗೆ ಮೂರು ಎಡಿಗಳನ್ನು (ನಮ್ಮ ಕಡೆಯ ಕುಂಟೆ) ಕಟ್ಟಿಕೊಂಡು ಮೂವರು ಹೊಡೆಯುತ್ತಿದ್ದರು. ನಾನು ಹತ್ತಿರ ಬಂದು ನಿಂತುದನ್ನು ಕಂಡು ಎತ್ತುಗಳನ್ನು ನಿಲ್ಲಿಸಿ ಮೂವರೂ ಒಂದೇ ಸಲಕ್ಕೆ ನೆಟ್ಟಗೆ ನಿಂತು ನನ್ನ ಕಡೆ ತಿರುಗಿದರು. 'ಪಾನ್‌ಪೆಟ್ಟಿ ಶಂಕರ್ ಎಲ್ಲಿರ್ತಾರ್ರಿ ?' ಎಂದು ಕೇಳಿದೆ. 'ಅಂವ ಹೊರಾಕ್ ಹೋಗ್ಯಾನ್ರಿ ಪತ್ರುಸಾಬ್ರಗುಡ. ಊರಾಗಿಲ್ರಿ' ಎಂದರು. ಬಂದ ದಾರಿಗೆ ಸುಂಕವಿಲ್ಲ ಎಂದುಕೊಳ್ಳುತ್ತ ಬಸ್ಸು ಓಡಾಡುವ ಮಾರ್ಗದ ದಿಕ್ಕು ಹಿಡಿದು ಹೊಲದೊಳಗೇ ನಡೆಯತೊಡಗಿದೆ.

ಹತ್ತು ನಿಮಿಷ ನಡೆದ ಮೇಲೆ, ಅಲ್ಲೊಂದು ಕಡೆ ಹೂಡಿದ್ದ ಎಡಿಯನ್ನು ಹಾಗೇ ನಿಲ್ಲಿಸಿ ಪಕ್ಕದಲ್ಲಿ ಯಾರೋ ಮಲಗಿರುವಂತೆ ಕಂಡಿತು. ಮರವಿಲ್ಲ, ಮರದ ನೆರಳಿಲ್ಲ. ಇಂಥ ಉರಿಬಿಸಿಲಲ್ಲಿ ಮಲಗಿರುವ ಈ ಮಹಾನುಭಾವ ಯಾರಿರಬಹುದು ! ಉರಿ ಬಿಸಿಲಲ್ಲೂ ನಿದ್ದೆ ಮಾಡುವಂಥ ಪರಿಸ್ಥಿತಿ ಏನಿದ್ದೀತೋ ಪಾಪ—ಎಂದುಕೊಳ್ಳುತ್ತ ನನ್ನ ಪಾಡಿಗೆ ನಾನು ನನ್ನ ದಿಕ್ಕಿನಲ್ಲಿ ನಡೆಯತೊಡಗಿದಾಗ ಆ ವ್ಯಕ್ತಿ ಎದ್ದು ಕುಳಿತಂತೆ ಭಾಸವಾಯಿತು. ನೋಡಿದೆ. ಹೌದು ! ಎದ್ದು ಕುಳಿತು ನನ್ನ ಕಡೆಯೇ ನೋಡುತ್ತಿತ್ತು ಆ ವ್ಯಕ್ತಿ ! ಸುಮಾರು ಕೂಗಳತೆಯಲ್ಲಿದ್ದ ಆ ವ್ಯಕ್ತಿಯನ್ನೊಂದಿಷ್ಟು ಕೆಣಕೋಣ ಎನ್ನಿಸಿತು. 'ಏನ್ರೀ, ಪಾನ್‌ಪೆಟ್ಟಿ ಶಂಕರ್ ಗೊತ್ತೇನ್ರಿ ನಿಮಗೆ ?' ಎಂದು ಒದರಿದೆ. ಆ ವ್ಯಕ್ತಿ ಎದ್ದುನಿಂತು 'ಹೋರಿ' ಎಂದಿತು. ಕೇಳಿಸಲಿಲ್ಲವೇನೊ ಎಂದುಕೊಂಡು 'ಶಂಕರ್ ಗೊತ್ತೇನ್ರಿ ನಿಮಗೆ ?' ಎಂದು ಮತ್ತಷ್ಟು ಜೋರಾಗಿ ಒದರಿದೆ. ಮತ್ತೆ 'ಹೋರಿ' ಎನ್ನುತ್ತ ನನ್ನ ಕಡೆಗೆ ಹೆಜ್ಜೆ ಹಾಕತೊಡಗಿತು ಆ ವ್ಯಕ್ತಿ ! ಹತ್ತಿರ ಬರುವಷ್ಟರಲ್ಲಿ ಮತ್ತೆರಡು ಸಲ ಒದರಿದ್ದೆ. ಆತ ಮಾತಾಡದೆ ಸುಮ್ಮನೆ ನಸುನಗುತ್ತ ಹತ್ತಿರ ಬಂದ. ನೋಡುತ್ತೇನೆ, ಅರೆ, ಇವನೇ ಶಂಕರ್ !

ಎರಡು ವರ್ಷಗಳ ಹಿಂದಿನ ಭೇಟಿ ಕ್ಷಣಮಾತ್ರದಲ್ಲಿ ನನ್ನ ಮನಃಪಟಲವನ್ನು ಹಾದುಹೋಯಿತು. ಅಫ್ಜಲ್‌ಪುರದ ಬಸ್‌ನಿಲ್ದಾಣದ ಬಳಿ ಒಂದು ಸಣ್ಣ ಪಾನ್‌ಪೆಟ್ಟಿಯ ಒಡೆಯನಾಗಿದ್ದರೂ ಸಾಕಷ್ಟು ಸಂತೃಪ್ತನಂತೆ ಮೈ ಕೈ ತುಂಬಿಕೊಂಡಿದ್ದ ಕಟ್ಟುಮಸ್ತಾದ ಶರೀರದ, ತುಂಬುಗೆನ್ನೆಗಳ ಆ ಯುವಕನೆಲ್ಲಿ, ಕುರುಚಲು ಗಡ್ಡ ಬೆಳೆದಿದ್ದ ಗುಳಿಬಿದ್ದ ಕೆನ್ನೆ ಕಣ್ಣುಗಳ ಕೊಳಕು ಬಟ್ಟೆಯ ಈ ಪ್ಯಾರಲ್ಲ ಎಲ್ಲಿ ! ಅವನ ಸ್ಥಿತಿ ಕಂಡು ಕರುಳು ನುಲಿದಂತಾಯಿತು. ಅಫ್ಜಲ್‌ಪುರದಲ್ಲಿ ತೋರಣ್, ಹಾವಣ್ಣ ,ಗಟ್ಟು, ಮಠಪತಿ ಮುಂತಾದ ಗೆಳೆಯರೊಂದಿಗೆ ಅವನ ಅಂಗಡಿಯ ಬಳಿ ಹೋದಾಗಲೆಲ್ಲ ಪ್ರೀತಿಯಿಂದ ಒತ್ತಾಯದಿಂದ ಬಾಳೆಹಣ್ಣು ಬೀಡಾ ಸಿಗರೇಟುಗಳನ್ನು ನೀಡುತ್ತಿದ್ದ ಆ ಸ್ನೇಹಜೀವಿಗೆ ಇಂಥ ಪರಿಸ್ಥಿತಿ ಹೇಗೆ ಬಂತು ? ಯಾಕೆ ಬಂತು ! ಏನ್ರೀ ಶಂಕರ್, ಹಿಂಗಾಗಿದ್ದೀರಿ ? ಯಾಕ್ರಿ ? ಏನಾಯ್ತ್ರಿ ? ಗುರ್ತೇ

ಸಿಗ್ಲಿಲ್ವಲ್ರಿ ?' ಎಂದು ಒಂದೇ ಸಮನೆ ಕೇಳಿದೆ. ಅವನು ಹತ್ತಿರ ಬಂದವನೇ ನನ್ನ ಎರಡೂ ಕೈಗಳನ್ನು ತನ್ನ ಬೊಗಸೆಗೆ ತೆಗೆದುಕೊಂಡು ನಡುಬಾಗಿಸಿ ತನ್ನ ಕಣ್ಣಿ ಗೊತ್ತಿಕೊಂಡ. 'ಬರ್ರಿ, ಕೂಡ್ರಿ' ಎಂದು ಹೇಳಿ ನಿಂತಲ್ಲೇ ಕೂರಿಸಿದ. 'ಏನ್ರಿ ಸಾಬ್ರs, ಇಷ್ಟು ವರ್ಷ ಆತು ನಿವರ್ನ್ನ ನೋಡಿ. ಇನ್ನೂ ಈಗ ನೋಡ್ತಾಂಗದ. ನನ್ನ ಮರೀಲಾರ್ದೆ, ನನ್ನ ಸಲೂ ಹಿಂಗ ಹೊಲ ಅಡವಿ ಬಿದ್ದು ಈ ಬಿಸಲದಾಗ ಇಲ್ಲೀತನ ಬಂದೀರಲ್ರಿ. ನನ್ ಪುಣ್ಣೆ ಬಿಡ್ರಿ. ಹಾಲ್ ಕುಡ್ತಾಂಗಾತ್ರಿ' ಎಂದು ಹೇಳುತ್ತಿದ್ದಾಗ ಕಣ್ಣುಗಳು ಹನಿಯಿಕ್ಕತೊಡಗಿದ್ದುವು. ಎರಡು ವರ್ಷ ಆಯ್ತುಷ್ಟೆ. ಹೆಚ್ಚೇನೂ ಆಗಿಲ್ಲ. ಸ್ನೇಹ ಅಂದವೇಲೆ ಮುಗೀತ್ರಿ ಶಂಕರ್ ಇದರ ಮುಂದೆ ಯಾವ ಸಂಬಂಧಾನೂ ನಿಲ್ಲೋದಿಲ್ರಿ. ಆದಿರ್ಲಿ. ನೀವು ಯಾಕ್ರಿ ಹೀಂಗಾಗಿದ್ದೀರಿ ? ಅಂಗಡಿ ಏನಾಯ್ತ್ರಿ ?' ಎಂದು ಕೇಳಿದೆ

'ಅದೆಲ್ಲಾ ಎದುಕ್ರಿ ಸಾಬ್ರs. ಥೊಡ್ ಕತಿ ಐತಿ. ತೊಕೋರಿ. ಮದ್ಲ ನೀರ್ ಕುಡ್ದು ಇಷ್ಟ್ ರೊಟ್ಟಿ ಉಣ್ರಿ' ಎಂದು ಹೇಳುತ್ತ ಕೊಡದಿಂದ ಒಂದು ಬಟ್ಟಲಿಗೆ ನೀರು ಬಗ್ಗಿಸಿ ನನ್ನ ಕೈಗೆ ಕೊಟ್ಟು ಬುತ್ತಿ ಬಿಚ್ಚ ತೊಡಗಿದ. 'ಬೇಡ್ರಿ ಶಂಕರ್ ಬರುವಾಗ ಹೊಟ್ಟಿ ತುಂಬ ತಿಂದು ಬಂದಿದ್ದೀನ್ರಿ. ಬೇಡ್ರಿ, ನೀರು ಸಾಕು' ಎಂದು ಹೇಳಿ ನೀರನ್ನು ಕುಡಿದೆ. ಅಷ್ಟು ಹೊತ್ತಿಗೆ ಬುತ್ತಿ ಬಿಚ್ಚಿದ್ದ ಶಂಕರ್ ಒಂದೆರಡು ರೊಟ್ಟಿಯನ್ನು ಈಚೆಗೆ ಎಳೆದಿದ್ದ. ಗೆಳೆಯನ ಪ್ರೀತಿಗೆ ಅಡ್ಡ ಬರಬಾರದೆನ್ನಿಸಿತು. 'ಒಂದೇ ರೊಟ್ಟಿ ಸಾಕ್ರಿ' ಎಂದು ಹೇಳುತ್ತ ಒಂದನ್ನು ಮಾತ್ರ ತೆಗೆದುಕೊಂಡೆ ಆದರ ಮೇಲೆ ಒಂದಿಷ್ಟು ತೊವ್ವೆಯಂತಿದ್ದ ಬ್ಯಾಳಿಯನ್ನು ಹಾಕಿದ. 'ಉಳ್ಳಾಗಡ್ಡಿ ತಿಂತೀರಲ್ರಿ ?' ಎಂದು ಕೇಳಿದ. 'ಆದೀತು' ಎಂಬಂತೆ ತಲೆಯಾಡಿದೆ. ಒಂದು ದಪ್ಪ ಈರುಳ್ಳಿಯನ್ನು ಸುಲಿದು ಎರಡು ಹಸ್ತಗಳ ನಡುವೆ ಇಟ್ಟು ಜಜ್ಜಿ ಒಂದು ಚೂರನ್ನು ನನ್ನ ರೊಟ್ಟಿಯ ಮೇಲೆ ಇಟ್ಟ. 'ಇನ್ನೊಂದು ರೊಟ್ಟಿ ತೊಕೋರಿ. ಹೊಟ್ಟಿ ತುಂಬ ಉಣ್ರಿ' ಎಂದು ಉಪಚಾರ ಮಾಡುತ್ತ ತನ್ನ ಈ ಸ್ಥಿತಿಗೆ ಕಾರಣವಾದ ಎಲ್ಲವನ್ನೂ ಹೇಳಿ ಮುಗಿಸಿದ.

ತಂದೆ ತಾಯಿ ಇಲ್ಲದ ಈ ತಬ್ಬಲಿಯ ಏಳ್ಗೆಯನ್ನು ಸಹಿಸಲಾರದ ಅಣ್ಣಂದಿರು ಅವನಿಂದ ಸರ್ವಸ್ವವನ್ನು ಕಿತ್ತುಕೊಂಡು ಉಟ್ಟ ಬಟ್ಟೆಯೊಂದಿಗೆ ಮನೆಯಿಂದಾಚೆ ಅಟ್ಟಿದ ಅಮಾನುಷ ಘಟನೆಯನ್ನು ಕೇಳಿ ನನ್ನ ಕಣ್ಣಿನಲ್ಲೂ ನೀರು ಬಂತು. ಏನು ಮಾತಾಡಬೇಕೆಂದು ತೋಚಲಿಲ್ಲ. ಸುಮಾರು ಅರವತ್ತು ಸಾವಿರ ರೂಪಾಯಿ ಗಳನ್ನು ಸ್ವತಃ ವ್ಯಾಪಾರ ಮಾಡಿ ಗಳಿಸಿ ಬ್ಯಾಂಕಿನಲ್ಲಿಟ್ಟು ಕಾಲಕಳೆಯಲೋಸುಗ ಅಫ್ಜಲ್‌ಪುರದ ಬಸ್‌ನಿಲ್ದಾಣದೆದುರು ಪಾನ್‌ಪೆಟ್ಟಿಯನ್ನು ನಡೆಸುತ್ತ ಹಲವಾರು ಮಂದಿ ಒಳ್ಳೆಯ ಸ್ನೇಹಿತರನ್ನು ಗಳಿಸಿ ಭವ್ಯ ಭವಿಷ್ಯತ್ತಿನ ಬಗ್ಗೆ ಕನಸನ್ನು ಕಾಣುತ್ತ

ಸಂತೃಪ್ತಿಯಿಂದ ಬದುಕುತ್ತಿದ್ದ ಈ ಗೆಳೆಯನಿಗೆ ಬಂದ ದಾರುಣ ಪರಿಸ್ಥಿತಿಯನ್ನು ಕಂಡು (ಅವನೀಗ ಕೆಲಸ ಮಾಡುತ್ತಿದ್ದುದು ಇನ್ನೊಬ್ಬರ ಹೊಲದಲ್ಲಿ) ಕೂಲಿಗಾಗಿ ನನ್ನ ಮನಸ್ಸು ಮರುಗಿತು ತನ್ನ ಇನ್ನೂ ಏನೆಲ್ಲ ಕಷ್ಟಸುಖಗಳನ್ನು ನನ್ನೊಂದಿಗೆ ತೋಡಿಕೊಂಡ.

ಬೇಡಬೇಡವೆಂದರೂ ಕೇಳದೆ ಎಡಿಯನ್ನು ಇನ್ನೊಬ್ಬರಿಗೆ ವಹಿಸಿ ನನ್ನೊಂದಿಗೆ ಮಾರ್ಗದತ್ತ ಹೊರಟ. ನನ್ನ ಚೀಲವನ್ನು ಹಟ ಮಾಡಿ ಕಿತ್ತುಕೊಂಡು ತನ್ನ ಹೆಗಲಿಗೆ ನೇತುಹಾಕಿಕೊಂಡ. ಇಷ್ಟೆಲ್ಲ ಆದಮೇಲೆ, ಭೀಮವ್ವನ ಹಾಡುಗಳನ್ನು ಸಂಗ್ರಹಿಸುವ ನನ್ನ ಉದ್ದೇಶವನ್ನು ಹೇಳಿದೆ. 'ನೀಂವ ರವಿವಾರ್ ಬರ್ರಿ. ಆಕಿ ಎಲ್ಲಿದ್ರೂ ಕರಸಿ ನಿಮುಗ ಹಾಡಿಸ್ತೀನ್ರಿ' ಎಂದು ಭರವಸೆ ನೀಡಿದ. ಬಸ್ಸು ಬಂದಾಗ ಏರಿಕೊಂಡು ಭಾನುವಾರ ಖಂಡಿತಾ ಬರುವೆನೆಂದು ಹೇಳಿ ಹೊರಟೆ.

೩

ಬೀದರ್ ಜಿಲ್ಲೆಯಲ್ಲಿ ಪ್ರವಾಸ ಮಾಡುತ್ತಿದ್ದಾಗ ಒಂದು ಸಂದರ್ಭ. ಆ ಜಿಲ್ಲೆಯ ದಕ್ಷಿಣ ದಿಕ್ಕಿನ ಕೊನೆಯ ಹಳ್ಳಿ 'ಹಳ್ಳಿಖೇಡ' (ಹಳ್‌ಖೇಡ್). ಹಿಂದೆ ಕರ್ನಾಟಕದಲ್ಲಿ ರಾಷ್ಟ್ರಪತಿ ಆಡಳಿತ ಇದ್ದಾಗ ಧರ್ಮವೀರ ಅವರು ರಾಜ್ಯಪಾಲರಾಗಿದ್ದರು. ಅವರ ಆಡಳಿತದ ಅವಧಿಯಲ್ಲಿ ಈ ಹಳ್ಳಿಯಲ್ಲೊಂದು ಕೊರೆತದ ಬಾವಿ ತೋಡಲಾಯಿತು. ಆ ಬಾವಿಯಿಂದ ನೀರು ತನ್ನಷ್ಟಕ್ಕೆ ತಾನೇ ಉಕ್ಕಿ ಹರಿಯುವ ಪ್ರಕೃತಿ ವೈಚಿತ್ರ್ಯ ನನ್ನನ್ನು ಸೋಜಿಗಗೊಳಿಸಿತು. ದಿನಕ್ಕೆ ಅದೆಷ್ಟೋ ಸಾವಿರ ಗ್ಯಾಲನ್‌ಗಳಷ್ಟು ನೀರು ಈ ಬಾವಿಯಿಂದ ಹೊರಚೆಲ್ಲುತ್ತದೆ. ಬೇಸಿಗೆಯ ದಿನಗಳಲ್ಲಿ ಪ್ರಮಾಣ ಸ್ವಲ್ಪ ಕಡಿಮೆಯಾಗಬಹುದಷ್ಟೇ. ಆದರೆ ನೀರು ಎಂದೂ ನಿಂತದ್ದೇ ಇಲ್ಲ. ಈ ಒಂದೇ ಬಾವಿ ಊರಿಗೆಲ್ಲ ನೀರನ್ನು ಪೂರೈಸಿ ಹತ್ತಿರದ ಅದೆಷ್ಟೋ ಎಕರೆ ಭೂಮಿಯನ್ನು ಹಚ್ಚಹಸುರಾಗಿಸಿದೆ. ಇರಲಿ. ಹಳ್ಳಿಖೇಡ ಕೋಲಾಟದಲ್ಲಿ ತುಂಬ ಪ್ರಸಿದ್ಧವಾದ ಊರು. ಇಲ್ಲಿನ ಕೋಲಾಟದ ವೈಶಿಷ್ಟ್ಯಗಳೆಂದರೆ : ಸ್ಪರ್ಧೆಗಳು ; ರಾಮಾಯಣ ಹಾಗೂ ಕೃಷ್ಣಲೀಲೆಗಳನ್ನು ಆಧರಿಸಿ ಈ ಭಾಗದಲ್ಲಿ ಬಹಳವಾಗಿ ಪ್ರಚಲಿತವಾಗಿರುವ ಹಾಡುಗಳನ್ನು ಮಾತ್ರ ಬಳಸುವಿಕೆ, ಬಿಡಿ ಹಾಡುಗಳ ಅಪರೂಪದ ಬಳಕೆ ; ನಡುನಡುವೆ ಪೌರಾಣಿಕ ನಾಟಕಗಳ ಧಾಟಿಯಲ್ಲಿ ಸಂಭಾಷಣೆಗಳು.

ಕೋಲಾಟದ ತಂಡಕ್ಕೆ ಮುಖ್ಯಸ್ಥರಾಗಿದ್ದ ಸಿದ್ದಣ್ಣಾ ಬಸವತೀರ್ಥಪ್ಪಾ ಭೂರಿ ಅವರ ಪರಿಚಯವಾದದ್ದು ಅಲ್ಲಿನ ಶಾಲೆಯ ಮಾಸ್ತರರಾದ ಚಂದ್ರಶೇಖರ ಮಾಸ್ತರರಿಂದ. ನಾನು ಬಂದದ್ದು ಎಲ್ಲಿಂದ, ಯಾವ ಉದ್ದೇಶಕ್ಕೆ, ಇತ್ಯಾದಿ

ವಿವರಗಳನ್ನು ಹೇಳಿಕೊಂಡಾಗ ಸಿದ್ದಣ್ಣನವರು ತುಂಬ ಖುಷಿಪಟ್ಟರು. 'ಬರ್ರಿ, ಇಲ್ಲೆ ಸಾಲಿ ಕಟ್ಟೆ ಮ್ಯಾಗ ಕೂಡೂಣು ಬರ್ರಿ' ಎಂದು ಹೇಳಿ. ಶಾಲೆಯ ಜಗಲಿಯಲ್ಲಿ ಕುಳಿತರು. ತಮ್ಮ ಶಿಷ್ಯರಲ್ಲೊಬ್ಬನನ್ನು ಕರೆದು ಚಾ ತರಲು ಕಳಿಸಿದರು. ಮಾತಿನ ನಡುವೆ ಚಾ ಸೇವನೆ ಆಯಿತು. ಅವರಿಂದ ಅನೇಕ ಕೋಲು ಪದಗಳನ್ನು ಬರೆದುಕೊಂಡೆ.

ಹಾಡುಗಳ ಸಂಗ್ರಹದ ನಡುವೆಯೂ ಆಗಾಗ ಮಾತಿಗೆ ತೊಡಗುವುದಿತ್ತು. ಅಂಥ 'ತನಿ' ಘಳಿಗೆಯಲ್ಲಿ ಒಮ್ಮೆ ಸಿದ್ದಣ್ಣನವರು ಹೇಳಿದ ಒಂದು ಅನುಭವ ರೋಮಾಂಚಕಾರಿಯಾಗಿತ್ತು. ಕೋಲಾಟದ ಮಜಾ ಇರುವುದೇ ಸ್ಪರ್ಧೆಯಲ್ಲಿ ಎಂದು ಹೇಳುವ ಸಿದ್ದಣ್ಣನವರು ತಮ್ಮ ಈ ಅನುಭವ ಯಾವ ಊರಿನವರೊಂದಿಗೆ ಆದುದ್ದು ಎಂಬುದನ್ನು ಮಾತ್ರ ರಹಸ್ಯವಾಗಿಯೇ ಉಳಿಸಿದರು.

ಹಳ್ಳಿಖೇಡದವರಿಗೂ ಇನ್ನೊಂದು ಊರಿನವರಿಗೂ ಒಮ್ಮೆ ಒಂದು ಕೋಲಾಟದ ಸ್ಪರ್ಧೆ ಏರ್ಪಟ್ಟಿತ್ತು. ಈ ಸಂತ್ತಿನಲ್ಲಿ ಹಳ್ಳಿಖೇಡಕ್ಕಿರುವ 'ಹೆಸರ'ನ್ನು ತಾವು ಗಳಿಸಿಕೊಳ್ಳಬೇಕೆಂದು ಬಹಳ ವರ್ಷಗಳಿಂದ 'ಆ' ಊರಿನವರು ಪ್ರಯತ್ನಿಸು ತ್ತಲೇ ಇದ್ದರಂತೆ. ಎರಡು ವರ್ಷಗಳ ಹಿಂದೆ 'ಏನಾದರಾಗಲಿ, ಈ ಸಲ ತಾವು ಹಳ್ಳಿಖೇಡದ ಮೇಲೆ ಗೆದ್ದೇ ತೀರಬೇಕು' ಎಂಬ ಚಲದಿಂದ ಹಳ್ಳಿಖೇಡದವರನ್ನು ಆಹ್ವಾನಿಸಿದರಂತೆ. ಮೂವತ್ತೈದು ವರ್ಷದ ಹುಲುಸು ಮೀಸೆಯ ಭೀಮಕಾಯದ ಸಿದ್ದಣ್ಣನವರಲ್ಲೂ ಅದೇ ಚಲ. 'ತಮ್ಮೂರಿಗೆ ಇರುವ ಹೆಸರನ್ನು ಏನಾದರಾಗಲಿ ಬಿಟ್ಟುಕೊಡಬಾರದು' ಎಂಬುದು. ಕಂಸ, ರಾವಣ-ಇಂಥ ಪಾತ್ರಗಳಿಗೇ ಹೆಸರಾ ಗಿದ್ದ ಸಿದ್ದಣ್ಣನವರು ಆಹ್ವಾನವನ್ನು ಒಪ್ಪಿಕೊಂಡು 'ಸರಿಯಾದ ಆಳು'ಗಳನ್ನು ಆರಿಸಿ ಹಗಲೂ ರಾತ್ರಿ ಅಭ್ಯಾಸ ನಡೆಸಿದರು. ಸ್ಪರ್ಧೆಯ ದಿನ ಸಮೀಪಿಸುತ್ತಿದ್ದಂತೆ ಇವರ ಉತ್ಸಾಹ ಹೆಚ್ಚತೊಡಗಿತು.

ಗೊತ್ತಾದ ದಿನ ಬೆಳಿಗ್ಗೆ ಸ್ಪರ್ಧೆ ಪ್ರಾರಂಭವಾಯಿತು. ಕೋಲು ಕೋಲಿಗೆ ತಾಟುಯ್ಯಿತು. ನಿಧಾನವಾಗಿ ಲಯವನ್ನು ಸಾಧಿಸಿಕೊಂಡ ಸ್ಪರ್ಧಿಗಳು ಹಾಡಲು ತೊಡಗಿದರು. ಅವರದೊಂದು ಚರಣ, ಇವರದೊಂದು ಚರಣ. ಅವರದೊಂದು ಸಮಸ್ಯೆ ಇವರ ಉತ್ತರ, ಇವರದೊಂದು ಸಮಸ್ಯೆ ಅವರ ಉತ್ತರ. ಇವರದೊಂದು ಕಟಕಿ ಅವರದೊಂದು ಕಟಕಿ. ಹೀಗೆ ತುಂಬಾ ಖುಷಿಯಿಂದಲೇ ಸಾಗಿದ ಕೋಲಾಟ ಕ್ರಮೇಣ ರಂಗುರಂಗಿನ ರೂಪ ಪಡೆದುಕೊಂಡಿತು. ಹೊತ್ತು ನೆತ್ತಿಗೇರಿ ಇಳಿಯ ತೊಡಗುತ್ತಿದ್ದರೂ ಉತ್ಸಾಹ ಕುಂದಲಿಲ್ಲ. ಕುಣಿತ ಅಬ್ಬರಿಸ ತೊಡಗಿತು. ಸಂಜೆಯಾದರೂ ಉತ್ಸಾಹ ತಗ್ಗಲಿಲ್ಲ. ಊಟವಿಲ್ಲ ತಿನಿಸಿಲ್ಲ; ನೀರನ್ನು ಬಯಸಲಿಲ್ಲ. ರಾತ್ರಿದಟ್ಟವಾಯಿತು. ಯಾರೂ ಸೋಲಲಿಲ್ಲ. ಕೆಲವು ನಿಮಿಷಗಳ ವಿರಾಮ

ದೊಂದಿಗೆ ಮತ್ತೆ ಪ್ರಾರಂಭ. ಸಾಗಿತು ಹಾಡು, ಸಾಗಿತು ಕೋಲು. ನೋಡುವವರ ಉತ್ಸಾಹವೂ ಇಂಗಲಿಲ್ಲ; ಸ್ಪರ್ಧಿಗಳಿಗೆ ಉತ್ಸಾಹ ತುಂಬುತ್ತ ಕೇಕೆ ಹಾಕುತ್ತ ನಿಂತೇ ಇದ್ದರು, ಕೆಲವರು ಕುಳಿತೇ ಆ ಕೆಲಸ ಮಾಡುತ್ತಿದ್ದರು. ಕೋಳಿ ಕೂಗಿತು. ಸೋಲುವ ಲಕ್ಷಣ ಯಾರಲ್ಲೂ ಕಾಣಲಿಲ್ಲ; ಕಾಲದ ಪರಿವೆಯಂತೂ ಇರಲೇ ಇಲ್ಲ.

ನೋಡುವವರಿಗೆ ಈಗಲೀಗ ಸಮಸ್ಯೆಯೆನ್ನಿಸತೊಡಗಿತು. ಬಹಳ ಮಂದಿಯನ್ನು ನಿದ್ದೆ ಮೆಲ್ಲಮೆಲ್ಲನೆ ಆಕ್ರಮಿಸ ಹತ್ತಿತು. ಸಿದ್ದಣ್ಣ ಇದನ್ನು ಗಮನಿಸಿದರು. ಕೃಷ್ಣಲೀಲೆಯ ಯಾವುದೋ ಘಟ್ಟದಲ್ಲಿ ಹಾಡು ಸಾಗುತ್ತಿತ್ತು. ಮಂದಿಗೆ ಕವಿಯುತ್ತಿದ್ದ ಮಂಪರನ್ನು ಹೊಡೆದೋಡಿಸಲು ಸಿದ್ದಣ್ಣ ತಯಾರಾದರು.

ಗೊಲ್ಲತಿ ಬಿಡಲಾರೆ ನಿನಗ
ಕೆಳಿವೆನೆ ಕೆರಗ

ಎಂದು ಕೃಷ್ಣನಾದರು. ಈ ನುಡಿ ಪುನರಾವರ್ತನೆಯಾಗಿ ಕೊನೆಯ ಅಕ್ಷರ ಮುಗಿಯುತ್ತಿದ್ದಂತೆಯೇ ಇನ್ನೊಬ್ಬ ಅನುಭವಿ ರಾಚಯ್ಯಾ ಮಠಪತಿಯವರು ಗೊಲ್ಲತಿಯಾದರು ;

ಕೃಷ್ಣ ಥರವಲ್ಲೊ ನಿನಗ
ಕೆಳಿವದು ಕೆರಗ

ಕೃಷ್ಣ ಗೊಲ್ಲತಿಯರ ಸಂವಾದ ಹೀಗೇ ಮುಂದುವರಿಯುತ್ತದೆ. ಮುಂದೆ ಕೃಷ್ಣ ರಾಧೆಯನ್ನೋ ಮತ್ತೊಬ್ಬ ಗೊಲ್ಲತಿಯನ್ನೋ ಭೆಟ್ಟಿಯಾವ ಸಂದರ್ಭಕ್ಕೆ ಸಿದ್ದಣ್ಣ ಹಾರುತ್ತಾರೆ. ಮತ್ತೆ ಕೃಷ್ಣನಾಗುತ್ತಾರೆ. ಅವರ ಕೋರೆಮೀಸೆಯ ಅಂಚಿನಲ್ಲಿ ನಗೆ ತುಳುಕುತ್ತದೆ. ಬಾಯಿಯಿಂದ ಜೇನು ಹರಿಯುತ್ತದೆ ನೋಡುವ ರಸಿಕರಿಗಾಗಿ ;

ಯಾರ್ ಪೋರಿ ಬಿಡು ದಾರಿ ಬಂದಿನಿ ನಿಂತಿನಿ ಹವ್ವಹಾರಿ
ದಾರಿ ತರುಬಿ ಕೇಳತಿ ನೀ ಯಾವೂರವನ
ತುಸು ಖೂನ ಗುರತ ಇಲ್ಲೆ ಎನ್ನಗ್ ಅರಿಯದವನ
ಎನಗ ಕೈ ಮಾಡಿ ಕರಿತಿದ್ದಿ ಹಳ್‌ಪೇಡ್ಡವನ

ಇದಕ್ಕೆ ಉತ್ತರವನ್ನು ರಾಚಯ್ಯನವರು ಹುಡುಕಬೇಕಾಗುವುದಿಲ್ಲ. ಉತ್ತರಗಳ ಸರಮಾಲೆಯೇ ಸಿದ್ಧವಾಗಿರುತ್ತದೆ. ಆದರೆ ಅವುಗಳಲ್ಲಿ ಯಾವುದನ್ನು ಆರಿಸಿಕೊಳ್ಳು

ವುದು ? ಇದೂ ಕೂಡ ಕ್ಷಣದಲ್ಲಿ ಪರಿಹಾರವಾಗಿ ರಾಚಯ್ಯ ಪ್ರಾರಂಭಿಸುತ್ತಾರೆ.

ಭಂಗರ್ ಪುತಳಿಯಂತ ಹುಡುಗ ಭಾರಾಗಿ ನಡದನೇನ
ಹಾರಿ ಹೋಗಿ ಅಂಗಿ ಪದರ ಹಿಡಿಯುಲೇನ
ಇವನ ಬಾ ಯಂತ ಟೊಂಕ ಹಿಡಿದು ಎಳಿಯುಲೇನ
ಇವನ ನಗೆ ಮುಖಿ ಮಾರಿ ಗಲ್ಲ ಕಡಿಯುಲೇನ

ಯಾರಿಗೆ ನಿದ್ದೆ ಬರುತ್ತದೆ ಇಂಥ ಹಾಡುಗಳನ್ನು ಕೇಳಿದಾಗ ? ನಿದ್ದೆಯಲ್ಲಿದ್ದವರು ನಿದ್ದೆಯಲ್ಲೂ ನಗಬಹುದಾದಂಥ, ಖುಷಿಪಡಬಹುದಾದಂಥ, ಸ್ವಾರಸ್ಯಕರ ಪ್ರಸಂಗಗಳನ್ನು ಅತ್ಯಂತ ಸ್ವಾರಸ್ಯದ ಗತಿಯಲ್ಲಿ ಹಾಡುತ್ತಾರೆ. ದಿನಗಟ್ಟಲೆ ನಿಂತು ನೋಡುವವರಿಗೆ ಎಷ್ಟೆಂದು ಇಂಥ ಪ್ರಸಂಗಗಳನ್ನು ಸೃಷ್ಟಿಸಲು ಸಾಧ್ಯ ? ಸಿದ್ದಣ್ಣನವರದು ತುಂಬ ಸೂಕ್ಷ್ಮ ಪ್ರಕೃತಿ. ವಾತಾವರಣವನ್ನು ಅವರು ಬಹುಬೇಗ ಅರ್ಥಮಾಡಿ ಕೊಂಡು ಬಿಡುತ್ತಾರೆ. ಅಷ್ಟೇ ತೀವ್ರಗತಿಯಲ್ಲಿ ಬದಲಾವಣೆಯನ್ನು ಚಲಾಯಿಸಿ ಬಿಡುತ್ತಾರೆ. ತಂಡದ ನಾಯಕ ಸಿದ್ದಣ್ಣನವರ ಸೂಕ್ಷ್ಮ ಸೂಚನೆ ಸ್ಪರ್ಧಿಗಳಿಗೆ ಅರಿವಾಗುತ್ತದೆ. ಈಗ ಕೋಲಾಟ ಸ್ತಬ್ಧತೆಯನ್ನು ಪಡೆಯುತ್ತದೆ. ಒಂದು ಕ್ಷಣ ; ಒಂದೇ ಕ್ಷಣ. ಮಿಂಚಿನಂತೆ ಸಿದ್ಧಣ್ಣ ರಾವಣನಾಗುತ್ತಾರೆ.

**ರಾವಣ :** ಎಲವೆಲವೋ ದುಷ್ಟ ಮಂಗವೇ. ಎನಗಿಂತ ಎತ್ತರದಲ್ಲಿ
ಕೂಡುವ ನಿನ್ನ ನಾ ಸಂಹರಿಸಿ ಬಿಡುವೆ.

**ಹಣಮು :** ಎಲವೆಲವೋ ದುಷ್ಟರಾವಳಾ,
ನಮ ರಾಮರ ಮುಂದ ನೀ ಎಷ್ಟರಾಂವ ಅದೀ ?

ರಾವಣನಿಗೆ ಅಸಾಧ್ಯ ಕೋಪ ಬರುತ್ತದೆ. ಅಷ್ಟು ಹೊತ್ತಿಗೆ ಕೋಲು ನಿಂತು ಎರಡು ಕ್ಷಣಗಳಾಗಿರುತ್ತವೆ. ಸಿದ್ದಣ್ಣನವರ ಸೂಚನೆಯನ್ನನುಸರಿಸಿ ಕೋಲು ದಿಢೀರನೆ ತೀವ್ರಗತಿಯಲ್ಲಿ ಪ್ರಾರಂಭವಾಗುತ್ತದೆ. ರಾವಣ ಅಬ್ಬರಿಸುತ್ತಾನೆ ಲಯಬದ್ಧವಾಗಿ :

ಬಾರಲ ಕೋತಿ ಧೂರ್ತ್ಯಕ ನಿಂತಿ
ನೋಡುವೆ ನಿನ್ನ ಸಗುತಿ
ನೋಡುವೆ ನಿನ್ನ ಸಗುತಿ

ಹೀಗೆ ಸ್ವಾರಸ್ಯವನ್ನು ಬಿಟ್ಟು ಬಿಡದಂತೆ ಕೋಲಾಟ ಮುಂದುವರಿಯುತ್ತದೆ.

ಬೆಳಗಾಗುತ್ತದೆ. ಸ್ಪರ್ಧೆ ಪ್ರಾರಂಭವಾಗಿ ಇಪ್ಪತ್ತನಾಲ್ಕು ಗಂಟೆಗಳಾಗಿವೆ.

ಸ್ಪರ್ಧಿಗಳು ಅಲ್ಲೊಬ್ಬರು ಇಲ್ಲೊಬ್ಬರು ಸುಸ್ತಾದಂತಿದ್ದಾರೆ. ಆದರೂ ಛಲದ ಮನೋಭಾವ ಮುಖದಲ್ಲಿ ಎದ್ದು ಕಾಣಿಸುತ್ತಿದೆ. ಸ್ಪರ್ಧೆಗೆ ಆಹ್ವಾನಿಸಿದವರು ಹಳ್ಳಿಖೇಡದವರ ಮುಂದೆ ಬಳಲುತ್ತಿದ್ದಾರೆ. ಆದರೂ ಸೋಲೊಪ್ಪದ ಸ್ವಾಭಿಮಾನ ಕೋಲಾಟವನ್ನು ಸಾಗಿಸುತ್ತಿದೆ. ಹೊತ್ತು ಮತ್ತೆ ಏರುತ್ತ, ನೆತ್ತಿಯ ಮೇಲಕ್ಕೆ ಬಂದು ಎಲ್ಲರ ನೆತ್ತಿಗಳೂ ಬಿಸಿಯಾಗುತ್ತಿವೆ. ಕಣ್ಣುಗಳು ಭಗಭಗನೆ ಉರಿಯ-ಹತ್ತಿವೆ. ಆ ಊರಿನವರು ತಾಳ್ಮೆಗೆಡುತ್ತಿದ್ದಾರೆ. ಹಳ್ಳಿಖೇಡದವರನ್ನು ಸೋಲಿಸಲು ಸಾಧ್ಯವೇ ಇಲ್ಲ ಎಂಬ ಹತಾಶೆ ಮನಸ್ಸಿನಲ್ಲಿ ಮೂಡುತ್ತಿದೆ.

ಸ್ವಾಭಿಮಾನ ಅವರನ್ನು ಕೊನೆಗೂ ದಾರಿತಪ್ಪಿಸಿತು. ಕೋಲಿಗೆ ಕೋಲು ಹತ್ತಲಿಲ್ಲ; ನುಸುಳಿಕೊಂಡು ಹೋಗಲು ಹತ್ತಿದುವು. ಸ್ಪರ್ಧಾಕೋಲುಗಳ ನಡುವೆ ಕಣ್ಣಾಮುಚ್ಚಾಲೆಯಾಟ ಪ್ರಾರಂಭವಾಯಿತು. ಬಹಳ ಎಚ್ಚರಿಕೆಯಿಂದ ತೂಗಿಸಲು ಪ್ರಯತ್ನಿಸಿದಷ್ಟೂ ಕೈಗೆ ಬೀಳುವ ಏಟುಗಳನ್ನು ತಪ್ಪಿಸಿಕೊಳ್ಳಲು ಹಳ್ಳಿಖೇಡದವರಿಗೆ ಕಷ್ಟವಾಯಿತು. ಅನ್ಯಮಾರ್ಗವಿಲ್ಲದೆ ತಮ್ಮ ಕೋಲುಗಳನ್ನೂ ಹಾದಿ ಬಿಡಿಸಿದರು. ಯಾವಾಗ ಏಟುಗಳು ಮರಳಿ ಬರಹತ್ತಿದವೋ ಆಗ 'ಆ' ಊರಿನವರಲ್ಲಿ ರೋಷ ಚಿಮ್ಮಿತು. ಉದ್ದೇಶ ಪೂರ್ವಕವಾಗಿ ಅವರ ಕೋಲುಗಳು ಹಳ್ಳಿಖೇಡದವರ ಕೈಗೇ ನೇರವಾಗಿ ತಗುಲ ತೊಡಗಿದುವು. ಹೊತ್ತು ನೆತ್ತಿ ದಾಟ ಮುಂದುವರಿದಿತ್ತು. ಮೇಲಿನ ಬಿಸಿಗಿಂತ ಹೆಚ್ಚು ಅಪಾಯಕಾರಿಯಾಗಿ ಕಂಡ ಈ ಒಳಗಿನ ಬಿಸಿಯನ್ನು ಗಮನಿಸಿದ ಅನುಭವಿಯೊಬ್ಬರು ಸಮೀಪದ ಪೊಲೀಸು ಠಾಣೆಗೆ ಓಡಿಹೋದರು. ಇಂಥ ಅಪೂರ್ವ ಸ್ಪರ್ಧೆ ಪೊಲೀಸರ ಮಧ್ಯಪ್ರವೇಶದಿಂದ ಕೊನೆಗೂ ಡ್ರಾ ಆಗಿ ಬಿಟ್ಟಿತು !

ತಮ್ಮ ಕೋಲಾಟದ ಬದುಕಿನ ಅವಿಸ್ಮರಣೀಯ ಘಟನೆಯೊಂದನ್ನು ಸ್ವಲ್ಪಮಟ್ಟಿನ ಉತ್ಪ್ರೇಕ್ಷೆಗಳಿಂದ ಕೂಡಿದ್ದರೂ ಭಾವಾವೇಶಪೂರಿತರಾಗಿ ಹೇಳುತ್ತಿದ್ದ ಸಿದ್ದಣ್ಣನವರು, ಅದನ್ನು ಮುಗಿಸಿದಾಗ ತುಂಬ ಆಳವಾದ ಯೋಚನೆಯಲ್ಲಿ ಮುಳುಗಿದ್ದರು. ಸ್ವಲ್ಪ ಹೊತ್ತಿನ ಮೇಲೆ ಎಚ್ಚೆತ್ತ ಅವರು 'ಹೀಂಗಿರ್ತೈತಿ ನೋಡ್ರಿ ನಂ ಕೋಲಾಟ್' ಎಂದು ಹೇಳಿ, ಹೆಮ್ಮೆಯಿಂದ ಮೀಸೆಯ ತುದಿಯಲ್ಲೆ ನಸುನಕ್ಕು ಬೀಡಿಯ ಕಟ್ಟಿಗೆ ಕೈ ಹಾಕಿದಾಗ, ಯಾವುದೋ ಜಗತ್ತಿನಿಂದ ಥುತ್ತನೆ ಹಳ್ಳಿಖೇಡಕ್ಕೆ ಬಿದ್ದಂತೆ ಅನುಭವ ನನಗೆ !

○

ಡಾ॥ ಕೃಷ್ಣಮೂರ್ತಿ ಹನೂರು

# ಮೂಲ ಸ್ವರೂಪ ಮತ್ತು ಅಂಟಿಕೊಂಡ ಕಥೆಗಳು

ಜನಸಮೂಹವು ಪ್ರಾಚೀನ ಕಾಲದಿಂದ ಬದುಕಿಕೊಂಡು ಬಂದಿದ್ದರ ರೀತಿ ನೀತಿ, ಕ್ರಮ, ಇದರ ಒಟ್ಟು ಹಿನ್ನೆಲೆ ಇಂಥದ್ದನ್ನೆಲ್ಲ ಅರಿಯಲು ಸಂಶೋಧಕರು ಯತ್ನಿಸುತ್ತಿದ್ದಾರೆ. ಸಂಶೋಧಕರ ಆ ಅಧ್ಯಯನದ ಪ್ರಯತ್ನದಲ್ಲಿ ಸಹಾಯಕ್ಕೆ ಬರುವ ಅತಿ ಮುಖ್ಯ ಸಾಧನಗಳಲ್ಲಿ ಜಾನಪದವೂ ಒಂದು. ಪ್ರಾಚೀನ ಕಾಲ ದಿಂದಲೂ ಜಾನಪದವು ಬೆಳೆದು ಬಂದಂತೆ ತೋರುತ್ತದೆ. ಆದರೆ ಆ ಕಾಲಕ್ಕೆ ಅದರ ಸ್ವರೂಪ ಹೇಗಿತ್ತೆಂದು ಹೇಳಲು ಬರು ವುದಿಲ್ಲ. ಯಾವ ಕಾಲಕ್ಕೂ ಅದು ಗ್ರಂಥಸ್ಥವಾಗದೆ ಗ್ರಾಮೀ ಣರ ಬಾಯಲ್ಲೇ ಉಳಿದುಕೊಂಡು ಬಂದವು. ಹಾಗಾಗಿ ಕಾಲ ಕಾಲಕ್ಕೆ ಅದರ ರೂಪ ಬದಲಾಗಿರಬಹುದು. ನಗರ ವಾಸಿಗಳು ಅಥವಾ ಶಿಷ್ಟಕವಿಗಳೆನಿಸಿಕೊಂಡವರು ಈ ಜಾನಪದ ಪ್ರಕಾರ ವನ್ನು ಯಾವ ಕಾಲಕ್ಕೂ ಗಂಭೀರವಾಗಿ ತೆಗೆದುಕೊಂಡಂತೆ ಕಾಣಿಸುವುದಿಲ್ಲ. ಇದರಿಂದಾಗಿ ಜಾನಪದವು ಗ್ರಾಮೀಣರ ಸೊತ್ತಾಗಿಯೇ ಉಳಿಯಿತು. ಗ್ರಾಮೀಣರ ಸಾಮಾನ್ಯ ಜೀವನದ ಅನುಭವ ವಿವರಗಳನ್ನು ಬಹು ಸಮರ್ಥವಾಗಿ ಹಿಡಿ ದಿಟ್ಟುಕೊಂಡು ಬಂದ ಜೀವಂತ ಪ್ರಕಾರವಾಗಿದೆ ಅದು. ಜಾನ ಪದ ಸೃಷ್ಟಿಗೆ ಹಿನ್ನೆಲೆ ಹಳ್ಳಿಯ ಬದುಕಾದರೂ ನಗರವಾಸಿಗಳು, ಕವಿಗಳು ಅದೊಂದು ಕಲಾಪ್ರಕಾರ ಎಂದು ಎಣಿಸದೇ ಹೋದರೂ ಯಾವುದೇ ಹಂತದಲ್ಲಿ ಜಾನಪದ ಮತ್ತು ಶಿಷ್ಟ ಇವೆರಡೂ ಪರಂಪರೆಯ ನಡುವೆ ಕಾಲದಿಂದಲೂ ಒಂದು ಬಲ ವಾದ ಸಂಬಂಧ ಇರುವಂತೆಯೇ ಕಾಣಿಸುತ್ತದೆ. ಶಿಷ್ಟ ಕವಿಗಳು ತಮ್ಮ ಕಾವ್ಯನಾಯಕರ ಸಂಬಂಧದ ಐತಿಹಾಸಿಕ ಸತ್ಯಸಂಗತಿ

ಗಳನ್ನು ಹಿಂದೆ ಮಾಡಿ ಅವರನ್ನು ಕುರಿತಾಗಿ ಅತಿಮಾನುಷ ಸಂಗತಿ, ಪವಾಡ ಕಥೆ ಗಳನ್ನು ಮುಂದೆ ತಂದು ಹೇಗೆ ಕಥೆ ಕಾವ್ಯ ಕಟ್ಟಿದರೋ ಜನಪದರೂ ಹಾಗೆಯೇ ತಮ್ಮ ಕಣ್ಣ ಮುಂದೆ ಆಗಿ ಹೋದ ಐತಿಹಾಸಿಕ ವ್ಯಕ್ತಿಗಳನ್ನು ಕುರಿತೂ ಅದನ್ನೇ ಮಾಡಿದರು. ಈ ಸಂಬಂಧವಲ್ಲಿ ಜನಪದರಿಗೇ ಆಗಲಿ, ಶಿಷ್ಟರಿಗೇ ಆಗಲಿ, ಕಥೆ, ಕಾವ್ಯ ನಿರ್ಮಿತಿಯಲ್ಲಿ ಪ್ರಾಚೀನ ಕಾಲದಿಂದ ಬಂದ ಅದದೇ ಆಶಯ ಗಳು ಸಹಾಯಕ್ಕೆ ಬಂದವು.

**ಜನಪದ ಕಾವ್ಯ ದೇವತೆಗಳು ಮತ್ತು ಕಥೆಗಳು**

ಕರ್ನಾಟಕದ ದಕ್ಷಿಣ ಭಾಗದಲ್ಲಿ ಅಂದರೆ ಮೈಸೂರು ಜಿಲ್ಲೆಯ ತುತ್ತತುದಿ ಯಲ್ಲಿ ಬರುವ ಮಲೆಯ ಮಹದೇಶ್ವರ ದೇವತೆಯ ಹೆಸರು ಆ ಸುತ್ತಿನಲ್ಲೆಲ್ಲ ಪ್ರಸಿದ್ಧ ವಾದದು. ಈ ದೇವತೆಯ ಮೇಲಿನ ಇತಿಹಾಸ, ದಂತಕಥೆ, ಪವಾಡ ವಿವರಗಳು, ದೀರ್ಘಕಾವ್ಯ, ಜಾತ್ರೆಯ ಆಚರಣೆ ಇವೆಲ್ಲ ಕುತೂಹಲಕರ ಮತ್ತು ಅಭ್ಯಾಸ ಯೋಗ್ಯ. ಈತ ಅರಣ್ಯ ಪ್ರದೇಶದ ಬುಡಕಟ್ಟು ಜನಗಳ ನಡುವೆ ವಾಸಿಸಿ ಅವರ ಉದ್ಧಾರಕ್ಕೆ ಶ್ರಮಿಸಿ ಅವರಿಂದ ಗೌರವಗೊಂಡು, ಸಮಾಧಿಸ್ಥಿತನಾದ ಮೇಲೆ ದೇವಾತಾ ಸ್ವರೂಪಿಯಾದಂತೆ ತೋರುತ್ತದೆ. ಈತನ ಕಾಯಕದ ಕ್ರಮ ಹನ್ನೆರಡನೇ ಶತಮಾನದ ವಚನಕಾರರ ವ್ಯಕ್ತಿತ್ವವನ್ನು ನೆನಪಿಗೆ ತರುತ್ತದೆ. ಮಹದೇಶ್ವರನ ಮೇಲಿನ ಪವಾಡ ಕಥೆ, ಕಾವ್ಯ ಅಲೌಕಿಕ ಸಂಗತಿಗಳಿಂದ ಆರಂಭವಾದರೆ ದಂತಕಥೆ ಗಳು ಒಂದು ವಿಧದ ಲೌಕಿಕ ವಿವರಗಳಿಂದ ತೊಡಗುತ್ತವೆ. ಒಂದು ಕಥೆ ಹೀಗೆ ಪ್ರಚಾರದಲ್ಲಿದೆ. ಮೈಸೂರು ಜಿಲ್ಲೆಯ ಪ್ರಸಿದ್ಧ ದೇವತೆಗಳು ನಂಜನಗೂಡಿನ ನಂಜುಂಡೇಶ್ವರ, ಮೈಸೂರಿನ ಚಾಮುಂಡೇಶ್ವರಿ, ಮತ್ತು ಮಲೆಯ ಮಹದೇಶ್ವರ. ಚಾಮುಂಡಿಯನ್ನು ಮಹದೇಶ್ವರನು ತನ್ನ ಪ್ರಾಯ ಕಾಲದಲ್ಲಿ ಪ್ರೀತಿಸಿದ. ಆದರೆ ಚಾಮುಂಡಿಗೆ ಮಹದೇಶ್ವರನ ಮೇಲೆ ಒಲವಿರಲಿಲ್ಲ. ನಂಜನಗೂಡಿನ ನಂಜುಂಡೇ ಶ್ವರನನ್ನು ಇಷ್ಟಪಟ್ಟಳು. ಮಹದೇಶ್ವರನು ಬೇಸರಗೊಂಡು ಅಲ್ಲಿದ್ದು ಮತ್ತೆ ಚಾಮುಂಡಿಯನ್ನು ನೋಡುವಂತಾಗಬಾರದೆಂದು ದಕ್ಷಿಣ ತುದಿಯ ಕಡೆಗೆ ಹೊರಟ. ಅಲ್ಲಿ ಅರಣ್ಯವಾಸಿಗಳನ್ನು ಕೂಡಿಕೊಂಡು ಅವರ ಉದ್ಧಾರಕ್ಕಾಗಿ ಶ್ರಮಿಸತೊಡಗಿದ. ದಂತಕಥೆಗಳ ರಚನಾಕ್ರಮವೇ ಹೀಗೆ ! ಭೌಗೋಳಿಕ ವಿವರಗಳಿಗೆ ತಕ್ಕಂತೆ ಅವು ಹುಟ್ಟಿಕೊಳ್ಳುತ್ತವೆ. ಈಗಲೂ ಮಹದೇಶ್ವರನ ನೆಲೆ ಅರಣ್ಯ ಸಾಲುಗಳ ನಟ್ಟ ನಡುವೆ ಇದೆ. ಅದಕ್ಕೆ ಜನಪದರು ಮೇಲಿನ ದಂತಕಥೆಯಂತೆ ಕೊಡುವ ವಿವರ ಮಹದೇಶ್ವರನು ಪ್ರೇಮವಂಚಿತನಾದ ಮೇಲೆ ಚಾಮುಂಡಿಯ ನೆಲೆ ಕಾಣಬಾರದು, ಅವಳ ನೆನಪು ಆಗಬಾರದೆಂದೇ ಅರಣ್ಯ ಸಾಲುಗಳನ್ನು ದಾಟ ಹೋದನಂತೆ ! ಇದು ಮೂಡುಸುತ್ತಿನ ಗ್ರಾಮೀಣರ ಬಾಯಲ್ಲಿರುವ ಒಂದು ದಂತಕಥೆಯಾದರೆ ಅದೇ

ಹಾಡುಗಾರರ ಬಾಯಲ್ಲಿರುವ ಕಾವ್ಯ ಮಹದೇಶ್ವರನ ಬೇರೆಯದೇ ಪವಾಡ ಸಂಗತಿಗಳನ್ನು ವಿವರಿಸುತ್ತದೆ.

ಮಾದಯ್ಯನು ತನಗೆ ತಂದೆ ತಾಯಿ ಇಲ್ಲ ಎಂಬ ಕಾರಣಕ್ಕಾಗಿ ಬೇರೊಬ್ಬರು ತಂದೆ ತಾಯಿಗಳನ್ನು ಪಡೆದದ್ದು, ಶರಣರ ಮಠಗಳಲ್ಲಿ ತನ್ನ ಶಕ್ತಿಯನ್ನು ಮೆರೆಯುವುದು, ಶ್ರವಣ ದೊರೆಯನ್ನು ಜಯಿಸಿದ್ದು, ಜುಂಜೇಗೌಡನನ್ನು ಶಿಷ್ಯನನ್ನಾಗಿ ಸ್ವೀಕರಿಸಿದ್ದು, ಶಂಕಮ್ಮನ ಪ್ರಸಂಗ, ಬೇವಿನಟ್ಟಿ ಗಾಳಿಯಂಥ ಕೃಪಣ ಹೆಂಗಸಿಗೆ ಬುದ್ಧಿ ಕಲಿಸಿದ್ದು ಇವೆಲ್ಲವೂ ಆತನ ಅಲೌಕಿಕ, ಅತಿಮಾನುಷ ವ್ಯಕ್ತಿತ್ವವನ್ನು ಹೇಳುವಂಥ ಪವಾಡ ಕಥೆಗಳಾಗಿವೆ. ಜನಪದರು ಐತಿಹಾಸಿಕ ವ್ಯಕ್ತಿಗಳು, ದಾರ್ಶನಿಕರ ಬದುಕನ್ನು ನೋಡುವ ಕ್ರಮವೇ ಹೀಗೆ. ಕೇವಲ ಜನಪದರೇ ಅಲ್ಲ ಶಿಷ್ಟ ಪರಂಪರೆಯಲ್ಲಿ ಬರುವ ಐತಿಹಾಸಿಕ ಕಾವ್ಯಗಳೂ ಕೂಡ ಇತಿಹಾಸಕ್ಕೆ ಸಂಬಂಧಪಟ್ಟ ಸಂಗತಿಗಳನ್ನು ಉಳಿಸಿಕೊಂಡು ಬಂದಿರುವುದು ರೂಢಿಗತ ಆಶಯಗಳ ಮೇಲೆಯೇ. ಅಂತೆಯೇ ಶರಣರ, ಸಂತರ, ಐತಿಹಾಸಿಕ ವೀರರ ಹುಟ್ಟು, ಬಾಲ್ಯ, ಬೆಳವಣಿಗೆಯೆಲ್ಲ ಅದದೇ ಆಶಯ ಕಥೆಗಳ ವಿವರಿಸಲ್ಪಡುತ್ತವೆ.

ಜನಪದ ಕಾವ್ಯ ಕಥೆಗಳಲ್ಲಿ ವೀರಪುರುಷರು ಸಾಮಾನ್ಯವಾಗಿ ತಾಯಂದಿರ ಬೆನ್ನು ಮಾರ್ಗವಾಗಿ ಹುಟ್ಟಿದರೆ, ಶರಣರಿಗೆ ಹುಟ್ಟಿದ ಮೇಲೂ ಮತ್ತೆ ಎರಡನೆಯ ಹುಟ್ಟು ಇರುತ್ತದೆ. ಹೀಗಾಗಿ ಮಹದೇಶ್ವರನು ನಿಜ ಜೀವನದಲ್ಲಿ ಯಾರಿಗೆ ಹುಟ್ಟಿದನೋ ಅದು ಜನಪದರಿಗೆ ಗೌಣ. ಅವನ ಎರಡನೇ ಹುಟ್ಟಿನ ಆಶಯ ಕಥೆಯೇ ಮುಖ್ಯ. ಮಾದಯ್ಯನು ತಾನು ವೀರಶೈವನಾಗಲು ಬಯಸಿ ಕುಂತೂರು ಮತ್ತು ಸುತ್ತೂರು ಮಠಗಳಲ್ಲಿ ದೀಕ್ಷೆಸಿಗದೆ ಮೂಡುಮಲೆಗೆ ಬಂದು ನೆಲೆಸಿದ. ಅಲ್ಲಿ ತಪಸ್ಸಿಗೆ ಕೂತವನ ಸುತ್ತ ಹುತ್ತ ಬೆಳೆದುಕೊಂಡಿತು. ಅಲ್ಲಿಗೆ ಮೇಯಲು ಬರುತ್ತಿದ್ದ ಜುಂಜೇಗೌಡನ ಹಸು ದಿನನಿತ್ಯವೂ ಹಾಲು ಕರೆದು ಹೋಗುತ್ತಿದ್ದಿತು. ಇದನ್ನು ಗಮನಿಸಿದ ಜುಂಜೇಗೌಡ ಒಂದುದಿನ ಹಸುವಿನ ಹಿಂದೆ ಬಂದು ವಿಷಯ ತಿಳಿದು ಹುತ್ತವನ್ನು ಅಗೆಯಲು ಆಯುಧವೆತ್ತಿದ. ಆ ಏಟು ಹುತ್ತದೊಳಗಿನ ಶರಣನಿಗೆ ಬಿದ್ದಿತು. ತಾನು ಮಾಡಿದ ತಪ್ಪಿಗೆ ಪಶ್ಚಾತ್ತಾಪಪಟ್ಟು ಜುಂಜೇಗೌಡ ಮಹದೇಶ್ವರನಿಗೆ ಅದೇ ಸ್ಥಳದಲ್ಲಿ ಗುಡಿ ಕಟ್ಟಿಸಿದ.

ಭೂಮಿಯ ಮಣ್ಣಿನಿಂದ ನಿರ್ಮಾಣಗೊಂಡ ಹುತ್ತದ ಬಾಯಿಂದ ಹುಟ್ಟಿ ಬರುವವ ಭೂಮಿಯ ಪುತ್ರನೆಂದೇ ತಿಳಿದು ಜನಪದರು ಅವನ ತಂದೆ ತಾಯಿಗಳ ಸಂಗತಿಯನ್ನು ಮರೆಯುತ್ತಾರೆ. ಇಂಥ ಹುಟ್ಟಿನ ಕ್ರಮದಿಂದ ಮಹದೇಶ್ವರನ ಪವಾಡ ಕಥಾಕಾವ್ಯ ಮುಂದುವರೆಯುತ್ತದೆ. ಈ ಪವಾಡಗಳೆಲ್ಲವೂ ಆತನ ವ್ಯಕ್ತಿತ್ವವನ್ನು ಮೇಲಕ್ಕೇರಿಸುತ್ತವೆ. ಜನಪದರಿಗೆ ಬೇಕಾದದ್ದೂ ಈ ಕಥೆಗಳೇ.

ಅವನ ವಾಸ್ತವ ಜೀವನದ ಸಂಗತಿಗಳಲ್ಲಿ ಅವು ಅವರಿಗೆ ಸಾಮಾನ್ಯ. ಮಹದೇಶ್ವರನು ಕೇವಲ ಮದಾಂಧರಷ್ಟನ್ನೇ ಬಗ್ಗಿಸಬಲ್ಲವನಲ್ಲ, ಹುಲಿ ಹಾವಿನಂಥ ಕ್ರೂರ ಪ್ರಾಣಿಗಳನ್ನೂ ಕೂಡ ತನ್ನ ವಾಹನವನ್ನಾಗಿಸಿಕೊಳ್ಳಬಲ್ಲ ಶಕ್ತಿ ಪಡೆದಿರುತ್ತಾನೆ. ಹೀಗಾಗಿ ಉಗ್ರಸ್ವರೂಪದ ಹುಲಿ ಆತನ ವಾಹನವಾಗುತ್ತದೆ. ಇದು ಎಲ್ಲ ದೇವತೆಗಳು ಮತ್ತು ವೀರಪುರುಷರ ಕಥೆಗಳಲ್ಲಿನ ಮುಖ್ಯ ಆಶಯ. ಬೇರೆ ಕಥೆಗಳಲ್ಲಿ ವೀರರು ಒಂದು ಒರಟು ಸ್ವಭಾವದ ಕುರುತಿಯನ್ನು ವಶಕ್ಕೆ ತೆಗೆದು ಕೊಳ್ಳಬಹುದಷ್ಟೆ. ಎಲ್ಲ ರೀತಿಯ ಯಥಾವಿಧಿ ವಿವರಗಳು, ಆಶಯಗಳು ಒಳಗೊಳ್ಳುವ ಮಲೆಯ ಮಹದೇಶ್ವರನ ಮೇಲಣ ಪವಾಡಕಥೆಗಳ ಕಾವ್ಯವು ಇರುವ ಕನ್ನಡ ಜನಪದ ಕಾವ್ಯಗಳಲ್ಲಿಯೇ ಅತ್ಯಂತ ವಿಸ್ತಾರವಾದುದು.

ದಕ್ಷಿಣ ಕರ್ನಾಟಕದಲ್ಲಿ ಮಹದೇಶ್ವರನಷ್ಟೇ ಇನ್ನೊಬ್ಬ ಪ್ರಸಿದ್ಧ ವ್ಯಕ್ತಿ ಮಂಟೇಸಾಮಿ. ಈತನ ಮೇಲಣ ಕಾವ್ಯವೂ ಮಹದೇಶ್ವರನ ಕಾವ್ಯದಂತೆಯೇ ಅನೇಕಾನೇಕ ಪವಾಡಗಳಿಂದ ಕೂಡಿದೆ. ಈ ಕಾವ್ಯದಲ್ಲಿಯ ಒಂದು ಮುಖ್ಯ ಸಂಗತಿಯೆಂದರೆ, ಐತಿಹಾಸಿಕ ವ್ಯಕ್ತಿಗಳನ್ನು ಶಿಷ್ಟಕಾವ್ಯಗಳಲ್ಲಿ ಪುರಾಣ ಪುರುಷರೊಂದಿಗೆ ಹೋಲಿಸುವಂತೆ, ಮಂಟೇಸ್ವಾಮಿಯನ್ನು ಉತ್ತರ ಕರ್ನಾಟಕದ ಅಲ್ಲಮಪ್ರಭುವಿನ ವ್ಯಕ್ತಿತ್ವದೊಂದಿಗೆ ಸಮೀಕರಿಸಲಾಗಿದೆ. ಅಲ್ಲಮ ಪ್ರಭುವಿನ ಮೇಲೆ ಕಾವ್ಯ ರಚನೆ ಮಾಡಿದ ಹರಿಹರ ಚಾಮರಸರಂಥ ಶಿಷ್ಟಕವಿಗಳು ಆತನ ಹುಟ್ಟಿನ ಮೂಲವನ್ನು ಕೈಲಾಸಕ್ಕೆ ಕೊಂಡೊಯ್ದರೆ, ಅಲ್ಲಮನ ವ್ಯಕ್ತಿತ್ವವನ್ನು ಕೇಳಬಲ್ಲ ಜನಪದರು ಮಂಟೇಸ್ವಾಮಿಯ ವ್ಯಕ್ತಿತ್ವವನ್ನು ಉತ್ತರ ಕರ್ನಾಟಕದ ವಿಭೂತಿ ಪುರುಷ ಅಲ್ಲಮ ಪ್ರಭುವಿನ ಕಡೆಗೆ ಕೊಂಡೊಯ್ಯುತ್ತಾರೆ.

ಮಂಟೇಸ್ವಾಮಿ ಹುಟ್ಟಿದಾಗ ಅವನಿಗೆ ನಾಮಕರಣವೇ ಆಗಿರಲಿಲ್ಲ. ಅಂಥ ಸಂದರ್ಭದಲ್ಲಿ ಅವನು ಮಳವಳ್ಳಿ ಸಮೀಪದ ಆದಿಹೊನ್ನಾಯಕನ ಹಳ್ಳಿಗೆ ಬಂದಾಗ ಮುದ್ದಮ್ಮ ತಾಯಿಯೆಂಬವಳು ಕಂಚಿನ ಹಂಡೆಯಲ್ಲಿ ಹಸುವಿನ ಹಾಲು ಕರೆಯುತ್ತಿದ್ದಳು. ಮಂಟೇಸ್ವಾಮಿ ಅಲ್ಲಿಗೆ ಭಿಕ್ಷಕ್ಕೆ ಬಂದ. ಅವನ ಶಂಖಜಾಗಟೆಯ ಸದ್ದು ಕೇಳಿ ಹಸು ಒದೆಯಿತು. ಹಾಲು ಚೆಲ್ಲಿ ಮುದ್ದಮ್ಮನಿಗೆ ಸಿಟ್ಟು ಬಂದು" ಹಾಳಾದ ಮಂಟೋರೊಡೆಯ ಮುಂದ್ಹೋಗು" ಎಂದು ಬೈದಳು. ಮಂಟೇಸ್ವಾಮಿಯ ಹೆಸರ ಮೇಲಿನ ಈ ಕಥೆ ಅವನು ಕಾಲವಾದ ನಂತರವೇ ಹುಟ್ಟಿ ಪ್ರಚಾರಕ್ಕೆ ಬಂದಿರುವಂಥದ್ದು. ಮಲೆಯ ಮಹದೇಶ್ವರನ ಮೇಲೂ ಇಂಥದ್ದೇ ಕಥೆಯಿದೆ. ಬಂಡಳ್ಳಿ ಬಸವನನ್ನು ತನ್ನ ವಾಹನವನ್ನಾಗಿ ಮಾಡಿಕೊಂಡು ಮಾದಯ್ಯ ಮೂಡು ದಿಕ್ಕಿಗೆ ಹೊರಡುವಾಗ ಅವನ ಗುರುಗಳು ಅವನನ್ನು ಕರೆದು ನಿಲ್ಲಲು ಹೇಳಿದರು. ಮಾದೇಶ್ವರ ನಿಲ್ಲಲಿಲ್ಲ. "ನಾನು ಮೂರು ಬಾರಿ ಕೂಗಿದರೂ ನೋಡದೇ

ಹೊಯ್ತಾನಲ್ಲ ಮಾದಯ್ಯನ ಹಾಗೆ" ಎಂದು ಬೈದರು. ಅದೇ ಹೆಸರು ಮಾದಯ್ಯನಿಗೆ ಉಳಿದುಕೊಂಡಿತು. ಜಾನಪದ ಪರಂಪರೆಯಲ್ಲಿ ನಿಂದಾತ್ಮಕ ಹೆಸರುಗಳನ್ನಿಟ್ಟುಕೊಳ್ಳುವುದೂ ಒಂದು ಸಂಪ್ರದಾಯವಿದೆ ಎಂಬುವನ್ನು ನಾವಿಲ್ಲಿ ನೆನಪಿನಲ್ಲಿಟ್ಟುಕೊಳ್ಳಬೇಕು.

ಮಹದೇಶ್ವರನಂತೆ ಮಂಟೇಸ್ವಾಮಿಯೂ ಅನೇಕ ಪವಾಡಗಳನ್ನು ಮಾಡುತ್ತಾನೆ. ಮಂಟೇಸ್ವಾಮಿಯ ಕಥೆ ಆರಂಭವಾಗುವುದೇ ಕಲ್ಯಾಣ ಪಟ್ಟಣದಲ್ಲಿ ಅವನು ಮಾಡುವ ಪವಾಡದಿಂದ. ಶಿಷ್ಟಕವಿಗಳ ಕಥೆಗಳ ಆರಂಭ ಕೈಲಾಸವಾದರೆ, ಜನಪದ ಕವಿಗಳ ಕಥೆಗಳ ಆರಂಭ ಕಲ್ಯಾಣದಿಂದ. ಯಾಕೆಂದರೆ ಜನಪದ ಕವಿಗಳು ಹೆಚ್ಚು ಲೌಕಿಕ ಪ್ರಿಯರು. ಶಿವಶರಣರು ಬಾಳಿಬದುಕಿದ ಕಲ್ಯಾಣಕ್ಕೆ ದಕ್ಷಿಣ ಕರ್ನಾಟಕದ ಮಂಟೇಸ್ವಾಮಿ ಕೆಲವು ಬಾರಿಯಾದರೂ ಭೇಟಿಕೊಟ್ಟಿರಬೇಕು. ಅಲ್ಲಿ ಬಸವಣ್ಣನವರು ಲಕ್ಷದ ಮೇಲೆ ತೊಂಭತ್ತಾರು ಸಾವಿರ (ಕಾವ್ಯೋತ್ಪ್ರೇಕ್ಷೆ) ಜನಕ್ಕೆ ದಾಸೋಹ ನಡೆಸುತ್ತಿದ್ದರು. ಅಲ್ಲಿಗೆ ಮಂಟೇಸ್ವಾಮಿ ಕೈಕಾಲು ಮುರಿದು ಕೊಂಡು, ಮೈಯೆಲ್ಲ ಗಾಯದವನಾಗಿ ಎತ್ತಿನ ಚರ್ಮ ಹೊದ್ದುಕೊಂಡು, ಸತ್ತಕರು ಹೊತ್ತುಕೊಂಡು ಬಂದರು. ಬಂದರೆ ಬಾಗಿಲು ಕಾಯುವವ ಆತನನ್ನು ಒಳಗೆ ಬಿಡುವುದಿಲ್ಲ.

ಮಂಟೇಸ್ವಾಮಿಯ ಈ ಬಗೆಯ ವ್ಯಕ್ತಿತ್ವವನ್ನು ನೋಡಿದರೆ ಆತ ಸನ್ಯಾಸತ್ವದ ತುರ್ಯಾವಸ್ಥೆಯನ್ನು ಅಂದರೆ ಅವಧೂತಸ್ಥಿತಿಯನ್ನು ಮುಟ್ಟಿದ್ದಂತೆ ತೋರುತ್ತದೆ. ಜತೆಗೆ ಮಂಟೇಸ್ವಾಮಿ ಸಾಯುತ್ತಿದ್ದ ಹೆಣ್ಣು ಮಗುವೊಂದನ್ನು ಬದುಕಿಸಿ ಆಕೆಯನ್ನು ಶಿಷ್ಯಳನ್ನಾಗಿ ಪಡೆಯುವುದು, ರಾಜಕುಮಾರರನ್ನು ವಿಷದ ಕಜ್ಜಾಯ ತಿನ್ನುವಂತೆ ಮಾಡಿ ಅವರನ್ನು ಮತ್ತೆ ಬದುಕಿಸುವುದು, ಬೊಪ್ಪಗೌಡನ ಪುರದಲ್ಲಿ ಕುರಿಗಳನ್ನು ಸಾಯುವಂತೆ ಮಾಡಿ, ಕೆಂಪಣ್ಣನನ್ನು ಶಿಷ್ಯನನ್ನಾಗಿ ಪಡೆಯುವುದು ಈ ಎಲ್ಲ ಪವಾಡಗಳನ್ನೂ ಮಾಡುತ್ತಾನೆ. ಹೆಚ್ಚು ಕಡಿಮೆ ಮಹದೇಶ್ವರ ಮತ್ತು ಮಂಟೇಸ್ವಾಮಿಯ ಕಥೆಯಲ್ಲಿ ಬರುವ ಪವಾಡ ಮಾದರಿಗಳು ಒಂದೇ ಬಗೆಯವು. ಇವರ ಮೇಲೂ ಪವಾಡ ಕಥೆಗಳು ಹೇಗೇ ಇರಲಿ ಅವರು ಬದುಕಿ ಬಾಳಿದ್ದು ಸಾಮಾನ್ಯ ಜನರ ನಡುವೆ. ಅದರಿಂದಲೇ ಅವರ ಲಕ್ಷೋಪಲಕ್ಷ ಭಕ್ತರೆಲ್ಲ ಬಹುಪಾಲು ಕೆಳವರ್ಗದವರೇ ಆಗಿದ್ದಾರೆ. ದಕ್ಷಿಣ ಕರ್ನಾಟಕದಲ್ಲಿ ಮಹದೇಶ್ವರ, ಮಂಟೇಸ್ವಾಮಿ ಇವರಿಬ್ಬರು ಕೆಳವರ್ಗದವರ ನಡುವೆ ಬದುಕಿ ಪ್ರಸಿದ್ಧ ದೇವತೆ ಗಳಾಗಿಬಿಟ್ಟರೆ, ಮಧ್ಯ ಕರ್ನಾಟಕದಲ್ಲಿ ತಿಪ್ಪೇಸ್ವಾಮಿ ಎಂಬ ಶಿವಶರಣ ಬೇಡ ನಾಯಕರ ಬುಡಕಟ್ಟಿನ ನಡುವೆ, ಜುಂಜಪ್ಪನೆಂಬುವ ಕಾಡುಗೊಲ್ಲರ ನಡುವೆ ಮೂಡಿ ಬಂದ ಶರಣರು ಮತ್ತು ದೇವತೆಗಳು. ಇವರನ್ನೂ ಜನಪದರು ಅವತಾರ ಪುರುಷರನ್ನಾಗಿಯೇ ನೋಡಿದ್ದಾರೆ.

ಜುಂಜಪ್ಪನ ಕಥೆಯು, ಅವನ ತಾಯಿ ಚನ್ನಮ್ಮನಿಗೆ ಮಕ್ಕಳಿರಲಿಲ್ಲ,ಆದರಿಂದ ಎಲ್ಲರೂ ಆವಳನ್ನು ಹಂಗಿಸುತ್ತಿದ್ದರು ಎಂಬ ಮಾಮೂಲಿ ಆಶಯದೊಂದಿಗೆ ಆರಂಭಗೊಳ್ಳುತ್ತದೆ. ಕೊನೆಗೆ ದೇವರ ವರದಿಂದ ಜುಂಜಪ್ಪ, ಅವನ ತಾಯಿಯ ಬೆನ್ನಿನ ಮಾರ್ಗವಾಗಿ ಹುಟ್ಟುತ್ತಾನೆ. ಬೆಳೆಯುತ್ತ ಜುಂಜಪ್ಪ ಬಡಮೈಲ ಎಂಬ ಎತ್ತನ್ನು ವಾಹನವನ್ನಾಗಿ ಮಾಡಿಕೊಳ್ಳುತ್ತಾನೆ. ಮಹದೇಶ್ವರ ಹುಲಿಯನ್ನು ವಾಹನ ಮಾಡಿಕೊಂಡಂತೆ. ಮೂರು ತಲೆಮಾರುಗಳ ಕಥೆಯನ್ನು ಹೇಳುವ ಜುಂಜಪ್ಪನ ಕಾವ್ಯ ಇತರ ಜನಪದ ಕಥೆ ಕಾವ್ಯಗಳ ಆಶಯಗಳನ್ನೇ ಕೂಡಿಕೊಂಡು ಬೆಳೆಯುತ್ತದೆ. ಆದರೆ ಇದೇ ಮಧ್ಯ ಕರ್ನಾಟಕದಲ್ಲಿ ಜುಂಜಪ್ಪನಷ್ಟೇ ಪ್ರಸಿದ್ಧನಾದ ಶರಣ ತಿಪ್ಪೇಸ್ವಾಮಿಯನ್ನು ಕುರಿತಂತೆ ಜನಪದರಲ್ಲಿ ಕಥೆ ಕಾವ್ಯವೇನೂ ಪ್ರಸಾರದಲ್ಲಿ ಇದ್ದಂತೆ ಕಾಣಿಸುವುದಿಲ್ಲ. ಆದರೆ ದಂತ ಕಥೆಗಳು ಪ್ರಚಾರದಲ್ಲಿವೆ. ಆ ದಂತ ಕಥೆಗಳೆಲ್ಲವೂ ತಿಪ್ಪೇಸ್ವಾಮಿಯ ಉದಾರಮನಸ್ಸನ್ನೂ ಕಾಯಕಕ್ಕೆ ಆತ ಕೊಟ್ಟ ಮಹತ್ವವನ್ನೂ ತಿಳಿಸುತ್ತವೆ. ಚಿತ್ರದುರ್ಗ ಜಿಲ್ಲೆಯ ನಾಯಕನ ಹಟ್ಟಿ ಗ್ರಾಮ ಆತನ ವಾಸಸ್ಥಳವಾಗಿದ್ದು ಅಲ್ಲಿ ಆತ ಜೇಡ ನಾಯಕರನ್ನು ಕೂಡಿಕೊಂಡು ಅನೇಕ ಬಗೆಯ ಸಮಾಜ ಸೇವಾಕಾರ್ಯಗಳಲ್ಲಿ ತೊಡಗಿದ್ದನು. ಶಿವಭಕ್ತರ ಮನೆಯಲ್ಲಿ ಪ್ರಸಾದ ಸ್ವೀಕರಿಸಿದಂತೆ ಅಸ್ಪೃಶ್ಯರ ಮನೆಯಲ್ಲಿಯೂ ಊಟ ಮಾಡಿದ ಒಂದು ಕಥೆ ಆತನ ಮೇಲಿದೆ. ಸತ್ತ ಎಮ್ಮೆಯನ್ನು ಬದುಕಿಸಿ ಅದರಿಂದ ಹಾಲು ಕರೆಯುವುದು (ಮಂಟೇಸ್ವಾಮಿ ಕುರಿಗಳನ್ನು ಬದುಕಿಸಿದಂತೆ), ಕೆರೆ ಕಾಲುವೆ ಕಟ್ಟಸುತ್ತ ಅಲ್ಲಿ ಕೆಲಸದಲ್ಲಿ ನಿರತರಾದ ಆಳುಗಳಿಗೆ ಅವರವರ ಶ್ರಮಕ್ಕೆ ತಕ್ಕಂತೆ ಪವಾಡದ ಮೂಲಕ ಹಣ ದೊರಕುವಂತೆ ಮಾಡಿದ್ದು, ಹೈದರಾಲಿಗೆ ಕನಸಿನಲ್ಲಿ ಪರಾಕ್ರಮಿ ಮಗನೊಬ್ಬನು ಹುಟ್ಟುವನೆಂದು ತಿಳಿಸಿದ್ದು ಇವೆಲ್ಲವೂ ತಿಪ್ಪೇಸ್ವಾಮಿಯ ಹೆಸರಿನಲ್ಲಿ ಹುಟ್ಟಿ ಕೊಂಡಿರುವ ಪವಾಡ ಕಥೆಗಳು. ಈ ಬಗೆಯ ಕಥೆಗಳು ಆಯಾ ಐತಿಹಾಸಿಕ ಸಂತರ ಮೇಲಿನ ಪಾರಮ್ಯವನ್ನು ಹೆಚ್ಚಿಸಲೆಂದೇ ಹುಟ್ಟಿಕೊಂಡ ಕಥೆಗಳು. ಈ ಬಗೆಯ ಪವಾಡ ಕಥೆಗಳೇ ಜನಪದರಿಗೆ ಹೆಚ್ಚು ಇಷ್ಟವೂ ಕೂಡ. ಐತಿಹಾಸಿಕ ಪುರುಷರ ಸತ್ಯಸಂಗತಿಗಳ ಬಗೆಗೆ ಅವರಿಗೆ ಹೆಚ್ಚು ಆಸಕ್ತಿ ಇರುವುದಿಲ್ಲ. ಒಟ್ಟನಲ್ಲಿ ಪವಾಡ ಪುರುಷರಾಗಿ, ದೇವತೆಗಳಾಗಿ ಜುಂಜಪ್ಪ, ಮಂಟೇಸ್ವಾಮಿ, ಮಹದೇಶ್ವರ, ತಿಪ್ಪೇಸ್ವಾಮಿ ಮುಂತಾದವರು ಕರ್ನಾಟಕದ ಆಯಾ ಪ್ರದೇಶದ ಜನಮನವನ್ನು ಬಹುವಾಗಿ ಆಕರ್ಷಿಸಿದ ದೇವತೆಗಳಾದರೆ, ಆಯಾ ಗ್ರಾಮಗಳಲ್ಲಿ ಮುಖ್ಯ ದೇವತೆ ಯಾಗಿ ಆರಾಧನೆಗೊಳ್ಳುವವಳು ಮಾರಿದೇವತೆ. ಕರ್ನಾಟಕದಾದ್ಯಂತ ಈ ದೇವತೆಯ ಕಲ್ಪನೆ ಒಂದೇ ಇದ್ದು ಈಕೆಯ ಬೇರೆ ಬೇರೆ ಹೆಸರಿನ ಪ್ರತಿಮೆಗಳು ಎಲ್ಲ ಗ್ರಾಮಗಳಲ್ಲಿಯೂ ಪೂಜೆಗೊಳ್ಳುತ್ತಿವೆ. ಆದರಿಂದ ಎಲ್ಲ ಕಡೆ ನಡೆಯುವ ಈ ದೇವತೆಯ ಜಾತ್ರೆ, ಆದರ ಆಚರಣೆಗಳು ಬಹುಮಟ್ಟಿಗೆ ಒಂದೇ ರೀತಿಯಲ್ಲಿರುತ್ತವೆ.

**ಮಾರಿದೇವತೆ-ಜಾತ್ರೆಯ ಆಚರಣೆ-ಕಥೆ :**

ಸುಮಾರು ಒಂಭತ್ತು ದಿನಗಳ ಕಾಲ ನಡೆಯುವ ಮಾರಿದೇವತೆಯ ಆಚರಣೆಗಳು ಋಗ್ವೇದದ ಆರಣ್ಯಕಗಳ ಯಜ್ಞಕ್ರಮವನ್ನು ಹೋಲುವಂತೆ ಕಾಣುತ್ತದೆ. ಯಾವುದೇ ಗ್ರಾಮದ ಶಕ್ತಿ ದೇವತೆಯ ಜಾತ್ರೆಯ ಆಚರಣೆಯ ಮೊದಲ ಆಚರಣೆಯಾಗಿ ಧ್ವಜಾರೋಹಣವಾಗುತ್ತದೆ. ಧ್ವಜಾರೋಹಣದನಂತರ ಪೂಜಾರಿ ಮತ್ತು ಊರ ಯಜಮಾನ ಇಬ್ಬರೂ ಕಂಕಣಬದ್ಧರಾಗುತ್ತಾರೆ. ಕಂಕಣಬದ್ಧರಾದ ಮೇಲೆ ಒಂಭತ್ತು ದಿನಗಳವರೆಗೆ ಅಲ್ಪಾಹಾರದೊಡನೆ ಉಪವಾಸ ಆಚರಿಸಬೇಕು. ಇದೇ ಸಂದರ್ಭದಲ್ಲಿ ಗುಡಿ ಮುಂದೆ ಆಳವಾದ ಗುಂಡಿಯನ್ನು ತೋಡಿ ಅದರಲ್ಲಿ ದೊಡ್ಡ ದೊಡ್ಡ ಸೌದೆಯ ತುಂಡುಗಳನ್ನು ಒಟ್ಟಿ ಬೆಂಕಿ ಹಾಕಲಾಗುತ್ತದೆ. ಈ ಯಜ್ಞ ಕೊಂಡವನ್ನು ಹಾಯುವುದರೊಂದಿಗೆ ದೇವತೆಯ ಹೆಸರಿನಲ್ಲಿ ಕುರಿ, ಕೋಣ, ಇಂಥ ಪ್ರಾಣಿಗಳ ಬಲಿಯೂ ನಡೆಯುವುದು. ದೇವತೆಯ ಹೆಸರಿನಲ್ಲಿ ಬಿಟ್ಟ ಪ್ರಾಣಿಗಳನ್ನೆಲ್ಲ ಜನಿಕ ಕುರಿ, ಕೋಣ ಎಂತಲೇ ಕರೆಯುವುದಿದೆ. ಈ ಜನ್ನಿಗೆ ಕುರಿ, ಕೋಣಗಳು ದೇವತೆಯ ಹೆಸರು ಹೇಳಿ ಬಿಟ್ಟ ಒಂದು ಅಥವಾ ಎರಡು ವರ್ಷಕಾಲ ಎಲ್ಲಿಯಾದರೂ ಮೇಯುದ್ದ ಸ್ವತಂತ್ರವಾಗಿ ತಿರುಗುವುವು ಎಂದರೆ ಇವು ಯಜ್ಞಾಶ್ವಗಳಿದ್ದಂತೆ. ಜನ್ನಿಗೆ ಎಂಬ ಪದವೇ ಯಾಜ್ಞಿಕ ಎಂಬ ಸಂಸ್ಕೃತ ಪದದಿಂದ ಬಂದದಾಗಿರುತ್ತದೆ. ಯಜ್ಞ ಎಂಬ ಪದ ಕನ್ನಡದಲ್ಲಿ ಜನ್ನ ಎಂಬುದಾಗಿ ತದ್ಭವಗೊಳ್ಳುತ್ತದೆ. ಹಾಗೆಯೇ ಯಾಜ್ಞಿಕ ಎಂಬುದು ಗ್ರಾಮೀಣದಲ್ಲಿ ಜನ್ನಿಕ, ಜನಿಗೆ ಆಗಿರುವಂತೆ ಕಾಣಿಸುತ್ತದೆ.

ಎಲ್ಲ ಗ್ರಾಮಗಳಲ್ಲಿಯೂ ಮಾರಮ್ಮನಿಗೆ ಕುರಿ ಅಥವಾ ಕೋಣನನ್ನು ಬಲಿ ಕೊಡುವ ಸಂಬಂಧದಲ್ಲಿ ಒಂದು ಕಥೆ ಪ್ರಚಲಿತದಲ್ಲಿದೆ. ಆಯಾ ಪ್ರದೇಶದಲ್ಲಿ ಸಣ್ಣಪುಟ್ಟ ವ್ಯತ್ಯಾಸಗಳೊಡನೆ ಆ ಕಥೆ ಪ್ರಚಾರದಲ್ಲಿದೆಯಾದರೂ ಅದರ ಮೂಲ ಆಶಯ ಒಂದೇ ಆಗಿದೆ. ಒಬ್ಬ ಕೆಳವರ್ಗದ ವ್ಯಕ್ತಿ ಸುಳ್ಳು ಹೇಳಿ ಮೇಲು ವರ್ಗದ ಕನ್ನೆಯೊಬ್ಬಳನ್ನು ಮದುವೆಯಾಗುತ್ತಾನೆ. ಆಕೆ ಆತನನ್ನು ಮೊದಮೊದಲು ಉನ್ನತವರ್ಗದವನೆಂದೇ ಭಾವಿಸಿದ್ದಳು. ಒಂದು ದಿನ ಆತನ ತಾಯಿ ಮನೆಗೆ ಬಂದಳು. ಕೆಲವು ದಿನ ಮಗನ ಮನೆಯಲ್ಲಿದ್ದವಳಿಗೆ, ಸೊಸೆಯು ಪ್ರತಿನಿತ್ಯ ತಯಾರಿಸಿಡುತ್ತಿದ್ದ ಸಸ್ಯಾಹಾರದ ಅಡುಗೆಯಿಂದ ಬೇಸರವಾಯಿತು. 'ಏನು ತಿಂದರೆ ಏನು, ಮುದಿ ಎತ್ತಿನ ನಾಲಿಗೆ ತಿಂದದ್ದಕ್ಕೆ ಯಾವುದು ಸಮ' ಎಂದಳು. ಆಗ ಸೊಸೆಗೆ ಗಂಡ ಮತ್ತು ಅತ್ತೆ ಕೆಳವರ್ಗಕ್ಕೆ ಸೇರಿದವರು ಎಂಬುದು ಅರ್ಥವಾಗಿ ಬಿಡುತ್ತದೆ. ಗಂಡನಿಗೆ ಶಾಪ ಕೊಟ್ಟು ತಾನು ಜೀವ ತೊರೆಯುತ್ತಾಳೆ. ಜೀವ ತೊರೆಯುವಾಗ ತಾನು ಮಾರಿದೇವತೆಯಾಗಿ, ತನಗೆ ಪ್ರತಿವರ್ಷ ಬಲಿ ಕೊಡುವ

ಕೋಣವೇ ತನ್ನನ್ನು ನಂಬಿಸಿ ಮದುವೆಯಾದ ಗಂಡನಾಗಲಿ ಎಂದಳು. ಆದರೆ ಪುರಾಣಗಳ ಪ್ರಕಾರ ಅಂದರೆ ಮಾರ್ಕಂಡೇಯ ಪುರಾಣದಂತೆ ಮಹಿಷಾಸುರ ಎಂಬ ರಾಕ್ಷಸನ ಹಾವಳಿಯಿಂದ ತೊಂದರೆಗೀಡಾದ ದೇವತೆಗಳು ತಮ್ಮೆಲ್ಲರ ಶಕ್ತಿ ಮತ್ತು ಆಯುಧಗಳನ್ನು ಚಾಮುಂಡೇಶ್ವರಿ ದೇವತೆಗೆ ಕರುಣಿಸಿ ತನ್ಮೂಲಕ ಮಹಿಷಾಸುರ ರಾಕ್ಷಸನನ್ನು ಸಂಹಾರ ಮಾಡಿಸಿದಂತೆ ಕಥೆ ಬರುತ್ತದೆ. ಹೀಗಾಗಿ ಶಕ್ತಿದೇವತೆಯ ಮೇಲೆ ಪ್ರಚಲಿತದಲ್ಲಿರುವ ಶಿಷ್ಟಕಥೆ, ಜನಪದ ಕಥೆ ಎರಡೂ ಬೇರೆ ಬೇರೆ ರೀತಿಯಲ್ಲಿವೆ.

ಶಕ್ತಿದೇವತೆಯ ಮುಂದೆ ಕೋಣ (ಮಹಿಷ)ನ ಸಂಹಾರವಾದ ಮೇಲೆ ಅದರ ಮುಂಗಾಲನ್ನು ಕತ್ತರಿಸಿ ಬಾಯಿಗೆ ಇಟ್ಟು ಅದರ ಕೊಬ್ಬಿನಿಂದಲೇ ಉರಿಯುವ ದೀಪವನ್ನು ಕೋಣನ ರುಂಡದ ಮೇಲೆ ಇಟ್ಟಿರುತ್ತಾರೆ. ಅಂದರೆ ದುಷ್ಟ (ಕಪ್ಪು) ಶಕ್ತಿಯ ಬಾಯಿಗೆ ಅದರದೇ ಮುಂಗಾಲನ್ನು ಅಡ್ಡವಾಗಿಟ್ಟು ಅದರ ಮೇಲೆ ಜ್ಯೋತಿಯನ್ನು ಬೆಳಗಿಸುವುದರ ಹಿನ್ನೆಲೆಯಲ್ಲಿ ಮಾರ್ಕಂಡೇಯ ಪುರಾಣದ ಮಹಿಷಾಸುರನ ಕಥೆಯೇ ಹೆಚ್ಚು ಅರ್ಥಪೂರ್ಣ ಎನ್ನಿಸುತ್ತದೆ. ಅನೇಕ ಗ್ರಾಮಗಳಲ್ಲಿ ಮಾರಿ ದೇವತೆಯನ್ನು ಚೌಡಮ್ಮನೆಂಬುದಾಗಿಯೇ ಕರೆಯುವುದಿದೆ. ಈ ಚೌಡಮ್ಮ ಪದ ಚಾಮುಂಡೇಶ್ವರಿ ಸಂಸ್ಕೃತದ ತದ್ಭವವೇ ಆಗಿದೆ. ಅಷ್ಟಲ್ಲದೆ ಇನ್ನಿತರ ಅನೇಕ ಗ್ರಾಮದೇವತೆಗಳು ಸಂಸ್ಕೃತದ ಗ್ರಾಮೀಣ ರೂಪಗಳೇ ಆಗಿರುವಂತೆ ತೋರುತ್ತದೆ. ಉದಾಹರಣೆಗೆ : ಮಹದೇಶ್ವರ>ಮಾದಯ್ಯ, ಮಹಾಂತೇಶ್ವರ>ಮಂಟೇಶ, ಮೃತ್ಯುಂಜಯ>ಮಾಚಯ್ಯ ಹೀಗೆ. ಅಂತೆಯೇ ಜುಂಜಪ್ಪ ಎಂಬುದು ಕೆಂಜೆಡೆಯಪ್ಪ ಎಂಬ ಪದದ ಹ್ರಸ್ವರೂಪವಾಗಿರಬಹುದೇ ಯೋಚಿಸಬೇಕಾಗಿದೆ. ಈ ಎರಡೂ ರೂಪಗಳಿಂದ ಗ್ರಾಮೀಣರು ತಮ್ಮನ್ನು ಹೆಸರಿಸಿಕೊಳ್ಳುವುದಿದೆ.

ಮಾರಿದೇವತೆಯ ಆಚರಣೆಗಳಲ್ಲಿ ಋಗ್ವೇದದ ಯಜ್ಞವಿಧಿಯ ಆಚರಣೆಗಳೂ ಸೇರಿಕೊಂಡು, ತದನಂತರ ಮಾರ್ಕಂಡೇಯ ಪುರಾಣದ ಕಥೆಯೂ ಹೊಂದಿಕೊಂಡು, ಕಾಲಕ್ರಮೇಣ ಒಂದು ಜನಪದ ಕಥೆಯೂ ತಳುಕು ಹಾಕಿಕೊಂಡಿರಬೇಕು. ಮಾರಿ ದೇವತೆಯ ಹೆಸರಿನಲ್ಲಿ ಅಂಟಿಕೊಂಡ ಜನಪದ ಕಥೆ ವರ್ಗ ಸಂಘರ್ಷದ ಆಶಯವನ್ನು ಹೊಂದಿದ್ದು, ಬೇರೆಲ್ಲ ಮೇಲು ಮತ್ತು ಕೆಳವರ್ಗ ಸಂಬಂಧದ ಕಥೆಗಳಂತೆ, ಆ ಸಂಬಂಧ ಮುರಿದು ಬಿದ್ದ ಆಶಯವನ್ನು ಹೊಂದಿದೆ. ತುಳುವಿನ ಕೋಟಿಚನ್ನಯ, ತಮಿಳಿನ ಚಿನ್ನತಂಬಿ ಕಥೆಗಳಲ್ಲಿರುವಂತೆ ಈ ಕಥೆಗಳ ನಾಯಕರು ಮೇಲುವರ್ಗದವರೊಡನೆ ಸಂಬಂಧ ಬೆಳಸಹೋಗಿ, ಹೋರಾಡಹೋಗಿ ಅವರೊಡನೆ ತಮ್ಮ ಸ್ಥಾನ ಗುರುತಿಸಿಕೊಳ್ಳಲು ಹೋಗಿ ಹತರಾದವರು. ಒಟ್ಟಿನಲ್ಲಿ ವರ್ಗ ಸಂಘರ್ಷದ ಬೀಜವುಳ್ಳ ಮಾರಿದೇವತೆಯ ಮೇಲಣ ಜನಪದ ಕಥೆ ಈಚಿನದು. ಶಕ್ತಿದೇವತೆಯ

ಕಲ್ಪನೆ, ಆರಾಧನೆ ಅತ್ಯಂತ ಪ್ರಾಚೀನ ಕಾಲದ್ದು. ಇದಕ್ಕೆ ಇನ್ನೂ ಒಳ್ಳೆಯ ಉದಾಹರಣೆಯೆಂದರೆ ಬೆಂಗಳೂರು ಸುತ್ತಮುತ್ತ ನಡೆಯುವ ಶಕ್ತಿದೇವತೆಯ ಕರಗ ಆಚರಣೆಗೆ ಮಹಾಭಾರತದ ಕಥೆಗಳು ಅಂಟಿಕೊಂಡಿರುವುದು. ಇನ್ನೊಂದು ಆಶ್ಚರ್ಯ ವೆಂದರೆ ಶಕ್ತಿದೇವತಾ ಸಂಬಂಧದ ಕರಗ ಆಚರಣೆ ಇರುವ ಎಡೆಯಲ್ಲೆಲ್ಲ ಆ ದೇವಾ-ಲಯಗಳನ್ನು ಧರ್ಮರಾಯನ ಗುಡಿಯೆಂದು ಕರೆಯುತ್ತಾರೆ. ಆದರೆ ದೇವಾಲಯದ ಒಳಗೆ ಪರೀಕ್ಷಿಸಿದರೆ ಮೂಲವಿಗ್ರಹ ಶಕ್ತಿದೇವತೆಯದಾಗಿದ್ದು, ಧರ್ಮರಾಯ, ಅರ್ಜುನ, ಭೀಮ, ನಕುಲ, ಸಹದೇವ, ದ್ರೌಪದಿಯರ ವಿಗ್ರಹಗಳನ್ನು (ಲೋಹದಲ್ಲಿ) ಇತ್ತೀಚೆಗೆ ಮಾಡಿಸಿ ಇಟ್ಟಿರುವುದನ್ನು ನಾವು ಕಾಣುತ್ತೇವೆ. ಜತೆಗೆ ಶಕ್ತಿದೇವತೆಯ ಮೇಲೆ ಪ್ರತಿವರ್ಷ ನಡೆಯುವ ಉತ್ಸವವನ್ನು ದ್ರೌಪದಿಯಮ್ಮನ ಕರಗ ಎಂತಲೇ ಹೇಳುತ್ತಾರೆ. ಧರ್ಮರಾಯ ದ್ರೌಪದಿಯರ ಸಂಬಂಧದ ಅನೇಕಾನೇಕ ಕಥೆಗಳೂ ಆಚ ರಣೆಯ ಅಂಗವಾಗಿ ಪ್ರಚಲಿತದಲ್ಲಿವೆ. ಈ ಕಥೆಗಳು ಹೇಳಲ್ಪಡುತ್ತವೆಯೇ ಹೊರತು, ಉತ್ಸವದ ಆಚರಣೆಗಳೆಲ್ಲ ಬೇರೆಲ್ಲ ಗ್ರಾಮಗಳ ರೀತಿಯ ಶಕ್ತಿದೇವತೆಯ ಆರಾಧನೆಯೇ ಆಗಿರುತ್ತದೆ. ಮೊದಲ ದಿನ ಧ್ವಜಾರೋಹಣ, ಪೂಜಾರಿ ಕಂಕಣಬದ್ಧನಾಗುವುದು, ದೇವತೆ ಜಲಧಿಗೆ ಹೋಗುವುದು ಅಷ್ಟೇ ಅಲ್ಲದೆ ಇಂದಿಗೂ ಬೆಂಗಳೂರು ಕರಗ ಉತ್ಸವದ ಕೊನೆಯ ಆಚರಣೆಯಾಗಿ ಹೋತರಾಜರು ಕಪ್ಪು ಹೋತಮರಿಯ ಗಾವು ಸಿಗಿಯುತ್ತಾರೆ (ಕಪ್ಪುಬಣ್ಣದ ಹೋತವನ್ನು ಬಾಯಿಂದಲೇ ಸಿಗಿದು ಬಲಿ ಕೊಡುವ "ಹೋತರಾಜ" ಎಂಬ ಪದ, ಋಗ್ವೇದದ ಯಜ್ಞವಿಧಿಯಲ್ಲಿ ಭಾಗವಹಿಸು ವವರಲ್ಲಿ ಒಬ್ಬರಾದ "ಹೋತೃಯಜ"ಪದವನ್ನು ಹೋಲಬಹುದೆ ?).ಒಟ್ಟಿನಲ್ಲಿ ಮಹಾ ಭಾರತ ಕಥೆಯ ಭಾಗಗಳು ಬೆಂಗಳೂರು ಸುತ್ತಮುತ್ತಲ ಪ್ರದೇಶಗಳಲ್ಲಿ ನಡೆಯುವ ಮಾರಿದೇವತೆಯ ಆಚರಣೆಗೆ ಕಾಲಕ್ರಮೇಣ ಹೊಂದಿಕೊಂಡಿವೆಯಷ್ಟೆ. ಇದೇ ಬಗೆಯ ಕಥೆಗಳು ಕರ್ನಾಟಕದ ಇನ್ನಿತರ ಕಡೆ ನಡೆಯುವ ಕೆಲವು ಜಾತ್ರೆಗಳ ಮೇಲೂ ಅಂಟಿಕೊಂಡಿರುವುದನ್ನು ಕಾಣಬಹುದು.

**ಜಾತ್ರೆಗಳು ಮತ್ತು ಕಥೆಗಳು**

ದಕ್ಷಿಣ ಕನ್ನಡ ಜಿಲ್ಲೆಯ ಕಬತ್ತಾರು, ಹಿರಿಯಡ್ಕ, ಉರುಂಬಿತೋಟ ಮುಂತಾದ ಎಡೆಗಳಲ್ಲಿ ಸಿರಿದೇವತೆಯ ಜಾತ್ರೆ ನಡೆಯುವುದು. ಏಪ್ರಿಲ್ ಅಥವಾ ಮೇ ತಿಂಗಳ ಸಂದರ್ಭದಲ್ಲಿ ಈ ಸಿರಿದೇವತೆಯ ಮೇಲೆ ವಿಸ್ತಾರವಾದೊಂದು ಕಥೆ ಗದ್ಯ ಮತ್ತು ಪದ್ಯಗಳೆರಡರಲ್ಲಿ ಪ್ರಚಲಿತವಿದ್ದು, ಗದ್ಯ ಕಥೆಯಂತೆಯೇ ಪದ್ಯ ಕಥೆಯಿದೆಯೋ ಎಂಬುದು ಸಂದೇಹದ ಸಂಗತಿ. ಯಾಕೆಂದರೆ ಯಾವುದೇ ವೀರ ಪುರುಷ, ಶರಣ, ದೇವತೆಗಳ ಮೇಲೆ ಇರಬಹುದಾದ ಪದ್ಯಕಥೆ, ಗದ್ಯದಲ್ಲಿ ಪ್ರಚಲಿತವಿರುವ ಕಥೆಗಳು ಮತ್ತು ಆ ದೇವತೆಯ ಸಂಬಂಧದಲ್ಲಿ ನಡೆಯುವ ಸಂಬಂಧದಲ್ಲಿ ನಡೆಯುವ ಆಚರಣೆಗಳು ಇವು ಮೂರು ಬೇರೆಬೇರೆಯಾಗಿರುತ್ತವೆ.

ಆದರೆ ದೇವತೆಯ ಮೇಲಿನ ಕಥೆ ಕಾವ್ಯಗಳಿಗಿಂತ ಆಚರಣೆಗಳೇ ಹೆಚ್ಚು ಅರ್ಥಪೂರ್ಣ ವಾಗಿದ್ದು, ಅವೇ ಅತ್ಯಂತ ಪ್ರಾಚೀನವಾಗಿರುತ್ತವೆ ಎಂಬುದು ಗಮನಿಸಬೇಕಾದ ಸಂಗತಿ.

ಸಿರಿದೇವತೆಯ ಮೇಲೆ ಹಬ್ಬಿಕೊಂಡಿರುವ ಕಥೆ ಹೀಗಿದೆ: ಗಂಡನಾದ ಕಾಂತೂಪೂಂಜನ ನಡವಳಿಕೆಯಿಂದ ಅವನ ಹೆಂಡತಿ ಸಿರಿಯು ರೋಸಿಹೋಗಿರುತ್ತಾಳೆ. ಕಾಂತೂಪೂಂಜ ಲಂಪಟ, ಅನ್ಯ ಸ್ತ್ರೀಯರಲ್ಲಿ ಆಸಕ್ತಿಯುಳ್ಳವ. ಇದರಿಂದಾಗಿ ಸಿರಿಯು ಗಂಡನಿಗೆ ವಿವಾಹ ವಿಚ್ಛೇದನ ಕೊಡುತ್ತಾಳೆ. ತದನಂತರ ಕೊಡ್ಯರಾಳ್ವ ಎಂಬುವನನ್ನು ವಿವಾಹವಾಗುವಳು. ಇಲ್ಲಿಂದ ಮುಂದೆ ಸಿರಿಯ ಮಗಳು ಸೊನ್ನೆಯ ಕಥೆ ಆರಂಭವಾಗುವುದು. ಬ್ರಹ್ಮನಿಗೆ ಹರಕೆ ಹೊರುವುದರ ಮೂಲಕ ಸೊನ್ನೆ ಗರ್ಭಧರಿಸಿ ಅಬ್ಬಗೆ ಮತ್ತು ದಾರಗೆ ಎಂಬ ಇಬ್ಬರು ಮಕ್ಕಳನ್ನು ಪಡೆಯುತ್ತಾಳೆ. ಬ್ರಹ್ಮನಿಗೆ ಹರಕೆ ತೀರಿಸದ ಕಾರಣ ಚನ್ನೆಮಣೆ ಮಾಡುವಾಗ ಅಬ್ಬಗೆ ದಾರಗೆ ಇಬ್ಬರೂ ಪರಸ್ಪರ ಹೊಡೆದಾಡಿಕೊಂಡು ಸಾವನ್ನಪ್ಪುತ್ತಾರೆ. ಮುಖ್ಯ ಸಾರಾಂಶ ಇಷ್ಟು ಇರುವ ಈ ಕಥೆ ಕಾಲಕಾಲಕ್ಕೆ ಬೇರೆ ಬೇರೆ ಆಶಯವನ್ನು ಕೂಡಿಕೊಂಡು ಬೆಳೆದಂತೆ ಕಾಣುತ್ತದೆ.

ಈಗ ಸಿರಿದೇವತೆಯ ಹೆಸರಿನಲ್ಲಿ ನಡೆಯುವ ಜಾತ್ರೆಯ ಆಚರಣೆಗಳನ್ನು ಗಮನಿಸಬಹುದು: ಸಿರಿದೇವತೆಯ ಜಾತ್ರೆ ಏಪ್ರಿಲ್, ಮೇ ತಿಂಗಳ ಒಂದು ದಿನ ಬೆಳದಿಂಗಳ ರಾತ್ರಿಯಲ್ಲಿ ಜರುಗುವುದು. ಸಿರಿಗೆ ಪ್ರತ್ಯೇಕವಾದ ಗುಡಿಯೇನೂ ಇರುವುದಿಲ್ಲ. ಶಿವನ ಹೆಸರು ಹೊತ್ತ ಮಹಾಲಿಂಗೇಶ್ವರನ ಮೂಲವಿಗ್ರಹವಿರುವ ದೇವಸ್ಥಾನದಲ್ಲಿ ಸಿರಿಯ ವಿಗ್ರಹ ಯಾವುದಾದರೂ ಒಂದು ಕಡೆ ಸ್ಥಾಪಿಸಲ್ಪಟ್ಟಿರು ತ್ತದೆ. ಈ ಗುಡಿಯ ಸುತ್ತ ಗಿಡಮರಗಳ ಹಸಿರು ಪ್ರಕೃತಿ ದಟ್ಟವಾಗಿ ಹಬ್ಬಿರುತ್ತದೆ. ನಿರ್ದಿಷ್ಟ ಬೆಳದಿಂಗಳ ರಾತ್ರಿಯಲ್ಲಿ ಸಾವಿರಾರು ಜನ ಹೆಂಗಸರು ಬಿಳಿ ಸೀರೆಯೊಡನೆ ಅಲಂಕರಿಸಿಕೊಂಡು ಮುಡಿಗೆ ಮಲ್ಲಿಗೆ ಮತ್ತು ಅಡಿಕೆಯ ಕದಿರನ್ನು (ಸಿಂಗಾರ) ಕೈಯಲ್ಲಿ ಹಿಡಿದು ಜಾತ್ರೆಗೆ ಬರುತ್ತಾರೆ. ಜಾತ್ರೆಗೆ ಬರುವಾಗ ದೇವರಿಗೆ ಕಾಣಿಕೆಯಾಗಿ ಹುರುಳಿಧಾನ್ಯವನ್ನು ತರುವರು. ಜತೆಗೆ ಇಡೀ ಜಾತ್ರೆಯಲ್ಲಿ ಮಲ್ಲಿಗೆ ಹೂವು ಸಿಂಗಾರ ಮತ್ತು ಹುರುಳಿಯ ಮಾರಾಟ ಹೇರಳವಾಗಿ ನಡೆಯುವುದು ಗಮನಾರ್ಹ. ಹೀಗೆ ಜಾತ್ರೆಗೆ ಬರುವ ಸಿರಿ ಹೆಂಗಸರೊಂದಿಗೆ ಕುಮಾರರೂ ಇದ್ದು ಅವರು, ತಲೆಗೆ ಕೆಂಪುಪೇಟೆ ಸುತ್ತಿ ಬಿಳಿಯ ಕಚ್ಚೆಪಂಚೆ ಉಟ್ಟಿರುತ್ತಾರೆ. ಇವರೂ ಕತ್ತಿಗೆ ಮಲ್ಲಿಗೆ ಹೂವಿನಸರ ಬಿಟ್ಟು, ಕೈಗೆ ಉಂಗುರವಿಟ್ಟು ಬಹುಮಟ್ಟಿಗೆ ಮದುವೆಗೆ ನಿಂತ ವರನಂತೆ ಸಿಂಗರಿಸಿಕೊಂಡಿರುತ್ತಾರೆ. ಈ ಕುಮಾರರು ಮತ್ತು ಸಿರಿ ಹೆಂಗಸರು ಕೈಯಲ್ಲಿ ಹಿಡಿದ ಸಿಂಗಾರವನ್ನು ಆಗಾಗ್ಗೆ ಮೂಗಿನಿಂದ ವಾಸಿಸುತ್ತಾ ಆವೇಶ ಬಂದವರಂತೆ

ವರ್ತಿಸುವರು. ಈ ಕ್ರಮ ಇಡೀ ರಾತ್ರಿಯೆಲ್ಲ ಜರುಗುತ್ತಿರುತ್ತದೆ. ಕುಮಾರರು ಅಲ್ಲಿ ಭಾಗವಹಿಸಿದ ಸಿರಿಹೆಂಗಸರ ಸಾಂಸಾರಿಕ ಸಮಸ್ಯೆಗಳಿಗೆ ಪರಿಹಾರ ಹೇಳುವ ದೇವರ ಪ್ರತಿನಿಧಿಯಂತೆ ಇರುತ್ತಾರೆ ಇತ್ತೀಚಿನ ವರ್ಷಗಳಲ್ಲಿಯಷ್ಟೆ ಸಿರಿಹೆಂಗಸರು ತಮ್ಮ ಸಾಂಸಾರಿಕ ಸಮಸ್ಯೆಗಳಿಗೆ ಪರಿಹಾರ ಹುಡುಕಿಕೊಳ್ಳುವ ಜಾತ್ರೆಯ ಸಂದರ್ಭ ವಾಗಿ ಸಿರಿಜಾತ್ರೆ ಪರಿವರ್ತಿತವಾಗಿದೆ. ಆದರೆ ಅನೇಕ ವರ್ಷಗಳ ಹಿಂದೆ ಸಿರಿಜಾತ್ರೆ ಸಂತಾನಾಪೇಕ್ಷೆಯ ಮೇಳವಾಗಿತ್ತೆಂದು ಇಂದಾದರೂ ಅಲ್ಲಿ ನಡೆಯುವ ಆಚರಣೆಗಳ ಕ್ರಮದಿಂದ ತಿಳಿಯಬಹುದಾಗಿದೆ. ನಿಜವಾಗಿ ಸಿರಿಹೆಂಗಸರು ತಮ್ಮ ಸಾಂಸಾರಿಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಬರುವವರಾದರೆ ಹಾಗೆ ಅಲಂಕರಿಸಿಕೊಂಡು ಬರಬೇಕಾದ ಅಗತ್ಯವಿರಲಿಲ್ಲ. ಮಲ್ಲಿಗೆ ಹೂವು ಮುಡಿದು ಸಿಂಗಾರ ಹಿಡಿದು ಬರುವ ಸಿರಿ ಮತ್ತು ಕುಮಾರರು ದೇವಾಲಯದ ಒಳಗೆ ಹೊರಗೆ (ಪ್ರತಿಯೊಂದು ಜಾತಿಯ ಜನರೂ ದೇವಾಲಯದ ಸುತ್ತ ಆಯಾ ಸ್ಥಳದಲ್ಲಿ ಇರಬೇಕೆಂದು ನಿಗದಿತವಾಗಿರು ತ್ತದೆ.) ಕೆಳಗೆ ಹಾಸಿದ ನಡೆಮಡಿಯ (ದಲ್ಯ) ಮೇಲೆ ನಿಂತಿರುತ್ತಾರೆ. ಇದೊಂದು ಅರ್ಥದಲ್ಲಿ ವಧುವು ಹಸೆಮಣೆಯ ಮೇಲೆ ನಿಂತಂತೆ. ದಲ್ಯದ ಮೇಲೆ ನಿಂತ ಯಾವುದೇ ಹೆಂಗಸಿನ ಮೇಲೆ ತನಗೆ ಅಧಿಕಾರವಿರುವಂತೆ ಕುಮಾರನು ವರ್ತಿಸುವುದು ಗಮನಿಸಬೇಕಾದ ಅಂಶ. ಇವರು ಜಾತ್ರೆಗೆ ಕಾಣಿಕೆಯಾಗಿ ತರುವ ಹುರುಳಿಯು ವೀರ್ಯ ಸಮೃದ್ಧಿಯನ್ನು ಸಂಕೇತಿಸುವ ಧಾನ್ಯವಾಗಿರುತ್ತದೆಂಬುದು ಮತ್ತೊಂದು ಮುಖ್ಯ ಸಂಗತಿ. ಒಟ್ಟು ಈ ಬಗೆಯ ಜಾತ್ರೆ ನೆರವೇರುವುದು ಬೆಳದಿಂಗಳ ರಾತ್ರಿಯಲ್ಲಿ. ಆದೇ ಮಲೆಯ ಮಹದೇಶ್ವರ ಜಾತ್ರೆ ನೆರವೇರುವುದು ಅಮಾವಾಸ್ಯೆಯ ದಿನಗಳಲ್ಲಿ. ಈಗಲೂ ಮಹದೇಶ್ವರನ ಜಾತ್ರೆಯ ಸಮಯದಲ್ಲಿ ಪ್ರಚಲಿತವಿರುವ ಒಂದು ಮಾತನ್ನು ನೆನೆಯುವುದು ಉಚಿತ.ಗಂಡಸರು ಹೆಂಗಸರು ಯಾವುದೇ ರೀತಿಯ ಸರಸ ಸಲ್ಲಾಪದಿಂದ ಪರಸ್ಪರ ಕೂಡಬಾರದು. ಹಾಗೆ ಕೂಡಿದರೆ ಮಹದೇಶ್ವರ ತನ್ನ ವಾಹನವಾದ ಹುಲಿಯನ್ನು ಬಿಟ್ಟು ಅವರನ್ನು ಕೊಲ್ಲಿಸುತ್ತಾನೆ ಎಂಬ ನಂಬಿಕೆಯಿದೆ. ಈ ಮಾತು ಮಹದೇಶ್ವರನ ಕಾವ್ಯದಲ್ಲಿಯೂ ಬರುತ್ತದೆ. ಶರಣ ಮಹದೇಶ್ವರನ ಜಾತ್ರೆಯಲ್ಲಿ ಈ ಬಗೆಯ ನಿಷೇಧ ಇರುವುದಾದರೆ ಮತ್ತೆ ಕೆಲವು ಸ್ತ್ರೀ ದೇವತೆಗಳ ಜಾತ್ರೆಯಲ್ಲಿ ಬೆತ್ತಲೆ ಸೇವೆ ನಡೆಯುತ್ತದೆ. ಸಿರಿ ಜಾತ್ರೆಯಲ್ಲಿ ಹೆಣ್ಣುಗಂಡು ವಧುವರರಂತೆ ಸಿಂಗರಿಸಿಕೊಂಡು ಸೇರುವುದು, ಕರ್ನಾಟಕದ ಇನ್ನಿತರ ಕಡೆ ಸ್ತ್ರೀಯರ ಬೆತ್ತಲೆ ಸೇವೆ ಆಚರಣೆಯಲ್ಲಿರುವುದು ಇವೆಲ್ಲ ಸಂತಾನ ಪಡೆಯುವುದರ ಉದ್ದೇಶದಿಂದ ಇರಬೇಕಷ್ಟೆ. ಈ ಬಗೆಯ ಜಾತ್ರೆಗಳಲ್ಲಿ ಭಾಗವಹಿಸುವವರು ಬಹುಪಾಲು ಕೆಳ ವರ್ಗದವರು ಮಾತ್ರ.

ಜನಪದ ಕಥೆ ಕಾವ್ಯಗಳಲ್ಲಿ ಮಕ್ಕಳ ಸಂತಾನವನ್ನು 'ಸಂತಾನಸಿರಿ', 'ಮಕ್ಕಳ ಸಿರಿ' ಎಂತಲೇ ಕರೆಯಲಾಗಿದೆ. ಯುದ್ಧದಲ್ಲಿ ಮಡಿಯುತ್ತಿದ್ದ ಸೈನಿಕರ ಹೆಂಡಂದಿರು,

ಇನ್ನಿತರೇ ಕಾರಣಗಳಿಂದ ಗಂಡಂದಿರನ್ನು ಕಳೆದುಕೊಂಡು ವಿಧವೆಯರಾದ ಹೆಂಗಸರು ನಿರ್ದಿಷ್ಟ ಸಮಯದಲ್ಲಿ ದೇವರ ಮುಂದೆ ನಿಯೋಗ ಹೊಂದಿ ಮಕ್ಕಳನ್ನು ಪಡೆಯುತ್ತಿದ್ದುದರ ಉದ್ದೇಶ ಸಿರಿ ಜಾತ್ರೆಯಲ್ಲಿ, ಬೆತ್ತಲೆ ಸೇವೆಯ ಹಿನ್ನೆಲೆಯಲ್ಲಿ ಇದ್ದಂತೆ ಕಾಣಿಸುತ್ತದೆ. ಆದರೆ ಈಗ ಈ ಬಗೆಯ ಜಾತ್ರೆಗಳಲ್ಲಿ ಹೆಣ್ಣು ಗಂಡು ಬಹಿರಂಗವಾಗಿ ಕೂಡುವ ಸಂಗತಿಯು ತಪ್ಪಿ ಅದು ಕೇವಲ ಒಂದು ಸಾಂಕೇತಿಕ ಆಚರಣೆ ಮಾತ್ರವಾಗಿ, ಹರಕೆ ತೀರಿಸುವ ಸಂದರ್ಭವಾಗಿ ಪರಿಣಮಿಸಿದಂತೆ ಕಾಣುತ್ತದೆ. ಹೆಣ್ಣು ಗಂಡಿನ ಕೂಡುವಿಕೆ ಪ್ರಕೃತಿಯ ನಡುವೆಯೇ ಹೊಲಗದ್ದೆ ಗಳಲ್ಲಿ ನಡೆಯುವುದರಿಂದ ಮಳೆ ಬೆಳೆಯೂ ಕೂಡ ಹುಲುಸಾಗುತ್ತದೆಂಬ ನಂಬಿಕೆ ಪ್ರಪಂಚದಾದ್ಯಂತ ಇರುವಂತೆ ಕಾಣುತ್ತದೆ. ಈಗಲೂ ತಮಿಳುನಾಡಿನ ಕೆಲವು ಹಳ್ಳಿಗಳಲ್ಲಿ ವಿವಾಹವಾಗಬೇಕಾದ ತರುಣಿಯರು ನಿಗದಿಯಾದ ಒಂದು ರಾತ್ರಿ ಯಾರಾದರೂ ಒಬ್ಬರ ಮನೆಯಲ್ಲಿ ಸೇರಿ ಸಾಮೂಹಿಕವಾಗಿ ಬೆತ್ತಲೆಯಾಗುತ್ತಾರೆ. ಮಣ್ಣಿನಿಂದ ಮಾಡಿದ ದೇವತೆಯನ್ನು ಅಲ್ಲಿಯೇ ತಯಾರಿಸಿದ ನೈವೇದ್ಯ ಮತ್ತು ಹೂವಿನಿಂದ ಪೂಜಿಸಿ ಬೆಳಗಾಗುವ ಹೊತ್ತಿಗೆ ಮತ್ತೆ ವಸ್ತ್ರಧಾರಿಣಿಯರಾಗಿ ಆ ದೇವತೆಯನ್ನು ಮನೆಯಿಂದ ಹೊರಗೆ ಕೊಂಡುಹೋಗಿ ವಿಸರ್ಜಿಸಿ ಬರುತ್ತಾರೆ. ಇದರಿಂದ ಮುಂದೆ ತಮಗೆ ಒಳ್ಳೆಯ ಗಂಡನೂ, ಸಂತಾನವೂ ದೊರೆಯುವುದೆಂಬ ನಂಬಿಕೆಯಿದ್ದು, ಒಟ್ಟು ಈ ಆಚರಣೆಯನ್ನು "ಅವೈನೋಂಪಿ (ತಾಯಿಯ ವ್ರತ) ಎಂದು ಕರೆಯುವರು. ಹೀಗಾಗಿ ಯಾವುದೇ ಆಚರಣೆಯ ಸಂಬಂಧವಲ್ಲಿ ಹುಟ್ಟಿ ಕೊಂಡ ಕಥೆಗಳನ್ನು ಬೇರೆಯಾಗಿ ನೋಡಬೇಕಾದ ಅಗತ್ಯವಿದೆ. ಈಗಾಗಲೇ ಹೇಳಿದಂತೆ ಕಥೆಗಳು ಪರಿಸರಕ್ಕೆ ಅನುಗುಣವಾಗಿ ಹುಟ್ಟಿಕೊಳ್ಳುತ್ತವೆ. ಆದರೆ ಆಚರಣೆಗಳು ಬೇರೊಂದು ಸತ್ಯವನ್ನು ಹೇಳುತ್ತಿರುತ್ತವೆ. ಈ ಸಂಗತಿಯನ್ನು ಹಬ್ಬಗಳು ಮತ್ತು ಅವುಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಕಥೆಗಳ ಮೇಲೂ ನೋಡ ಬಹುದಾಗಿದೆ.

### ಹಬ್ಬಗಳು ಮತ್ತು ಕಥೆಗಳು

ಮಹದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ತಿಪ್ಪೇಸ್ವಾಮಿಯ ಜಾತ್ರೆಗಳು ಒಂದೊಂದು ಪ್ರದೇಶದಲ್ಲಿ ಲಕ್ಷೋಪಲಕ್ಷ ಜನಗಳು ಭಾಗವಹಿಸುವ ಸಾಮೂಹಿಕ ಹಬ್ಬಗಳಾದರೆ, ಅದಕ್ಕಿಂತ ಚಿಕ್ಕ ಪ್ರಮಾಣದಲ್ಲಿ ನಡೆಯುವ ಗ್ರಾಮದೇವತೆಯ ಜಾತ್ರೆಗಳು ಗ್ರಾಮದ ಒಟ್ಟಿನ ಹಬ್ಬಗಳಾಗುತ್ತವೆ. ಆದರೆ ಯುಗಾದಿ, ದೀಪಾವಳಿ, ಸಂಕ್ರಾಂತಿ,ಗೌರಿಗಣೇಶ ಇಂಥ ಹಬ್ಬಗಳನ್ನು ನಾಡಿಗೆ ನಾಡೇ ಆಚರಿಸುತ್ತದಾದರೂ, ಇವು ಆಯಾ ಕುಟುಂಬಕ್ಕೆ ಸಂಬಂಧಪಟ್ಟ ಹಬ್ಬಗಳಾಗುತ್ತವೆ. ಹಬ್ಬದ ಆಚರಣೆ ಎಲ್ಲ ಕಡೆ ಒಂದೇ ಕ್ರಮದಲ್ಲಿರುತ್ತದೆ

ಪ್ರದೇಶ ಅಥವಾ ಗ್ರಾಮಗಳ ಜಾತ್ರೆಯ ಸಂದರ್ಭದಲ್ಲಿ ದೇವರ ಆರಾಧನೆಯೇ

ಅವುಗಳ ಸಂಬಂಧದ ಆಚರಣೆಯೇ ಮುಖ್ಯವಿರುವಂತೆ ಹಬ್ಬದ ಸಂದರ್ಭಗಳಲ್ಲಿಯೂ ದೇವರ ಆರಾಧನೆ ಆಚರಣೆಗಳೇ ಮುಖ್ಯವಾಗಿರುತ್ತವೆ. ಹಬ್ಬದ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವ ಕಥೆಗಳೂ ಕೂಡ ಜಾತ್ರೆ ಹಿನ್ನೆಲೆಯ ಮಾದರಿಯ ಕಥೆಗಳನ್ನೇ ಹೋಲುತ್ತವೆ. ಅಂದರೆ ಮನುಷ್ಯ ದುಷ್ಟ ಶಕ್ತಿಯಿಂದ ಬಿಡುಗಡೆ ಹೊಂದಿ ಒಳಿತನ್ನು ಕಾಣುವ ದಿನವಾಗಿರುತ್ತದೆ. ಅದು ಮಹೇಶ್ವರ, ಮಂಟೇಸ್ವಾಮಿ, ಜುಂಜಪ್ಪನ ಕಥೆಗಳಾದರೂ ಹೇಳುವುದು ದುಷ್ಟಶಕ್ತಿಯ ನಿಗ್ರಹವನ್ನೇ. ದೀಪಾವಳಿಯಂಥ ಒಂದು ಹಬ್ಬದ ಹಿನ್ನೆಲೆ ತೆಗೆದುಕೊಂಡರೂ ಬಲೀಂದ್ರನೆಂಬ ರಾಕ್ಷಸನನ್ನು ವಿಷ್ಣು ವಾಮನನ ಅವತಾರ ತಾಳಿ ಪಾತಾಳಕ್ಕೆ ತುಳಿಯುವಾಗ ಬಲೀಂದ್ರನು ಒಂದು ವರ ಕೇಳಿಕೊಂಡ. ವರ್ಷಕ್ಕೊಮ್ಮೆಯಾದರೂ ಪಾತಾಳಲೋಕದಿಂದ ಹೊರ ಬಂದು ತನ್ನ ನಾಡನ್ನು ನೋಡಿಹೋಗಲು ಅವಕಾಶ ಕೇಳಿದ. ವಿಷ್ಣು ಅದಕ್ಕೆ ಒಪ್ಪಿದ. ಹಾಗೆ ಬಲೀಂದ್ರನು ಪಾತಾಳದಿಂದ ಬಂದು ನೋಡುವ ದಿನವೇ ದೀಪಾವಳಿ. ತಾನು ಇದ್ದಾಗ ಈ ಲೋಕ ಹೇಗೆ ಸಂಪತ್ಸಮೃದ್ಧಿಗಳಿಂದ ಕೂಡಿತ್ತೋ ಈಗಲೂ ಹಾಗೆಯೆ ಇದೆಯೆಂದು ಭಾವಿಸಿ ಬಲೀಂದ್ರನು ಮತ್ತೆ ಪಾತಾಳ ಸೇರುತ್ತಾನೆ.

ವಾಸ್ತವವಾಗಿ ದೀಪಾವಳಿಯು ಕಾಲ ಸಮೃದ್ಧಿಯ ಕಾಲ. ಶ್ರಾವಣದಲ್ಲಿ ಮಳೆಯಾಗಿ ಹೊಲಗದ್ದೆಗಳ ಬೆಳೆ ತೆನೆ ಹಿಡಿದು ಕುಯ್ಲಿಗೆ ಬರುವ ಕಾಲವಾಗಿರುತ್ತದೆ ಅದು. ಈ ಸಮೃದ್ಧಿಯನ್ನು ಜನ ಅಥವಾ ಯಾವುದೇ ಗ್ರಾಮ, ಪಟ್ಟಣದವರು ಸಮೃದ್ಧಿಯ ಹಬ್ಬವನ್ನಾಗಿಯೇ ಕತ್ತಲ ನಡುವೆ ದೀಪಹಚ್ಚಿ ಆಚರಿಸುತ್ತಾರೆ. ಈ ದೀಪಾವಳಿ ಆದ ಮುಂದಿನ ತಿಂಗಳಿನಲ್ಲಿಯೇ ಸಂಕ್ರಾಂತಿ ಹಬ್ಬದ ಆಗಮನವಾಗುತ್ತದೆ. ದನಕರು ಸಾಕಿರುವ ರೈತವರ್ಗದವರಿಗೆ ದೀಪಾವಳಿಗಿಂತಲೂ ಸಂಕ್ರಾಂತಿ ಬಹುಮುಖ್ಯವಾದುದು. ಯಾಕೆಂದರೆ ಸಂಕ್ರಾಂತಿ ಹಬ್ಬ ರೈತನ ಆಧಾರವಾಗಿರುವ ಎತ್ತು ದನಕರುಗಳ ಸಂಬಂಧದಲ್ಲಿ ಆಚರಿಸುವ ಹಬ್ಬ. ಈ ಹಬ್ಬದ ಹೊತ್ತಿಗೆ ಹೊಲಗದ್ದೆಗಳ ಕೊಯ್ಲು ಮುಗಿದು ದನಕರುಗಳು ಕೂಡ ಕೊಂಚ ಬೇಸಾಯದ ಕೆಲಸದಿಂದ ವಿರಾಮ ಹೊಂದುತ್ತಿರುತ್ತವೆ. ರೈತರು ದನಕರುಗಳನ್ನು ಪೂಜಿಸುವುದರೊಂದಿಗೆ ಅಂದು ಗೋವಿನ ಕಥೆಯನ್ನು ಓದಲಾಗುತ್ತದೆ. ಈ ಕಥೆ ಒಂದು ಹಸುವಿನ ಸತ್ಯ ಸ್ವಭಾವವನ್ನು ಸಾಧುತ್ವವನ್ನು ವಿವರಿಸುವಂಥದ್ದು. ಹುಲಿ ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿ ಆಯಾ ವ್ಯಕ್ತಿಯ ಶಕ್ತಿಯನ್ನು ಅಳೆಯುವ ಸಾಧನವಾಗಿದೆ. ಎಂದರೆ ವೀರರೊಡನೆ ಅದು ಹೋರಾಡುವಂಥದ್ದು. ಸಾಧು ಶರಣರಿಗೆ ಋಷಿಗಳಿಗೆ ಅದು ಚರ್ಮದ ಹಾಸಿಗೆಯಾದರೆ, ದೇವತೆಗಳಿಗೆ ಹುಲಿ ವಾಹನವೇ ಆಗಿ ಬಿಡುತ್ತದೆ. ಇಂಥ ಹುಲಿ ಜನಪದರು ಸೃಷ್ಟಿಸಿರುವ ಗೋವಿನ ಕಥೆಯಲ್ಲಿ, ಪುಣ್ಯಕೋಟಿಯ ಸತ್ಯಕ್ಕೆ ಮೆಚ್ಚಿ ಅದರ ಎದುರೇ ಆತ್ಮಹತ್ಯೆ ಮಾಡಿಕೊಳ್ಳುತ್ತದೆ. ಹೀಗಾಗಿ ಗೋವು ಜನಪದರಿಗೆ ದೇವರು, ಸಾಧು ಸಂತರು, ವೀರರಿಗಿಂತ ಪೂಜ್ಯ

ಎಂದಾಯಿತು. ಪ್ರಾಚೀನ ಕಾಲದಿಂದಲೂ ರೈತವರ್ಗಕ್ಕೆ ಜೀವನಾಡಿಯಾಗಿ ಬಂದಿರುವ ಪಶು ಸಮೂಹದ ಬಗ್ಗೆ ಕಾಲಕ್ರಮೇಣ ಇಂಥ ಮಹತ್ವದ ಕಥೆಯೊಂದು ಹುಟ್ಟಿಕೊಂಡು ಬಂದಿರುವುದರಲ್ಲಿ ಆಶ್ಚರ್ಯವಿಲ್ಲ. ಆದರೆ ಈ ಕಥೆ ಪಶು ಸಮೂಹದ ಬಗೆಗಿನ ಗೌರವವನ್ನು ಹೆಚ್ಚಿಸುವುದೇ ವಿನಃ ಸಂಕ್ರಾಂತಿ ಆಚರಣೆಗೂ ಈ ಕಥೆಗೂ ಅಂಥ ಸಂಬಂಧವೇನಿಲ್ಲ.

ಸಂಕ್ರಾಂತಿ ಮತ್ತು ದೀಪಾವಳಿ ಈ ಎರಡು ಹಬ್ಬಗಳ ಮೊದಲೇ ಗೌರಿ ಗಣೇಶ ಹಬ್ಬದ ಆಗಮನವಾಗುತ್ತದೆ. ಈ ಗೌರಿ ಮತ್ತು ಗಣೇಶನ ಹಬ್ಬ ಮುಖ್ಯವಾಗಿ ಭೂಮಿ ಮತ್ತು ಜಲ ಸಂಬಂಧದ ಆಚರಣೆಗಳನ್ನು ಹೊಂದಿವೆ. ಹೊಲಗದ್ದೆಗಳಲ್ಲಿ ಪೈರು ಮೊಳೆತು ಬೆಳೆ ಏಳುವುದರ ಆರಂಭಕಾಲ ಗೌರಿ ಗಣೇಶ ಹಬ್ಬದ ಕಾಲ. ಗಣೇಶನ ಇನ್ನೊಂದು ಹೆಸರು ವಿಘ್ನೇಶ್ವರ ಎಂಬುದು ಇಲ್ಲಿ ಗಮನಾರ್ಹ. ರೈತರು ಹೊಲಗದ್ದೆಗಳ ಕಡೆಯಿಂದಲೇ ಮರಳು ಮಿಶ್ರಿತ ಕೆಂಪು ಮಣ್ಣನ್ನು ತಂದು, ಅದರಿಂದಲೇ ಗಣೇಶನನ್ನು ನಿರ್ಮಿಸಿ, ಅದರ ಮುಂದೆ ಪೂಜಾ ಸಾಮಗ್ರಿಗಳನ್ನು ಇರಿಸುವರು. ಪೂಜಾಸಾಮಗ್ರಿಯಲ್ಲಿ ಮುಖ್ಯವಾದದು ಗರಿಕೆ. ತೋಟಗಳಲ್ಲಿ ಬೆಳೆಗೆ ತೊಂದರೆ ಕೊಡುವ ಮುಖ್ಯ ಕಳೆ ಗರಿಕೆ. ಈ ಗರಿಕೆಯ ಜತೆಗೆ ಧಾನ್ಯಶತ್ರು ಇಲಿಯೂ ಇರುತ್ತದೆ, ಗಣೇಶನ ಕಾಲ ಅಡಿಯಲ್ಲಿ ಗಣೇಶನ ಕೈಯಲ್ಲಿ ಧಾನ್ಯದ ತೆನೆ, ಇನ್ನೊಂದು ಕೈಯಲ್ಲಿ ಅದೇ ಧಾನ್ಯದಿಂದ ತಯಾರಿಸಿದ ಕಡುಬು ಇರುತ್ತದೆ. ಜನಪದಗೀತೆಗಳಲ್ಲಿ ಭೂಮಿಯನ್ನು ಸ್ತುತಿಸುವಾಗ ಎಳ್ಳು ಬೆಳೆಯುವ ಭೂಮಿ ಎಂದು ಹೇಳಲಾಗುತ್ತದೆ. ಈ ಎಳ್ಳಿನಿಂದ ತಯಾರಿಸಿದ ಉಂಡೆ ಗಣೇಶನಿಗೆ ಪ್ರಿಯ. ಇದರ ಜತೆಗೆ ಗಣೇಶನು ಚೆನ್ನಾಗಿ ಊಟ ಮಾಡಿದ್ದರಿಂದ ಆತನ ಹೊಟ್ಟೆ ದಪ್ಪವಾಗಿ, ಆ ಹೊಟ್ಟೆ ಒಡೆಯಬಾರದೆಂದು ಹಾವು ಸುತ್ತಿಕೊಂಡಿರುತ್ತಾನೆ ಎಂದು ದಂತಕಥೆ ಇದೆ. ಗಣೇಶನ ಸಮೃದ್ಧಿಯ ಊಟ, ಒಂದು ಕೈಯ್ಯ ತೆನೆ, ಇನ್ನೊಂದು ಕೈಯ್ಯ ಕಡಬು ಕಾಲ ಕೆಳಗಿನ ಗರಿಕೆ ಮತ್ತು ಇಲಿ; ಈ ಹಬ್ಬ ಬೀಜ ಬಿತ್ತಿದ ತರುವಾಯದಲ್ಲೇ ಬರುವುದು. ಇದೆಲ್ಲ ಭೂಮಿಯ ಮತ್ತು ಮಣ್ಣಿನ ವ್ಯವಸಾಯ ಸಂಬಂಧದ ಆಚರಣೆಯಾಗಿ ಕಾಣಿಸುತ್ತದೆ. ಆದರೆ ಕಾಲಕ್ರಮೇಣ ಗಣೇಶನ ರೂಪ, ಮತ್ತು ಇನ್ನಿತರ ವಿವರಗಳ ಮೇಲೆ ಬೇರೆ ಬೇರೆ ಕಥೆಗಳು ಹುಟ್ಟಿಕೊಂಡು ಪ್ರಚಾರಕ್ಕೆ ಬಂದವು.

ಗಣೇಶನ ಹಬ್ಬ ಭೂಮಿ ಪ್ರಜ್ಞೆಯನ್ನು ಸಂಕೇತಿಸಿದರೆ ಇದರೊಡನೆ ಹೊಂದಿಕೊಂಡು ಬರುವ ಗೌರಿಹಬ್ಬ ನೀರಿನ ಪೂಜೆಯನ್ನು ಕುರಿತು ಹೇಳುತ್ತದೆ. ಪ್ರತಿ ಮನೆಯ ಹೆಂಗಸರು ನೀರು ತುಂಬಿರುವ ಕೆರೆ, ಬಾವಿ ಅಥವಾ ಹರಿಯುವ ತೊರೆ ಕಡೆಗೆ ಹೋಗಿ ಆ ನೀರನ್ನು ಪೂಜಿಸಿ, ಅರಿಷಿಣದ ಹುಡಿಯಿಂದ ತಯಾರಿಸಿದ ದೇವತೆ

ಯನ್ನು ಗೌರಿಯೆಂದು ಮನೆಗೆ ತರುತ್ತಾರೆ. ವಾಸ್ತವವಾಗಿ ಇದು ಜಲಪೂಜೆಯೇ. ಈ ಗೌರಿ ಗಣೇಶನ ತಾಯಿಯೆಂದು ಹೆಸರಿಸಲಾಗಿದೆ. ಎಂದರೆ ಧಾನ್ಯ ದೇವತೆ ಗಣೇಶನಿಗೆ ಜಲದೇವತೆಯನ್ನು ತಾಯಿಯಾಗಿ ಕಲ್ಪಿಸಲಾಗಿದೆ. ಭೂಮಿ ಮತ್ತು ಜಲ ಪೂಜೆಯ ಆಚರಣೆ ಹೊಂದಿರುವ ಗಂಗೆ ಅಥವಾ ಗೌರಿ ಗಣೇಶನ ಈ ಹಬ್ಬ ಬೆಳೆಯ ಆರಂಭಕಾಲದಲ್ಲಿ ಬರುವುದಾದರೆ, ದೀಪಾವಳಿ ಧಾನ್ಯ ಸಮೃದ್ಧಿಯ ಕಾಲ ದಲ್ಲಿ ಆರಂಭಗೊಳ್ಳುತ್ತದೆ. ಯುಗಾದಿ ರೈತರ ಸಂಪೂರ್ಣ ಬಿಡುವಿನ ಕಾಲದಲ್ಲಿ ಬರುವಂಥದ್ದು. ಅಥವಾ ವಿರಾಮದ ಕೊನೆ ದುಡಿಮೆಯ ಆರಂಭ ಇವೆರಡರ ನಡು ವಣ ಹಬ್ಬ ಯುಗಾದಿ. ಆದರಿಂದಲೇ ಆ ಹಬ್ಬದಲ್ಲಿ ಬೇವು ಬೆಲ್ಲದ ಮಿಶ್ರಣವಿರು ತ್ತದೆ. ಈ ಸಂದರ್ಭದಲ್ಲಿ ಭೂಮಿ ತಾಯಿ ಕೂಡ ಬಹಿಷ್ಠೆಯಾಗಿರುತ್ತಾಳೆಂದು ರೈತರ ನಂಬಿಕೆ. ಹಾಗೆ ನೋಡಿಕೊಂಡರೆ ಒಟ್ಟು ಹಬ್ಬಗಳು ಮನುಷ್ಯ ಜೀವನದ ಇತಿಹಾಸವನ್ನೇ ಹೇಳುವಂತಿವೆ. ಯುಗಾದಿಯ ಮೂರನೇ ದಿನ ಸಾಮಾನ್ಯವಾಗಿ ಜನಪದರು ಮಾಂಸದೂಟ ಬಯಸುವುದುಂಟು. ಈ ಮಾಂಸ ಕಾಡಿನಲ್ಲಿ ಬೇಟೆ ಯಾಡಿ ತಂದ ಪ್ರಾಣಿಯದೇ ಆಗಿರಬೇಕು. ಆದರಿಂದ ಯುಗಾದಿಯ ಮರುದಿನ ಜನಪದರು ಬೇಟೆಗಾಗಿ ಕಾಡಿನ ಕಡೆ ಹೋಗಿ ಸಿಕ್ಕಿದ ಪ್ರಾಣಿಯನ್ನು ಬೇಟೆಯಾಡಿ ತರುವರು. ತಂದ ಬೇಟೆಯನ್ನು ಎಲ್ಲರೂ ಹಂಚಿಕೊಳ್ಳಬೇಕು. ಇದು ಪ್ರಾಚೀನ ಪದ್ಧತಿ. ಈಗಲೂ ಕೆಲವು ಆರಣ್ಯವಾಸಿ ಬುಡಕಟ್ಟುಗಳಲ್ಲಿ ಈ ಪದ್ಧತಿ ಇದೆ. ಆದಿ ಮಾನವ ವ್ಯವಸಾಯ ಜೀವನವನ್ನು ಆರಂಭಿಸಿದ ಮೇಲೆ ಶ್ರಮ ಸಾಧ್ಯವಾದ ಬೇಟೆ ಯನ್ನು ಬಿಟ್ಟನಾದರೂ ಮಾಂಸ ಪ್ರಿಯ ಮನುಷ್ಯ ಮನರಂಜನೆಯ ಹೆಸರಿನಲ್ಲಿ ಯಾದರೂ ಬೇಟೆಯನ್ನು ಉಳಿಸಿಕೊಂಡ. ವ್ಯವಸಾಯ ಜೀವನದ ನಂತರ ಆತನಿಗೆ ಮಣ್ಣು, ನೀರು, ಪಶು ಸಮೂಹ ಇವೆಲ್ಲವೂ ಶ್ರೇಷ್ಠವೆನಿಸಿದವು. ಇದರ ನೆಪದಲ್ಲಿ ಆತ ಅನೇಕ ಆಚರಣೆಗಳನ್ನು ರೂಢಿಸಿಕೊಂಡು ಬಂದ. ಈ ಆಚರಣೆಗಳ ಮೇಲೆ ಹೊಂದಿಕೊಂಡಂತೆಯೇ, ಹೊಂದಿಕೊಳ್ಳುವಂತೆಯೇ ಕಥೆಗಳೂ ಅಸಂಖ್ಯಾತ ಸಂಖ್ಯೆ ಯಲ್ಲಿ ಹುಟ್ಟಿಕೊಂಡವು. ಈ ಕಥೆಗಳಲ್ಲಿ ಮನುಷ್ಯ ತನ್ನ ಜೀವನ ಚಕ್ರದಲ್ಲಿ ದುಷ್ಟ ಶಕ್ತಿಯೊಡನೆ ಹೋರಾಡಿದ್ದೇ ಮುಖ್ಯಸ್ಥಾನ ಗಳಿಸಿದುವು.

## ವಾದ್ಯಸಾಧನಗಳು ಮತ್ತು ಕಥೆಗಳು

ದುಷ್ಟಶಕ್ತಿಯೊಡನೆ ಮನುಷ್ಯ ಅಥವಾ ಮನುಷ್ಯ ಕಲ್ಪಿಸಿದ ದೇವತೆಗಳು ಹೋರಾಡಿದ್ದರ ಕಥೆಗಳು ಕೇವಲ ದೇವತೆ, ಜಾತ್ರೆಗಳು, ಹಬ್ಬಗಳ ಹಿನ್ನಲೆಯಲ್ಲಿ ಹುಟ್ಟಿಕೊಂಡಿಲ್ಲ, ವಾದ್ಯಸಾಧನಗಳ ಹಿನ್ನಲೆಯಲ್ಲೂ ಹುಟ್ಟಿಕೊಂಡಿರುವುದು ಆಶ್ಚರ್ಯದ ಸಂಗತಿ. ಸಾಮಾನ್ಯವಾಗಿ ಲೋಹಗಳಿಂದ ಮಾಡಿದ ವಾದ್ಯಗಳ ಬಗೆಗೆ ಹೆಚ್ಚು ಕಥೆಗಳು ಹುಟ್ಟಿಕೊಂಡಿವೆ. ಚರ್ಮವನ್ನು ದುಷ್ಟ ರಾಕ್ಷಸನೊಬ್ಬನ ಮೈಯ್ಯದೆಂದೂ, ತಂತಿಗಳು ಅವನ ದೇಹದ ನರಗಳೆಂದೂ ಎಲ್ಲ ಕಥೆಗಳಲ್ಲೂ ಬರುವ ಸಾಮಾನ್ಯ

ಆಶಯ. ಚೌಡಿಕೆಯೆಂಬ ವಾದ್ಯದ ಬಗೆಗೆ ಕಥೆ ಹೀಗಿದೆ. ಎಲ್ಲಮ್ಮನ ಗಂಡ ಜಮದಗ್ನಿ. ಆ ಜಮದಗ್ನಿಯನ್ನು ಕಾರ್ತವೀರ್ಯಾರ್ಜುನನು ಕೊಂದನು. ತಂದೆಯನ್ನು ಕೊಂದದ್ದಕ್ಕಾಗಿ ಎಲ್ಲಮ್ಮನ ಮಗ ಪರಶುರಾಮನು ಕಾರ್ತವೀರ್ಯಾರ್ಜುನನನ್ನು ಕೊಂದು ಅವನ ಕರುಳು ತೆಗೆದು ತಂತಿ ವಾದ್ಯ ಮಾಡಿ ತನ್ನ ತಾಯಿಯನ್ನು ಸ್ತುತಿಮಾಡುತ್ತಿದ್ದಾನೆ ಎಂಬುದಾಗಿ ಚೌಡಿಕೆಯ ಬಗೆಗಿನ ಕಥೆಯಿದೆ.

ಮತ್ತೊಂದು ಚರ್ಮವಾದ್ಯವಾದ ಡೊಳ್ಳಿನ ಬಗೆಗೂ ಹೀಗೆಯೇ ಕಥೆ ಪ್ರಚಾರದಲ್ಲಿದೆ : ಡೊಳ್ಳಾಸುರನೆಂಬುವನು ತಪಸ್ಸುಮಾಡಿ ಶಿವನನ್ನು ಒಲಿಸಿಕೊಂಡ. ಶಿವನು ಪ್ರತ್ಯಕ್ಷವಾಗಿ ಏನು ವರ ಬೇಕೆಂದು ಕೇಳಿಕೊಳ್ಳಲು ಡೊಳ್ಳಾಸುರ ನಿನ್ನನ್ನೇ ನುಂಗುವೆನೆಂದ. ಯಾವಾಗ ನನ್ನನ್ನು ಹೊರ ಹಾಕುವೆಯೆಂದು ಶಿವನು ಕೇಳಿದಾಗ ಪಂಚರಾತ್ರಿ ಕೂಡಿದಾಗ ಎಂದ. ಆದರೆ ಡೊಳ್ಳಾಸುರ ಹೇಳಿದಂತೆ ಮಾಡಲಿಲ್ಲ. ಆಗ ವಿಷ್ಣು ಪ್ರತ್ಯಕ್ಷವಾಗಿ ಶಿವನನ್ನು ನಾನಾ ವಿಧವಾಗಿ ಸ್ತುತಿಸಿದ. ಆದರೆ ಡೊಳ್ಳಾಸುರನ ಹೊಟ್ಟೆಯಲ್ಲಿ ಶಿವ ಯೋಗಮುದ್ರೆಯಲ್ಲಿದ್ದ. ಅವನನ್ನು ಎಚ್ಚರಿಸಲು ವಿಷ್ಣು ಡೊಳ್ಳಾಸುರನ ಎಲುಬು ಚರ್ಮಗಳಿಂದ ಡೊಳ್ಳು ತಯಾರಿಸಿ ಕೋರೆಹಲ್ಲುಗಳನ್ನು ಕೋಲು ಮಾಡಿ ಡೊಳ್ಳು ವಾದ್ಯವೆಂದು ಹೆಸರಿಸಿ ಬಾರಿಸಿದ್ದರಿಂದ ಶಿವ ಎಚ್ಚರಗೊಂಡ. ಬುಡುಬುಡಿಕೆಯವರು ಬಾರಿಸುವ ಅತಿ ಸಣ್ಣ ಚರ್ಮವಾದ್ಯ ಬುಡುಬುಡಿಕೆಯ ಬಗೆಗೂ ಒಂದು ಕಥೆಯಿದೆ. ತಾರಕಾಸುರ, ಮಕರಾಸುರ ಎಂಬ ಇಬ್ಬರು ರಾಕ್ಷಸರಿದ್ದರು. ಅತ್ಯಂತ ದುರಹಂಕಾರಿಗಳಾಗಿದ್ದ ಅವರನ್ನು ಅವರ ಪತ್ನಿಯರ ಪತಿವ್ರತಾ ಧರ್ಮವು ರಕ್ಷಿಸುತ್ತಿತ್ತು. ಅವರನ್ನು ಸಂಹಾರ ಮಾಡುವುದು ಹೇಗೆಂಬುದು ಕೃಷ್ಣನ ಚಿಂತೆಯಾಯಿತು. ನಾರದ ಒಂದು ಉಪಾಯ ಸೂಚಿಸಿದ. ಅದರಂತೆ ಕೃಷ್ಣ ಬುಡು ಬುಡಿಕೆಯವನ ವೇಷ ಹಾಕಿಕೊಂಡು ರಾಕ್ಷಸರ ಹೆಂಡತಿಯರಿಗೆ, ಬೆಳಗಾಗುವುದರೊಳಗೆ ಹುಟ್ಟಿ ಬೆಳೆದ ಅಶ್ವತ್ಥ ವೃಕ್ಷ ತಬ್ಬಿಕೊಂಡರೆ ಮಕ್ಕಳಾಗುತ್ತದೆಂದು ಭವಿಷ್ಯ ಹೇಳಿದ. ಹೆಂಡತಿಯರಾದ ಮಾಲಿ, ಸುಮಾಲಿಯರು ಹಾಗೆ ಮಾಡಿ ಗರ್ಭ ಧರಿಸಿದರು. ಇದರಿಂದ ಅವರ ಪಾತಿವ್ರತ್ಯ ಭಂಗವಾಗಿ ರಾಕ್ಷಸರು ಸತ್ತು ಬಿದ್ದರು.

ಬಹುಮಟ್ಟಿಗೆ ಜನಪದ ವಾದ್ಯಗಳೆಲ್ಲವೂ ದೇವರ ಆರಾಧನೆಯ ಹಿನ್ನೆಲೆಯಲ್ಲಿ ಬಳಸುವಂಥವು. ಆದರೆ ಈ ವಾದ್ಯ ಸಾಧನಗಳನ್ನು ಬಾರಿಸುವವರು ಕೆಳವರ್ಗದವರು ಮಾತ್ರ. ಯಾಕೆಂದರೆ ಈ ವಾದ್ಯಗಳು ಮೈಲಿಗೆಯ ವಸ್ತುವಾದ ಚರ್ಮದಿಂದ ತಯಾರಾಗಿರುತ್ತವೆ. ಹಿಂದೆ ರಾಜಮಹಾರಾಜರುಗಳ ನಡುವೆ ಯುದ್ಧ ನಡೆಯುವಲ್ಲಿ ಸೈನಿಕರನ್ನು ಹುರಿದುಂಬಿಸಲು ದೊಡ್ಡ ದೊಡ್ಡ ಚರ್ಮ ವಾದ್ಯಗಳನ್ನು ಬಳಸಲಾಗುತ್ತಿತ್ತು. ಪರಸ್ಪರ ಶತ್ರು ನಾಶದ ಸಂದರ್ಭದಲ್ಲಿ ಉದ್ವೇಗ ದ್ವೇಷಗಳನ್ನು

ಹುಟ್ಟಿಸಲು ಬಳಸುತ್ತಿದ್ದ ಈ ವಾದ್ಯಗಳ ಬಗೆಗೂ ಶತ್ರುನಾಶದ ಕಥೆಗಳು ಅಂಟಿಕೊಂಡಿರುವುದು ಕುತೂಹಲಕರ. ಕೆಲವು ಚರ್ಮವಾದ್ಯಗಳು ಹೃದಯ ಭೇಧಕ ಧ್ವನಿಯನ್ನೇ ಉಂಟುಮಾಡುತ್ತವೆ. ಬಳಸುವ ಚರ್ಮ, ಅದನ್ನು ಎಳೆದು ಕಟ್ಟುವ ಪರಿ, ಹೊರಡುವ ಧ್ವನಿ ಇವುಗಳೆಲ್ಲದರ ಹಿನ್ನೆಲೆಯಲ್ಲಿ ಶತ್ರು ಸಂಹಾರದ ಕಥೆಗಳು ಈ ಚರ್ಮವಾದ್ಯಗಳಿಗೆ ಅಂಟಿಕೊಂಡವು. ಈ ಬಗೆಯ ಕಥೆ, ದಂತ ಕಥೆಗಳ ಪರಂಪರೆ ನಮ್ಮಲ್ಲಿ ಕೇವಲ ದೇವರು, ಸಂತರು, ಶರಣರು, ಕವಿಗಳು ಮಾತ್ರವಲ್ಲ ; ಜಾತ್ರೆ ಹಬ್ಬ, ವಾದ್ಯ ಸಾಧನಗಳಿಂದ ಹಿಡಿದು ಗುಡ್ಡ ಬೆಟ್ಟ, ನದಿ ಕೆರೆ, ಗಿಡ ಮರ; ಪ್ರಾಣಿ ಪಕ್ಷಿ, ಕೋಟೆ ಕೊತ್ತಲ ಈ ಎಲ್ಲದರ ಮೇಲೂ ಆಯಾ ಭೌತಿಕ ಸ್ವರೂಪ, ಪರಿಸರಕ್ಕನುಗುಣವಾಗಿ ಕಾಲಕ್ರಮೇಣ ಹುಟ್ಟಿ ಪ್ರಚಾರಗೊಂಡಿರುತ್ತವೆ.

ಪ್ರತಿಯೊಬ್ಬ ಜಾನಪದ ಕ್ಷೇತ್ರ ಕಾರ್ಯಕರ್ತನಿಗೆ ಅವನ ಸಂಗ್ರಹ ಸಂದರ್ಭದಲ್ಲಿ ಎದುರಾಗುವ ಪ್ರಮುಖ ಸಮಸ್ಯೆಯೇ ಇದು. ಐತಿಹಾಸಿಕ ಘಟನೆಯೇ ಬೇರೆಯಾಗಿ ಅದರ ಸುತ್ತ ಬೇರೊಂದು ಕಥೆ, ದಂತ ಕಥೆ ಕಟ್ಟಲ್ಪಟ್ಟಿರುತ್ತದೆ. ಆಚರಣೆಗಳೇ ಪ್ರತ್ಯೇಕವಾಗಿ ಪ್ರಚಲಿತಕ್ಕೆ ಬಂದಿರುತ್ತವೆ. ಜಾನಪದ ಸಂಗ್ರಾಹಕನು ಇದೆಲ್ಲವನ್ನೂ ಸೂಕ್ಷ್ಮವಾಗಿ ಗಮನಿಸಿ ಬೇರೆ ಬೇರೆಯಾಗಿಟ್ಟು ನೋಡಿ, ತದನಂತರ ಅವನ್ನೆಲ್ಲ ಒಟ್ಟುಮಾಡಲೇಬೇಕಾಗುತ್ತದೆ. ಈಗಾಗಲೇ ಹೇಳಿದಂತೆ ಜನಪದರು ಇತಿಹಾಸ ಎಂದು ನಂಬಿಕೊಂಡು ಬಂದಿರುವುದೇ ಪವಾಡಭರಿತ ಅಲೌಕಿಕ ಸಂಗತಿಗಳನ್ನು; ಇದರ ಹೆಚ್ಚಳದಲ್ಲಿ ಐತಿಹಾಸಿಕ ಸಂಗತಿಗಳು ಹಿಂದೆ ಸರಿದಿವೆ. ಆದರೆ ಪ್ರತಿಯೊಂದು ಆಚರಣೆಯ ಹಿನ್ನಲೆಯಲ್ಲಿ ಸತ್ಯ ಅಡಗಿರುವಂತೆ ತೋರುತ್ತದೆ. ಇದನ್ನು ಸ್ಪಷ್ಟ ಪಡಿಸಿ ನೋಡಬೇಕಾದ ಜವಾಬ್ದಾರಿ ಈ ತಲೆಮಾರಿನ ಜಾನಪದ ಸಂಗ್ರಾಹಕರ ಮೇಲಿದೆ.

## ಗ್ರಂಥಋಣ ಪಟ್ಟಿ


ಅಮೃತ ಸೋಮೇಶ್ವರ : ೧೯೮೮ ತುಳು ಬದುಕು. ಕೋಟೆಕಾರು. ದ. ಕ.

ಜವರೇಗೌಡ ಡಿ. : ೧೯೭೬ ಜಾನಪದ ಅಧ್ಯಯನ. ಮೈಸೂರು.

ನರಸಿಂಹಶಾಸ್ತ್ರಿ ದೇವುಡು : ೧೯೩೩ (೧೯೮೮) ಕರ್ನಾಟಕ ಸಂಸ್ಕೃತಿ, ಬೆಂಗಳೂರು

ನಾವಡ ಏ.ವಿ., ಸುಭಾಶ್ಚಂದ್ರ: ೧೯೮೭ ಸಿರಿದರ್ಶನ, ಕುಂದಾಪುರ

ನಾಯಕ. ಎನ್. ಆರ್ : ೧೯೮೯ ಬಂದಾನೆ ಬಲೀಂದ್ರರಾಯ, ಹೊನ್ನಾವರ

ಪರಮಶಿವಯ್ಯ ಜೀ.ಶಂ. : ೧೯೭೯ ದಕ್ಷಿಣ ಕರ್ನಾಟಕ ಜಾನಪದ ಕಾವ್ಯ ಪ್ರಕಾರಗಳು, ಮೈಸೂರು

ಬಸವರಾಜ ಮಲಶೆಟ್ಟಿ : ೧೯೮೭ ಉತ್ತರ ಕರ್ನಾಟಕ ಜನಪದವಾದ್ಯಗಳು, ಉಡುಪಿ


ನಾಗಾಭಿನಂದನ/೧೮೯

ವಿವೇಕ ರೈ.ಬಿ.ಎ. : ೧೯೮೫ ತುಳು ಜನಪದ ಸಾಹಿತ್ಯ, ಬೆಂಗಳೂರು
ಶಂಕರ ನಾರಾಯಣ ಟೀ.ನಂ: ೧೯೮೭ ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು—ಸಾಂಸ್ಕೃತಿಕ ಅಧ್ಯಯನ, ಮೈಸೂರು
ಶಿವರುದ್ರಪ್ಪ ಜಿ.ಎಸ್. : ೧೯೮೭ ಕರ್ನಾಟಕ ಜಾನಪದ, ಬೆಂಗಳೂರು
Frazer J. G. : 1913 (1980) The Golden Bough, Hong kong
Ramanujan A.K: 1986 Another Hormony, New Delhi
Whitehead Henry : 1921 (1983) The Village Gods of South India New Delhi

o

ಡಾ. ಎಂ.ಜಿ ಈಶ್ವರಪ್ಪ

# ವ್ಯವಸಾಯಕ್ಕೆ ಸಂಬಂಧಿಸಿದ ಜಾನಪದ ಆಚರಣೆಗಳು

ಮನುಕುಲದ ಪ್ರಮುಖವಾದ ಕಸುಬು ವ್ಯವಸಾಯ. ವ್ಯವಸಾಯದ ಅವಿಷ್ಕಾರದಿಂದಲೇ ಪ್ರಾಚೀನ ಅನಾಗರಿಕನು ಮಾನವನಾಗಲು ಸಾಧ್ಯವಾದುದು. ಬೇಟೆ ಆಡುತ್ತಾ ಪ್ರಾಣಿಗಳ ಹುಡುಕಾಟದಲ್ಲಿ ತೊಡಗಿದ್ದ ಅವನಿಗೆ ವ್ಯವಸಾಯದಿಂದಾಗಿ ಒಂದೆಡೆ ನಿಲ್ಲಲು, ಆಲೋಚಿಸಲು, ತನ್ನದೇ ಆದ ಸಂಸ್ಕೃತಿಯೊಂದನ್ನು ರೂಪಿಸಿಕೊಳ್ಳಲು ಸಾಧ್ಯವಾಯಿತು. ಭಾರತ ದೇಶವಂತೂ ಹಳ್ಳಿಗಳ ನಾಡು, ವ್ಯವಸಾಯವನ್ನೇ ಪ್ರಧಾನ ವೃತ್ತಿಯನ್ನಾಗಿ ಹೊಂದಿರುವ ದೇಶ. ಅವನು ಕಲಿತಿರುವ ವ್ಯವಸಾಯ ಕ್ರಮ ಸಾಂಪ್ರದಾಯಿಕವಾಗಿ, ಪರಂಪರಾನುಗತವಾಗಿ ಬಂದಿರುವಂಥಾದ್ದು. ಅದು ಕಂಠಸ್ಥ ಸಂಪ್ರದಾಯದ್ದು. ಕೆಲವು ಕ್ರಮಗಳು ಶೃತಿಯಿಂದ, ಕೆಲವು ಸ್ಮೃತಿಯಿಂದ, ಕೆಲವು ಆಚರಣೆಗಳ ವಹಿವಾಟನಿಂದ ಅನೂಚಾನವಾಗಿ ನಡೆದುಕೊಂಡು ಬಂದಿವೆ. ಎಷ್ಟೋ ವರುಷಗಳಿಂದ ವ್ಯವಸಾಯಗಾರನೊಬ್ಬ ಭೂಮಿಯ ಜೊತೆಗಿನ ಸಂಪರ್ಕದಿಂದ ಪಡೆದುಕೊಂಡ ಅನುಭವವನ್ನು ಆಚರಣೆಯ ಮುಖಾಂತರವೋ, ಕ್ರಿಯಾತ್ಮಕ ಕಲೆಯ ಮುಖಾಂತರವೋ, ಗಾದೆ ಒಗಟು ಪುರಾಣ ಐತಿಹ್ಯಗಳ ಮುಖಾಂತರವೋ, ಒಟ್ಟಿನಲ್ಲಿ ಜಾನಪದ ಸ್ವರೂಪದ ಮುಖಾಂತರ ತನ್ನ ಮುಂದಿನ ತಲೆಮಾರಿಗೆ ವರ್ಗಾಯಿಸಿ ಹೋಗಿದ್ದಾನೆ. ಆಧುನಿಕ ವ್ಯವಸಾಯ ವಿಜ್ಞಾನ ಆವನ ಹತ್ತಿರಕ್ಕೆ ಬಂದಿದ್ದರೂ ಅಥವಾ ಬರದಿದ್ದರೂ ಅವನು ತನ್ನ ಸಂಪ್ರದಾಯಾಚರಣೆಗಳನ್ನು ಮುಂದುವರಿಸಿಕೊಂಡು ಹೋಗಿದ್ದಾನೆ. ಯಾಕೆಂದರೆ ಭಾರತ ಸಂಪ್ರದಾಯಗಳ

ತವರು. ಜಾನಪದದ ಕಣಜ. ಜಾನಪದ ವಿದ್ವಾಂಸ ಅಲೆನ್ ಡುಂಡಸ್ ಅವರ ಮಾತಿನಲ್ಲಿ ಹೇಳುವುದಾದರೆ "ಭಾರತವು ಜೀವಂತ ಜಾನಪದ ಸಂಪದ್ಯುಕ್ತ ಉಗ್ರಾಣ. ಈ ಮಹತ್ವಪೂರ್ಣ ಸಾಂಪ್ರದಾಯಿಕ ಸಂಪತ್ತನ್ನು ಸದುಪಯೋಗಪಡಿಸಿಕೊಳ್ಳುವುದಾದರೆ ಭಾರತೀಯ ಜಾನಪದ ವಿದ್ವಾಂಸರು ಜಗತ್ತಿನಲ್ಲಿಯೇ ಅತ್ಯುತ್ತಮರಾಗಬಹುದು. ಭಾರತದಲ್ಲಿ ಜಾನಪದ ಸಂಶೋಧನೆಗಳಿಗಿರುವ ಅವಕಾಶಗಳು ಜಗತ್ತಿನಲ್ಲಿ ಬೇರೆ ಕಡೆ ಇಲ್ಲ."

ವ್ಯವಸಾಯ ಜಾನಪದವನ್ನು ಅಭ್ಯಾಸ ಮಾಡುವಾಗ ಹಲವು ಸಂಪ್ರದಾಯಗಳು (Customs) ಮತ್ತು ಆಚರಣೆಗಳು (Rituals) ನಮ್ಮ ಗಮನ ಸೆಳೆಯುತ್ತವೆ. ಸಂಪ್ರದಾಯ ಮತ್ತು ಆಚರಣೆಗಳನ್ನು ಭಿನ್ನವಾದವುಗಳು ಎಂದು ಖಚಿತವಾಗಿ ಹೇಳುವುದು ಕಷ್ಟ. ಅವುಗಳು ಪರಸ್ಪರ ಸಂಬಂಧವುಳ್ಳ ಎರಡು ಜಾನಪದ ಬಗೆಗಳು. ಸಂಪ್ರದಾಯ ಪರಂಪರೆಯಿಂದ ಬಂದ ಒಂದು ಗುಂಪಿನ ಆಚರಣೆಗಳ ಮೊತ್ತವಾಗಿದೆ. ಅದು ಒಬ್ಬ ವ್ಯಕ್ತಿ ಆಚರಿಸುವ ವ್ಯಕ್ತಿಗತ ನಡಾವಳಿಯಾಗದೆ ಒಂದು ಗುಂಪು ಒಪ್ಪಿಕೊಂಡು ನಡೆಸಿಕೊಂಡು ಬಂದುದಾಗಿದೆ. ಬಹುಮಟ್ಟಿಗೆ ಧಾರ್ಮಿಕ ಚೌಕಟ್ಟಿನಲ್ಲಿಯೇ ಬರುವ ಆಚರಣೆಗಳನ್ನು ಧಾರ್ಮಿಕ ವಿಧಿಗಳು ಎಂದೂ ಕರೆಯಬಹುದು. ಸಂಪ್ರದಾಯಗಳಲ್ಲಿ ಈ ಆಚರಣೆಗಳು ಬೇರ್ಪಡಿಸಲಾಗದ ರೀತಿಯಲ್ಲಿ ಬೆಸೆದುಕೊಂಡಿರುತ್ತವೆ. ಕೆಲವೊಮ್ಮೆ ಅವು ಸಂಪ್ರದಾಯಗಳೂ ಆಗುತ್ತವೆ. ಆಚರಣೆಗಳೂ ಆಗುತ್ತವೆ. ನಮ್ಮ ಜಾನಪದ ವಿದ್ವಾಂಸ ಡಾ. ಜೀ.ಶಂ. ಪರಮಶಿವಯ್ಯ ಅವರು ಹೇಳುವಂತೆ "ಸಂಪ್ರದಾಯಗಳು ಕೇವಲ ಗೊಡ್ಡು ಕಂದಾಚಾರಗಳಲ್ಲ; ಸಾಮಾಜಿಕ ಜೀವನದೊಡನೆ ಅವು ಜೀವಂತನಾದ ಸಂಬಂಧವನ್ನು ಇಟ್ಟುಕೊಂಡಿರುತ್ತವೆ. ಒಂದು ಸಂಸ್ಕೃತಿ ಬೆಳೆದು ಬಂದ ರೀತಿಯನ್ನು ಅದರ ಆಳ ಅಗಲಗಳನ್ನು, ರೀತಿ ನೀತಿಗಳನ್ನು ಸಮರ್ಥವಾಗಿ ಪ್ರತಿಬಿಂಬಿಸುತ್ತವೆ. ಒಂದೊಂದು ಸಂಪ್ರದಾಯದ ಆಳಕ್ಕೆ ಇಳಿದಂತೆಲ್ಲ ಆಯಾ ಸಂಸ್ಕೃತಿಗೆ ಹೊಸ ಅರ್ಥವನ್ನು ತಂದು ಕೊಡುವಲ್ಲಿ ಸಂಪ್ರದಾಯಗಳು ಸಹಕಾರಿಯಾಗುತ್ತವೆ."

ಸಮುದಾಯವೊಂದು ನಿರ್ದಿಷ್ಟ ಕಾಲದಲ್ಲಿ, ನಿರ್ದಿಷ್ಟ ಜಾಗದಲ್ಲಿ, ಪೂಜೆ ಪುರಸ್ಕಾರಗಳನ್ನು ಕ್ರಮಬದ್ಧವಾಗಿ ನಡೆಸುವ ವಿಧಿಯೇ ಆಚರಣೆ. ಅದು ಪರಂಪರೆಯ ಮೇಲಿನ ಶ್ರದ್ಧೆಯಿಂದ, ಧಾರ್ಮಿಕ ಪ್ರಜ್ಞೆಯಿಂದ, ದೈವ ಭಯದಿಂದ ನಡೆಯುತ್ತದೆ. ಅದು ಕೇವಲ ಪೂಜೆಯಾಗಿರದೆ ಅವನ ಬದುಕಿನ ಒಂದು ಅಂಗವಾಗಿ ಮುಂದುವರಿಯುತ್ತದೆ. ಅದು ಮಾನಸಿಕ ನೆಮ್ಮದಿಯನ್ನು ನೀಡಬಹುದು ಅಥವಾ ಉದ್ದೇಶಿತ ಫಲವನ್ನು ಕೊಡಬಹುದು. ವ್ಯವಸಾಯ ಸಂಬಂಧಿಯಾದ ಆಚರಣೆಗಳನ್ನು ಗಮನಿಸಿದರೆ ಅಲ್ಲಿ ಶ್ರದ್ಧೆ, ಗೌರವ, ಭಯಗಳ ಜೊತೆಗೆ ವ್ಯವಸಾಯ ಶಾಸ್ತ್ರವನ್ನು ಮುಂದಿನ ಜನಾಂಗಕ್ಕೆ ಪ್ರವಹಿಸುವ ಮಾಧ್ಯಮಗಳಾಗಿಯೂ ಕಂಡು

ಬರುತ್ತವೆ. ಆಚರಣೆಯೆಂದರೆ ನಿರ್ದಿಷ್ಟ ಕ್ರಮದಲ್ಲಿ ನಡೆಸುವ ಒಂದು ಧಾರ್ಮಿಕ ಕ್ರಿಯೆ. ಅಲ್ಲಿ ಪ್ರಾರ್ಥನೆ, ದೇವರನ್ನು ಕುರಿತು ಹಾಡುವ ಹಾಡುಗಳು, ಆ ಹಾಡುಗಳಿಗೆ ಅನುಗುಣವಾಗಿ ನೃತ್ಯ, ದೇವತೆಗೆ ಬಲಿ ನೀಡುವುದು ಅಥವಾ ನೈವೇದ್ಯ ಅರ್ಪಿಸುವುದು ಇವೆಲ್ಲ ಸೇರಿಕೊಳ್ಳುತ್ತವೆ. ಆದುದರಿಂದ ಆಚರಣೆಗಳ ಅಧ್ಯಯನವು ಸಾಂಸ್ಕೃತಿಕ ಮಾನವಶಾಸ್ತ್ರದ ಮತ್ತು ಮೌಖಿಕ ಸಾಹಿತ್ಯದ ಅಧ್ಯಯನವೇ ಆಗುತ್ತದೆ.

ವ್ಯವಸಾಯಗಾರನ ಕೆಲಸಕಾರ್ಯಗಳು ವರ್ಷಪೂರ್ತಿ ನಡೆಯುವಂತಹವುಗಳು. ಸಕಾಲದಲ್ಲಿ ಮಳೆ ಬೆಳೆ ಆಗಬೇಕೆಂದು ಅವನು ಸದಾ ಒಂದಲ್ಲ ಒಂದು ಆಚರಣೆಯಲ್ಲಿ ತೊಡಗುವುದು ಕಂಡುಬರುತ್ತದೆ. ಸಕಾಲದಲ್ಲಿ ಮಳೆ ಬಂದು ಬೆಳೆ ಬೆಳೆಯುವಂತೆ ನೋಡಿಕೊಳ್ಳುವುದು ಅವನ ಉದ್ದೇಶ. ಉಳುವಾಗ, ಬಿತ್ತುವಾಗ, ಕಳೆ ಕೀಳುವಾಗ, ಕೊಯ್ಲು ಮಾಡುವಾಗ, ಒಕ್ಕಲು ಮಾಡುವಾಗಲೆಲ್ಲ ಸೂಕ್ತವಾದ ಆಚರಣೆಗಳು ನಡೆಯುತ್ತವೆ. ' ಬೆಳೆ ವೃದ್ಧಿಯಾಗಲು, ಫಲೋತ್ಪತ್ತಿ (Fertility) ಆಚರಣೆಗಳು ನಡೆದರೆ, ಬೆಳೆ ಹಾಳುಮಾಡುವ ದುಷ್ಟಶಕ್ತಿ ನಿವಾರಣೆಗಾಗಿ ಪೂಜೆ ನಡೆಸುವುದು, ಹರಕೆ ಹಾಕಿಕೊಳ್ಳುವುದು, ಚರಗ ಚಲ್ಲುವುದು, ಬೆರ್ಚು ನಿಲ್ಲಿಸುವ ಕ್ರಿಯೆಗಳು ಅಖಂಡವಾಗಿ ನಡೆಯುತ್ತಿರುತ್ತವೆ. ಮಲೆನಾಡು ಮತ್ತು ಬಯಲು-ನಾಡು ವ್ಯವಸಾಯ ಕ್ರಮಗಳು ಬೇರೆ ಬೇರೆಯಾಗಿದ್ದು ಆಚರಣೆಗಳು ಮೇಲು ನೋಟಕ್ಕೆ ಭಿನ್ನವಾಗಿ ಕಂಡರೂ ಮೂಲ ಆಶಯ ಮಾತ್ರ ಸಮಾನವಾಗಿಯೇ ಇರುತ್ತದೆ. ಅಧ್ಯಯನದ ದೃಷ್ಟಿಯಿಂದ ಆಚರಣೆಗಳನ್ನು ಅ) ಮಳೆ ಸಂಬಂಧಿ ಆಚರಣೆಗಳು ಆ) ಬೆಳೆ ಸಂಬಂಧಿ ಆಚರಣೆಗಳು ಮತ್ತು ಇ) ಇತರೆ ಆಚರಣೆಗಳು ಎಂದು ಸ್ಥೂಲವಾಗಿ ವಿಂಗಡಿಸಬಹುದು.

**ಮಳೆ ಆಚರಣೆಗಳು**

ಪಂಚಾಂಗದ ಪ್ರಕಾರ ಚೈತ್ರಮಾಸದಿಂದ ಆರಂಭವಾಗಿ ಒಟ್ಟು ಇಪ್ಪತ್ತೇಳು ನಕ್ಷತ್ರಗಳನ್ನು ಗುರುತಿಸಲಾಗಿದೆ. ಇವುಗಳನ್ನೇ ವ್ಯವಸಾಯಗಾರನು ಮಳೆಗಳು ಅಥವಾ ಮಳೆ ನಕ್ಷತ್ರಗಳು ಎನ್ನುತ್ತಾನೆ. ಅಶ್ವಿನಿಯಿಂದ ತೊಡಗಿ ಹುಬ್ಬ ಮಳೆಯವರೆಗೆ ಮುಂಗಾರು (ಖಾರಿಫ್) ಎಂದೂ, ಉತ್ತರೆಯಿಂದ ಅನುರಾಧ ಮಳೆಯವರೆಗೆ ಹಿಂಗಾರು (ರಾಬಿ) ಎಂದು ವಿಭಾಗಿಸಿಕೊಳ್ಳಲಾಗುವುದು. ಈ ಎಲ್ಲ ಮಳೆಗಳು ಕಾಲಕಾಲಕ್ಕೆ ಬಂದರೇನೇ ಅವನ ಬದುಕು ಸಮೃದ್ಧ. ಬರದೇ ಹೋದರೆ ಮಳೆ-ದೇವರ ಕೃಪೆ ಪಡೆಯಲಾಗಿ ಅವನ ಆಚರಣೆಗಳು ಗರಿಗೆದರುತ್ತವೆ.

ಯಾಕೆ ಹೋದವು ಮಳೆಗಳು
ಲೋಕ ಸಾಕಲಾರುದುಕೆ ಹೋದುವು |
ಪುಣ್ಯವಿಲ್ಲದ ನಾರಿ ಪುರುಷನ ಬೈದರೆ
ಅನ್ಯಾಯಕೆ ಮಳೆ ಹೋದುವು |
ಒಕ್ಕಲನ ಮಕ್ಕಳಂತೆ ತಾವು ತಮ್ಮ
ಮಕ್ಕಳುನ ಮಾರ್‍ಯಾರಂತೆ |
ನಂದಿಯೇರಿಕೊಂಡು ಬಂದಂಥ
ಮಳೆರಾಯ ಹಿಂದಕೆ ಹೋದುನಂತೆ |

ಮಳೆಯು ಸಕಾಲಕ್ಕೆ ಬಾರದೇ ಹೋದಾಗ ಕೃಷಿಕ ಹೆಣ್ಣುಮಕ್ಕಳ ಬಾಯಲ್ಲಿ ಬರುವ ಹಾಡುಗಳ ತುಣುಕುಗಳು ಈ ಸಾಲುಗಳು. ಮಳೆ ಬಾರದೇ ಹೋದರೆ ಬೆಳೆಯಿಲ್ಲ, ಬೆಳೆ ಇಲ್ಲವೆಂದರೆ ಬದುಕು ದಾರುಣ ಅವಸ್ಥೆಗೆ ಬರುತ್ತದೆ. ಮಳೆ ಬರದೇಯಿರಲು ಕಾರಣವನ್ನು ನಾನಾ ನಮೂನೆಯಾಗಿ ಜನಪದ ಮನಸ್ಸು ಹುಡುಕಿಕೊಳ್ಳುತ್ತದೆ. ಮಳೆ ಒಕ್ಕಲು ಮಗನಿಗೆ ಸಂಜೀವಿನಿ ಸದೃಶವಾದುದು. ಎರಡನೆಯ ನಾಗವರ್ಮ ಹೇಳುವಂತೆ "ಸರ್ವಭೂತಾಧಾರಂ ಮಳೆಯುಂ." ಜನಪದರಿಗೆ ಆಕಾಶ (ಮಳೆರಾಜ) ತಂದೆಯಾದರೆ, ಭೂಮಿ ಹೆತ್ತತಾಯಿ.ದಿನ ಬೆಳಗಾದರೆ ಅವರು ನೆನೆಯುವುದು ಭೂಮಿ ತಾಯಿಯನ್ನು.ಮಳೆಗಾಲದಲ್ಲಿ ಅವರು ದಿನ ಬೆಳಗಾದರೆ, ಕತ್ತಲಾದರೆ ನೋಡುವುದು ಆಕಾಶವನ್ನು ಅಂದರೆ ಮಳೆರಾಜನನ್ನು. ಅಲ್ಲಿರುವ ಮೋಡ, ಗಾಳಿ, ಮಿಂಚು, ಸಿಡಿಲುಗಳು ಮಳೆಯನ್ನು ತರುತ್ತವೆಯೋ ಎಂದು ಆಶೆಯ ಕಣ್ಣುಗಳಿಂದ ನೋಡುತ್ತಾರೆ. ಮೋಡ, ಗಾಳಿ, ಸಿಡಿಲು ಮಿಂಚುಗಳು, ಬೇರೆಯವರಲ್ಲ. ಅವರ ಅಣ್ಣ-ತಮ್ಮಂದಿರು. ಅವರನ್ನು ಅವರು ಬಲು ಗೌರವದಿಂದ ಸ್ಮರಿಸುತ್ತಾರೆ.

ಗಾಳೆಪ್ಪ ಧೂಳೆಪ್ಪ ಸಿಡ್ಲೆಪ್ಪ ಮಿಂಚೆಪ್ಪ
ಇವರು ನಾಕುಮಂದಿ ಅಣ್ಣತಮ್ಮರು-ಇದ್ದುರ
ಸುತ್ತಣ ಹಳ್ಳಿಗಿ ದೊಡ್ಡವರೊ |

ಎಂದು ಹಾಡುತ್ತಾರೆ. ಮಳೆಗಾಲ ಆರಂಭವಾಗಿ ನಾಲ್ಕೈದು ಮಳೆಗಳು ಕಳೆದರೂ ಮಳೆ ಬರುವ ಸೂಚನೆ ಕಾಣದಿದ್ದಾಗ ರೈತನ ದೈವೀ ಶ್ರದ್ಧೆ ಅರಳುತ್ತದೆ. ಮಳೆಯನ್ನು ಕುರಿತ ಪೂಜೆ, ಆಚರಣೆಗಳಿಗೆ ತೊಡಗುತ್ತಾನೆ. ದೇವರನ್ನು ಹೊರಡಿಸಿ ಅಪ್ಪಣೆ ಕೇಳುತ್ತಾನೆ. ಅನ್ಯಾಯ ಅನೀತಿಗಳು ಜರುಗಿದ್ದರ ಕಾರಣಕ್ಕಾಗಿ ಬಂದಿಲ್ಲವೇನೋ ಎಂದು ಭಾವಿಸಿ ಅದರ ಪಶ್ಚಾತ್ತಾಪಪೂರ್ವಕ ಕ್ರಿಯೆಗಳಲ್ಲಿ ತೊಡಗುತ್ತಾನೆ. ಮನಸ್ಸಿಗೆ ನೆಮ್ಮದಿ ಪಡೆಯಲು ಭಜನೆ, ಅಭಿಷೇಕ, ಪುರಾಣ ಶ್ರವಣದಲ್ಲಿ ತೊಡಗುತ್ತಾನೆ. ಮಳೆಗೆ ಸಂಬಂಧಿಸಿದ ದೇವತೆಗಳ ಅರ್ಚನೆ ಮಾಡುತ್ತಾನೆ.

ವರುಣನ ಕೃಪೆ ಪಡೆಯಲು ನಡೆಸುವ ಸಾಮೂಹಿಕ ಆಚರಣೆಗಳ ಪಟ್ಟಿ ಮಾಡುತ್ತಾ ಹೋದರೆ ಅವು ಸುಮಾರು ಇಪ್ಪತ್ತೈದಕ್ಕೂ ಹೆಚ್ಚು ಆಗುತ್ತವೆ. ಪ್ರಾದೇಶಿಕವಾಗಿ ಜಿಲ್ಲೆ ಜಿಲ್ಲೆಯಲ್ಲೂ ಗಮನಿಸುತ್ತಾ ಹೋದರೆ ನೂರಕ್ಕೂ ಹೆಚ್ಚು ಸಿಕ್ಕರೂ ಸಿಕ್ಕಬಹುದು. ಗಮನಕ್ಕೆ ಬಂದಿರುವುಗಳನ್ನು ಪಟ್ಟಿ ಮಾಡುವುದಾದರೆ ೧) ಭಜನೆ ೨) ಪೌರಾಣ ೩) ರುದ್ರಾಭಿಷೇಕ ೪) ಪರ್ವ ೫) ಹೆಡಿಗೆ ಜಾತ್ರೆ ೬) ದೇವರ ಕುರುಹು ೭) ನೀರು ತುಂಬಿದ ಚಂಬು ಹುಗಿಯುವುದು ೮) ಕಂತೆ ಭಿಕ್ಷೆ ಎತ್ತುವುದು ೯) ಕರುಗಲ್ಲು ಪೂಜೆ ಅಥವಾ ಬುಡಗಲ್ಲು ಪೂಜೆ ಮಾಡುವುದು ೧೦) ಬಿದ್ದ ಹನುಮಪ್ಪನಿಗೆ ಪೂಜೆ ೧೧) ಸುಳ್ಳು ಕಾಟನ ದೇವರು ಮಾಡುವುದು ೧೨) ಗಂಗೆ-ಗೌರಿ ಪದ ಹೇಳಿಸುವುದು ೧೩) ಕತ್ತೆ ಮೆರವಣಿಗೆ ಮಾಡುವುದು ೧೪) ತಪ್ಪಟೆ ಬಡಿದು ಮಳೆ ಕರೆಯುವುದು ೧೫) ಸುಡುಗಾಡು ಗುಡ್ಡೆ ಸೋಸು ವುದು ೧೬) ಬರಗಲ್ಲು ಪೂಜೆ ಮಾಡುವುದು ೧೭) ಸಂತೆ ಏರ್ಪಾಟು ೧೮) ಜೋಕುಮಾರ ಆಡುವುದು ೧೯) ಮಳೆಮಲ್ಲಪ್ಪನ ಪೂಜೆ ೨೦) ಕಾರಣಿಕ ಪುರುಷರ ಗದ್ದುಗೆ ಪೂಜೆ ೨೧) ಕೊಂತಿ ಪೂಜೆ ೨೨) ತಿಂಗಳ ಮಾವನ ಪೂಜೆ ೨೩) ಭೂಮಿಗೆ ಹಾಲೆರೆಯುವುದು, ಇತ್ಯಾದಿ ಇತ್ಯಾದಿ.

ಭಗವಂತನ ಪ್ರಶಂಸೆ ಹಾಗೂ ಸ್ತೋತ್ರ ಮಾಡುವುದೇ ಭಜನೆ. ಪ್ರತಿ ಹಳ್ಳಿ ಗಳಲ್ಲಿ ಭಜನೆಯು ವರ್ಷಪೂರ್ತಿ ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಸಂಬಂಧಿಸಿದ ದೇವರ ಹೆಸರಿನಲ್ಲಿ ಭಜನಾ ಮಂಡಳಿಯೊಂದು ತಲೆಯೆತ್ತಿ ಆಸಕ್ತ ನಾದವನೊಬ್ಬ ಅದರ ನಿರ್ವಹಣೆಯನ್ನು ಮುತುವರ್ಜಿಯಿಂದ ನೋಡಿಕೊಳ್ಳುತ್ತಾನೆ. ಇದೊಂದು ದೇವತಾಕಾರ್ಯ, ಆಧ್ಯಾತ್ಮ ವಿಕಾಸಕ್ಕೆ ಸಹಕಾರಿಯಾದುದು, ಪುಣ್ಯ ವನ್ನು ತಂದುಕೊಡುವಂತಹದು ಎಂದು ಎಲ್ಲರ ಭಾವನೆ. ಮಳೆಯ ಆಚರಣೆಗೆ ಸಂಬಂಧಿಸಿದಂತೆ ಭಜನೆಗೆ ವಿಶಿಷ್ಟವಾದ ಸ್ಥಾನವಿದೆ. ಮಳೆಗಾಲ ಪ್ರಾರಂಭವಾಗಿ ಮಳೆ ಬಾರದೇ ಇದ್ದ ಪಕ್ಷದಲ್ಲಿ ಊರ ಹಿರಿಯರು ಸೇರಿ ಸಾಮೂಹಿಕವಾಗಿ ಭಜನೆ ಯನ್ನು ಊರ ದೇವಸ್ಥಾನದಲ್ಲಿ ಏರ್ಪಡಿಸಿರುತ್ತಾರೆ. ಭಜನೆಯ ಗುಂಪಿನವರು ಸ್ನಾನ ಮಾಡಿ ಬಂದು ದೇವರಿಗೆ ಹಣ್ಣುಕಾಯಿ ಮಾಡಿಸಿ ಭಜನೆ ಮಾಡಲು ತೊಡಗುತ್ತಾರೆ. ಇತರೆ ಜನರು ಹೆಣ್ಣು ಗಂಡಾದಿಯಾಗಿ-ಬಂದು ದೇವರಿಗೆ ಹಣ್ಣುಕಾಯಿ ಮಾಡಿಸಿ ಭಜನೆ ಕೇಳಲು ತೊಡಗುತ್ತಾರೆ. ಆಸಕ್ತಿಯಿರುವವರು ಭಜನೆಯ ಗುಂಪಿಗೆ ಸೇರಿ ಕೊಂಡು ಹಾಡು ಹೇಳುತ್ತಾರೆ. ದೇವರ ಮಹಿಮೆಯನ್ನು ಅವನ ಅಪಾರ ಕರುಣೆ ಯನ್ನೂ ತನ್ಮಯತೆಯಿಂದ ಹಾಡಿ ಹೊಗಳಲಾಗುವುದು. ವಾರಗಟ್ಟಲೆ ನಿರಂತರ ವಾಗಿ ಮಳೆ ಬರುವವರೆಗೆ ಈ ಸಾರ್ವಜನಿಕ ಸಂಗೀತಾರಾಧನೆ ನಡೆಯುತ್ತದೆ. ಕೆಲವರು ಭಜನೆಯ ಬದಲಿ ಪುರಾಣ ಶ್ರವಣ ಏರ್ಪಡಿಸುತ್ತಾರೆ. ಶನಿ ಮಹಾತ್ಮೆ, ಮಾಂಧಾತ ಚರಿತ್ರೆ, ಗದುಗಿನ ವಿರಾಟಪರ್ವ ಕಾವ್ಯಗಳು ಆಗ ವಾಚನವಾಗುತ್ತವೆ.

ಪುರಾಣದ ಪುಣ್ಯ ಶ್ರವಣದ ಕೊನೆಯ ದಿವಸ ಸಾರ್ವಜನಿಕ ವಂತಿಗೆಯಿಂದ 'ಪರ್ವ' ಏರ್ಪಡಿಸಲಾಗುವುದು. ಪರ್ವ ಜಾತಿ ಮತ ಭೇದವಿಲ್ಲದೆ ನಡೆಯುವ ಸಾಮೂಹಿಕ ಅನ್ನ ಸಂತರ್ಪಣೆ.

ರುದ್ರಾಭಿಷೇಕ, ಮಳೆಗಾಗಿ ನಡೆಯುವ ವಿಶಿಷ್ಟ ಅಭಿಷೇಕ, ಶಿವನಿಗೆ ವಿಶೇಷ ಪೂಜೆ. ನಿಗದಿಯಾದ ಒಂದು ದಿವಸ ಸಂಜೆ ಈ ಅಭಿಷೇಕ ಆರಂಭವಾಗುತ್ತದೆ. ಮದುವೆಯಾಗದ ಕೋರಾ ಹುಡುಗರು ಕೊಡಗಳಲ್ಲಿ ನೀರು ತರುತ್ತಾರೆ. ದೇವರ ಮೂರ್ತಿಗೆ ಎಣ್ಣೆ ಹಚ್ಚಿ ನಂತರ ಅಭ್ಯಂಜನ ಮಾಡಿಸಲು ತೊಡಗುತ್ತಾರೆ. ಗರ್ಭ ಗುಡಿಯಿಂದ ನೀರು ಹೊರಗೆ ಹೋಗುವ ರಂಧ್ರವನ್ನು ಮುಚ್ಚಿ, ಒಂದುನೂರ ಒಂದು ಕೊಡದ ಅಭಿಷೇಕ ಮಾಡುತ್ತಾರೆ. ಬೆಳಗಿನ ಜಾವದ ಹೊತ್ತಿಗೆ ಪೂಜೆಯು ಮುಗಿ ಯುತ್ತ ಬಂದರೆ, ಮೂರ್ತಿ ನೀರಿನಲ್ಲಿ ಮುಳುಗಿ ಬಿಟ್ಟಿರುತ್ತದೆ. ಗುಡಿಯ ಬಾಗಿಲು ಮುಚ್ಚಿ ಒಂದು ದಿವಸ ಹಾಗೇ ಬಿಡುತ್ತಾರೆ. ಮಾರನೆಯ ದಿವಸ ರಂಧ್ರ ತೆಗೆದು ನೀರು ಹೊರಬಿಟ್ಟು ಪುನಃ ಸಾಧಾರಣ ಪೂಜೆ ನಡೆಸುತ್ತಾರೆ. ಸಾರು ಹಾಕಿಸಿ ಪ್ರತಿ ಯೊಬ್ಬರ ಮನೆಯಿಂದ ದೇವರಿಗೆ ಎಡೆ ಬರುವಂತೆ ಮಾಡುತ್ತಾರೆ. ಪ್ರತಿ ಮನೆಯ ವರು ಗುಡಿಸಿ ಸಾರಿಸಿ ಅಡಿಗೆ ಮಾಡಿ ದೇವಸ್ಥಾನಕ್ಕೆ ಕಳಸಿಕೊಡುತ್ತಾರೆ. ಅದೇ ಕಂತೆ ಭಿಕ್ಷೆ. ಹೀಗೆ ಮಾಡಿದರೆ ಮಳೆ ಬರುವುದೆಂಬ ನಂಬಿಕೆ. ಕೆಲವೆಡೆ ದೇವರ ಕುರಿತಪ್ಪಣೆ ಕೇಳುತ್ತಾರೆ. ಮಳೆ ಯಾವಾಗ ಬರುತ್ತದೆಂದು. ನೀರು ತುಂಬಿದ ಚಂಬನ್ನು ಪೂಜಿಸಿ ಊರ ಹೊರಗಿನ ಕೆರೆಯ ಮರಳಲ್ಲಿ ಹುಗಿದು ಬರುವ ಆಚರಣೆ ಹಲವೆಡೆಯಿದೆ. ದೇವರಿಗೆ ಸಂಪ್ರೀತಿಯಾಗುವಂತೆ ಪೂಜೆ ನಡೆದಿಲ್ಲವೆಂದು ಕರುಗಲ್ಲು ಮತ್ತು ಬುಡ್ಡಗಲ್ಲುಗಳನ್ನು ವಿಶೇಷವಾಗಿ ಪೂಜಿಸಲಾಗುವುದು.

ಮಳೆಗೆ ಸಂಬಂಧಿಸಿದ ಆಚರಣೆಗಳಲ್ಲಿ ಹನುಮಪ್ಪನಿಗೆ ವಿಶೇಷವಾದ ಸ್ಥಾನ. ಆತ ಪವನಕುಮಾರನಾಗಿರುವುದರಿಂದ ಎಲ್ಲೋ ಹೋಗಿರುವ ಮೋಡಗಳನ್ನು ಎಳೆದು ತರುವನೆಂಬ ನಂಬಿಕೆ. ಕೆಲವಡೆ ಊರ ಹೊರಗಿರುವ, ಬಿದ್ದಿರುವ ಹನುಮ ದೇವರಿಗೆ ಊರವರೆಲ್ಲ ಸೇರಿ ಒಟ್ಟಾಗಿ ಪೂಜಿಸಿ ಬರುತ್ತಾರೆ. ಮಳೆ ಬರದ ತಮ್ಮ ಕಷ್ಟ ಅರ್ಥ ವಾಗಲೆಂದು ಖಾರದ ಪುಡಿಯನ್ನು ಮೂರ್ತಿಗೆ ಸವರಿ ಬರುವ ರೂಢಿಯೂ ಉಂಟು. ಆವನ ಬೃಹದಾಕಾರದ ಮೆಟ್ಟುಗಳನ್ನು ಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆ ಮಾಡಿ ಶೃಂಗಾರಗೊಳಿಸುವುದುಂಟು. ಕೆಲವೊಮ್ಮೆ ಕತ್ತೆಗಳನ್ನು ಹಿಡಿದು ಮೆರವಣಿಗೆ ಮಾಡುವ, ದಬ್ಬ ತಪ್ಪಟೆ ಮುಂತಾದವುಗಳನ್ನು ಹಿಡಿದು ವಿಕೃತವಾಗಿ ಬಡಿಯುತ್ತ, ವಿಕೃತವಾಗಿ ಕೂಗುತ್ತ ಮಳೆಯನ್ನು ಕರೆಯುವ ರೂಢಿಯೂ ಇದೆ. ಪ್ರಕೃತಿ ಮುನಿಸಿ ಕೊಂಡಿದ್ದಾಳೆ, ಆದಕ್ಕಾಗಿ ಮಳೆ ಬರುತ್ತಿಲ್ಲ ಎಂದು ನಂಬಿ ಸುಳ್ಳುಕಾಟನ ದೇವರು ಮಾಡುವ, ಹೆಡಿಗೆ ಜಾತ್ರೆ ಮಾಡುವ ನಂಬಿಕೆಗಳೂ ಇಲ್ಲದಿಲ್ಲ. ಊರ ಹೊರಗಿನ

ಮರವೊಂದನ್ನೇ ಕಾಡುದೇವರು ಎಂದು ಸಾಂಕೇತಿಸಿ, ಕುರಿಯೊಂದನ್ನು ಬಲಿಗೊಟ್ಟು, ಅಲ್ಲೇ ಬೆಂಕಿ ಹಚ್ಚಿ ಕುರಿಯನ್ನು ಬೇಯಿಸಿ, ಅದನ್ನೇ ಕೂಗಿ ಅಬ್ಬರಿಸಿ ಹರಿದು ಹಂಚಿ ತಿಂದು ಬರುತ್ತಾರೆ. ಮನೆಯಿಂದಲೇ ಅಡಿಗೆ ಮಾಡಿಕೊಂಡು ಹೋಗಿ ಎಂಟು ದಿಕ್ಕುಗಳಿಗೂ ನೈವೇದ್ಯ ನೀಡಿ ಊಟ ಮಾಡಿ ಬರುವುದೇ ಹಡಿಗೆ ಜಾತ್ರೆ. ನಿಗದಿಯಾಗಿ ನಡೆಯುವ ಸಂತೆಯ ಜಾಗವನ್ನು ಬಿಟ್ಟು ದೇವಸ್ಥಾನದ ಮುಂದೆಯೇ ಸಂತೆ ನಡೆಸಿ ಲಗ್ಗೆಹಾಕಿ ಸತ್ಯಾಗ್ರಹ ಹೂಡಿ ದೇವರಿಗೆ ಮಳೆ ಬರಿಸುವಂತೆ ಕೇಳಿ ಕೊಳ್ಳುವ ರೂಢಿಯೂ ಇದೆ. ಕೆಲವೆಡೆ ಸಾಂಸ್ಕೃತಿಕ ಕಲೆಗಳ ಪ್ರದರ್ಶನ ಏರ್ಪಡಿ ಸುತ್ತಾರೆ. ಯಕ್ಷಗಾನ ಪ್ರದರ್ಶನ ನಡೆಸುತ್ತಾರೆ, ಕಿನ್ನರಿ ಜೋಗಿಗಳಿಂದ ಕತೆ ಹೇಳಿಸುತ್ತಾರೆ. ಅವರು ತಿಳಿ ಹೇಳುವ ಪುಣ್ಯ ಕತೆಗಳನ್ನು ಕೇಳಿದ ನೋಡಿದ ನಂತರ ಮಳೆ ಬರುತ್ತದೆ. ಅನೀತಿಯುತ ಕೆಲಸಗಳಿಂದ ಅಥವಾ ಮಾಟಮಂತ್ರದ ವ್ಯಕ್ತಿ ಗಳಿಂದ ಮಳೆ ನಿಂತಿರಬಹುದೆಂದು ಭಾವಿಸಲಾಗುತ್ತದೆ. ಯಾರಾದರೂ ತೊನ್ನು ಇದ್ದ ವ್ಯಕ್ತಿ ಸತ್ತು ಆತನನ್ನು ಹೂಳಿದ್ದರೆ ಅದು ಮಾಡಬಾರದ ಕೆಲಸ. ಆತನನ್ನು ಗೆದ್ದಲು ಹುಳುಗಳೂ ಮುಟ್ಟುವುದಿಲ್ಲವಂತೆ. ಆ ಹೆಣವನ್ನು ತೆಗೆದು ಸುಟ್ಟರೆ ಕೂಡಲೇ ಮಳೆ ಬರುವುದಂತೆ. ಇದು ಸುಡುಗಾಡು ಗುಡ್ಡೆ ಸೋಸುವ ಆಚರಣೆ. ಸತ್ತ ಮಾಂತ್ರಿಕ ವ್ಯಕ್ತಿ ತನ್ನ ಸಮಾಧಿಯೊಳಗಿಂದಲೇ ಮಳೆ ಬರದಂತೆ ಮಾಡುವ ಶಕ್ತಿ ಹೊಂದಿದ್ದಾನಂತೆ. ಅಂತಹ ಸಂದರ್ಭಗಳಲ್ಲಿ ಅವನ ಸಮಾಧಿಯ ಮೇಲಿರುವ ಕಲ್ಲನ್ನೊ, ತ್ರಿಶೂಲವನ್ನೊ ಸಾಮೂಹಿಕವಾಗಿ ಪೂಜಿಸಿದರೆ ಅವನ 'ಕಟ್ಟು' ಸಡಿಲಿ ಮಳೆ ಬರುವುದಂತೆ. ಇದು ಬರಗಲ್ಲು ಪೂಜೆ.

ಮಳೆಗೆ ಸಂಬಂಧಿಸಿದ ವ್ಯಾಪಕ ಆಚರಣೆಯೆಂದರೆ 'ಜೋಕುಮಾರ' ಮತ್ತು 'ಮಳೆಮಲ್ಲಪ್ಪ'. ಮಳೆ ಬರಲಿ ಬರದಿರಲಿ ಜೋಕುಮಾರನ ಆಚರಣೆ ನಡೆದೇ ನಡೆ ಯುತ್ತದೆ. ಅವನು ಫಲೋತ್ಪತ್ತಿ ದೇವತೆ. ಹುಟ್ಟದ ಏಳೇ ದಿವಸಕ್ಕೆ ಅಮಾನುಷ ಕೆಲಸಗಳನ್ನು ಮಾಡಿ ನಿಧನನಾದವನು. ಅವನ ಆಕೃತಿಯೊಂದನ್ನು ಮಾಡಿಕೊಂಡು ಬೇವಿನ ಸೊಪ್ಪಿನ ಜೊತೆಗೆ ಬುಟ್ಟಿಯಲ್ಲಿಟ್ಟುಕೊಂಡು ಬೆಸ್ತರ ಹೆಣ್ಣು ಮಕ್ಕಳು ಕೇರಿ ಕೇರಿ ಮತ್ತು ಊರು ಊರುಗಳನ್ನು ಸುತ್ತುತ್ತಾರೆ ಮತ್ತು ಅವನ ಸಾಹಸಗಳನ್ನು ಹಾಡಿ ಹೊಗಳುತ್ತಾರೆ.

> ಅಡ್ಡಡ್ಡ ಮಳೆ ಬಂದು ದೊಡ್ಡ ದೊಡ್ಡ ಕೆರೆ ತುಂಬಿ
> ಗೊಡ್ಡಗಳೆಲ್ಲ ಹಯನಾಗಿ | ಗೌಡರ
> ಸೆಡ್ಡೆಯ ಮೇಲೆ ಸಿರಿ ಬರಲಿ.

ಎಂಬ ಆಶಯ ಜೋಕುಮಾರನ ಆಚರಣೆಯದು. ಪ್ರತಿವರ್ಷ ಗೌರಿ ಹಬ್ಬದ ನಂತರ ಈ ಆಚರಣೆ ನಡೆಯುತ್ತದೆ. ಮಳೆ ಬರದೇ ಇದ್ದಾಗ ಮಾತ್ರ ನಡೆಸು

ವಂತಹದು 'ಮಳೆ ಮಲ್ಲಪ್ಪ'. ಸಣ್ಣ ಹುಡುಗನೊಬ್ಬ ಬೆತ್ತಲೆಯಾಗಿ ತಲೆಯ ಮೇಲೊಂದು ಸಗಣಿಯ ಬೆನಕನನ್ನು ಹೊತ್ತು ಮನೆ ಮನೆಗೆ ಹೋಗುತ್ತಾನೆ. ಅವನ ಹಿಂದೆ ಹೆಣ್ಣು ಮಕ್ಕಳ ಗುಂಪೊಂದು ಹಾಡುತ್ತ ಹೋಗುತ್ತದೆ :

ಹುಯ್ಯೋ ಹುಯ್ಯೋ ಮಳೆರಾಯೊ ಮಳೆರಾಯೊ
ಮಳೆರಾಯನ ಹೇಣ್ತಿ ಮಕ್ಕಳ ತಾಯಿ
ಒಕ್ಕಳ ಜ್ವಾಳ ಒಬ್ಬಳೆ ತಿಂದಳು
ಹುಯ್ಯೋ ಹುಯ್ಯೋ ಮಳೆರಾಯೊ ಮಳೆರಾಯೊ
ಹೂವಿನ ತ್ವಾಟಕೆ ನೀರಿಲ್ಲೊ
ಬಾರೊ ಬಾರೊ ಮಳೆರಾಯ
ಬಾಳೆ ತ್ವಾಟಕೆ ನೀರಿಲ್ಲ
ಕುರಿಯೋರು ಮರಿಯೋರು ಕೊಳ್ಳೆ ಹೊಗುತಾರೆ
ಹುಯ್ಯೋ ಹುಯ್ಯೋ ಮಳೆರಾಯೊ
ಕೈಲಾಗದೊರೆಲ್ಲ ಕಾಲೆಳಕಂಡು ಹೊಗುತಾರೆ
ಹುಯ್ಯೋ ಹುಯ್ಯೋ ಮಳೆರಾಯೊ

ಪ್ರತಿ ಮನೆಯವರು ಉಪ್ಪು, ಕಾರ, ಮೆಣಸಿನಕಾಯಿ, ದವಸ, ಧಾನ್ಯ ನೀಡುತ್ತಾರೆ. ಏಳು ದಿವಸಗಳ ನಂತರ ಕೆರೆಯ ಹತ್ತಿರ ಮಳೆಮಲ್ಲಪ್ಪನ ಕೊನೆಯ ಪೂಜೆ ನಡೆದು ಪರ್ವ ನಡೆಯುತ್ತದೆ.

ಬೇಕಾದಾಗ ಮಳೆ ಬರಿಸುವ, ಬೇಡವಾದಾಗ ಮಳೆ ಕಳಿಸುವ ಕಾರಣಿಕ ಪುರುಷರು ಹಿಂದೆ ಇದ್ದರಂತೆ. ಅವರು ತಮ್ಮ ಹೆಗಲ ಮೇಲಣ ಕಂಬಳಿಗಳನ್ನು ಕೊಡವುವುದರ ಮೂಲಕ ಈ ಕ್ರಿಯೆಯನ್ನು ನಿಯಂತ್ರಿಸುತ್ತಿದ್ದರಂತೆ. ಅಂತಹವರ ಗದ್ದುಗೆಗಳನ್ನು ಪೂಜಿಸಿ ಪರ್ವ ಏರ್ಪಡಿಸಿದರೆ ಊಟ ಮುಗಿಯುವುದರೊಳಗೆ ಮಳೆ ಬರುವುದೆಂದು ನಂಬಲಾಗುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಇಂತಹ ಕಾರಣಿಕ ಪುರುಷರ ಗದ್ದುಗೆಗಳು ಈಗಲೂ ಕಾಣಬರುತ್ತವೆ. ಕ್ರಿ.ಶ. ೧೮೦೧ರಲ್ಲಿ ಕರ್ನಾಟಕ ದಲ್ಲಿ ಪ್ರವಾಸ ಮಾಡಿರುವ ಫ್ರಾನ್ಸಿಸ್ ಬುಕನನ್‌ರವರು ಇಂತಹ ಮಂತ್ರಶಕ್ತಿಯ ಕಂಬಳಿಗಳನ್ನು ಕುರಿತು ಉಲ್ಲೇಖಿಸುತ್ತಾರೆ. ಅವುಗಳ ಬೆಲೆ ಸಾಧಾರಣ ಕಂಬಳಿಗಳಿಗಿಂತ ಹೆಚ್ಚಿತ್ತೆಂದು ಬರೆಯುತ್ತಾರೆ. ಮಂಡ್ಯ ಜಿಲ್ಲೆಯ ಸುತ್ತ ಮುತ್ತ ಕೊಂತಿ ಪೂಜೆ, ಹಾಸನ ಜಿಲ್ಲೆಯ ಸುತ್ತ ಮುತ್ತ ತಿಂಗಳು ಮಾವನ ಪೂಜೆ ಮಳೆ ಗಾಗಿಯೇ ನಡೆಯುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಹಾಲಕ್ಕಿ ಒಕ್ಕಲಿಗರ ಹೆಣ್ಣು ಮಕ್ಕಳು ಮಳೆಗಾಗಿ ಪ್ರಾರ್ಥಿಸುತ್ತ 'ತಾರಲೇ ಬಾರಲೇ' ಎಂದು ಆಹ್ವಾನಿಸುತ್ತ ಗುಂಪು ಗುಂಪಾಗಿ ನರ್ತಿಸುತ್ತಾರೆ. ರಾಯಚೂರು ಜಿಲ್ಲೆಯ ಸುತ್ತಮುತ್ತ ದೊಡ್ಡ

ದೊಡ್ಡ ಮಡಕೆಗಳಲ್ಲಿ ಹಾಲು ತುಂಬಿಕೊಂಡು ಭೂಮಿಗೆ ಹಾಲೆರೆಯುತ್ತಾರೆ. ಮಳೆ ಬರಲಿ ಎಂದು.

ಈ ಎಲ್ಲ ಆಚರಣೆಗಳ ಹಿಂದಿನ ಮನೋಭಾವ ನಮ್ಮನ್ನು ಅಚ್ಚರಿಗೆ ಒಡ್ಡುತ್ತದೆ. ಮಾನವ ಶಾಸ್ತ್ರದ ದೃಷ್ಟಿಯಿಂದ ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಬಹುದು. ಮಳೆಯು ರೈತನಿಗೆ ಬೇಕೇ ಬೇಕಾಗಿರುವುದರಿಂದ ಅದು ಬಾರದೇ ಇದ್ದಾಗ ಅದು ಬರುವಂತೆ ಮಾಡಲು ಶತಾಯ ಗತಾಯ ಪ್ರಯತ್ನಿಸುತ್ತಾನೆ. ದೇವರನ್ನು ಬೇಡಿ ಕೊಳ್ಳುತ್ತಾನೆ, ಭಜಿಸುತ್ತಾನೆ, ಬೆದರಿಕೆ ಹಾಕುತ್ತಾನೆ, ಮರೆತು ಹೋಗಿರುವ ದೇವರುಗಳ ಪೂಜೆ ಮಾಡುತ್ತಾನೆ, ಅಬ್ಬರಿಸಿಕೊಳ್ಳುತ್ತಾನೆ, ವಿಚಿತ್ರವಾಗಿ ವರ್ತಿಸು ತ್ತಾನೆ, ಕೆಟ್ಟು ಹೋಗಿರುವ ಕ್ರಿಯೆಗಳನ್ನು ಸರಿಪಡಿಸುತ್ತಾನೆ. ಮಾನವ ಶಾಸ್ತ್ರಜ್ಞರು "ಇಂತಹ ಆಚರಣೆಗಳು 'ಮಂತ್ರವಿದ್ಯೆ' ಎನಿಸಿಕೊಳ್ಳುತ್ತವೆ. ಪ್ರಾಚೀನ ಮಾನವನಿಗೆ ತನ್ನದೊಂದು ಕೆಲಸ ಸಾಧಿಸಿಕೊಳ್ಳಲು ಮಂತ್ರ ವಿದ್ಯೆಗೆ ತೊಡಗಬೇಕು, ಶರಣಾಗಬೇಕು ಎಂಬ ನಂಬಿಕೆಯಿತ್ತು. ಆ ವಿದ್ಯೆಯು ನಿರೀಕ್ಷಿತ ಫಲ ನೀಡುತ್ತದೆಂಬ ಭರವಸೆಯಿತ್ತು" ಎಂದು ಅಭಿಪ್ರಾಯ ಪಡುತ್ತಾರೆ. ಉದಾಹರಣೆಗೆ ಮಡಕೆಯೊಂದರಿಂದ ನೀರನ್ನು ಸುರಿಸುತ್ತ ಹೋದರೆ ಅದರ ಹಿಂದೆಯೇ ಮಳೆ ಬರುತ್ತದೆಂಬ ನಂಬಿಕೆ. ಒಂದು ಗ್ರಾಮದವರು ಮುದ್ದೆ ಮಾಡಿಕೊಂಡು ಗುಡ್ಡ ವೊಂದರ ತುದಿಗೆ ಹತ್ತಿ ಅವುಗಳನ್ನು ಮೇಲಿನಿಂದ ಉರುಳಿಬಿಡುತ್ತಾರೆ. ಮುದ್ದೆ ಯಂತಹ ದೊಡ್ಡ ದೊಡ್ಡ ಮಳೆ ಹನಿಗಳು ಬೀಳುತ್ತವೆಂದು ನಂಬುತ್ತಾರೆ. ಭಜನೆ, ಪೌರಾಣ, ಹೆಡಿಗೆ ಜಾತ್ರೆ, ಪರ್ವ, ಕಂತೆ ಭಿಕ್ಷ, ಹನುಮಪ್ಪನ ಪೂಜೆ, ಕರುಗಲ್ಲು ಪೂಜೆ ಮುಂತಾದುವುಗಳು ಮಳೆ ತರಿಸುವುದಕ್ಕಾಗಿ ದೇವರನ್ನು ಒಲಿಸಿಕೊಳ್ಳಲು ಮಾಡುವ ಆಚರಣೆಗಳು ನೀರು ತುಂಬಿದ ಚಂಬು ಹುಗಿಯುವುದು, ಎಲೆ ಮುಚ್ಚಿದ ಬೋರಲು ಚಂಬನ್ನು ಹಿಡಿದೊಯ್ಯುವುದು, ಮಳೆರಾಯನ ಆಟವಾಡುವ ಹುಡುಗನ ಮೇಲೆ ನೀರು ಹೊಯ್ಯುವುದು, ರುದ್ರಾಭಿಷೇಕ ಮಾಡಿ ದೇವರನ್ನು ನೀರಿನಲ್ಲಿ ಮುಳುಗು ಹಾಕುವ ಶಿಕ್ಷೆ ನೀಡುವುದು ಇವೆಲ್ಲ ಮಳೆ ಬರುವ ಅನುಕರಣೆ ಮಾಡಿದಂತಾಗುತ್ತದೆ. ಸಾದೃಶ್ಯ ನಿಯಮಗಳ ಮೇಲೆ ಮಾಡುವ ಇಂತಹ ಆಚರಣೆಗಳನ್ನು 'ಅನುಕರಣ ಮಂತ್ರವಿದ್ಯೆ' (Homoepathic or Imitative magic) ಎಂದು ಕರೆಯಲಾಗುತ್ತದೆ.

ನಾವು ಯಾವುದಕ್ಕೆ ಆಶಿಸುತ್ತಿದ್ದೇವೋ ಆ ಆಸೆಯನ್ನು ಪೂರ್ಣ ಮಾಡುವುದೇ ಅನುಕರಣ ಮಂತ್ರವಿದ್ಯೆ ಎನ್ನುತ್ತಾರೆ ಮಾನವ ಶಾಸ್ತ್ರಜ್ಞ ಲೂಯಿ. ನಿಶ್ಚಿತ ಆಸೆಯನ್ನು ಅದರ ಸಾದೃಶ್ಯಗಳ ಮೂಲಕ ಬಯಸಲಾಗುತ್ತದೆ. ಮಳೆ ಬೇಕು ಎನ್ನುವ ಆಸ್ಟ್ರೇಲಿಯನ್ನರು ಬಾಯಿ ತುಂಬ ನೀರು ತುಂಬಿಕೊಂಡು ವಿವಿಧ ದಿಕ್ಕುಗಳಿಗೆ ಉಗಿಯುತ್ತಾರೆ. ಆ ಉಗಿದ ನೀರು ಧರೆಗೆ ಬಿದ್ದಂತೆ ಮಳೆ ಬರುವ

ನಂಬಿಕೆ ಅವರದು. ಆದಿವಾಸಿ ಹೋಪಿಗಳು ಮೋಡಗಳು ಮತ್ತು ಮಳೆ ಬರುತ್ತಿರುವ ಚಿತ್ರ ಬರೆದು ಮಳೆ ಬರುತ್ತದೆ ಎಂದು ನಂಬುತ್ತಾರೆ. ಮೆಕ್ಸಿಕೊ ಮತ್ತು ಅರಿಜೊನಾದ ಪ್ರಾಚೀನರು ಮಳೆಯ ಮೋಡಗಳನ್ನು ಬಾತುಕೋಳಿಗಳನ್ನು ಓಡಿಸುವಂತೆ ಉಶ್ ಉಶ್ ಎಂದು ಓಡಿಸುತ್ತಾರೆ ಮತ್ತು ಮೋಡಗಳ ಜೊತೆಗೆ ಸಂಭಾಷಿಸುತ್ತಾರೆ. ಇವೆಲ್ಲವೂ ಮಳೆ ತರಿಸಲು ಮಾಡುವ ಅನುಕರಣ ಮಂತ್ರ ವಿದ್ಯೆಗಳು. ದೇವರಿಗೆ ರುದ್ರಾಭಿಷೇಕ ಮಾಡಿ ರಾತ್ರಿಯೆಲ್ಲ ನೀರಿನಲ್ಲಿ ಮುಳುಗುವಂತೆ ಮಾಡುವುದನ್ನು ಕೆಲವರು ದೇವರಿಗೆ ಗುಟುಕು ನೀರು ಕುಡಿಸುವುದು ಎನ್ನುತ್ತಾರೆ. ಈ ರುದ್ರಾಭಿಷೇಕ, ಕತ್ತೆಗಳನ್ನು ಶೃಂಗರಿಸಿ ಮೆರವಣಿಗೆ ಮಾಡುವುದು, ಹಸ್ತ ಚಿತ್ತ ಮಳೆಗಳು ಬರದೇ ಹೋದಾಗ ದಬ್ಬ ತಪ್ಪಟೆ ಬಡಿದು ಹೋ ಹೋ ಎಂದು ಕಿರಿಚುವುದು, ದೇವಸ್ಥಾನದ ಹತ್ತಿರ ಸಂತೆ ಹೂಡುವುದು, ಮುಂತಾದ ಆಚರಣೆಗಳು ದೇವರಿಗೆ ಪ್ರತಿಭಟನೆ ತೋರಿಸುವ ಮಂತ್ರ ವಿದ್ಯೆಗಳು. ಇಂತಹವು ಜಗತ್ತಿನಾದ್ಯಂತ ವಾಡಿಕೆಯಲ್ಲಿವೆ. ಫ್ರೇಜರ್‌ರವರು ಇಂತಹ ಆಚರಣೆಗಳನ್ನು ತಮ್ಮ 'ಗೋಲ್ಡನ್ ಬೋ' ಗ್ರಂಥದಲ್ಲಿ ಸಂಗ್ರಹಿಸಿದ್ದಾರೆ. ಚೀನಾದವರು ಮಳೆ ಬರದೇಯಿದ್ದಾಗ ಕಾಗದ ಅಥವಾ ಮರದಲ್ಲಿ ಡ್ರೇಗನ್ ಮಾಡಿ ಮಳೆದೇವರೆಂದು ಉತ್ಸವ ಮಾಡುತ್ತಾರೆ. ಉತ್ಸವದ ನಂತರ ದೇವರನ್ನು ಹೆದರಿಸಿ ಬೆದರಿಸಿ, ದೇವರಲ್ಲ ಎಂದು ಹೀನಾಯವಾಗಿ ಬೈದು ಆ ಮೂರ್ತಿಯನ್ನು ಚಿಂದಿ ಚಿಂದಿ ಮಾಡುತ್ತಾರೆ. ಕೆಲವರು ಲುಂಗ್‌ವಾಂಗ್ ದೇವಸ್ಥಾನಗಳ ಬಾಗಿಲು ಮುಚ್ಚಿಸಿ ಬೀಗಮುದ್ರೆ ಹಾಕುತ್ತಾರೆ. ತಮ್ಮ ಇಚ್ಛೆ ಪೂರೈಸುವವರೆಗೆ ದೇವರಿಗೆ ಯಾವುದೇ ಸೌಲಭ್ಯ ನೀಡುವುದಿಲ್ಲ. ಹೀಗೆ ದೇವರನ್ನು ಐದು ದಿವಸಗಳವರೆಗೆ ಉಪವಾಸ ಕೂಡಿಹಾಕುತ್ತಾರೆ. ಸಯಾಮಿಗಳು ತಮ್ಮ ದೇವಮೂರ್ತಿಗಳನ್ನು ಬಯಲಲ್ಲಿ ಉರಿವ ಸೂರ್ಯನ ಬಿಸಿಲಿಗೆ ಒಡ್ಡುತ್ತಾರೆ. ಬುದ್ಧನ ನಕಲಿ ಪ್ರತಿಮೆಯೊಂದನ್ನು ಮಾಡಿ, ಕೆಟ್ಟವಾದ್ಯಗಳನ್ನು ಕಿವಿಗಡಚಿಕ್ಕುವಂತೆ ಬಡಿದು, ಪಟಾಕಿಗಳನ್ನು ಹಾರಿಸಿ. ಭಾಜಾಭಜಂತ್ರಿ ಮಾಡಿ ಕೊನೆಗೆ ಆನೆಗಳಿಂದ ಪ್ರತಿಮೆಗಳನ್ನು ತುಳಿಸಿ ಹಾಕುತ್ತಾರೆ. ಆನಂತರ ಬುದ್ಧ ಮಳೆ ನೀಡುತ್ತಾನೆಂಬ ನಂಬಿಕೆ. ಈ ತೆರನಾದ ಪ್ರಾಚೀನ ಅನುಕರಣ ಮಂತ್ರ ವಿದ್ಯೆಯ ಪಳೆಯುಳಿಕೆಗಳು ಇಂದು ಉಳಿದುಕೊಂಡಿರುವ ಆಚರಣೆಗಳು.

ಮಳೆ ಬರದೇ ಇದ್ದಾಗ ನಡೆಸುವ ಆಚರಣೆಗಳಂತೆಯೇ, ಮಳೆ ಹೆಚ್ಚು ಬಂದಾಗ ಅದನ್ನು ನಿವಾರಿಸಲೂ ಕೆಲವು ಆಚರಣೆಗಳು ಕಾಣಸಿಗುತ್ತವೆ. ಮಲೆನಾಡೆಂದರೆ ಮಳೆಯ ಆಗರ. ಮಳೆಗಾಲ ಪ್ರಾರಂಭವಾಯಿತೆಂದರೆ ಸುಮಾರು ಮೂರು ನಾಲ್ಕು ತಿಂಗಳವರೆಗೆ ಸತತವಾಗಿ ಸುರಿಯುತ್ತಿರುತ್ತದೆ. ಆ ಮಳೆಯಲ್ಲಿಯೇ ವ್ಯವಸಾಯದ ಎಲ್ಲ ಕೆಲಸಗಳು ಎಡೆಬಿಡದೆ ನಡೆಯುತ್ತಿರಬೇಕು. ಮಕ್ಕಳಿಗಂತೂ ಆಟವಾಡಲು ಬಿಡದೆ ಮನೆಯನ್ನು ಸೆರೆಮನೆಯನ್ನಾಗಿ ಮಾಡಿಬಿಟ್ಟಿರುತ್ತವೆ. ಆಗ

ಮಕ್ಕಳು "ಮಳೆ ಮಳೆ ಮಲ್ಲಾಪುರಕ್ಕೆ ಹೋಗು, ಬಿಸಿಲು ಬಿಸಿಲು ನಮ್ಮೂರಿಗೆ ಬಾ" ಎಂದು ಶಿಶುಪ್ರಾಸವೊಂದನ್ನು ಹಾಡುತ್ತವೆ. ಬಯಲುನಾಡಿನಲ್ಲಿ ಮಳೆ ಜಾಸ್ತಿಯಾದರೆ ಇಬ್ಬರು ಗಂಡಸರಲ್ಲಿ ಒಬ್ಬರಿಗೆ ಸ್ತ್ರೀ ವೇಷ ಧರಿಸಿ ಗಂಡು ಹೆಣ್ಣು ಮಾಡಿ ಮೆರವಣಿಗೆ ಮಾಡುತ್ತಾರೆ. ಅಸಂಗತವಾದ ಇಂತಹ ಘಟನೆಯೊಂದನ್ನು ನೆರವೇರಿಸುವುದರಿಂದ ಮಳೆಯನ್ನು ನಿವಾರಿಸಲು ಪ್ರಯತ್ನಿಸುತ್ತಾರೆ.

**ಬೆಳೆ ಆಚರಣೆಗಳು**

ಮಳೆ ಕ್ರಮಬದ್ಧವಾಗಿ ಬಂತು ಎಂದಾಕ್ಷಣ ಬೆಳೆ ಕೈಗೆ ಬಂತು ಎಂದರ್ಥವಲ್ಲ. ಈ ಮಧ್ಯೆ ಹಲವು ಆತಂಕಗಳು, ವಿಘ್ನಗಳು ಎದುರಾಗುತ್ತವೆ. ಅವುಗಳನ್ನು ನಿವಾರಿಸಿಕೊಳ್ಳಲೆಂದೇ ಪೂಜೆ ಮಾಡಿ ಕೆಲಸ ಶುರು ಮಾಡುವುದು ಮತ್ತು ಹರಕೆ ಹಾಕಿಕೊಳ್ಳುವುದರಲ್ಲಿ ವ್ಯವಸಾಯಗಾರ ತೊಡಗಿರುತ್ತಾನೆ. ತಾನು ಮಾಡುವ ಕೆಲಸವನ್ನು ಮತ್ತು ಬಳಸುವ ಪರಿಕರಗಳನ್ನು ತುಂಬ ಗೌರವದಿಂದ, ಭಯ ಭಕ್ತಿಯಿಂದ ಕಾಣುತ್ತಾನೆ. ಬೇಸಾಯ ಹೂಡುವಾಗ ಎತ್ತುಗಳಿಗೆ ಮತ್ತು ನೊಗ ನೇಗಿಲುಗಳಿಗೆ ನಮಸ್ಕರಿಸಿ ಶುರುಮಾಡುತ್ತಾನೆ. ಗಾಡಿ ಹೂಡುವಾಗ, ಬಣವೆ ಹಾಕುವಾಗ, ಕಳೆ ಕೀಳುವಾಗ, ಕೊಯ್ಯುವಾಗ, ಬಡಿಯುವಾಗ, ಒಕ್ಕುವಾಗಲೆಲ್ಲ ಪೂಜೆಯಿಂದಲೇ ಕೆಲಸವನ್ನು ಶುರು ಮಾಡುವುದು. ತಿಪ್ಪೆಯ ಗೊಬ್ಬರ ಹೇರುವಾಗಲೂ "ತಿಪ್ಪೆಮ್ಮನ ಪೂಜೆ" ಮಾಡಿಯೇ ಮುಂದುವರಿಯುತ್ತಾನೆ. ಬಿತ್ತನೆಗೆ ಹೊರಟರಂತೂ ಅಂದು ಕೂರಿಗೆ ಪೂಜೆ ಸಂಭ್ರಮದ ಆಚರಣೆಯಾಗುತ್ತದೆ. ಕೂರಿಗೆಯನ್ನು ಕಟ್ಟೆಯ ಮೇಲೆ ಅಚ್ಚುಕಟ್ಟಾಗಿ ಜೋಡಿಸಿ ಅದಕ್ಕೆ ಸೀರೆ ಕುಬುಸ ತೊಡಿಸಿ, ರಂಗೋಲಿ ಹಾಕಿ, ಹೂವು ಹಾರ ಮಾವಿನ ಸೊಪ್ಪಿನ ಅಲಂಕಾರ ಮಾಡಿ, ಅಂದು ಬಿತ್ತುವ ಬೀಜಗಳ ಮೂರು ನಿಧಿ ಹಾಕಿ ತನ್ನ ಕೆಲಸವನ್ನು ಮುಂದುವರಿಸುತ್ತಾನೆ. ಅವನ ಎಲ್ಲ ಕೆಲಸ ಕಾರ್ಯಗಳಲ್ಲಿ "ಬೆನವನ ಪೂಜೆ"ಗೆ ಬಹಳ ಮಹತ್ವ ಇದೆ. ತನ್ನ ಕೆಲಸ ಕಾರ್ಯಗಳ ವಿಘ್ನನಿವಾರಕನಿಗೆ ಪ್ರಥಮ ಪ್ರಾಶಸ್ತ್ಯವನ್ನು ನೀಡುತ್ತಾನೆ. ಮನೆಯಲ್ಲಿ ಪೂಜೆ ನಡೆದರೆ ಸಗಣಿಯ ಉಂಡೆ, ಅದರ ತುದಿಗೆ ನಾಲ್ಕು ಕರಿಕೆ ದಳ ಬೆನವನನ್ನು ಸಿದ್ಧಮಾಡುತ್ತಾರೆ. ಆದರೆ ಹೊಲಗದ್ದೆ ತೋಟಗಳಲ್ಲಿ ಅಲ್ಲೇ ಸಿಗುವ ಮೂರು ಕಲ್ಲಿನ ತುಂಡುಗಳು ಆ ಕೆಲಸ ನಿರ್ವಹಿಸುತ್ತವೆ. ಮೂರು ಯಾಕೆಂದರೆ ಅವರು ತ್ರಿಮೂರ್ತಿಗಳು ಎಂದವರ ನಂಬಿಕೆ, ಮತ್ತೆ ಕೆಲವರ ಪ್ರಕಾರ ಉಪ್ಪು, ಹುಳಿ, ಕಾರದ ಪ್ರತೀಕವೂ ಹೌದು.

ಪೂಜೆಯನ್ನು ಅನುಸರಿಸಿಯೇ ಬರುವಂಥದ್ದು ಹರಕೆ. ಉದ್ದೇಶಿತ ಫಲ ಈಡೇರಲೆಂದು ರೈತ ತನ್ನ ಮನೆದೇವರಿಗೆ ಶಕ್ತ್ಯಾನುಸಾರ ಹರಕೆ ಹಾಕಿಕೊಳ್ಳುತ್ತಾನೆ. ದವಸ ಧಾನ್ಯಗಳಿಗೆ ದೆವ್ವ ಪೀಡೆಯ ಕಾಟ ಬರದಿರಲೆಂದು, ಕಳ್ಳಕಾಕರ

ಕಾಟವಿರದಿರಲೆಂದು, ರೋಗ ರುಜಿನಗಳು ಮುತ್ತದಿರಲೆಂದು ಹರಕೆ ಹಾಕಿಕೊಳ್ಳು ತ್ತಾನೆ. ಅಂತೆಯೇ ನಡೆದರೆ ತಪ್ಪದೆ ಹರಕೆ ತೀರಿಸುತ್ತಾನೆ. ಔಡಲಕ್ಕೆ ಕೊಂಡಲ ಹುಳ ಬಿದ್ದರೆ ಮನೆ ದೇವರಿಗೆ ಹರಳೆಣ್ಣೆ ತಂದು ಒಪ್ಪಿಸುವುದಾಗಿ ಹರಕೆ ಹಾಕಿ ಕೊಂಡು ದೇವರ ತೀರ್ಥ ತಂದು ಹಾಕುತ್ತಾನೆ. ಜೋಳಕ್ಕೆ ಜೋನಿ ಬೀಳದಿರಲೆಂದು, ವೀಳೆಯದೆಲೆಗೆ ಕರಿಸುಬ್ಬು ಬಿಳಿಸುಬ್ಬು ಬೀಳುವುದಾದರೆ ದೇವರಿಗೆ ಎಲೆಕದಲಿ ಕಟ್ಟಿಸುತ್ತೇನೆಂದು, ಬಾಳೆಗೆ ಕ್ಯಾನ್ಸರ್ ಬಾರದಿದ್ದರೆ ಬಾಳೆಕದಲಿ ಕಟ್ಟಿಸುತ್ತೇನೆಂದು, ತೆಂಗಿನಕಾಯಿಯ ಹರಳುದುರಿದರೆ 'ಸೂರೆ ಹಬ್ಬ' ಮಾಡುತ್ತೇನೆಂದು, ಹೊಗೆಸೊಪ್ಪಿಗೆ ತೊಂಡ್ಲೆ ಹುಳ ಬಿದ್ದರೆ ಬೆಳ್ಳಿಯ ಅಥವಾ ಬಂಗಾರದ ತೊಂಡ್ಲೆ ಮಾಡಿಸಿ ಕೊಡುತ್ತೇವೆಂದು ಹರಕೆ ಹಾಕಿಕೊಳ್ಳುತ್ತಾರೆ. ಪೈರು ಚನ್ನಾಗಿ ಬೆಳೆದರೆ ಕಣ್ಣಾಸರು ಆಗದಿರಲಿ ಎಂದು 'ಬೆರ್ಚು' ನಿಲ್ಲಿಸುತ್ತಾರೆ. ಬೆರ್ಚು, ಬೆಳ್ತಲೆ, ಚಂದಪ್ಪ, ಬೆಕ್ಕಿನ ಸೋರೆ ಗಡಿಗೆ, ಮಡಕೆ ಎಂದೆಲ್ಲ ಕರೆಸಿಕೊಳ್ಳುವ ಈ ಸುಣ್ಣ ಹಚ್ಚಿದ ಬೋರಲು ಮಡಕೆ ಪ್ರತಿ ಹೊಲಗದ್ದೆಗಳಲ್ಲೂ ಕಾಣಸಿಗುತ್ತದೆ. ಮೆಣಸು, ಅವರೆ, ಹಲಸಂದಿ, ಟೊಮೆಟೊ, ಸೌತೆ ಮುಂತಾದ ತಿನ್ನುವ ಪೈರುಗಳಲ್ಲಂತೂ ಇದು ಶಾಶ್ವತವಾಗಿ ನೆಲೆಸಿರುತ್ತದೆ. ಜೋಕುಮಾರ ಮನೆಗೆ ಬಂದು ಹೋದ ಸಂಜೆಯೇ ತೆಗೆದುಕೊಂಡ ಬೇವಿನ ಸೊಪ್ಪನ್ನು ಹೊಲಗಳಿಗೆ ಚರುಗ ಚಲ್ಲಿ ಬೆರ್ಚುಗಳನ್ನು ವಿಧಿವತ್ತಾಗಿ ನಿಲ್ಲಿಸುತ್ತಾರೆ. ಅಡಿಕೆ, ಬಾಳೆ, ತೆಂಗಿನ ತೋಟಗಳಲ್ಲಂತೂ ಆಳೆತ್ತರದ ಮನುಷ್ಯನ ಆಕಾರವೇ ಬೆರ್ಚು ಆಗಿ ಕಾರ್ಯನಿರ್ವಹಿಸುತ್ತದೆ. ಬೆರ್ಚು ನಿಲ್ಲಿಸುವ ಪದ್ಧತಿ ಬಹಳ ಹಿಂದಿನಿಂದಲೇ ಇರುವಂತೆ ಕಾಣುತ್ತದೆ. ಜನ್ನ ಕವಿ ತನ್ನ ಯಶೋಧರ ಚರಿತೆಯಲ್ಲಿ "ಪಾಪದ ಜೋಳದ ಬೆಳಸಿಂಗೆ ಬೆರ್ಚುಗಟ್ಟಿದ ತೆರದಿಂ" ಎಂದು ಪ್ರಯೋಗಿಸಿದ್ದಾನೆ. ಋಗ್ವೇದದ ಕಾಲದಲ್ಲೂ ಸಹ ಜೋಳದ ಜಮೀನಿನಿಂದ ಹಕ್ಕಿ ಗಳನ್ನು ದೂರವಿರಿಸಲು ಬೆದರುಗೊಂಬೆಗಳನ್ನು ನಿಲ್ಲಿಸಲಾಗುತ್ತಿತ್ತು.

ಬೆಳೆಗಳಿಗೆ ಅಂಟುವ ಪೀಡೆ ಪರಿಹಾರಾರ್ಥವಾಗಿ, ರೋಗ ನಿವಾರಣಾರ್ಥವಾಗಿ ಚರಗ ಚಲ್ಲುವ ಆಚರಣೆ ವ್ಯವಸಾಯಗಾರರಲ್ಲಿ ದಟ್ಟವಾಗಿ ನೆಲೆಯೂರಿದೆ. ಚರಗ ಎಂದಾಕ್ಷಣ ಸಾಮಾನ್ಯವಾಗಿ ಪ್ರಾಣಿಬಲಿಯ ನಂತರದ ರಕ್ತದ ಅನ್ನ ನೆನಪಿಗೆ ಬರುತ್ತದೆ. ಪ್ರಾಣಿಬಲಿಯ ಅಮ್ಮನ ಹಬ್ಬದ ಚರಗ ಇಡೀ ಊರಿನ ಹುಲುಸನ್ನು ಕಾಪಾಡುತ್ತದೆ. ಎಂದು ಭಾವಿಸುವುದಾದರೆ, ಪ್ರತಿ ರೈತ ತನ್ನ ಹೊಲಗದ್ದೆಗಳಿಗೆ ಚಲ್ಲುವ ಸಸ್ಯಾಹಾರಿ ಚರಗ ಅವನ ಬದುಕಿನ ಹುಲುಸನ್ನು ರಕ್ಷಿಸುತ್ತದೆ. ಚರಗದ ಕುಡಿಕೆಯೊಂದು ಮನೆಯಲ್ಲಿ ಸದಾ ಸಿದ್ಧವಾಗಿರುತ್ತದೆ. ಚನ್ನಾಗಿ ಬೆಳೆದ ಪೈರಿಗೆ ಅಮಾವಾಸ್ಯೆಗೊಮ್ಮೆ ಹುಣ್ಣಿಮೆಗೊಮ್ಮೆ ಮುದ್ದೆ, ಅನ್ನ ಇಂತಹ ಯಾವುದಾದರೂ ಅಡಿಗೆಯನ್ನು ನೀರಿಗೆ ತೆಳ್ಳಗೆ ಕಲಸಿಕೊಂಡು ಹೊಲದ ಸುತ್ತ ಚಲ್ಲುತ್ತಾರೆ. ಹಾಗೆ ಮಾಡುವುದರಿಂದ ಬೆಳೆಗಳಿಗೆ ಅಪಾಯಕಾರಿಯಾಗುವ ಹುಳುಹುಪ್ಪಟೆಗಳ ನಿವಾರಣೆ

ಮತ್ತು ಪೀಡೆ ಪರಿಹಾರ ಮಾಡಿದಂತೆ. ತೋಟ ತುಡಿಕೆಗಳಿಗಂತೂ ಚರಗ ಚಲ್ಲುವ ಕ್ರಿಯೆ ಕ್ರಮಬದ್ಧವಾಗಿ ನಡೆಯುತ್ತದೆ. ಆ ಕ್ರಿಯೆಗೆ ಇಬ್ಬರು ಬೇಕು. ಮುಂದಿನ ವ್ಯಕ್ತಿ ಒಂದು ಕೈಯಲ್ಲಿ ಬೆಂಡುಗೊಳ್ಳಿ ಮತ್ತೊಂದು ಕೈಯಲ್ಲಿ ಕುಡುಗೋಲು ಹಿಡಿದು ಹೊರಟರೆ, ಹಿಂದಿನವನು ಚರಗ ಚಲ್ಲುತ್ತ ಹೋಲಿಗ್ಯ ಹೋಲಿಗ್ಯ ಎಂದು ಉದ್ಗರಿಸುತ್ತಾನೆ. ಹೋಲಿಗ್ಯ ಎಂಬುದು ಮಂತ್ರಶಕ್ತಿಯಿರುವ ಪದವಿದ್ದಂತೆ. ಒಂದು ಸುತ್ತು ಚರಗ ಚಲ್ಲಿದ ಮೇಲೆ ಮುಂದಿದ್ದವನು ಕುಡುಗೋಲಿನಿಂದ ಬಾಳೆಯ ಗಿಡವೊಂದನ್ನು ಕಡಿದು ಹಾಕಿ ಬೆಂಡುಗೊಳ್ಳಿಯನ್ನು ಬಿಸಾಕುತ್ತಾನೆ. ಒಕ್ಕಲು ಮಾಡುವ ಸಂದರ್ಭದಲ್ಲಿ ಕಣದಲ್ಲಂತೂ ಚರಗದ ಕುಡಿಕೆ ಸದಾ ತುಂಬಿರುತ್ತದೆ. ಪ್ರತಿ ಹಂತದಲ್ಲೂ ಬೆಳಿಗ್ಗೆ ಸಂಜೆ ಚರಗ ಚಲ್ಲಿಯೇ ಕೆಲಸ ಆರಂಭವಾಗುವುದು. ಚರಗ ಚೆಲ್ಲುವ ಈ ಆಚರಣೆಯಿಂದ ಲೌಕಿಕ ಉಪಯೋಗವೂ ಇದೆ. ಚರಗದೊಳಗಿನ ಆಹಾರದ ಪದಾರ್ಥಗಳು ಬೆಳೆಗಳ ಮೇಲೆ ಬಿದ್ದಾಗ, ಆಹಾರದ ಚೂರನ್ನು ತಿನ್ನಲು ಬಂದು ಅಲ್ಲಿರುವ ಹುಳುಗಳನ್ನು ಹೆಕ್ಕಿ ತಿನ್ನಲು ಆರಂಭಿಸುತ್ತವೆ. ಹಾಗಾಗಿ ಚರಗ ಕೀಟ ನಿವಾರಣೆ ಮಾಡುವ ಸರಳ ವಿಧಾನವೂ ಆಗಿದೆ. ಔಡಲ ಗಿಡಗಳಿಗೆ, ಹೆಸರು ಗಿಡಗಳಿಗೆ ಹತ್ತಿದ ಹುಳುಗಳನ್ನು ಚರಗ ಹಾಕಿ ಪಕ್ಷಿಗಳನ್ನು ಆಕರ್ಷಿಸಿ ನಿವಾರಣೆ ಮಾಡಿಕೊಂಡ ಉದಾಹರಣೆಗಳೂ ಸಾಕಷ್ಟು ಸಿಗುತ್ತವೆ. ಮಲೆನಾಡಿನ ಪ್ರದೇಶ ಗಳಲ್ಲಿ ಚರಗ ಇಡುವಾಗ ಹೋಲಿಗ್ಯ ಎನ್ನದೆ ಹೀಗೆ ಹೇಳುತ್ತಾರೆ :

ಅಚ್ಚಂಬಲಿ ಅಳಿಯಂಬಲಿ
ಹಿತ್ತಲಾಗಳ ಥಾರಿ ಹೀರಿಕಾಯಿ
ಒಪ್ಪಿಕೊಳ್ಳೆ ಭೂಮಿ ತಾಯಿ, ಹೂಲಿ, ಹೂಲಿ.

ಚರಗ ದುಷ್ಟಶಕ್ತಿಗೆ ನೀಡುವ ಸಮ್ಮಾನ. ಇದೊಂದು ಪ್ರಾಚೀನವೂ ಹಾಗೂ ಪ್ರಪಂಚದಾದ್ಯಂತವೂ ಪ್ರಚಲಿತದಲ್ಲಿರುವ ಆಚರಣೆ. ಸುರಪಾಲನ ವೃಕ್ಷಾಯುರ್ವೇದ ಸಹ "ಜನರ ಕುದೃಷ್ಟಿ ಪರಿಹಾರಕ್ಕಾಗಿ ಬೇಯಿಸಿದ ಸಾಲಿ ಅಕ್ಕಿಯ ಗಂಜಿಯನ್ನು ಮೊಸರು ಮತ್ತು ಸೈಂಧವ ಉಪ್ಪಿನೊಡನೆ ಬೆರಸಿ ಮರಗಳ ತೋಪಿನಲ್ಲೆಲ್ಲ ಹಾಕ ಬೇಕು" (ಶ್ಲೋಕ ೭೭) ಎಂದು ವಿಧಿಸುತ್ತದೆ. ಪ್ರಪಂಚದ ಹಲವು ಆದಿವಾಸಿ ಜನಾಂಗಗಳು ಸಹ ಈ ಆಚರಣೆ ಉಳಿಸಿಕೊಂಡಿವೆ. ಸೆಂಟ್ರಲ್ ಬೋರ್ನಿಯೊದ ಕಾಯನ್ ಜನಾಂಗ ಬಿತ್ತುವಾಗ ಮತ್ತು ಕೊಯ್ಯುವಾಗ ತಿನ್ನಬಲ್ಲ ಗಿಡಮೂಲಿಕೆ ಗಳನ್ನು ಬೇಯಿಸಿ ಪೈರಿಗೆ ಸಿಂಪಡಿಸುತ್ತಾರೆ. ಸರ್ವಸಾಧಾರಣವಾಗಿರುವ ಚರಗ, ಡಾ. ಎಂ. ಚಿದಾನಂದಮೂರ್ತಿಯವರ ಅಭಿಪ್ರಾಯದಂತೆ, ಪ್ರಾಕ್ತನ ಮಾನವನ ಬಲಿಯ ಸಂಕೇತವಾಗಿ ಉಳಿದಿದೆ.

ನಾಟಿಯಾದ ಸಸಿಗಳು ಗಟ್ಟಿಯಾಗಿ ಚಿಗುರತೊಡಗಿದಾಗ ಮಲೆನಾಡಿನ ವ್ಯವಸಾಯಗಾರರು 'ಎರಕಲು ಗೂಟ'ದ ಆಚರಣೆಗೆ ತೊಡಗುತ್ತಾರೆ. ಮಳೆ

ಮಳೆ ಶುರುವಾಗುತ್ತದೆ ಎನ್ನುವಾಗ ಹಿಂದಿನ ಸಂಜೆಯೇ ಹಳ್ಳಗಳ ದಂಡೆಯಲ್ಲಿ ಬೆಳೆಯುವ ಮುಂಡುಗದ ತುಂಡುಗಳನ್ನು ಕಡಿದು ತಂದು ಗದ್ದೆಯ ಪ್ರತಿ ಹಾಳೆಯಲ್ಲೂ ಇಟ್ಟು ಬರುತ್ತಾರೆ. ರಾತ್ರಿಯ ಹೊತ್ತು ಒಬ್ಬ ಗಂಡಸು ಮೈಮೇಲೆ ನೂಲೆಳೆಯಿಲ್ಲದಂತೆ ಬೆತ್ತಲೆಯಾಗಿ ಹೋಗಿ ಆ ತುಂಡುಗಳನ್ನು ಪ್ರತಿ ಹಾಳೆಯಲ್ಲಿ ನೆಟ್ಟು ಬರುತ್ತಾನೆ. ಇತ್ತೀಚೆಗೆ ಬೆತ್ತಲೆ ಹೋಗುವ ಮನುಷ್ಯ ಕರಿ ಕಂಬಳಿ ಹೊದೆಯಬಹುದೆಂಬ ರಿಯಾಯಿತಿ ನೀಡಿದ್ದಾರೆ. ಹೀಗೆ ಎರಕಲು ಗೂಟ ನೆಡುವುದರಿಂದ ಭೂಮಿ ತನ್ನ ಫಲವಂತಿಕೆಯನ್ನು ಕಳೆದುಕೊಳ್ಳುವುದಿಲ್ಲವೆಂತಲೂ, ಪೈರಿಗೆ ಯಾವ ರೋಗ ರುಜಿನ ಹುಳು ಹುಪ್ಪಟೆಯ ಕಾಟವಿರುವುದಿಲ್ಲವೆಂತಲೂ, ಪ್ರಾಣಿಗಳಿಂದ ತೊಂದರೆ ಬರುವುದಿಲ್ಲವೆಂತಲೂ ನಂಬಲಾಗುವುದು. ಕೆಲವರು ಮುಂಡಗದ ತುಂಡಿನ ಬದಲು ಕವೆಕೋಲುಗಳನ್ನು ನೆಟ್ಟು ಅದರ ಮೇಲೆ ಬಿಳಿಕಲ್ಲಿಟ್ಟು 'ಕಣ್ಣಾಸರು' ಎಂದುಕೊಳ್ಳುತ್ತಾರೆ.

ಗದ್ದೆಯನ್ನು ಕೊಯ್ಲು ಮಾಡುವಾಗ ಪೈರನ್ನು ಸಂಪೂರ್ಣವಾಗಿ ಕಟಾವು ಮಾಡದಿರುವುದು ಒಂದು ವಿಶೇಷ. ಮಲೆನಾಡಿನ ಭಾಗಗಳಲ್ಲಿ ಕೊನೆಯಲ್ಲಿ ಐದು ಸಸಿಗಳನ್ನು ಉಳಿಸುತ್ತಾರೆ. ಕೊಯ್ಲು ಮಾಡಿದ ಹುಲ್ಲನ್ನು ಹೊರೆ ಮಾಡಿ ಬಣವೆಗೆ ಹೊತ್ತು ಸಾಗಿಸುತ್ತಾರೆ. ಐದು ಸಸಿಗಳ ಜಾಗದ ಹತ್ತಿರದ ಕೊನೆಯ ಹೊರೆಯನ್ನು ನಿಶ್ಚಿತ ಮನುಷ್ಯನೊಬ್ಬ ಹೊತ್ತು ಹೊರಡುತ್ತಾನೆ. ಆಗ ಅವನು ಯಾರು ಮಾತನಾಡಿಸಿದರೂ ಮಾತನಾಡದೆ ಬಣವೆಗೆ ಹಾಕಿ, ಮನೆಯ ಒಲೆಯಲ್ಲಿ ಕೊಳ್ಳಿಯೊಂದನ್ನು ತಂದು ಪ್ರಸ್ತುತ ಗದ್ದೆಗೆ ಹಣಿದು ಬರುತ್ತಾನೆ. ಇದಕ್ಕೆ 'ಕರಿಕೊಳ್ಳಿ ಹಾಕುವುದು' ಎನ್ನುತ್ತಾರೆ. ಇಷ್ಟು ದಿವಸ ಪೈರಿನಿಂದ ತುಂಬಿ ತುಳುಕಿದ ಗದ್ದೆ ಬೋಳಾಗಿರುವುದನ್ನು ಕಂಡು ಯಾರೂ ಕಣ್ಣು ಹಾಕಬಾರದೆಂದು ಈ ಆಚರಣೆ. ಬಯಲು ನಾಡಿನಲ್ಲಿ ಐದು ಸಸಿ ಉಳಿ[illegible]ವುದನ್ನೇ 'ಬೆಳೆಮುಂಬು' ಎಂದು ಕರೆಯುತ್ತಾರೆ. ಕೊನೆಯಲ್ಲಿನ ಸಸಿಗಳನ್ನು ತುದಿಗಂಟು ಹಾಕಿ ಕಟ್ಟಿ ಕುಡುಗೋಲು ಮಸಗಲ್ಲುಗಳನ್ನಿಟ್ಟು ಪೂಜಿಸಿ ಎಡೆ ಹಿಡಿದು ಊಟ ಮಾಡುತ್ತಾರೆ. 'ಬೆಳೆಮುಂಬು' ಆಚರಣೆಗೆ ದಾಸಯ್ಯ ಪೂಜಾರಿಗಳನ್ನೂ ಆಹ್ವಾನಿಸುವುದುಂಟು. ಆಗ ಪೂಜೆಯ ಜೊತೆಗೆ ಮಂತ್ರ ಹೇಳುವುದು, ಶಂಖ ಊದುವುದು, ಜಾಗಟೆ ಬಾರಿಸುವುದು ನಡೆಯುತ್ತದೆ. ಬೆಳೆ ಮುಂಬನ್ನೇ ಹೋಲುವಂತಹ ಹತ್ತಿದೇವರ ಆಚರಣೆ ಒಂದಿದೆ. ಮೊದಲ ಬಾರಿಗೆ ಹತ್ತಿ ಬಿಡಿಸುವಾಗ ಆಯ್ದ ಗಿಡವೊಂದಕ್ಕೆ ಪೂಜಿಸಿ ಬಿಡಿಸಿದ ಮೊದಲ ಹತ್ತಿಯನ್ನು ಏರಿಸುತ್ತಾರೆ. ನಂತರ ಪ್ರತಿ ಸಾರಿ ಹತ್ತಿ ಬಿಡಿಸಿದಾಗಲೂ ಆ ಗಿಡಕ್ಕೆ ಏರಿಸುತ್ತಾರೆ. ಕೊನೆಯ ತನಕ ಆ ಗಿಡ ಹಾಗೆಯೇ ಇರುತ್ತದೆ. ಎಲ್ಲ ಗಿಡಗಳನ್ನು ಕತ್ತರಿಸಿ ಹಾಕಿದರೂ ಹತ್ತಿದೇವರ ಗಿಡ ಮಾತ್ರ ಮುಂದಿನ ಉಳುಮೆಯಾಗುವ ತನಕ ಹಾಗೆಯೇ ಇರುತ್ತದೆ.

ಪ್ರಸ್ತುತ ಬೆಳೆಮುಂಬು ಮತ್ತು ಹತ್ತಿ ದೇವರ ಪೂಜೆ ಆಚರಣೆಯು ಪ್ರಾಕ್ತನ ಮಾನವನ ನಂಬಿಕೆಯ ಪಳೆಯುಳಿಕೆಯಂತೆ ಕಾಣುತ್ತದೆ. ಧಾನ್ಯಗಳಲ್ಲಿ ಬೆಳೆಗಳಲ್ಲಿ ಆತ್ಮವಿದೆ. ಅದನ್ನು ಪೂರ್ಣ ಕೊಯ್ದು ಹಾಕಿದರೆ ಪುನಃ ನಮಗೆ ಸಿಕ್ಕಲಾರದು ಎಂಬ ಮಂತ್ರಶಕ್ತಿಯ ಪರಿಣಾಮವೂ ಇದ್ದಂತೆ ತೋರುತ್ತದೆ. ಪ್ರಪಂಚದಾದ್ಯಂತ ಹರಡಿರುವ ಇಂತಹ ಅನೇಕ ಆಚರಣೆಗಳನ್ನು ಫ್ರೇಜರ್‌ರವರು ಗಮನಿಸಿ ವಿಶ್ಲೇಷಿಸಿದ್ದಾರೆ. "ಆದಿವಾಸಿಗಳ ಪ್ರಕಾರ ಒಂದು ಹೊಲದಲ್ಲಿ ಬೆಳೆ ಬೆಳೆದಿದ್ದರೆ ಹಾಗಾಗಲು ಅದರಲ್ಲಿ ಧಾನ್ಯಮಾತೃವಿನ ಆತ್ಮ ಇರುವುದೇ ಕಾರಣ. ಬೆಳೆಯನ್ನು. ಕೊಯ್ಯುವವರೆಗೆ ಮಾತ್ರ ಧಾನ್ಯಮಾತೃ ಹೊಲವನ್ನು ಬಿಟ್ಟು ಎಲ್ಲಿಯೂ ಹೋಗುವುದಿಲ್ಲ. ಆದರೆ ಬೆಳೆಯನ್ನು ಕೊಯ್ಯುತ್ತಾ ಬಂದಂತೆ ಸಾಯುವುದನ್ನು ತಪ್ಪಿಸಿಕೊಳ್ಳಲು ಒಂದರಿಂದ ಇನ್ನೊಂದು ಪೈರಿಗೆ ಓಡುತ್ತದೆ. ಆದರೆ ಹೊಲದಲ್ಲಿ ಎಲ್ಲ ಪೈರನ್ನೂ ಕೊಯ್ದು ಇನ್ನೊಂದು ಮಾತ್ರ ಉಳಿದಿದ್ದರೆ ಅದರಲ್ಲಿಯೇ ಧಾನ್ಯಮಾತೃ ಇರುವುದೆಂದು ಅವರ ನಂಬಿಕೆ. ಆದುದರಿಂದ ಧಾನ್ಯಮಾತೃ ಆ ಕೊನೆಯ ಪೈರಿನಲ್ಲಿ, ಕೊನೆಯ ಕಂತೆಯಲ್ಲಿ, ಕೊನೆಯ ಪೈರನ್ನು ಕೊಯ್ಯುವ ವ್ಯಕ್ತಿಯಲ್ಲಿ, ಕೊನೆಯ ಕಂತೆ ಕಟ್ಟುವ ವ್ಯಕ್ತಿಯಲ್ಲಿ ಇರಲು ಸಾಧ್ಯ. ಈ ಧಾನ್ಯಮಾತೃವನ್ನು ಹೊರಗೆ ಹೋಗದಂತೆ ಸಾಯಿಸಿದರೆ ಅದರ ಶಕ್ತಿ ಹೊಲದಲ್ಲಿಯೇ ಉಳಿದು ಮುಂದಿನ ವರ್ಷ ಬೆಳೆ ಬೆಳೆಯಲು ಸುಗಮವಾಗುತ್ತದೆ." ಈ ಮಾತುಗಳ ಆಧಾರದ ಮೇಲೆ ನಮ್ಮ ಬೆಳೆಮುಂಬು ಆ ಹೊಲದ ಧಾನ್ಯದ ಆತ್ಮವನ್ನು ತನ್ನಲ್ಲೇ ಉಳಿಸಿಕೊಂಡು ಮುಂದಿನ ಫಲಶಕ್ತಿಗೆ ಕಾರಣವಾಗುವ ಸಂಕೇತವಾಗಿದೆ. ಹತ್ತಿ ದೇವರ ಪೂಜೆ ಆಚರಣೆಯೂ ಇದನ್ನೇ ನೆನಪಿಸುತ್ತದೆ. ಪ್ರಾಯಶಃ ಬಲಿ ಕೊಡುವ ಪದ್ಧತಿ ಸುಧಾರಣೆ ಆಗಿ ಆಗಿ ಬೆಳೆ ಉಳಿಸುವ ಕ್ರಮಕ್ಕೆ ಬಂದು ನಿಂತಿದೆ.

**ಇತರೆ ಆಚರಣೆಗಳು**

ವ್ಯವಸಾಯಗಾರನ ಎಲ್ಲ ಹಬ್ಬಗಳೂ ವಿಸ್ತೃತ ರೂಪದ ಆಚರಣೆಗಳೇ ಆಗಿವೆ. ಕೃಷಿಯ ವೇಳಾಪಟ್ಟಿಗೆ ಅನುಗುಣವಾಗಿ ಅವು ಆಚರಣೆಯಾಗುತ್ತವೆ. ವರುಷದ ಮೊದಲ ಬೇಸಾಯವನ್ನು ಉಗಾದಿಯಿಂದ ಆರಂಭಿಸಿದರೆ, ಬೇಸಾಯಕ್ಕೆ ಬೇಕಾಗುವ ಎತ್ತುಗಳ ಪೂಜೆ ಬಸವನ ಹಬ್ಬದಂದು ನಡೆಯುತ್ತದೆ. ಬಿತ್ತನೆ ಬೀಜಗಳ ಭವಿಷ್ಯವನ್ನು ಕಾರಹಬ್ಬದಲ್ಲಿ ಕಂಡುಕೊಂಡರೆ, ಮಳೆಗಾಲದಲ್ಲಿ ಎಲ್ಲಿ ಬೇಕಲ್ಲಿ ಹರಿದಾಡುವ ಹಾವುಗಳ ಪೂಜೆ ಮತ್ತು ಬೆಳೆಯುತ್ತಿರುವ ಬೆಳೆಗಳ ಸಂಭ್ರಮವನ್ನು ನಾಗರ ಪಂಚಮಿಯಲ್ಲಿ ಅನುಭವಿಸುತ್ತಾರೆ. ಮಳೆ ತರುವ ಜೋಕುಮಾರ ಮತ್ತು ಆತನ ತಾಯಿ ಎಳೆಗೌರಿಯನ್ನು ಗೌರಿಹಬ್ಬದಲ್ಲಿ ಪೂಜಿಸಿದರೆ, ಹೊಡೆ ಹೊಡೆದ ಬೆಳೆಗಳ ವಿಜಯವನ್ನು ಮಾರ್ನೋಮಿಯಲ್ಲಿ ಕಂಡುಕೊಳ್ಳುತ್ತಾರೆ. ಕೊಯ್ಲು ಪ್ರಾರಂಭಿಸುವ ಸಂದರ್ಭದಲ್ಲಿ ಪುನಃ ಉಪಕರಣಗಳು, ದನ ಕರುಗಳು, ತಿಪ್ಪೆ ಮತ್ತು ಲಕ್ಕವ್ವನನ್ನು

ಹಟ್ಟಿ ಹಬ್ಬದಲ್ಲಿ ಪೂಜಿಸಿದರೆ, ದವಸ ಧಾನ್ಯಗಳು ಮನೆಗೆ ಬಂದ ಸಂದರ್ಭವನ್ನು ದೀಪ ಹಚ್ಚಿಡುವುದರ ಮೂಲಕ ಕಾರ್ತಿಕ ಆಚರಿಸುತ್ತಾರೆ. ಮಾಘ ಮಾಸದಲ್ಲಿ ಗಿಡ ಮರಗಳ ಎಲೆಗಳೆಲ್ಲ ಉದುರುತ್ತಿದ್ದರೆ ಅದು ಶೂನ್ಯ ಮಾಸ ಎಂದೂ, ಭೂಮಿ ತಾಯಿಗೆ ಪುನಃ ಫಲವಂತಿಕೆ ಬರಲೆಂದೂ ಚರಗದ ಜಾತ್ರೆ ಮಾಡಿ ಕೋಣ, ಆಡು, ಕುರಿ, ಕೋಳಿ ಮುಂತಾದ ಪ್ರಾಣಿಗಳ ಬಲಿ ಕೊಡುತ್ತಾರೆ. ಸಂಕ್ರಾಂತಿಯಂದು ದನಕರುಗಳಿಗೆ ರೋಗ ಬರುವ ಕಾಲವಾದುದರಿಂದ ಅವುಗಳಿಗೆ ಸ್ನಾನ ಮಾಡಿಸಿ ಬರೆ ಹಾಕುತ್ತಾರೆ, ಈಡು ಸುತ್ತಿಸುತ್ತಾರೆ. ಮುಂದಿನ ಹಂಗಾಮಿಗೆ ಬೇಕಾಗುವ ಬಿತ್ತನೆ ಬೀಜಗಳ ಆಯ್ಕೆಯನ್ನು ಕಾಳಮ್ಮನ ಹಬ್ಬದಲ್ಲಿ ಮಾಡಿಕೊಂಡು, ಬಿಡುವಿನ ಕಾಲದ ಶಿವರಾತ್ರಿಯಲ್ಲಿ ದೇವರ ಭಜನೆ ಮಾಡಿ ಪುರಾಣ ಶ್ರವಣದೊಂದಿಗೆ ಕೃತಕೃತ್ಯರಾಗುತ್ತಾರೆ.

ಸಾರ್ವತ್ರಿಕವಾಗಿ ಆಚರಿಸುವ ಇಂತಹ ಹಬ್ಬಗಳ ಜೊತೆಗೆ ಪ್ರಾದೇಶಿಕವಾದ ಮತ್ತು ಕೆಲವೊಮ್ಮೆ ಒಂದು ಊರಿಗೇ ಸೀಮಿತವಾಗುವಂತಹ ಹಬ್ಬಗಳೂ ಆಚರಿಸಲ್ಪಡುತ್ತವೆ. ಮಲೆನಾಡು ಪ್ರದೇಶದಲ್ಲಿ ದೀಪಾವಳಿಯ ನಂತರ ಹೊಸಕ್ಕಿ ಹಬ್ಬ ಮಾಡುತ್ತಾರೆ. ನೆಂಟರಿಷ್ಟರನ್ನು ಕರೆದು ಆ ವರ್ಷದ ಭತ್ತದಲ್ಲಿ ಪಾಯಸ ಮತ್ತು ರೊಟ್ಟಿ ಮಾಡಿ ಉಣಬಡಿಸುತ್ತಾರೆ. ಹೀಗೆ ಬಡಿಸಿದ ನಂತರವೇ ಆ ವರ್ಷದ ದವಸ ಧಾನ್ಯಗಳನ್ನು ಬಳಸಲು ಅವರಿಗೆ ಅಧಿಕೃತ ಹಕ್ಕು ಸಿಕ್ಕಂತೆ. ಬಯಲು ನಾಡಿನಲ್ಲೂ ಇದನ್ನು ಹಿಟ್ಟೇರುವ ಹಬ್ಬ ಎಂದು ಆಚರಿಸುತ್ತಾರೆ. ಎತ್ತು ದನಕರುಗಳ ವೃದ್ಧಿಗೆ ಸಂಬಂಧಿಸಿದಂತೆ ಗೋಲವ್ವನ ಹಬ್ಬ ಆಚರಣೆಯಾಗುತ್ತದೆ. ಮನೆಯಲ್ಲೇ ಹುಟ್ಟಿದ ಎತ್ತುಗಳಿಗೆ ವಿಶೇಷ ಸಮ್ಮಾನ. ಅವು ಸತ್ತರೆ ಅವುಗಳಿಗೆ ವಿಶೇಷ ಸಮಾಧಿ ಮಾಡಿ 'ಎತ್ತುಗಟ್ಟಿ' ಎಂದು ಕರೆದು ಹಬ್ಬ ಹರಿದಿನಗಳಲ್ಲಿ ತಪ್ಪದೇ ಪೂಜಿಸುತ್ತಾರೆ. ಹೀಗೆ ವ್ಯವಸಾಯಗಾರನ ಬದುಕನ್ನು ಆಮೂಲಾಗ್ರ ವಾಗಿ ಆಕ್ರಮಿಸಿರುವ ಆಚರಣೆಗಳು ಅವನ ಜೀವನದ ಅವಿಭಾಜ್ಯ ಅಂಗಗಳಾಗಿವೆ.

**ಗ್ರಂಥ ಋಣ**


೧. ಜಾನಪದ ಸ್ವರೂಪ–ಡಾ. ಹಾ.ಮಾ ನಾಯಕ್, ೧೯೭೧

೨. ಜಾನಪದ, ಒಂದು ಅಧ್ಯಯನ–ಡಾ. ಜೀ.ಶಂ. ಪರಮಶಿವಯ್ಯ, ೧೯೮೧

೩. ಜಾನಪದ, ಕೆಲವು ಮುಖಗಳು–ಡಾ. ಜೀ.ಶಂ. ಪರಮಶಿವಯ್ಯ, ೧೯೭೪

೪. ಪ್ರಾಚೀನ ಭಾರತದಲ್ಲಿ ಬೇಸಾಯ–(ಅನು) ಸಿ.ಕೆ.ಕುಮುದಿನಿ, ೧೯೮೭

೫. ವಿಶಿಷ್ಟ ಜಾನಪದ-(ಸಂ.) ಡಾ. ಎಚ್.ಜೆ. ಲಕ್ಕಪ್ಪಗೌಡ, ೧೯೮೪
೬. ಗ್ರಾಮೀಣ-ಡಾ. ಎಂ. ಚಿದಾನಂದಮೂರ್ತಿ, ೧೯೭೭
೭. ಅನ್ವಯಿಕ ಜಾನಪದ-ಡಾ. ಬಿ.ಎ. ವಿವೇಕ ರೈ, ೧೯೮೫
೮. ಜಾನಪದದ ಮೂಲಭೂತ ತತ್ವಗಳು-ಡಾ. ದೇವೇಂದ್ರಕುಮಾರ ಹಕಾರಿ, ೧೯೮೩
೯. ಜಾನಪದ ವೀಕ್ಷಣೆ-ಡಾ. ಅಂಬಳಿಕೆ ಹಿರಿಯಣ್ಣ, ೧೯೮೭
೧೦. ಕೆಲವು ಜನಪದ ಸಂಪ್ರದಾಯಗಳು-ತ.ಬಿ. ಚಲುವೇಗೌಡ, ೧೯೭೮
೧೧. ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ (ಅಪ್ರಕಟಿತ ಪ್ರೌಢ ಪ್ರಬಂಧ)-ಡಾ. ಎಂ.ಜಿ. ಈಶ್ವರಪ್ಪ, ೧೯೮೯
12. Frazer J.G.-Golden Bough, 1955
13. Beals and Hoijer-An Introduction to Anthropology, 1971
14. Lowie R.H.-Introduction to Cultural Anthropology, 1934
15. Francis Buchnan-A Journey 1807,

ಎಂ.ಎಸ್. ಪ್ರಭಾಕರ್

# ವಾಸ್ತು ಗ್ರಂಥಗಳು ಕಂಡಂತೆ ಕರ್ನಾಟಕದ ಔತ್ತರೇಯ ದ್ರಾವಿಡ ಶೈಲಿ

ದೇವಾಲಯ ವಾಸ್ತುವಿನ ಶೈಲಿ, ಸಂಪ್ರದಾಯಗಳನ್ನು ಗುರುತಿಸುವಲ್ಲಿ ಕರ್ನಾಟಕದ ಶಾಸನಗಳು ಹೆಚ್ಚು ಸಹಕಾರಿಯಾಗಿದ್ದು, ದೇವಾಲಯಗಳ ವರ್ಗೀಕರಣವೂ ನಿಶ್ಚಿತ ರೂಪ ಪಡೆಯುವಲ್ಲಿ ಯಶಸ್ವಿಯಾಗಿದೆ. ಔತ್ತರೇಯ ದ್ರಾವಿಡ ಶೈಲಿಯ ತವರು ಎನಿಸಿದ ಕರ್ನಾಟಕದಲ್ಲಿ ಈ ಶೈಲಿಯನ್ನು ಪ್ರತ್ಯೇಕವಾಗಿ ವಿವರಿಸುವ ವಾಸ್ತುಗ್ರಂಥಗಳು ಈವರೆಗೆ ಉಪ-ಲಬ್ಧವಿಲ್ಲ. ದೊಡ್ಡಗೆದ್ದವಳ್ಳಿ ಶಾಸನೋಲ್ಲೇಖವು ಔತ್ತರೇಯ ಗ್ರಂಥಗಳಿಗೆ ಸಂಬಂಧಿಸಿದ್ದು ಈ ನಾಡಿನಲ್ಲಿ ಔತ್ತರೇಯ ಗ್ರಂಥಗಳ ವ್ಯಾಪಕ ಪರಿಚಯವಿತ್ತು ಎಂದು ಗುರುತಿಸಲು ಸಾಧ್ಯವಾಗಿದೆ.

ಕ್ರಿ.ಶ. ೧೧೧೬ರ ಕೃಷ್ಣರಾಜಪೇಟೆ ತಾ|| ಮಾಳಗುಂದದ ಶಾಸನವು[1] ಮನು, ಮಯ, ವಿಶ್ವಕರ್ಮರ ಹೆಸರುಗಳೊಂದಿಗೆ ತೋಟಕಾಚಾರ್ಯನನ್ನು ಹೆಸರಿಸಿದೆ. ಮನು, ಮಯ, ವಿಶ್ವಕರ್ಮಾದಿಗಳು ಪೌರಾಣಿಕ ವ್ಯಕ್ತಿಗಳೆನಿಸಿದರೂ, ತೋಟಕಾಚಾರ್ಯನು ಹನ್ನೆರಡನೆ ಶತಮಾನದ ವಾಸ್ತು ಗ್ರಂಥಕರ್ತೃವಾಗಿರಲು ಸಾಧ್ಯವಿದೆ.

ಕ್ರಿ.ಶ. ೧೦೯೯ರ ಬಳ್ಳಾರಿ ಜಿಲ್ಲೆಯ ಕುರುವತ್ತಿಯ

---

1. ಬಿ.ಎಲ್. ರೈಸ್ (ಸಂ), ಎಪಿಗ್ರಾಫಿಯಾ ಕರ್ನಾಟಿಕಾ, ಸಂಪುಟ : 4, ಸಂಚಿಕೆ: 2, 1898, ಮೈಸೂರು ಜಿಲ್ಲೆ, ಕೃಷ್ಣರಾಜಪೇಟೆ-62, ಪು : 312

ಶಾಸನವು[2] ಗುಣಪಾರ್ಯನೆಂಬ ವಾಸ್ತುಶಾಸ್ತ್ರಕಾರನನ್ನು ಹೆಸರಿಸಿದೆ. ಕುರುವತ್ತಿಯ ದೇವಾಲಯವು ಔತ್ತರೇಯ ಸಂಪ್ರದಾಯಕ್ಕೆ ಸೇರಿದ್ದು ಗುಣಪಾರ್ಯನೂ ಈ ಸಂಪ್ರದಾಯದವನೆನ್ನಬಹುದು. ಕ್ರಿ.ಶ. ಹನ್ನೆರಡನೇ ಶತಮಾನದ ಶಿವಮೊಗ್ಗ ಜಿಲ್ಲೆಯ ಕುಬಟೂರು ಶಾಸನವು[3] ಔತ್ತರೇಯ ಸಂಪ್ರದಾಯದ ದ್ರಾವಿಡ, ಭೂಮಿಜ, (ಪಿರಿದುಂ) ನಾಗರ ಶೈಲಿಗಳನ್ನು ಗುರುತಿಸಿದೆ. ಕ್ರಿ.ಶ. ೧೧೨೯ರ ಮೂಡಗೆರೆ ತಾಲ್ಲೂಕು ಹಂತೂರು ಶಾಸನವು[4] "ನಾಗರಾದಿ ನಾಗರಿಕ ದ್ರಾವಿಡ ಸಮುದ್ಧರಣನಪ್ಪ ಮಾಣಿಯೋಜನ ಮಗ ಬಿರುದ ರೂವಾರಿ ವೇಶ್ಯಾಭುಜಂಗ ಬಲಕೋಜ" ಎಂದು ಉಲ್ಲೇಖಿಸಿದೆ. ಮಣಿಯೋಜನು ಶಿಲ್ಪ ಪಂಥವೊಂದರ ಪ್ರತಿಷ್ಠಾಪಕ ಅಥವಾ ಪರಿಷ್ಕರ್ತ ಎಂದು ವಿದ್ವಾಂಸರು ಊಹಿಸಿದ್ದಾರೆ.

ಶಾಸನವು ಗುರುತಿಸುವ "ನಾಗರಿಕ ದ್ರಾವಿಳ"ವು ಇಂದು ಗುರುತಿಸಲ್ಪಟ್ಟಿರುವ "ಔತ್ತರೇಯ ದ್ರಾವಿಡ" ಶೈಲಿಯಾಗಿರುವ ಸಾಧ್ಯತೆಗಳು ಹೆಚ್ಚು ಎನಿಸಿದೆ. ಔತ್ತರೇಯ ದ್ರಾವಿಡ ಶೈಲಿಯ ಕುರುಹು ದೊರೆತದ್ದು ದೊಡ್ಡಗದ್ದವಳ್ಳಿ ಶಾಸನದಿಂದ. ಅಸ್ಪಷ್ಟವಾಗಿ ಸಿಕ್ಕ ಸುಳಿವಿಗೆ ಚಾಲನೆ ದೊರೆತು ಸಮರಾಂಗಣ ಸೂತ್ರಧಾರ ಹಾಗೂ ಅಪರಾಜಿತ ಪೃಚ್ಛಾ ಗ್ರಂಥಗಳ ವಿವರಗಳು ಪುಷ್ಟಿ ನೀಡಿದ್ದು ಈ ಶೈಲಿಯ ವಿಸ್ತಾರವಾದ ಅಧ್ಯಯನಕ್ಕೆ ನಾಂದಿಯಾಯಿತು.

ಈ ಗ್ರಂಥಗಳಲ್ಲಿ ದ್ರಾವಿಡ ಶೈಲಿಯನ್ನು ವಿವರಿಸುವ ಭಾಗಗಳ ಪ್ರತ್ಯೇಕ ಅಧ್ಯಾಯಗಳೂ ಇವೆ. ಈ ವಿವರಗಳಿಂದ ಔತ್ತರೇಯ ದ್ರಾವಿಡ ಶೈಲಿಯ ಅಧ್ಯಯನ ಮುಂದುವರೆಯಬೇಕಾಗಿದೆ. ಈ ವಿವರಗಳನ್ನು ಸಂಪೂರ್ಣವಾಗಿ ಅರ್ಥೈಸಲು ಸಾಧ್ಯವಾಗಿಲ್ಲ. ಆದರೂ ಖಚಿತವಾಗಿ ಅರ್ಥೈಸಲು ಸಾಧ್ಯವಿರುವ ವಿವರಗಳಿಂದ ಒಂದು ಸಮಗ್ರ ರೂಪವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿದೆ. ಈ ಶೈಲಿಯ ಜಂಘಾ ಹಾಗೂ ಶಿಖರ ಭಾಗದ ರಚನೆಯಲ್ಲಿ ದಾಕ್ಷಿಣಾತ್ಯ ಸಂಪ್ರದಾಯದಿಂದ ಎರವಲು ಪಡೆದ ಹಲವು ಲಕ್ಷಣಗಳನ್ನು ಗುರುತಿಸಬಹುದು. ಈ ವಿವರಗಳಿಗೆ ದಾಕ್ಷಿಣಾತ್ಯ ಗ್ರಂಥಗಳ ಮೂಲ ವಿವರಣೆಯೂ ಅತ್ಯಗತ್ಯ. ಕೆಲವು ಅಲಂಕಾರಿಕ ರಚನೆಗಳು ದಾಕ್ಷಿಣಾತ್ಯ ದೇವಾಲಯಗಳಿಗಿಂತ ಹೆಚ್ಚು ಸ್ಪಷ್ಟವಾಗಿ ಔತ್ತರೇಯ ದ್ರಾವಿಡ

---

2. ಎ. ಎಂ. ಅಣ್ಣಿಗೇರಿ ಮತ್ತು ವೇಂಕಟಂಡಿ ಮಲ್ಲಾರಿ (ಸಂ), ಶಾಸನ ಸಾಹಿತ್ಯ ಸಂಚಯ, ಧಾರವಾಡ, 1961, ಪು : 76
3. ಬಿ.ಎಲ್. ರೈಸ್ (ಸಂ), ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ : 8, ಸಂಚಿಕೆ–2, ಶಿವಮೊಗ್ಗ ಜಿಲ್ಲೆ, ಸೊರಬ : 275, ಪು : 122
4. ಬಿ.ಎಲ್. ರೈಸ್ (ಸಂ) ಎಪಿಗ್ರಾಫಿಯಾ ಕರ್ನಾಟಿಕಾ, ಸಂಪುಟ : 6, 1901 ಕಡೂರು ಜಿಲ್ಲೆ, ಮೂಡಗೆರೆ : 22 ಪು : 248

ಶೈಲಿಯಲ್ಲಿ ಮೂಡಿರುವುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ 'ಔತ್ತರೇಯ ದ್ರಾವಿಡ'ವೆಂಬ ಶೈಲಿಯ ಹೆಸರು ಹೆಚ್ಚು ಔಚಿತ್ಯಪೂರ್ಣವಾದುದು. ಈ ದಿಸೆಯಲ್ಲಿ ನೆರವಾಗುವ ಗ್ರಾಂಥಿಕ ವಿವರಗಳನ್ನು ಗ್ರಹಿಸಿ, ಸಂಗ್ರಹಿಸಿ, ವ್ಯವಸ್ಥಿತವಾಗಿ ಗುರುತಿಸಿದಲ್ಲಿ ಔತ್ತರೇಯ ದ್ರಾವಿಡ ಶೈಲಿಯ ಅಧ್ಯಯನಕ್ಕೆ ನಾಂದಿಯೆನಿಸಬಹುದು.

ಕರ್ನಾಟಕದಲ್ಲಿ ಔತ್ತರೇಯ ದೇವಾಲಯಗಳ ಗುರುತಿಸುವಿಕೆ ಬಾದಾಮಿ ಚಾಲುಕ್ಯರ ಕಾಲದ ಆಮಲಕವುಳ್ಳ ಶಿಖರಗಳ ದೇವಾಲಯಗಳಿಂದ ಆರಂಭವಾಯಿತೆನ್ನಬಹುದು. ಮಹಾಕೂಟದಲ್ಲಿರುವ ಸಂಗಮೇಶ್ವರ, ಐಹೊಳೆಯ ಹುಚ್ಚುಮಲ್ಲಿ ಗುಡಿ, ಪಟ್ಟದಕಲ್ಲಿನ ಗಳಗನಾಥ, ಪಾಪನಾಥ ಕಾಶಿವಿಶ್ವೇಶ್ವರ ಮುಂತಾದ ದೇವಾಲಯಗಳನ್ನು ಔತ್ತರೇಯ ಸಂಪ್ರದಾಯದ ಕಳಿಂಗ ಶೈಲಿ ಎಂದು ಗುರುತಿಸಬಹುದು. ವಾಸ್ತುಗ್ರಂಥಗಳ ಆಮಲಕ ಹಾಗೂ ಬಾಗಿದ ಶಿಖರವುಳ್ಳ ವಿಮಾನನಾಗರ, ಲತಿನ, ಕಳಿಂಗ ಶೈಲಿಗಳನ್ನು ಕವುಚಿದ ಬೋಗುಣಿಯಾಕಾರದ ಘಂಟಾ ಶಿಖರವುಳ್ಳ ದ್ರಾವಿಡ, ಭೂಮಿಜ ಶೈಲಿಗಳಿಂದ ಪ್ರತ್ಯೇಕಿಸಿದೆ.

ದ್ವಯೋಃ ಪ್ರಥಯೋರ್ಮಧ್ಯೇ ವೃತಮಾಮಲಸಾರಕಂ
ನಾಗರೇಲತಿನೇ ಕುರ್ಯಾತ್ ಸಾಂಧಾರೇ ಚೈವ ಮಿಶ್ರಕೇ
ವಿಮಾನ ನಾಗರಾಃ ಛಂದೇ ವಿಮಾನ ಪುಷ್ಪಕೇತಥಾ[5]

ದ್ರಾವಿಡ, ಭೂಮಿಜ, ವರಾಟ ಶೈಲಿಗಳಲ್ಲಿ ಘಂಟಾ ಶಿಖರವಿದ್ದು ವರಾಟ ಶೈಲಿಯ ಘಂಟಾಕಾರವು ಮಂದಾರ ಪುಷ್ಪಕವನ್ನು ಅನುಕರಿಸುತ್ತದೆ.

ವಿಮಾನೇ ಭೂಮಿಜೇ ಚೈವ ವೃತ್ತೇ ಚ ಕರ್ಣಿಕಾಂತಕೇ
ದ್ರಾವಿಡೇತು ತಥಾಚೈವಂ ತಂತು ರೇಖಾನುಪೂರ್ವಕಂ
ವರಾಟೇತು ಭವೇತ್ ಘಂಟಾ ಯಾದೃಗ್ ಮಂದಾರ ಪುಷ್ಪಕಃ[6]

ದ್ರಾವಿಡ ಶೈಲಿಯ ದೇವಾಲಯಗಳಲ್ಲಿ ಘಂಟಾ ರಚನೆಯ ಮುಂಭಾಗದಲ್ಲಿ ನಾಸಿಕಾಂಗ ರಚನೆಯನ್ನು ಕಾಣಬಹುದು.

ದ್ರಾವಿಡೇಚ ಭವೇದ್ ಘಂಟಾ ನಾಸಿಕೋಪಾಂಗ ಶೋಭಿತಾ[7]

---

5. ಪಿ.ಎ. ಮಂಕಡ್ (ಸಂ), ಅಪರಾಜಿತ ಪೃಚ್ಛಾ, ಬರೋಡಾ, 1950, ಪು : 346, ಅ : 139, ಶ್ಲೋ : 31-33
6. ಅದೇ, ಶ್ಲೋ : 33-34
7. ಅದೇ, ಪು : 352, ಅ : 142, ಶ್ಲೋ : 10

ದೇವಾಲಯದ ತಲಚ್ಛಂದವು ಚತುರಶ್ರವಾಗಿದ್ದಲ್ಲಿ ಘಂಟಾ ರಚನೆಯೂ ಚತುರಶ್ರವೆನಿಸಿದ್ದು ಭದ್ರಭಾಗದಲ್ಲಿ ನಾಸಿಕಾಂಗ ರಚನೆಯನ್ನು ಕಾಣಬಹುದು. ದೇವಾಲಯವು ನಕ್ಷತ್ರಾಕಾರ ಅಥವಾ ಷೋಡಶಾಶ್ರವೆನಿಸಿದಲ್ಲಿ ಘಂಟಾರಚನೆಯೂ ಅದೇ ರೀತಿ ಇದ್ದು ನಾಸಿಕ ರಚನೆಯು ಲಭ್ಯವಿಲ್ಲ. ಆಗ ಘಂಟಾ ರಚನೆಯು ಕೆಳ ಮುಖವಾಗಿ ಇಡಲ್ಪಟ್ಟ ಪುಷ್ಪವನ್ನು ಹೋಲುತ್ತದೆ. ಬಹುಶಃ ಈ ರಚನೆಯು ಮಂದಾರಪುಷ್ಪದ ಆಕೃತಿಯೆನಿಸಿದೆ.

ಕರ್ನಾಟಕದಲ್ಲಿ ಪ್ರಸ್ತುತ ಕಾಣಲಾಗುತ್ತಿರುವ ದೇವಾಲಯಗಳಲ್ಲಿ ವರಾಟ ಶೈಲಿಯನ್ನು ಗುರುತಿಸಲು ಸಾಧ್ಯವಾಗಿಲ್ಲ. ಆದರೆ ದ್ರಾವಿಡ ಶೈಲಿಯ ನಕ್ಷತ್ರಾಕೃತಿ ಹಾಗೂ ಷೋಡಶಾಶ್ರ ರಚನೆಯನ್ನೇ ಮಂದಾರ ಪುಷ್ಪಾಕಾರವೆಂದು ಘಂಟಾ ರಚನೆಯನ್ನು ಗುರುತಿಸಬಹುದು. ಉದಾಹರಣೆಗಾಗಿ ಸೋಮನಾಥಪುರದ ದೇವಾಲಯ ಮತ್ತು ಅರಸೀಕೆರೆಯ ಶಿವಾಲಯವನ್ನು ಹೆಸರಿಸಬಹುದು. ಭೂಮಿಜ ಶೈಲಿಯು ಮೂಲತಃ ಬಾಗಿದ ಶಿಖರ ಹಾಗೂ ಅಮಲಕವುಳ್ಳದ್ದು. ಆದರೆ ಭೂಮಿಜ ಶೈಲಿಯಲ್ಲಿ ಘಂಟಾರಚನೆಯನ್ನು ಶಾಸ್ತ್ರಭಾಗವು ಗುರುತಿಸಿದ್ದು ಕರ್ನಾಟಕದಲ್ಲಿ ಎರಡು ರೀತಿಯ ಮಾದರಿಗಳನ್ನು ಕಾಣಬಹುದು. ಕಾಮಿಕಾಗಮ ಗ್ರಂಥವು ಷಡ್ವರ್ಗ ದೇವಾಲಯವಾಗಿ ದಾಕ್ಷಿಣಾತ್ಯ ದೇವಾಲಯವನ್ನೂ[8] ಅಷ್ಟವರ್ಗದೇವಾಲಯವಾಗಿ ಔತ್ತರೇಯ ಕಳಿಂಗ ಶೈಲಿಯ ದೇವಾಲಯವನ್ನೂ[9] ಗುರುತಿಸಿದೆ. ಬಹುಶಃ ಇದು ಬಾದಾಮಿ ಚಾಲುಕ್ಯರ ಕಾಲದ ರಚನೆಗಳನ್ನು ಗುರುತಿಸಿದೆ. ಔತ್ತರೇಯ ದ್ರಾವಿಡ ಶೈಲಿಯನ್ನು ಸಪ್ತವರ್ಗ ರಚನೆಯೆಂದು ಗಮನಿಸಬಹುದು. ಇದು ವ್ಯವಸ್ಥಿತ ಅಧ್ಯಯನಕ್ಕಾಗಿ ನಾವು ಸೃಷ್ಟಿಸಿದ ಹಂತವೇ ಹೊರತು ವಾಸ್ತು ಗ್ರಂಥಗಳಲ್ಲಿಲ್ಲ. ಔತ್ತರೇಯ ದ್ರಾವಿಡ ಶೈಲಿಯು ದಾಕ್ಷಿಣಾತ್ಯ ಮತ್ತು ಔತ್ತರೇಯ ಸಂಪ್ರದಾಯಗಳ ಸಂಪರ್ಕದಿಂದ ಕರ್ನಾಟಕದಲ್ಲಿ ಒಡಮೂಡಿದ ಶೈಲಿ. ಈ ಶೈಲಿಯ ರಚನೆಗಳಲ್ಲಿ ಎರಡು ಸಂಪ್ರದಾಯದ ಲಕ್ಷಣಗಳನ್ನೂ ಕಾಣಬಹುದು. ಈ ಶೈಲಿಯ ಸಪ್ತವರ್ಗಗಳಾಗಿ ಪೀಠ, ಜಂಘಾ, ಛಾದ್ಯ, ಭೂಮಿ, ಘಂಟಾ, ವೇದಿ ಮತ್ತು ಕಳಶ ರಚನೆಯನ್ನು ಹೆಸರಿಸಬಹುದು.

ದಾಕ್ಷಿಣಾತ್ಯ ದೇವಾಲಯದ ಅಧಿಷ್ಠಾನಕ್ಕೆ ಪರ್ಯಾಯವಾಗಿ ಔತ್ತರೇಯ ದೇವಾಲಯದಲ್ಲಿ ಪೀಠ ರಚನೆಯಿದೆ. ಉಪ ಪೀಠಕ್ಕೆ ಬದಲಾಗಿ ಜಗತಿ ಮತ್ತು

---

8. ಸಿ. ಸ್ವಾಮಿನಾಥ ಶಿವಾಚಾರ್ಯ (ಸಂ), ಕಾಮಿಕಾಗಮ, ಮದ್ರಾಸ್, 1950, ಪು. 125, ಪ: 49, ಶ್ಲೋ: 12-13
9. ಅದೇ, ಶ್ಲೋ: 5

ಭಿಟ್‌ಸ್ತರಗಳನ್ನು ಕಾಣಬಹುದು. ಭಿಟ್‌ಸ್ತರವು ನೆಲದಲ್ಲಿ ಹುದುಗಿರುವ ಖರಶಿಲಾ ಸ್ತರದ ಮೇಲಿದೆ. ಖರಶಿಲಾ, ಭಿಟ್, ಜಗತಿ, ಪೀಠ, ಇವು ಕ್ರಮವಾಗಿ ಕಾಣಲಾಗುವ ಸ್ತರಗಳು. ದಾಕ್ಷಿಣಾತ್ಯ ದೇವಾಲಯಗಳಲ್ಲಿ ಕ್ರಮವಾಗಿ, ಖಾತಕುಡ್ಯ, ಹೋಮ, ಉಪಪೀಠ, ಅಧಿಷ್ಠಾನ ಎಂಬ ಹಂತಗಳನ್ನು ಕಾಣಬಹುದು. ಇವು ಪರ್ಯಾಯ ರಚನೆಗಳಂತೆ ಕಂಡು ಬಂದರೂ ಸಾಕಷ್ಟು ವ್ಯತ್ಯಾಸಗಳಿವೆ.

ಅಧಿಷ್ಠಾನದಲ್ಲಿರುವ ಉಪಾನ, ಜಗತಿ, ಕುಮುದ, ಕಂಠ, ಪಟ್ಟಿಕಾ, ಪ್ರತಿ, ಸ್ತರಗಳಂತೆ, ಪೀಠ ರಚನೆಯೂ ಹಲವು ಸ್ತರವುಳ್ಳದ್ದು. ಅಧಿಷ್ಠಾನದಲ್ಲಿ ಪ್ರತ್ಯಂಗ, ಪಟ್ಟಿಕಾಂಗಗಳೆಂಬ ಪ್ರಭೇದಗಳಿದ್ದು ಪುನಃ ಹಲವಾರು ರಚನೆಗಳನ್ನು ಕಾಣಬಹುದು. ಅಪರಾಜಿತ ಪೃಚ್ಛಾ ಹಾಗೂ ಸಮರಾಂಗಣ ಸೂತ್ರಧಾರ ಗ್ರಂಥಗಳಲ್ಲಿ ದ್ರಾವಿಡ ಪೀಠವನ್ನು ವಿವರಿಸುವ ಪ್ರತ್ಯೇಕ ಅಧ್ಯಾಯವಿದ್ದು[10] ಇವುಗಳ ವಿವರಗಳು ಹೆಚ್ಚೂ ಕಡಿಮೆ ಒಂದೇ ಎನ್ನಿಸಿದೆ. ಈ ವಿವರಣೆಗಳ ಪ್ರಕಾರ, ಪಾದಬಂಧ, ಶ್ರೀಬಂಧ, ವೇದೀಬಂಧ, ಪ್ರತಿ ಕ್ರಮ ಮತ್ತು ಖುರಕಬಂಧ ಎಂದು ಪಂಚ ಪ್ರಭೇದಗಳನ್ನು ಗುರುತಿಸಲಾಗಿದೆ. ಈ ಪೀಠ ರಚನೆಯನ್ನು ಲಭ್ಯವಿರುವ ವಾಸ್ತು ರೀತ್ಯಾ ಗುರುತಿಸಲು ಸಾಧ್ಯವಾಗಿಲ್ಲ. ಕಲ್ಯಾಣಿ ಚಾಲುಕ್ಯರ ಕಾಲದ ಲಕ್ಕುಂಡಿಯ ಕಾಶಿ ವಿಶ್ವೇಶ್ವರ, ನನ್ನೇಶ್ವರ, ಡಂಬಳದ ದೊಡ್ಡ ಬಸಪ್ಪ ಮುಂತಾದ ದೇವಾಲಯಗಳಲ್ಲಿ ಎತ್ತರವಾದ ಪೀಠ ರಚನೆಯಿದ್ದು ಎರಡು ಹಂತಗಳಲ್ಲಿ ಗುರುತಿಸಬಹುದು. ಬಹುಶಃ ಈ ರಚನೆಗಳು ಆರಂಭದ ಸ್ಥಿತಿಯನ್ನು ಪ್ರತಿನಿಧಿಸಿವೆ. ತದನಂತರದ ಕಾಲದಲ್ಲಿ ಮೊದಲ ಹಂತದ ಪೀಠವು ಮುಂದಕ್ಕೆ ಸರಿದಿದ್ದು ಜಗತಿಯ ರಚನೆಗೆ ನಾಂದಿಯಾಗಿರಬಹುದು. ಈ ಹಿನ್ನಲೆಯಲ್ಲಿ ಲಕ್ಷ್ಮೇಶ್ವರದಲ್ಲಿರುವ ಶಿವಾಲಯವೊಂದರ ಜಗತಿಯನ್ನು ಕಾಣಬಹುದು.

ಲಕ್ಷ್ಮೇಶ್ವರದ ಸೋಮೇಶ್ವರ ದೇವಾಲಯದ ದಕ್ಷಿಣ ದಿಕ್ಕಿನ ಪ್ರಾಕಾರಕ್ಕೆ ಹೊಂದಿಕೊಂಡ ಪ್ರವೇಶ ದ್ವಾರದ ಇಕ್ಕೆಲಗಳಲ್ಲಿ ಎರಡು ಹಂತದ ಎತ್ತರವಾದ ಪೀಠ ರಚನೆಯನ್ನು ಗಮನಿಸಬಹುದು. ಮೊದಲ ಹಂತವನ್ನು ಮುಂಚಾಚಿದರೆ ಉಂಟಾಗುವ ಜಗತಿಯ ರಚನೆಯನ್ನೂ ಕಲ್ಪಿಸಿಕೊಳ್ಳಬಹುದು. ಹೊಯ್ಸಳರ ಕಾಲದಲ್ಲಿ ಜಗತಿಯು ಗಮನಾರ್ಹವಾಗಿ ವೃದ್ಧಿಸಿದ್ದು ದೇವಾಲಯಗಳ ಸೌಂದರ್ಯವನ್ನು ಹೆಚ್ಚಿಸಿದೆ. ನಾಗಮಂಗಲದ ಕೇಶವ ದೇವಾಲಯದಲ್ಲಿ ಎತ್ತರವಾದ ಜಗತಿ ಮತ್ತು ಎರಡು ಹಂತದ ಪೀಠ ರಚನೆಯನ್ನೂ ಕಾಣಬಹುದು. ಎತ್ತರವಾದ ಪೀಠರಚನೆ ಹೊಯ್ಸಳರ ಕಾಲ

---

10. ಅಪರಾಜಿತ ಪೃಚ್ಛಾ, ಪು : 445, 446, ಅ : 173
ಪಿ. ಎಸ್. ಅಗ್ರವಾಲಾ (ಸಂ), ಸಮರಾಂಗಣ ಸೂತ್ರಧಾರ, ಬರೋಡಾ 1966, ಪು : 466-468, ಅ . 61

ದಲ್ಲಿಯೂ ಮನ್ನಣೆ ಪಡೆಯಿತು. ಪೀಠದ ಸ್ತರಗಳು ಕುಸುರಿ ಕೆತ್ತನೆಗೆ ಸ್ಥಳಾವಕಾಶವನ್ನೊದಗಿಸಿತು. ಔತ್ತರೇಯ ದ್ರಾವಿಡ ಶೈಲಿಯ ದೇವಾಲಯಗಳಲ್ಲಿ ಎರಡು ರೀತಿ ಪೀಠ ರಚನೆಯನ್ನು ಸಾಮಾನ್ಯವಾಗಿ ಕಾಣುತ್ತೇವೆ. ಒಂದು ಕಂಟಕವುಳ್ಳ ಪೀಠ ರಚನೆ ; ಮತ್ತೊಂದು ಜಗತಿಯುಳ್ಳ ಪೀಠ ರಚನೆ. ಔತ್ತರೇಯ ಗ್ರಂಥಗಳು ಸಾಧಾರಣ ಪೀಠ ರಚನೆಯನ್ನು ವಿವರಿಸಿದ್ದು, ಈ ಪೀಠ ರಚನೆಯೊಂದಿಗೆ ಕಂಟಕ ರಚನೆಯೂ ಸೇರಿ ಕಂಟಕ ಪೀಠವೆನಿಸಿದೆ. ಕುಕ್ಕನೂರಿನ ಕಲ್ಲೇಶ್ವರ, ಬಾದಾಮಿಯ ಯಲ್ಲಮ್ಮನಗುಡಿ, ಬಳ್ಳಿಗಾವೆಯ ಕೇದಾರೇಶ್ವರ, ಹಾವೇರಿಯ ಸಿದ್ಧೇಶ್ವರ, ಚೌಡದಾನ ಪುರದ ಮುಕ್ತೇಶ್ವರ ದೇವಾಲಯಗಳು ಕಂಟಕ ಪೀಠಕ್ಕೆ ಉದಾಹರಣೆಗಳು. ಅಪರಾಜಿತ ಪೃಚ್ಛಾ ಗ್ರಂಥದಲ್ಲಿ ಸಾಧಾರಣ ಪೀಠದ ವಿವರಣೆ ಕೆಳಕಂಡಂತಿದೆ.

ಜಾಡ್ಯ ಕುಂಭಃ ಕರ್ಣಕಶ್ಚ ಊರ್ಧ್ವೇ ವೈಶೀರ್ಷಪಟ್ಟಿಕಾ
ಶಿರಃ ಪಾಲೀಂ ವಿನಾತ್ವೇವಂ ಕರ್ಣಂ ಪೀಠಂತುಕಾರಯೇತ್[11]

ಈ ವಿವರಣೆಯು, ಅಲ್ಪ ದ್ರವ್ಯದೊಡನೆ ರಚಿಸಲ್ಪಡುವ ಪೀಠವೆನಿಸಿದ್ದು ಕಣ ಪೀಠ ಅಥವಾ ಸಾಧಾರಣ ಪೀಠ ಎಂದು ಹೆಸರಿಸಲಾಗಿದೆ. ಕಣ ಪೀಠ ರಚನೆಯಲ್ಲಿ ಜಾಡ್ಯ ಕುಂಭ, ಕರ್ಣಿಕಾ, ಶೀರ್ಷ ಪಟ್ಟಿಕೆ ಅಥವಾ ಶೀರ್ಷಪತ್ರಿಕೆ ಎಂಬ ಸ್ತರಗಳಿವೆ. ಜಾಡ್ಯ ಕುಂಭವು ಸಂಯುಕ್ತ ಸ್ತರವೆನಿಸಿದ್ದು, ಖುರಕ ಮತ್ತು ಪದ್ಮ ಪತ್ರಿಕಾ ಎಂಬ ಸ್ತರಗಳನ್ನು ಕಾಣಬಹುದು. ಶಾಸ್ತ್ರೋಕ್ತಿಗಳ ಪ್ರಕಾರ ಪ್ರಾಸಾದ ರಚನೆಯು ಖರಶಿಲಾ ರಚನೆಯಿಂದ ಆರಂಭಗೊಂಡು, ನಂತರ ಭಿಟ್ ಸ್ತರವೂ, ತದನಂತರ ಪೀಠದ ಸ್ತರಗಳಿವೆ. ಖರಶಿಲಾ ಭಾಗವು ನೆಲದೊಳಗೆ ಮರೆಯಾಗಿದ್ದು ಭಿಟ್ ಸ್ತರವು ಭಾಗಶಃ ಮೇಲ್ಗಡೆ ಕಾಣಬಹುದು.

ಪ್ರಾಸಾದ ಚ್ಛಂದ ಮಸ್ಯೋರ್ಧ್ವೇ ದೃಢ ಖರ ಶಿಲೋತ್ತಮಾ[12]
............

ಶಿಲೋಪರಿ ಭವೇತ್ ಭಿಟ್ಟಮೇಕಹಸ್ತೇ ಯುಗಾಂಗುಲಂ[13]

ಭಿಟ್ ಸ್ತರದನಂತರ ಪೀಠ ರಚನೆಯಲ್ಲಿ ಖುರಕ, ಪದ್ಮ ಪತ್ರಿಕಾ, ಕರ್ಣಿಕಾ, ಕಪೋತ ಹಾಗೂ ಕಂಟಕ ರಚನೆಯನ್ನು ಕಾಣಬಹುದು. ಕರ್ಣಿಕಾ ಮತ್ತು ಕಪೋತದ ನಡುವೆ ಅಂತರಪತ್ರವೆಂಬ ಕಿರಿದಾದ ಸ್ತರವನ್ನು ಕಾಣಬಹುದು. ದಾಕ್ಷಿಣಾತ್ಯ

11. ಅಪರಾಜಿತ ಪೃಚ್ಛಾ, ಪು : 313, ಅ : 125, ಶ್ಲೋ : 23
12. ಅದೇ, ಪು : 307, ಅ : 123, ಶ್ಲೋ : 14
13. ಪು : ಭಗವಾನ್‌ದಾಸ್ ಜೈನ್ (ಸಂ), ಪ್ರಾಸಾದ ಮಂಡನ, ಜೈಪುರ, 1963 ಪು : 42, ಅ : 3, ಶ್ಲೋ : 2

ದೇವಾಲಯಗಳಲ್ಲಿ ಕಾಣುವ ಕಂಪ, ಕ್ಷೇಪಣ, ಆಲಿಂಗ, ಅಂತರಿತ ಮುಂತಾದ ಸ್ತರಗಳು ಅಂತರ ಪತ್ರಕ್ಕೆ ಸಮಾನವಾದುದು. ಕಂಟಕ ರಚನೆಯು ಔತ್ತರೇಯ ಸಂಪ್ರದಾಯದ ಶೈಲಿಗೆ ವಿಶಿಷ್ಟವಾದುವು. ಔತ್ತರೇಯ ದ್ರಾವಿಡ ಶೈಲಿಯಲ್ಲಿ ಕಂಟಕವನ್ನು ಪೀಠ ಹಾಗೂ ಭೂಮಿ ರಚನೆಯಲ್ಲಿ ಕಾಣಬಹುದು. ಈ ರಚನೆಯನ್ನು ಅಪರಾಜಿತ ಪೃಚ್ಛಾ ಗ್ರಂಥವು ವಿವರಿಸಿದೆ.

ಬದರೀಕೇತಕೀನಾಂಚ ಕಂಟಕೈ ದ್ರಾವಿಡೈ ಸ್ಮೃತಃ[14]

ದ್ರಾವಿಡ ಶೈಲಿಯ ದೇವಾಲಯಗಳಲ್ಲಿ ಕಂಟಕ ಸ್ವರೂಪವು ಬದರೀ ಮತ್ತು ಕೇತಕೀ (ಕೇದಗೆ) ಮುಳ್ಳಿನಂತೆ ರಚಿಸಲ್ಪಡುತ್ತದೆ.

ಶುಕಚಂಚು ಸಮಾಕಾರಂ ಬದರೀ ಕಂಟಕಾಕೃತಿಃ[15]

ಗಿಣಿಯಕೊಕ್ಕಿನಂತಿರುವ ಕಂಟಕವು ದ್ರಾವಿಡ ಶೈಲಿಯ ಅಲಂಕರಣವೆನ್ನಿಸಿದೆ. ಹೊಯ್ಸಳರ ಕಾಲದ ಹಳೇಬೀಡಿನ ಹೊಯ್ಸಳೇಶ್ವರ, ಜಾವಗಲ್ಲಿನ ಲಕ್ಷ್ಮೀನರಸಿಂಹ, ನುಗ್ಗೇಹಳ್ಳಿಯ ಕೇಶವ, ಸದಾಶಿವ, ಹಾರ್ನಹಳ್ಳಿಯ ಕೇಶವ, ಸೋಮೇಶ್ವರ ಮುಂತಾದ ದೇವಾಲಯ ಗಳು ಜಗತಿಯುಳ್ಳ ಪೀಠಗಳಿಂದ ಕೂಡಿವೆ. ಜಗತಿಯು ದೇವಾಲಯಕ್ಕೆ ಎತ್ತರ ವಾದ ವೇದಿಕೆಯನ್ನು ಒದಗಿಸಿದ್ದು ಮಧ್ಯೆ ದೇವಾಲಯವು ರೂಪುಗೊಂಡಿದೆ. ಜಗತಿಯ ನಂತರ ಪೀಠ ರಚನೆಯನ್ನು ಕಾಣಬಹುದು. ಪೀಠ ರಚನೆಯು ಸಾಮಾನ್ಯವಾಗಿ ಎರಡು ಹಂತಗಳಲ್ಲಿದ್ದು ಖುರಕ, ಪದ್ಮಪತ್ರ, ಕರ್ಣಿಕಾ, ಕಪೋತ, ಪುನಃ ಖುರಕ, ಪದ್ಮಪತ್ರ, ಕರ್ಣಿಕಾ, ಕಪೋತಾದಿ ಸ್ತರಗಳನ್ನು ಕಾಣಬಹುದು. ಅಪರಾಜಿತ ಪೃಚ್ಛಾ ಗ್ರಂಥಕಾರನು ನೃತ್ಯ ಮಂಟಪದ ಭಾಗದಲ್ಲಿ ಐದು ಪಟ್ಟಿಕೆಗಳ ರಚನೆಯನ್ನು ವಿಧಿಸಿದ್ದಾನೆ. ಹೊಯ್ಸಳರ ಕಾಲದ ಜಗತಿಯುಳ್ಳ ಹಲವು ದೇವಾಲಯಗಳಲ್ಲಿ ಪಟ್ಟಿಕಾ ರಚನೆಯು ಗರ್ಭಗೃಹ ಹಾಗೂ ಅಂತರಾಳದ ಭಾಗ ಗಳಿಗೂ ವಿಸ್ತರಿಸಲಾಗಿದೆ.

ಪಂಚಪಟ್ಟ್ಯೋಪರಿ ಕುರ್ಯಾದ್ ವಿಖ್ಯಾತ ನೃತ್ಯಮಂಡಪಾನ್[16]

ಪಟ್ಟಿಕೆಗಳಲ್ಲಿ ಆನೆಗಳ ಸಾಲು, ಕುದುರೆಗಳ ಸಾಲು, ಪೌರಾಣಿಕ ಕಥಾ ಮಾಲಿಕೆ, ಲತಾ, ಸಿಂಹ, ಯಾಳಿ, ಹಂಸ ಪಟ್ಟಿಕೆಗಳನ್ನೂ ಕಾಣಬಹುದು. ಅಲಂಕಾರ ದಿಂದ ಆವೃತಗೊಂಡ ಕಂಟಕಸ್ತರವನ್ನು ಈ ಪಟ್ಟಿಕೆಗಳೊಡನೆ ಕಾಣಬಹುದು. ಜಗತಿಯ ರಚನೆಯಲ್ಲಿನ ಲಕ್ಷಣಗಳನ್ನು ಕೆಳಕಂಡಂತೆ ವಾಸ್ತು ಶಾಸ್ತ್ರಗಳು ಚಿತ್ರಿಸಿವೆ.

---

14. ಅಪರಾಜಿತ ಪೃಚ್ಛಾ, ಪು. 585, ಅ. 228, ಶ್ಲೋ. 6
15. ಅದೇ, ಪು. 586, ಅ. 228, ಶ್ಲೋ. 23
16. ಅದೇ., ಪು. 484, ಅ. 188, ಶ್ಲೋ. 11

ಪ್ರಾಸಾದ ಲಿಂಗಮಿತ್ಯುಕ್ತಾ ಜಗತೀ ಪೀಠಮೇವಚ[17]

ಪ್ರಾಸಾದ ರಚನೆಯಲ್ಲಿ ಜಗತಿಯು ಸ್ಥಾನವು ಲಿಂಗಕ್ಕೆ ಪೀಠವಿದ್ದಂತೆ ಜಗತಿಯು ರಚನೆಯಿಂದ ಪ್ರಾಸಾದಗಳಿಗೆ ಗಮನಾರ್ಹ ಶೋಭೆ ಒದಗಿದೆ.

ಯಥಾ ಸಿಂಹಾಸನೇ ರಾಜಾ ಶೋಭತೇ ಮಣಿದೀಪ್ತಿಭಿಃ
ತಥಾ ಜಗತ್ಯಾಂ ಪ್ರಾಸಾದಃ ಪೀಠ ಕರ್ಮೋಪಶೋಭಿತಃ[18]

ಔತ್ತರೇಯ ದೇವಾಲಯಗಳ ಜಗತಿಗೂ ದಾಕ್ಷಿಣಾತ್ಯ ದೇವಾಲಯಗಳಲ್ಲಿರುವ ಜಗತಿಗೂ ಅಜಗಜಾಂತರ ವ್ಯತ್ಯಾಸವಿದೆ. ಜಗತಿಯ ರಚನೆ ಅಧಿಷ್ಠಾನದ ಒಂದು ಅಂಗವೆನಿಸಿದ್ದು ಉಪಾನದ ನಂತರ ಗುರುತಿಸಬಹುದು. ವಿಷ್ಣು–ಧರ್ಮೋತ್ತರ ಪುರಾಣವು ದಾಕ್ಷಿಣಾತ್ಯ ದೇವಾಲಯಗಳಲ್ಲಿ ಜಗತಿಯು ಕಟಿ ಸ್ಥಾನದಲ್ಲಿದೆ ಎಂದು ತಿಳಿಸಿದೆ. ಔತ್ತರೇಯ ದೇವಾಲಯಗಳ ರಚನೆ ಭಿನ್ನವೆನಿಸಿದ್ದು ಪೀಠ ರಚನೆಯ ಕೆಳಗೆ ವಿಶಾಲವಾದ ರಚನೆಯೆನಿಸಿದೆ. ಔತ್ತರೇಯ ದ್ರಾವಿಡ ಶೈಲಿಯ ದೇವಾಲಯ ಗಳಿಗೆ ಜಗತಿ ಒಂದು ರೀತಿಯ ಔನ್ನತ್ಯವನ್ನು ಕೊಟ್ಟಿದೆ ಎನ್ನಬಹುದು.

ಪೀಠ ರಚನೆಯ ಕೆಳಗೆ ಭಿಟ್‌ಸ್ತರವಿದ್ದಂತೆ ಜಗತಿಯ ಕೆಳಗೆ ಭಿಟ್‌ಸ್ತರವಿದೆ. ಜಗತ್ಯಗ್ರೇ ವಾಮನಂಸ್ಯಾದ್‌ಭಿಟ್ಟಂ ತದ್ಭುವಿಸಂಸ್ಥಿತಂ ಜಗತಿಯ ರಚನೆಯು ನಕ್ಷತ್ರಾಕಾರ ದೇವಾಲಯಗಳಿಗೆ ಮಾತ್ರ ಸೀಮಿತವಾಗಿಲ್ಲ.

ಚತುರಶ್ರಾ ತಥಾಯತಾ ವೃತ್ತಾಯತಾ ತಥಾ
ಅಷ್ಟಾಶ್ರಾ ಚ ತಥಾ ಕಾರ್ಯಾ ಪ್ರಾಸಾದಸ್ಯಾನುರೂಪತಃ[19]

ಚತುರಶ್ರ, ಆಯತ, ವೃತ್ತಾಯತ, ಅಷ್ಟಾಶ್ರ ಆಕಾರಗಳುಳ್ಳ ಜಗತಿ ರಚನೆ ಯನ್ನು ಪ್ರಾಕಾರಗಳ ಆಕಾರ ಮತ್ತು ಶೋಭೆಗೆ ತಕ್ಕಂತೆ ರಚಿಸಬಹುದಾಗಿದೆ. ವೃತ್ತ ಮತ್ತು ವೃತ್ತಾಯತ ರಚನೆಗಳನ್ನು ಈವರೆಗೆ ಗುರುತಿಸಲಾಗಿಲ್ಲ. ದೇವಾಲಯ ರಚನೆಯ ಆಕಾರವನ್ನೇ ಜಗತಿಯೂ ಅನುಕರಿಸುವುದನ್ನು ಗುರುತಿಸ ಬಹುದಾಗಿದೆ.

---

17. ಅದೇ., ಪು. 286, ಅ. 115, ಶ್ಲೋ. 5
18. ಅದೇ., ಪು. 228, ಅ. 115, ಶ್ಲೋ. 33
19. ಅದೇ., ಪು. 286, ಅ. 115, ಶ್ಲೋ. 7

जगती ತಾದೃಶೀ ಕಾರ್ಯಾಪ್ರಾಸಾದೋಯಾದೃಶೋಭವೇತ್
ಭಿನ್ನಚ್ಛಂದಾನ ಕರ್ತವ್ಯಂ ಪ್ರಾಸಾದಾಸನ ಸಂಸ್ಥಿತಾ[20]

ಜಗತಿಯ ರಚನೆಯನ್ನು ಪ್ರದಕ್ಷಿಣ ಪಥಕ್ಕೆ ಬದಲಾಗಿ ನಿರಂಧಾರ ದೇವಾಲಯಗಳಲ್ಲಿ ಕಾಣಲು ಸಾಧ್ಯವೆಂಬ ವಿದ್ವಾಂಸರ ಅಭಿಪ್ರಾಯಗಳಿವೆ. ಶಾಸ್ತ್ರಗಳಲ್ಲಿ ಮೂರು ಹಂತಗಳ ರಚನೆಯನ್ನು ಸೂಚಿಸಿದ್ದರೂ ಉದಾಹರಣೆಗಳಿಲ್ಲದೆ ಅರ್ಥೈಸುವುದು ಕಷ್ಟವೆನಿಸಿದೆ. ದಾಕ್ಷಿಣಾತ್ಯ ದೇವಾಲಯಗಳ ಉಪಪೀಠಗಳಲ್ಲಿ ಹಲವು ಸ್ತರಗಳಿದ್ದಂತೆ ಜಗತಿಯ ರಚನೆಯೂ ಔತ್ತರೇಯ ದೇವಾಲಯಗಳಲ್ಲಿ ಹಲವು ಸ್ತರವುಳ್ಳದ್ದು. ಅಧಿಷ್ಠಾನ ರಚನೆಯ ಸ್ತರಗಳಂತೆ ಉಪಪೀಠವೂ ರಚಿಸಲ್ಪಟ್ಟದ್ದು, ಜಗತಿಯ ಸ್ತರಗಳನ್ನು ಪೀಠದ ಕೆಳಗೆ ಗುರುತಿಸಬಹುದು. ಜಗತಿಯ ಎತ್ತರವನ್ನು ಜಾಡ್ಯ ಕುಂಭ, ಕರ್ಣಿಕಾ, ಶೀರ್ಷ ಪತ್ರಿಕಾ, ಕ್ಷುರಕ ಕುಂಭಕ, ಕಲಶ, ಅಂತರ ಪತ್ರ, ಕಪೋತ, ಪುಷ್ಪಕ ಮುಂತಾದ ಸ್ತರಗಳು ಆವರಿಸಿದೆ. ಇದು ಶಾಸ್ತ್ರಗಳಲ್ಲಿರುವ ವಿವರಣೆ.

ತಥೋಚ್ಛ್ರಾಯಂ ಭಜೇತ್ ಅಷ್ಟಾವಿಂಶತಿ ಪದೈರಥ :
ಜಾಡ್ಯಕುಂಭ ಚತ್ರಿಪಾದಂ ಕರ್ಣಕಂ ದ್ವಿಪಾದಂತಥಾ
ಪದ್ಮ ಪತ್ರ ಸಮಾಯುಕ್ತಾ ತ್ರಿಪದಾ ಶೀರ್ಷಪಟ್ಟಿಕಾ
ಕ್ಷುರಕಂದ್ವಿಪದಂ ಪ್ರೋಕ್ತಂ ಕುಂಭಕಂ ಸಪ್ತಭಿಃ ಪದೈಃ
ತ್ರಿಪದಃ ಕಲಷಃ ಪ್ರೋಕ್ತಃ ಪದಂಜಾಂತರ ಪತ್ರಕಂ
ಕಪೋತಾಲೀ ಚ ತ್ರಿಪದಾ ಪುಷ್ಪಕಂ ಯುಗ ಸಂಖ್ಯಯಾ[21]

ಈ ರೀತಿಯ ಸ್ತರಗಳುಳ್ಳ ಜಗತಿಯು ಅಲಭ್ಯ. ಖುರಕ, ಪದ್ಮಪತ್ರ, ಅಂತರ ಪತ್ರ, ಕರ್ಣಿಕಾ, ಪಟ್ಟಿಕಾ, ವೇದಿ ಮುಂತಾದ ಸ್ತರಗಳಿರುವ ಜಗತಿ ರಚನೆಗಳಿವೆ. ನುಗ್ಗೇಹಳ್ಳಿ, ಜಾವಗಲ್ಲು, ಅರಳಗುಪ್ಪೆ, ಮುಂತಾದೆಡೆಯಲ್ಲಿ ೩-ಮೂರು ವರೆ ಅಡಿ ಎತ್ತರದ ಜಗತಿಯೂ, ಬೇಲೂರು, ಹಳೇಬಿಡು, ನಾಗಮಂಗಲ ಮುಂತಾದೆಡೆಯಲ್ಲಿ ೪-ನಾಲ್ಕೂವರೆ ಅಡಿ ಎತ್ತರದ ಜಗತಿಯನ್ನು ಕಾಣಬಹುದು. ಕೆಲವಡೆ ಕಂಠ ಹಾಗೂ ಪಟ್ಟಿಕಾ ರಚನೆಯಿದ್ದು ಉಬ್ಬು ಶಿಲ್ಪ ಹಾಗೂ ಅಲಂಕಾರಕ್ಕೆ ಅವಕಾಶವಿದೆ. ಜಗತಿಯ ಮುಂಭಾಗದಲ್ಲಿ ಸೋಪಾನ ರಚನೆಯಿದ್ದು ಇಕ್ಕೆಲಗಳಲ್ಲಿ ಶಿಖರಾಕೃತಿಗಳಿವೆ. ಈ ಶಿಖರಾಕೃತಿಗಳು ದೇವಾಲಯದ ಮೂಲ ಶಿಖರ ಶೈಲಿಯನ್ನು ಅನುಸರಿಸುತ್ತವೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಜಗತಿಯ ಮೂಲೆಗಳಲ್ಲಿ ದಿಕ್ಪಾಲಕರನ್ನು ರಚಿಸಬಹುದು.

---

20. ಪ್ರಾಸಾದ ಮಂಡನ, ಪು : 33, ಅ : 2, ಶ್ಲೋ : 26
21. ಅಪರಾಜಿತ ಪೃಚ್ಛಾ, ಪು : 287, ಅ : 115, ಶ್ಲೋ : 27-29

ಕರ್ಣೇಷು ಚ ದಿಶಾಪಾಲಾಃ ಪ್ರಾಚ್ಯಾದಿಷು ಪ್ರದಕ್ಷಿಣಾಃ[22]

ಜಗತಿಯ ಮೂಲೆಗಳಲ್ಲಿ ಆಸನಗಳನ್ನು ಕಾಣಬಹುದು. ಅಭಿಷೇಕ ತೀರ್ಥವನ್ನು ಹೊರ ಚೆಲ್ಲಲು ಜಗತಿಯಲ್ಲಿ ಮಕರ ಮುಖವುಳ್ಳ ಜಲ ಪ್ರಣಾಳವನ್ನು ರಚಿಸಬೇಕು.

ಜಲನಿಷ್ಕಾಸ ಮಕರ ಮುಖೈಶ್ಚ ವಿಕೃತಾನನೈಃ[23]

ದ್ರಾವಿಡ ಶೈಲಿಯ ಮುಖ್ಯ ಲಕ್ಷಣಗಳನ್ನು ಅಪರಾಜಿತ ಪೃಚ್ಛಾ ಗ್ರಂಥಕಾರನು ಕೆಳಕಂಡಂತೆ ಸಂಕ್ಷೇಪವಾಗಿ ಚಿತ್ರಿಸಿದ್ದಾನೆ.

ಪೀಠೋರ್ಧ್ವೇ ಕರ್ಣರೇಖಾಶ್ಚ ಭೂಮಿಕಾಃ ಕ್ರಮ ಸಂಸ್ಥಿತಾಃ
ವಿಭಕ್ತಿ ದಲನಾಪೂರ್ಣಾ ಲತಾಶೃಂಗಕ್ರಮೋದ್ಭವಾಃ
ಮೇಷ ಮಕರ ಕೂಟಸ್ಯೈ ಃ ಕಂಟಕೈರಾವೃತಾ ಶುಭಾಃ
ವೇದೀ ಘಂಟಾ ನಾಸಿಕಾದ್ಯಾಃ ದ್ರಾವಿಡಾಃ ಶುಭಲಕ್ಷಣಾಃ[24]

ಈ ಶ್ಲೋಕಗಳನ್ನು ಸಂಪೂರ್ಣವಾಗಿ ಗ್ರಹಿಸಲು ಸಾಧ್ಯವಾಗಿಲ್ಲ. ಆದರೂ ಕೆಲವು ಅಂಶಗಳನ್ನು ಅರ್ಥೈಸಲು ಸಾಧ್ಯವಿದೆ.

ಪೀಠಾನಂತರ ಭೂಮಿಕಾ ರಚನೆಯಿದ್ದು ಈ ಕ್ರಮವನ್ನು ಕರ್ಣರೇಖಾ ಎಂದು ಗುರುತಿಸಲಾಗಿದೆ. ದ್ರಾವಿಡ ಶೈಲಿಯ ಭೂಮಿ ಅಲಂಕರಣ ವಿಧಾನವು ಲತಾಶೃಂಗ ಎಂದು ಹೆಸರಿಸಲಾಗಿದೆ. ಭೂಮಿ ರಚನೆಯು ಮೇಷ(?), ಮಕರ(?), ಕೂಟ, ಕಂಟಕಗಳಿಂದ ಆವೃತವಾಗಿದೆ. ಭೂಮಿಯ ನಂತರ ವೇದಿ, ಘಂಟಾ, ನಾಸಿಕಾ ರಚನೆಗಳಿವೆ. ಇವು ದ್ರಾವಿಡ ರಚನೆಯ ಪ್ರಮುಖ ಲಕ್ಷಣಗಳು.

ಈ ವಿವರಣೆಯ ಪ್ರಕಾರ ಪೀಠ, ಭೂಮಿ, ವೇದಿ, ಘಂಟಾ, ಮತ್ತು ಕಲಶ ಇವೇ ಊರ್ಧ್ವಕ್ರಮದ ಅಂಗಗಳು. ಮೂಲ ಕಲ್ಪನೆ ಅಥವಾ ಮೂಲ ರಚನೆಯಲ್ಲಿ ಭಿತ್ತಿ ಮತ್ತು ಛಾದ್ಯ ರಚನೆಗೆ ಸ್ಥಾನವಿಲ್ಲ !

ಅಪರಾಜಿತ ಪೃಚ್ಛಾ ಗ್ರಂಥಕಾರನು, ಭೂಮಿಜ, ವರಾಟ ಮತ್ತು ದ್ರಾವಿಡ ಶೈಲಿಗಳ ಮಂಡೋವರ ಸ್ವರೂಪವನ್ನು ಕೆಳ ಕಂಡಂತೆ ಗುರುತಿಸಿದ್ದಾನೆ.

ವಿಸ್ತಾರ ಸಮ ಉತ್ಸೇಧೇ ಯಾವತ್ ಪ್ರಥಮ ಭೂಮಿಕಾ
ಶೃಂಗ ಕೂಟೋದಯಂತ್ಯಕ್ತ್ವ ಶೇಷಂ ಮಂಡೋವರಂ ಭವೇತ್

---

22. ಅದೇ., ಪು : 287, ಅ : 115, ಶ್ಲೋ : 30
23. ಅದೇ., ಪು : 288, ಅ : 115, ಶ್ಲೋ : 32
24. ಅದೇ., ಪು : 237, ಅ : 106, ಶ್ಲೋ : 26-27

ಮಾನವೀ ಭೂಮಿಜೇಚೈವವರಾಟೀ ತಥೈವಚ
ದ್ರಾವಿಡೇ ಚೈವ ಉತ್ಸೇಧಂ ತಾವತ್ ಪೀಠೋರ್ಧ್ವ ಮಸ್ತಕಂ[25]

ಮಂಡೋವರವು ಮಂಡಾದ್ರಿ ಪದ ಮೂಲದ ನಿಷ್ಪತ್ತಿಯೆಂದು ವಿದ್ವಾಂಸರು ಗುರುತಿಸಿದ್ದಾರೆ. ಮಂಡ ಎನ್ನುವಲ್ಲಿ ಅಲಂಕಾರವೇ ಪ್ರಧಾನವಾದುದ್ದು. ಮಂಡೋವರದ ಗುರುತಿಸುವಿಕೆಯಲ್ಲಿ ಹೆಚ್ಚು ಅಲಂಕಾರವುಳ್ಳ ಭಾಗವೇ ಅಡಗಿದೆ. ಕೆಲವೊಮ್ಮೆ ಅಲಂಕಾರವುಳ್ಳ ಪೀಠವನ್ನೂ ಒಳಗೊಳ್ಳುತ್ತದೆ. ಮೇಲ್ಕಂಡ ವಿವರಣೆಯ ಪ್ರಕಾರ ಮೊದಲ ಭೂಮಿಯವರೆಗಿನ ಭಾಗವು ಮಂಡೋವರವೆನ್ನಲಾಗುತ್ತದೆ. ಪ್ರತಿ ಭೂಮಿ ರಚನೆಯಲ್ಲಿ ಜಂಘಾ ಮತ್ತು ಕೂಟವೆಂಬ ಭಾಗಗಳಿದ್ದು ಮೊದಲ ಭೂಮಿಯ ಜಂಘಾ ಭಾಗವು ವಿಕಾಸಗೊಂಡು ಪೂರ್ಣ ಪ್ರಮಾಣದ ಭಿತ್ತಿ ರಚನೆಗೆ ಕಾರಣವಾಯಿತೆನ್ನಬಹುದು. ಈ ಹಿನ್ನೆಲೆಯಲ್ಲಿ ಲಭ್ಯವಿರುವ ಔತ್ತರೇಯ ದ್ರಾವಿಡ ಶೈಲಿಯ ಭಿತ್ತಿ ರಚನೆಯನ್ನು ಪರಿಶೀಲಿಸಬೇಕು.

ಈ ಶೈಲಿಯ ದೇವಾಲಯಗಳಲ್ಲಿ, ಎರಡು ರೀತಿಯ ಭಿತ್ತಿ ರಚನೆಯನ್ನು ಸಾಮಾನ್ಯವಾಗಿ ಗಮನಿಸಬಹುದು. ಒಂದು ಔತ್ತರೇಯ ನಾಗರಾದಿ ಶೈಲಿಗಳ ರಚನೆಯ ಅನುಕರಣೆ; ಮತ್ತೊಂದು ದಾಕ್ಷಿಣಾತ್ಯ ಸಂಪ್ರದಾಯದ ಕೊಡುಗೆ. ಇವೆರಡರ ಪರಸ್ಪರ ಸಂಬಂಧದಿಂದ ಮಾಡಿದ ಮಿಶ್ರಕ ರಚನೆಯೂ ಉಂಟು. ಇದು ತದನಂತರ ಕಾಲದಲ್ಲಿ ಕಂಡು ಬಂದ ಪ್ರಭೇದವೆನಿಸಿದ್ದು, ಮೂರನೆಯ ಪ್ರಭೇದವೆನ್ನಬಹುದು. ಔತ್ತರೇಯ ಸಂಪ್ರದಾಯದ ನಾಗರ ಶೈಲಿಯಲ್ಲಿ "ಪೀಠೋಪ ಪೀಠ ಜಂಘಾಭಿರ್ಮೇಖಲಾ ಕೂಟ ಛಾದ್ಯಕೈ:" ಎಂದು ಲಕ್ಷಣಗಳನ್ನು ಗುರುತಿಸಲಾಗಿದೆ. ನಾಗರಾದಿ ಶೈಲಿಗಳಲ್ಲಿ ಪೀಠ, ಉಪಪೀಠ (?), ಜಂಘಾ, ನಂತರ ಕೂಟ ಛಾದ್ಯ, ಪುನರ್ ಜಂಘಾ ಹೀಗೆ ಮಂಡೋವರ ರಚನೆಯು ಸಾಗುತ್ತದೆ. ಕೂಟ ಛಾದ್ಯವು ಜಂಘಾ ಭಾಗದ ಮೇಲೆ ಸಾಲು ರಚನೆಯಾಗಿದ್ದು ಗರ್ಭಗೃಹವನ್ನು ಸುತ್ತುವರೆಯುತ್ತದೆ. ಇದು ಪೂರ್ಣ ಪ್ರಮಾಣದ ಛಾದ್ಯ ರಚನೆಯಾಗಿರದೆ ಅಣುಕು ರಚನೆಯೆನಿಸಿದೆ. ಆದ್ದರಿಂದ ಕೂಟ ಛಾದ್ಯ ಎಂದು ಗುರುತಿಸಲಾಗಿದೆ. ಜಂಘಾ ಭಾಗದಲ್ಲಿ ದೇವ ದೇವತೆಗಳ ಲೀಲಾ ಮೂರ್ತಿಗಳನ್ನು ಕಡೆದು ನಿಲ್ಲಿಸುವ ಪರಿಪಾಠವಿದೆ. ಇದು ಶಾಸ್ತ್ರಸಮ್ಮತವೆನಿಸಿದ್ದು, ಅಪರಾಜಿತ ಪೃಚ್ಛಾ ಗ್ರಂಥಕಾರನು ಅಷ್ಟ ಮೂಲೆಗಳಲ್ಲಿ ಅಷ್ಟ ದಿಕ್ಪಾಲಕರನ್ನು ಕಂಡರಿಸಲು ನಿರ್ದೇಶಿಸುತ್ತಾನೆ.

ಕರ್ಣೇಷ್ವಷ್ಟೌಚ ದಿಕ್ಪಾಲಾಃ ಪ್ರಾಚ್ಯಾದಿಷು ಪ್ರದಕ್ಷಿಣ,
ನಟೇಶಃ ಪಶ್ಚಿಮೇಭದ್ರೇ ಹ್ಯಂದಕೈಃ ಸಹ ದಕ್ಷಿಣೇ
ಚಂಡಸ್ಯೋತ್ತರೇ ದೇವೀ ದಂಷ್ಟ್ರಾನನಸು ಶೋಭಿತಾ[26]

---

25. ಅದೇ., ಪು : 315, ಅ : 126, ಶ್ಲೋ : 11-12
26. ಅದೇ., ಪು : 318 ಅ : 227, ಶ್ಲೋ : 23-24

ಈ ವಿವರಣೆಯಂತೆ ಜಂಘಾ ರಚನೆಯಲ್ಲಿ ಪ್ರದಕ್ಷಿಣಾನುಸಾರ ಅಷ್ಟ ಮೂಲೆಗಳಲ್ಲಿ ಅಷ್ಟದಿಕ್ಪಾಲಕರು, ಅದರೊಂದಿಗೆ ಪಶ್ಚಿಮ ದಿಕ್ಕಿನಲ್ಲಿ ನಟೇಶ, ದಕ್ಷಿಣ ದಿಕ್ಕಿನಲ್ಲಿ ಅಂಧಕೇಶ್ವರ, ಉತ್ತರ ದಿಕ್ಕಿನಲ್ಲಿ ವಿಕೃತ ಸ್ವರೂಪಳಾದ ಚಂಡಿಕಾದೇವಿ ಎಂದು ಗುರುತಿಸಲಾಗಿದೆ. ನಾಗರಾದಿ ಜಾತಿಗಳಲ್ಲಿ ಶಾಸ್ತ್ರ ಗ್ರಂಥಗಳು ಕಲ್ಪಿಸಿದ ಅವಕಾಶ ವನ್ನು ಹೊಯ್ಸಳರ ಕಾಲದ ರೂವಾರಿಗಳು ದ್ರಾವಿಡ ಶೈಲಿಗೂ ವಿಸ್ತರಿಸಿದರು ಎಂದು ಹೇಳಬಹುದು.

ಹಾರ್ನಹಳ್ಳಿಯ ಕೇಶವ, ಬೆಳವಾಡಿಯ ವೀರನಾರಾಯಣ, ಹಳೇಬೀಡಿನ ಹೊಯ್ಸಳೇಶ್ವರ, ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ಇತ್ಯಾದಿ ದೇವಾಲಯಗಳಲ್ಲಿ ಜಂಘಾ ಭಾಗದಲ್ಲಿ ಲೀಲಾಮೂರ್ತಿಗಳನ್ನೂ ಮತ್ತು ಕೂಟಛಾದ್ಯ ರಚನೆಯನ್ನೂ ಕಾಣಬಹುದು. ಕೂಟಛಾದ್ಯದ ನಂತರ ಪುನರ್ ಜಂಘಾ ರಚನೆಯಿದ್ದು ಹಲವೆಡೆ ಶಿಖರಾಕೃತಿಗಳು ಕಡೆಯಲ್ಪಟ್ಟವೆ. ಕೆಲವೆಡೆ ದೇವ ದೇವತೆಗಳ ಲೀಲಾವಿಗ್ರಹ ಗಳಿದ್ದು, ಕೂಟಛಾದ್ಯ ರಚನೆಯಿರದೆ ಸ್ತಂಭಾಕಾರ ರಚನೆ ಛಾದ್ಯದವರೆಗೆ ಮುಂದು ವರೆಯುವುದನ್ನು ಗಮನಿಸಬಹುದು. ಅರಸೀಕೆರೆಯ ಶಿವಾಲಯವು ನಕ್ಷತ್ರಾಕಾರ ರಚನೆಯೆನಿಸಿದ್ದು ಭಿತ್ತಿ ಭಾಗದಲ್ಲಿ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳು ಪ್ರದಕ್ಷಿಣಾ ಕಾರದಲ್ಲಿ ಕಡೆಯಲ್ಪಟ್ಟವೆ.

ದಾಕ್ಷಿಣಾತ್ಯ ಸಂಪ್ರದಾಯದ ಪ್ರಭಾವದಿಂದ ಬೆಳೆದ ಭಿತ್ತಿ ಅಲಂಕಾರವನ್ನು ಪರಿಶೀಲಿಸಬಹುದು. ಈ ಸಂಪ್ರದಾಯದ ಭಿತ್ತಿ ರಚನೆಯು, ತೋರಣ, ವೃತ್ತ ಸ್ಫುಟಿತ, ಕುಂಭ ಸ್ತಂಭಾದಿ ರಚನೆಗಳನ್ನು ಹೊಂದಿದೆ. ತೋರಣಾಲಂಕಾರವು ಭಿತ್ತಿಯ ಪ್ರಾಚೀನ ಅಲಂಕಾರವೆನಿಸಿದ್ದು ಚಿತ್ರತೋರಣ, ಪತ್ರತೋರಣ ಮತ್ತು ಮಕರ ತೋರಣವೆಂದು ಪ್ರಭೇದಗಳನ್ನು ಶಾಸ್ತ್ರ ಗ್ರಂಥಗಳು ಗುರುತಿಸಿವೆ. ಇವು ಗಳಲ್ಲಿ ಮಕರ ತೋರಣವು ಹೆಚ್ಚು ಪ್ರಚಲಿತದಲ್ಲಿದ್ದು ಭಿತ್ತಿಯ ಮಧ್ಯದಲ್ಲಿ ಭದ್ರ ಭಾಗದಲ್ಲಿ ಹೆಚ್ಚು ಪ್ರದರ್ಶನಗೊಂಡಿತು.

ಔತ್ತರೇಯ ದ್ರಾವಿಡ ಶೈಲಿಯ ಆರಂಭದಲ್ಲಿ ಮಕರ ತೋರಣವನ್ನು ಭಿತ್ತಿ ಅಲಂಕಾರಕ್ಕೆ ಬಳಸಿದೆ. ಲಕ್ಕುಂಡಿಯ ಕಾಶಿ ವಿಶ್ವೇಶ್ವರ ದೇವಾಲಯದ ಕರ್ಣ ಭಾಗದಲ್ಲಿ ಮಕರ ತೋರಣವನ್ನು ಕಾಣಬಹುದು. ತದನಂತರ ದೇವಾಲಯಗಳಲ್ಲಿ ಭದ್ರಭಾಗವನ್ನು ದೇವಕೋಷ್ಠಗಳೂ, ಕರ್ಣಭಾಗವನ್ನು ವೃತ್ತ ಸ್ಫುಟಿತ ರಚನೆ ಗಳೂ ಆಕ್ರಮಿಸಿದ್ದು, ಮಕರ ತೋರಣಗಳು ಸ್ತಂಭ ಕುಂಭ ಲತಾ ರಚನೆಯ ಭಾಗ ವಾಗಿ ಪ್ರದರ್ಶಿಸಲ್ಪಟ್ಟವು.

ವೃತ್ತ ಸ್ಫುಟಿತ ಮತ್ತು ಕುಂಭಲತಾ ರಚನೆಗಳು ಒಂದೇ ಮೂಲದಿಂದ

ಉದಯಿಸಿವೆ. ವೃತ್ತ ಸ್ಫಾಟಿತವು ನಾಸಿಕ ಅಥವಾ ಕೂಟ ರಚನೆಗೆ ಹೆಚ್ಚು ಗಮನ ಹರಿಸಿದ್ದು, ಕುಂಭಸ್ತಂಭಲತಾ ರಚನೆಯಲ್ಲಿ ಕುಂಭ ಹಾಗೂ ಲತಾ ರಚನೆಗೆ ಪ್ರಾಧಾನ್ಯತೆ ಲಭಿಸಿತು. ವೃತ್ತ ಸ್ಫಾಟಿತವು ಎರಡು ಸ್ತಂಭಗಳ ರಚನೆಯಾಗಿ ಮಾರ್ಪಟ್ಟರೆ, ಕುಂಭ ಸ್ತಂಭವು ಏಕಸ್ತಂಭ ರಚನೆಯೆನಿಸಿತು. ಮಕರ ತೋರಣಗಳು ಕಣ್ಮರೆಯಾಗತೊಡಗಿದಾಗ ವೃತ್ತ ಸ್ಫಾಟಿತ ಹಾಗೂ ಕುಂಭ ಸ್ತಂಭ ರಚನೆಗಳಿಗೆ ಹೆಚ್ಚು ಒತ್ತು ಲಭಿಸಿತು.

ವೃತ್ತ ಸ್ಫಾಟಿತ ಮತ್ತು ಕುಂಭ ಸ್ತಂಭ ರಚನೆಗಳನ್ನು ಔತ್ತರೇಯ ದ್ರಾವಿಡ ಶೈಲಿಯಲ್ಲಿ ಯಥಾವತ್ತಾಗಿ ಸ್ವೀಕರಿಸಿದ್ದು, ದಾಕ್ಷಿಣಾತ್ಯ ದೇವಾಲಯಗಳಿಗಿಂತ ಹೆಚ್ಚು ಸಮರ್ಥವಾಗಿ ನಿರೂಪಿಸಲಾಗಿದೆ ಎಂದು ಗುರುತಿಸಬಹುದು.

ವೃತ್ತ ಸ್ಫಾಟಿತವು ತೋರಣ ಸ್ತಂಭಗಳಂತೆ ಆಯಾತಾಕಾರ ರಚನೆಯನ್ನು ಹೊಂದಿದ್ದು, ಕಂಠ ಮತ್ತು ಶುಕನಾಸ ಅಥವಾ ಕೂಟ ರಚನೆಯನ್ನೂ ಹೊಂದಿದೆ. ಕೂಟ ರಚನೆಯಲ್ಲಿ ಹಲವು ಶೈಲಿಗಳ ವಿವಿಧ ಆಕಾರಗಳನ್ನು ಪ್ರದರ್ಶಿಸಲಾಗಿದೆ. ಕಾಶ್ಯಪ ಶಿಲ್ಪವು ವೃತ್ತ ಸ್ಫಾಟಿತದ ರಚನೆಯನ್ನು ಕೆಳಕಂಡಂತೆ ಗುರುತಿಸಿದೆ.

> ವೃತ್ತಾಕಾರ ಸಮಂ ತಚ್ಚ ತೋರಣಾಂಘ್ರಿವದಾಯತಂ
> ಸಕಂದರಂ ತದೂರ್ಧ್ವೇತು ಶುಕನಾಸಂತು ವಾ
> ಕರ್ಣಕೂಟಾಕೃತಿಂ ವಾಽಥ ವೃತ್ತಾಕಾರಂ ಪ್ರಕಲ್ಪಯೇತ್[27]

ವೃತ್ತಾಕಾರವೆನ್ನುವುದನ್ನು ಇಲ್ಲಿ ಖಚಿತವಾಗಿ ಅರ್ಥೈಸಲು ಸಾಧ್ಯವಾಗಿಲ್ಲ.

ಕಾಮಿಕಾಗಮ ಗ್ರಂಥವು ಸ್ತಂಭಲತಾಲಂಕಾರದ ವಿವರಗಳನ್ನು ನೀಡಿದ್ದು, ಮೂರು ಪ್ರಭೇದಗಳನ್ನು ಹೆಸರಿಸಿದೆ.

> ಚಿತ್ರಕುಂಭಲತಾ ಪೂರ್ವಾ ಸ್ತಂಭ ಕುಂಭಲತಾಪರಾ
> ಕುಂಭ ಕುಂಭ ಲತಾ ಮೂಲೇ ದಂಡ ದ್ವಿಗುಣ ವಿಸ್ತರಾ[28]

ಸ್ತಂಭಲತಾಲಂಕಾರದಲ್ಲಿ ಚಿತ್ರಕುಂಭಲತಾ, ಸ್ತಂಭಕುಂಭಲತಾ ಮತ್ತು ಕುಂಭ ಕುಂಭಲತಾ ಎಂದು ಮೂರು ಪ್ರಭೇದಗಳು. ಚಿತ್ರಕುಂಭಲತಾ ರಚನೆ ಅತಿ ಪ್ರಾಚೀನವೆನ್ನಿಸಿದೆ. ಈ ಮೂರು ಪ್ರಭೇದಗಳ ವಿವರವನ್ನು ಸಂಗ್ರಾಹ್ಯವಾಗಿ ಕೆಳಕಂಡಂತೆ ಸೂಚಿಸಿದೆ. ಚಿತ್ರಕುಂಭಲತಾ ಎಂದಲ್ಲಿ ಕೇವಲ ಕುಂಭ ರಚನೆಯಿದ್ದು ಅದರೊಡನೆ ಲತಾಲಂಕಾರವಿದೆ.

---

27. ಡಿ. ಕೃಷ್ಣರಾಯ ಮತ್ತು ವಿ. ಜಿ. ಆಪ್ಟೆ (ಸಂ), ಕಾಶ್ಯಪಶಿಲ್ಪ, ಪೂನಾ, 1921, ಪು : 38, ಪ : 16, ಶ್ಲೋ : 3-4
28. ಕಾಮಿಕಾಗಮ, ಪು : 147, ಪ : 55, ಶ್ಲೋ : 99-100

ಸ್ತಂಭಕುಂಭಲತಾ ಎಂದಲ್ಲಿ ಪಾಲಿಕೆಯೊಡನೆ ಆರಂಭವಾದ ಸ್ತಂಭ ರಚನೆಯಲ್ಲಿ ಸ್ತಂಭಾಗ್ರದಲ್ಲಿ ಫಲಕ ಮತ್ತು ಪದ್ಮಗಳ ರಚನೆ. ಪದ್ಮಗಳ ರಚನೆಗೆ ಬದಲಾಗಿ ಶುಕನಾಸ ಅಥವಾ ಕೂಟ ರಚನೆಯನ್ನು ಕಾಣಬಹುದು. ಪದ್ಮ, ಶುಕನಾಸ ಅಥವಾ ಕೂಟ ರಚನೆಯು ಕುಂಭ ರಚನೆಗೆ ಪರ್ಯಾಯವೂ ಹೌದು. ಲತಾ ರಚನೆ ಇಲ್ಲಿ ಗೌಣ.

ಕುಂಭ ಕುಂಭಲತಾ ಎಂದಲ್ಲಿ ಪಾಲಿಕಾ ರಚನೆಯ ನಂತರ ಕುಂಭ. ಕುಂಭ ಮುಖದಿಂದ ಸ್ತಂಭ ಹಾಗೂ ಲತಾ ಮಂಡಲ, ಸ್ತಂಭಾಗ್ರದಲ್ಲಿ ಫಲಕ ಹಾಗೂ ಪದ್ಮ. ಪದ್ಮಕ್ಕೆ ಬದಲಾಗಿ ಶುಕನಾಸ ಅಥವಾ ಕೂಟ, ಪಂಜರಗಳ ರಚನೆ. ಇವೂ ಕುಂಭಕ್ಕೆ ಪರ್ಯಾಯವಾಗಿ ರಚನೆಗೊಂಡಿವೆ.

ಸ್ತಂಭ ರಹಿತವಾದ ಚಿತ್ರ ಕುಂಭಲತಾ ರಚನೆಯನ್ನು ಐಹೊಳೆಯ ಲಾಡ್‌ಖಾನ್ ದೇವಾಲಯ, ಗೌಡರ ಗುಡಿ ಮತ್ತು ಅದರ ಹಿಂದಿರುವ ಸೂರ್ಯನ ಗುಡಿಗಳಲ್ಲಿ ಕಕ್ಷಾಸನದ ಮೇಲೆ ಕಾಣಬಹುದು. ಚಿತ್ರಕುಂಭದ ಮತ್ತೊಂದು ಹಂತವನ್ನು ಎಲ್ಲೋರಾದಲ್ಲಿರುವ ದೇವಾಲಯಗಳ ಸ್ತಂಭಗಳಲ್ಲಿ ವೀಕ್ಷಿಸಬಹುದು. ಗದಗಿನ ಸರಸ್ವತೀ ದೇವಾಲಯದಲ್ಲಿ ಕಕ್ಷಾಸನದ ಮೇಲೆ ರಚನೆಗೊಂಡ ಉಬ್ಬು ಶಿಲ್ಪಗಳಲ್ಲಿ ಪರೀಕ್ಷಿಸಬಹುದು. ಬೋದಿಗೆ ಇಲ್ಲದ ರಚನೆಯೊಂದಿಗೆ ಸ್ತಂಭ ಕುಂಭ ಲತಾ ರಚನೆಯನ್ನು ಗುರುತಿಸಿದ್ದು, ಸ್ತಂಭ ತೋರಣವನ್ನೂ ರಚಿಸಬೇಕೆಂದು ಕಾಶ್ಯಪ ಶಿಲ್ಪ ಗ್ರಂಥವು ನಿರ್ದೇಶಿಸಿದೆ. ಕುಂಭ ಕುಂಭಲತಾ ಎಂದು ಹೆಸರಿಸುವ ರಚನೆಯೇ ದಾಕ್ಷಿಣಾತ್ಯ ದೇವಾಲಯಗಳಲ್ಲಿ ಗುರುತಿಸಲಾಗುವ ಕುಂಭ ಪಂಜರ ಲನಿಸಿದೆ. ಕುಂಭ ಪಂಜರ ರಚನೆಗಳನ್ನು ತಂಜಾವೂರಿನ ಬೃಹದೀಶ್ವರ ಹಾಗೂ ಸಮಕಾಲೀನ ದೇವಾಲಯಗಳಲ್ಲಿ ಕಾಣಬಹುದು. ಕರ್ನಾಟಕದಲ್ಲಿ ವಿಜಯನಗರದ ಅರಸರ ಕಾಲದಲ್ಲಿ ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಔತ್ತರೇಯ ದ್ರಾವಿಡ ಶೈಲಿಯ ದೇವಾಲಯಗಳಲ್ಲಿ ಕಂಡು ಬರುವ ಕುಂಭ ಸ್ತಂಭ ರಚನೆಯನ್ನು ಗಮನಿಸಬೇಕು.

ಔತ್ತರೇಯ ದ್ರಾವಿಡ ಶೈಲಿಯ ದೇವಾಲಯಗಳಲ್ಲಿ ಕುಂಭ ಸ್ತಂಭ ಅಥವಾ ಸ್ತಂಭ ಕುಂಭ ರಚನೆಯು ಭಿತ್ತಿ ಹಾಗೂ ಕಕ್ಷಾ ಸನಗಳಲ್ಲಿ ಪ್ರದರ್ಶನ ಗೊಂಡಿದೆ. ಭಿತ್ತಿ ಭಾಗವನ್ನು ಕರ್ಣ, ಪ್ರತಿರಥ ಮತ್ತು ಭದ್ರ ಎಂಬ ಭಾಗಗಳೆಂದು ವಿಭಾಗಿಸಲಾಗಿದ್ದು, ಭದ್ರ ಭಾಗದಲ್ಲಿ ಕೋಷ್ಠ, ಕರ್ಣಭಾಗದಲ್ಲಿ ವೃತ್ತ ಸ್ಫಾಟಿತ ಮತ್ತು ಪ್ರತಿರಥ ಭಾಗದಲ್ಲಿ ಸ್ತಂಭಕುಂಭ ರಚನೆಗಳನ್ನು ಕಾಣಬಹುದು. ಕೆಲವೊಮ್ಮೆ ಭದ್ರಭಾಗದಲ್ಲಿ ಕೋಷ್ಠಕ್ಕೆ ಬದಲಾಗಿ ವೃತ್ತ ಸ್ಫಾಟಿತವನ್ನು ಕಾಣಬಹುದು. ದೇವಾಲಯಗಳಲ್ಲಿ ಪೀಠ, ಪೀಠಾನಂತರ ಭಿತ್ತಿ, ಭಿತ್ತಿಯಲ್ಲಿ ಪಾಲಿಕಾ ಸ್ತರದಿಂದ ಆರಂಭಗೊಂಡ ಸ್ತಂಭ, ಸ್ತಂಭಾಗ್ರದಲ್ಲಿ ಫಲಕ, ಫಲಕದ ಮೇಲೆ ಕೂಟ ಅಥವಾ

ಶಿಖರಾಕೃತಿಗಳಿವೆ. ಕಾಶ್ಯಪ ಶಿಲ್ಪದಲ್ಲಿ ವಿಧಿಸಿದಂತೆ ತೋರಣ ಸ್ತಂಭಗಳು ಹಾಗೂ ತೋರಣಾಲಂಕಾರವು ಕುಂಭಸ್ತಂಭವನ್ನು ಆವರಿಸಿ ನಿಂತಿವೆ. ಇದು ಭಿತ್ತಿಯ ಅಲಂಕಾರವೆನ್ನಿಸಿದೆ. ಕಕ್ಷಾಸನದ ಸಾಮಾನ್ಯ ರಚನೆಯನ್ನು ಗ್ರಹಿಸಿ ನಂತರ ಕುಂಭ ಸ್ತಂಭ ಅಲಂಕಾರವನ್ನು ಗಮನಿಸಬಹುದು, ಸಮರಾಂಗಣ ಸೂತ್ರಧಾರ ಗ್ರಂಥವು ಪೀಠಾನಂತರ ರಚಿಸಲಾಗುವ ಕಕ್ಷಾಸನವನ್ನು ಕೆಳಕಂಡಂತೆ ವಿವರಿಸಿದೆ.

ಭಾಗಿಕಂ ರಾಜಸೇನಂಸ್ಯಾತ್ ವೇದಿಕಾಪಿ ದ್ವಿಭಾಗಕೀ
ಮತ್ತ ವಾರಣಕಂ ಕಾರ್ಯಂ ಭಾಗದ್ವಯ ಸಮ್ಮಿತಂ[29]

ಪೀಠಾ ನಂತರ, ಕಕ್ಷಾಸನದ ಸ್ತರಗಳಾಗಿ ರಾಜಸೇನ, ವೇದಿಕಾ ಮತ್ತು ಮತ್ತವಾರಣ ಎಂದು ಗುರುತಿಸಲಾಗಿದೆ. ಕಕ್ಷಾಸನದ ಒರಗು ಭಾಗವೇ ಮತ್ತ ವಾರಣ, ಕುಂಭ ಸ್ತಂಭ ರಚನೆಯನ್ನು ವೇದಿಕಾ ಭಾಗದಲ್ಲಿ ಕಾಣಬಹುದಾಗಿದ್ದು ತೋರಣರಹಿತಸ್ಥಿತಿ ಯೆನಿಸಿದೆ. ಭಿತ್ತಿಯ ಅಲಂಕಾರಕ್ಕೆ ಸಂಬಂಧಿಸಿದಂತೆ ದೀಪಾರ್ಣವ ಗ್ರಂಥದಲ್ಲಿ ಕೆಳಕಂಡ ಶ್ಲೋಕಗಳನ್ನು ಕಾಣಬಹುದು.

ನಾಗರೀ ಚ ತಥಾಲಾಟೀ ವೈರಾಟೀ ದ್ರಾವಿಡೀ ತಥಾ
ಶುದ್ಧಾ ತು ನಾಗರೀ ಖ್ಯಾತಾ ಪರಿಕರ್ಮವರ್ಜಿತಾ
ಸ್ತ್ರೀಯುಗ್ಮ ಸಂಯುತಾ ಲಾಟೀ ವೈರಾಟೀ ಪತ್ರ ಸಂಕುಲಾ
ಮಂಜರೀ ಬಹುಲಾ ಕಾರ್ಯಾ ಜಂಘಾಚ ದ್ರಾವಿಡೀ ಸದಾ[30]

ಜಂಘಾರಚನೆಯ ಅಲಂಕಾರವನ್ನಾಧರಿಸಿ, ಔತ್ತರೇಯ ಸಂಪ್ರದಾಯದಲ್ಲಿ ನಾಗರೀ, ಲಾಟೀ, ವೈರಾಟೀ ಮತ್ತು ದ್ರಾವಿಡೀ ಎಂದು ನಾಲ್ಕು ಪ್ರಭೇದಗಳನ್ನು ಗುರುತಿಸಿಲಾಗಿದೆ. ಔತ್ತರೇಯ ದ್ರಾವಿಡ ಶೈಲಿಯ ಜಂಘಾ ರಚನೆಯು ದ್ರಾವಿಡೀ ಎನ್ನಿಸಿದ್ದು, ಮಂಜರೀ ರಚನೆಯನ್ನು ದ್ರಾವಿಡೀ ಜಂಘಾ ಭಾಗದಲ್ಲಿ ಅಪೇಕ್ಷಿಸ ಲಾಗಿದೆ.

ಸಮರಾಂಗಣ ಸೂತ್ರಧಾರ ಗ್ರಂಥವು ಮಂಜರಿಯ ಸ್ಥಾನವನ್ನು "ಮಂಜುರ್ಯಾ ಸ್ತಂಭ ಸೀಮಾನಾಂ" ಎಂದು ಉಲ್ಲೇಖಿಸಿದ್ದು ಮಂಜರಿಯ ಸ್ವರೂಪವನ್ನು "ನೀಲೋತ್ಪಲ ದಲಾಕಾರಾ ಮಂಜುರ್ಯಾ ಸರ್ವ ಶೋಭನಾ" ಎಂದು ವಿವರಿಸಿದೆ. ಮಂಜರೀ ಪದವನ್ನು ವಿದ್ವಾಂಸರು ಶೃಂಗ ಅಥವಾ ಅಂಡಕ ಎಂದು ಅರ್ಥೈಸಿದ್ದಾರೆ.

---

29. ಸಮರಾಂಗಣ ಸೂತ್ರಧಾರ, ಪು: 548, ಅ: 67, ಶ್ಲೋ. 66
30. ಪ. ಒ. ಸೋಂಪುರ (ಸಂ.) ದೀಪಾರ್ಣವ, ಪಾಲಿಟಾನಾ, 1968 ಪು. 63, ಅ: 5, ಶ್ಲೋ : 28. 30

ದಾಕ್ಷಿಣಾತ್ಯ ಗ್ರಂಥಗಳಲ್ಲಿ ಸ್ತಂಭ ಕುಂಭಲತಾ ಮತ್ತು ಕುಂಭ ಕುಂಭಲತಾ ರಚನೆಯಲ್ಲಿ ಸ್ತಂಭಾಗ್ರದಲ್ಲಿ ಕುಂಭಕ್ಕೆ ಬದಲಾಗಿ ಪದ್ಮದ ಉಲ್ಲೇಖವಿದ್ದು ಪರ್ಯಾಯವಾಗಿ ಕೂಟ ಅಥವಾ ಶುಕನಾಸ ರಚನೆಯನ್ನು ಕಾಣುತ್ತೇವೆ. ನೀಲೋತ್ಪಲ ಅಥವಾ ಪದ್ಮ ರಚನೆಯು ಕ್ವಚಿತ್ತಾಗಿ ಬಳ್ಳಿಗಾವೆಯಲ್ಲಿ ಕಾಣಿಸಿಕೊಂಡಿದೆ. ಬಹುಶಃ ಇವೆರಡೂ ಅಲಂಕಾರಗಳಲ್ಲಿರುವ ಶೃಂಗ ಅಥವಾ ಶಿಖರಾಕೃತಿಗೆ ಅನ್ವಯುವೆನಿಸಿದೆ. ಈ ರೀತಿಯ ಗುರುತಿಸುವಿಕೆ ದಾಕ್ಷಿಣಾತ್ಯ ಹಾಗೂ ಔತ್ತರೇಯ ಸಂಪ್ರದಾಯಗಳ ಸಂಯೋಗದಿಂದ ಉಂಟಾದ ಭಿತ್ತಿ ಅಲಂಕಾರಕ್ಕೆ ಅನ್ವಯುವಾಗುವಂಥದ್ದು. ಇದನ್ನು ಮೂರನೆಯ ಪ್ರಭೇದವೆನ್ನಲಾಗಿದೆ. ಕ್ರಿ.ಶ. ೧೨ನೆಯ ಶತಮಾನದ ಹೊಯ್ಸಳರ ಹಲವು ದೇವಾಲಯಗಳಲ್ಲಿ ಭಿತ್ತಿಯ ಕರ್ಣ, ಪ್ರತಿರಥ ಮತ್ತು ಭದ್ರ ಭಾಗದಲ್ಲಿ, ದೇವತಾ ಮೂರ್ತಿಗಳನ್ನೂ, ತದನಂತರ ಶಿಖರಾ ಕೃತಿಗಳನ್ನೂ ಮಂಜರೀ ಎಂದು ಗುರುತಿಸಬಹುದು. ಜಂಘಾ ಭಾಗದ ದೇವತಾ ಮೂರ್ತಿಗಳ ರಚನೆಯಃ ವೃತ್ತ ಸ್ಫಾಟಿತ ಮತ್ತು ಕುಂಭ ಸ್ತಂಭಗಳಲ್ಲಿರುವ ಸ್ತಂಭ ಭಾಗವನ್ನು ಗೌಣವಾಗಿಸಿದೆ. ಭದ್ರಭಾಗದ ಇಕ್ಕೆಲಗಳಲ್ಲಿ ಲತಾಲಂಕಾರವನ್ನು ಸಾಲಭಂಜಿಕಾ ವಿಗ್ರಹಗಳನ್ನೂ ಕಾಣಬಹುದು.

ಭಿತ್ತಿ ಭಾಗದಲ್ಲಿ ಪರ್ಯಾಯವಾಗಿ ನಿಂತ ಸ್ತಂಭ ರಚನೆಯನ್ನು ಕುಂಭೀ, ಸ್ತಂಭ, ಭರಣೀ ಮತ್ತು ಸ್ತಂಭಶೀರ್ಷ ಎಂಬ ನಾಲ್ಕು ಭಾಗಗಳಾಗಿ ಗುರುತಿಸಬಹುದು. ಕುಂಭೀ ಅಥವಾ ಕುಂಭ ಭಾಗವು ಸ್ತಂಭದ ಪೀಠವೆನಿಸಿದೆ. ಸ್ತಂಭವು ದಂಡಭಾಗವೆನಿಸಿದ್ದು ಅಲಂಕಾರವುಳ್ಳದ್ದು. ಭರಣಿಯು ದಾಕ್ಷಿಣಾತ್ಯ ಸಂಪ್ರದಾಯದಲ್ಲಿ ಕಂಡು ಬರುವ ಪದ್ಮ ಹಾಗೂ ಫಲಕಕ್ಕೆ ಸಮನಾದುದು. ಸ್ತಂಭಶೀರ್ಷವು ಬೋದಿಗೆಯಾಗಿದೆ. ದಾಕ್ಷಿಣಾತ್ಯ ಸಂಪ್ರದಾಯದ ಗಂಗರ ಕಾಲದ ದೇವಾಲಯಗಳನ್ನು ಗಮನಿಸಿದಲ್ಲಿ, ಈ ವಿವರಣೆಯನ್ನು ಸ್ತಂಭದ ಭಾಗಗಳಲ್ಲಿ ಗುರುತಿಸಿಕೊಳ್ಳಬಹುದು.

ಜಂಘಾ ಭಾಗದ ರಚನೆಯ ನಂತರ ಛಾದ್ಯವನ್ನು ಕಾಣುತ್ತೇವೆ. ಔತ್ತರೇಯ ದ್ರಾವಿಡ ಶೈಲಿಯಲ್ಲಿ ಪೀಠಾನಂತರ ಭೂಮಿಯನ್ನು ಗುರುತಿಸುವುದರಿಂದ ಆರಂಭ ಹಂತಗಳಲ್ಲಿ ಛಾದ್ಯಕ್ಕೆ ಪ್ರತ್ಯೇಕ ಸ್ಥಾನವಿಲ್ಲ. ಛಾದ್ಯವನ್ನು ಮೊದಲ ಹಂತದ ಭೂಮಿಯಲ್ಲಿ ಗುರುತಿಸಬಹುದು. ಆದ್ದರಿಂದ ಛಾದ್ಯವು ಕಪೋತ ರಚನೆಗಷ್ಟೇ ಸೀಮಿತವಾಗಿದೆ. ಮೊದಲ ಭೂಮಿಯ ಜಂಘಾ ಹಾಗೂ ಛಾದ್ಯ ರಚನೆಯನ್ನು ಗುರುತಿಸುವಲ್ಲಿ ಹರಳಹಳ್ಳಿಯ ಗಳಗನಾಥ ದೇವಾಲಯವು ಮಾದರಿಯಾಗಿದೆ. ಈ ದೇವಾಲಯದ ಪೀಠವು ಎರಡು ಹಂತಗಳಲ್ಲಿದ್ದು ಮೊದಲ ಹಂತವು ಗರ್ಭಗೃಹ ಹಾಗೂ ಅದರ ಮುಂದಿನ ಅಂತರಾಳ ಮತ್ತು ಮಂಟಪಗಳಿಗೆ ವ್ಯಾಪಿಸಿದೆ. ಎರಡನೆಯ ಹಂತವು ಗರ್ಭಗೃಹಕ್ಕಷ್ಟೇ ಸೀಮಿತವಾಗಿದ್ದು ನಂತರ ಭೂಮಿ

ರಚನೆಯನ್ನು ಕಾಣುತ್ತೇವೆ. ಮೊದಲ ಭೂಮಿ ರಚನೆಯಲ್ಲಿ ಜಂಘಾ ಮತ್ತು ಕೂಟ ಗಳೆಂಬ ಭಾಗಗಳಿದ್ದು ಈ ರಚನೆಯಲ್ಲಿ ಜಂಘಾ ಮತ್ತು ಛಾದ್ಯಕ್ಕೆ ಸ್ವತಂತ್ರವಾದ ಸ್ಥಾನವಿಲ್ಲ ಎಂದು ಗಮನಿಸಬಹುದು.

ಕುಕ್ಕನೂರಿನ ಕಲ್ಲೇಶ್ವರ, ಡಂಬಳದ ದೊಡ್ಡಬಸಪ್ಪ, ಬಳ್ಳಿಗಾವೆಯ ಕೇದಾರೇಶ್ವರ ಮೊದಲಾದ ದೇವಾಲಯಗಳಲ್ಲಿ ಛಾದ್ಯ ರಚನೆಯು ಕಪೋತ ರಚನೆಗಷ್ಟೇ ಸೀಮಿತಗೊಂಡಿದೆ. ತದನಂತರ ಕಾಲದ ದೇವಾಲಯಗಳಲ್ಲಿ, ಮಂಟಪ ಭಾಗದಲ್ಲಿ ಕಾಣುವ ಛಾದ್ಯದಂತೆ ಗರ್ಭಗೃಹದ ಭಾಗದಲ್ಲಿಯೂ ಛಾದ್ಯವು ಮುಂಚಾಚಿದ್ದು, ಜಂಘಾ ಹಾಗೂ ಛಾದ್ಯವನ್ನು ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವಾಯಿತು. ಈ ರೀತಿ, ಗರ್ಭಗೃಹದ ಭಾಗದಲ್ಲಿ ಪ್ರತ್ಯೇಕವಾಗಿ ಗುರುತಿಸಲಾಗುವ ಛಾದ್ಯ ರಚನೆಯೇ ಹೆಚ್ಚು ಲಭ್ಯ. ಇವುಗಳ ಬಾಗುವಿಕೆ, ಜಂಘಾ ಭಾಗದ ಅಲಂಕಾರಕ್ಕೆ ಸುರಕ್ಷತೆಯನ್ನೂ, ದೇವಾಲಯದ ಒಟ್ಟಾರೆ ಸ್ವರೂಪಕ್ಕೆ ಶೋಭೆಯನ್ನೂ ನೀಡಿದೆ.

ಔತ್ತರೇಯ ದೇವಾಲಯಗಳಲ್ಲಿ ಛಾವಣಿಯಿಂದ ಮೇಲಕ್ಕೆ ನಿಂತ ಶಿಖರ ಭಾಗಕ್ಕೆ ಶೃಂಗವೆಂದು ಹೆಸರು. ಚತುರಸ್ರಾಕಾರವುಳ್ಳ ದೇವಾಲಯಗಳಲ್ಲಿ ಮೂಲ ಶೃಂಗಕ್ಕೆ ಹೊಂದಿಕೊಂಡಂತೆ ಭದ್ರಭಾಗದಲ್ಲಿ ಉರುಶೃಂಗ ರಚನೆಗಳಿವೆ ಉರು ಶೃಂಗದ ಇಕ್ಕೆಲಗಳಲ್ಲಿ ಪ್ರತ್ಯಂಗ ರಚನೆಗಳಿವೆ. ಇದಲ್ಲದೆ ಕರ್ಣ ಹಾಗೂ ಪ್ರತಿರಥ ಭಾಗದಲ್ಲಿ ಕಿರಿದಾದ ಅಲಂಕಾರಿಕ ಶೃಂಗಗಳಿವೆ. ದೇವಾಲಯವು ಕೇವಲ ಮೂಲ ಶೃಂಗ ಅಥವಾ ಏಕಶೃಂಗವುಳ್ಳದ್ದಾದರೆ ಲತಿನ ಜಾತಿಗೆ ಸೇರಿದ್ದು ; ಶೃಂಗ, ಉರು ಶೃಂಗ, ಪ್ರತ್ಯಂಗ, ಕರ್ಣಶೃಂಗಾದಿಗಳು ನಿಯತಕ್ರಮವನ್ನು ಅನುಸರಿಸಿ ನಿಂತಲ್ಲಿ ವಿಮಾನ ನಾಗರ ಶೈಲಿ ಎಂದು ಗುರುತಿಸಲಾಗುತ್ತದೆ.

ಉರುಶೃಂಗಂ ಯದಾಲುಕ್ತಂ ರೇಖಾಕರ್ಣ ಜಲಾಂತರೈಃ[31]

ಔತ್ತರೇಯ ದ್ರಾವಿಡ ಶೈಲಿಯಲ್ಲಿ ಉರು, ಶೃಂಗಗಳಿಲ್ಲ ; ಅದಕ್ಕೆ ಬದಲಾಗಿ ಭದ್ರಭಾಗದಲ್ಲಿ ಶಾಲಾರಚನೆಯಿದೆ ಕರ್ಣ ಹಾಗೂ ಪ್ರತಿರಥ ಭಾಗದಲ್ಲಿ ಕಿರಿದಾದ ಅಲಂಕಾರಿಕ ಶೃಂಗಗಳಿಲ್ಲ ! ಅದಕ್ಕೆ ಬದಲಾಗಿ ಕೂಟ ಹಾಗೂ ಪಂಜರ ರಚನೆಗಳಿವೆ. ಶಾಲಾ, ಪಂಜರ, ಕರ್ಣಕೂಟಗಳನ್ನು ಜಲಾಂತರವು ಒಂದು ಸಾಲಿನಲ್ಲಿ ಬಂಧಿಸಿದೆ. ಇದು ಪ್ರತಿಭೂಮಿಯಲ್ಲಿ ಕಾಣಬರುವ ರಚನೆ. ಈ ಜೋಡಣೆ ಅಥವಾ ಕ್ರಮವನ್ನು ರೇಖಾ ಎಂದು ಗುರುತಿಸಲಾಗಿದೆ. ಕರ್ಣ ಎನ್ನುವ ಪದ ಬಹುಶಃ ಕರ್ಣಕೂಟಕ್ಕೆ

31. ಅಪರಾಜಿತ ಪೃಚ್ಛಾ, ಪು : 343, ಅ : 138, ಶ್ಲೋ : 26

ಸಂಬಂಧಿಸಿದೆ. ಲತಿನ ಹಾಗೂ ವಿಮಾನ ನಾಗರ ಶೈಲಿಗಳು ಬಾಗಿದ ಶಿಖರವುಳ್ಳವು. ದ್ರಾವಿಡಾದಿ ಶೈಲಿಗಳ ಶಿಖರವು ಮೆಟ್ಟಿಲು ಮೆಟ್ಟಿಲಾಗಿ ಮೇಲೇರುತ್ತದೆ. ಶಾಸ್ತ್ರಗ್ರಂಥಗಳ ಪ್ರಕಾರ ದ್ರಾವಿಡಾದಿ ಶೈಲಿಗಳಲ್ಲಿ ಹನ್ನೆರಡರವರೆಗೆ ಭೂಮಿ ರಚನೆಗೆ ಅವಕಾಶವಿದೆ.

ಏಕಭೂಮ್ಯಾದಿತೋ ವೃದ್ಧಿರ್ಯಾವದ್ ದ್ವಾದಶ ಭೂಮಿಕಾಃ[32]

ಶಾಸ್ತ್ರಗ್ರಂಥಗಳ ಪ್ರಕಾರ ಔತ್ತರೇಯ ದ್ರಾವಿಡ ಶೈಲಿಯಲ್ಲಿ ಐದು ಪ್ರಭೇದಗಳು. ಭೂಮಿ ರಚನೆಯಲ್ಲಿರುವ ಶಾಲಾ, ಕರ್ಣಕೂಟ, ಪಂಜರ, ಹಾರಾಂತರ, ಇವುಗಳ ಅಳತೆ, ಜೋಡಣೆ ಹಾಗೂ ತಲಚ್ಛಂದವನ್ನು ಅನುಸರಿಸಿ ಈ ಪ್ರಭೇದಗಳ ಕಲ್ಪನೆ ಮೂಡಿದೆ. ತಲಚ್ಛಂದವು ಚತುಶ್ರ ಅಥವಾ ವೃತ್ತಕವೆನಿಸಿದ್ದು ಪೀಠದಿಂದ ಮೇಲೆ ಕಿರಿದಾಗುತ್ತಾ ಸಾಗುತ್ತದೆ. ವೃತ್ತಕವೆನ್ನುವುದು ನಕ್ಷತ್ರಾಕಾರ ರಚನೆಯೇ ಆಗಿದೆ. ನಕ್ಷತ್ರಾಕಾರವೆಂಬ ಉಲ್ಲೇಖ ವಾಸ್ತು ಗ್ರಂಥಗಳಲ್ಲಿಲ್ಲ. ಅಧ್ಯಯನ ಸೌಲಭ್ಯಕ್ಕಾಗಿ ನಾವುಗಳು ಗುರುತಿಸಿದ್ದೆಂದು ತಿಳಿಯಬಹುದು. ಸಮರಾಂಗಣ ಸೂತ್ರಧಾರ ಹಾಗೂ ಅಪರಾಜಿತ ಪೃಚ್ಛಾ ಗ್ರಂಥಗಳಲ್ಲಿ ಕೆಳಕಂಡಂತೆ ಪ್ರಭೇದಗಳು ಗುರುತಿಸಲ್ಪಟ್ಟಿವೆ.

ತತ್ರಪದ್ಮೋ ಮಹಾಪದ್ಮೋ ವರ್ಧಮಾನಸ್ತಥಾಪರಃ
ಸ್ವಸ್ತಿಕಃ ಸರ್ವತೋಭದ್ರಃ ಪ್ರಾಸಾದಾಃ ಪಂಚಕೀರ್ತಿತಾಃ[33]

ಪದ್ಮ, ಮಹಾಪದ್ಮ, ವರ್ಧಮಾನ, ಸ್ವಸ್ತಿಕ, ಸರ್ವತೋಭದ್ರ ಇವೇ ಐದ ಪ್ರಭೇದಗಳು.

ಸ್ವಸ್ತಿಕಾ ಸರ್ವತೋಭದ್ರಾ ವರ್ಧಮಾನಾ ತೃತೀಯಕಾಃ
ಸೂತ್ರಪದ್ಮಾ ಮಹಾಪದ್ಮಾ ದ್ರಾವಿಡೈಃ ಕರ್ಮಚರ್ಚಿತಾಃ
ದ್ರಾವಿಡಾಖ್ಯೇಚ ಪ್ರಾಸಾದೇ ಇಷು ಭೇದಾಃ ಸಮೀರಿತಾಃ[34]

ಅಪರಾಜಿತ ಪೃಚ್ಛಾ ಗ್ರಂಥದಲ್ಲಿ ಸೂತ್ರಪದ್ಮಾ ಎಂದಿದ್ದರೂ ಪದ್ಮಾ ಎಂದು ಪ್ರಭೇದವನ್ನು ಗುರುತಿಸಲಾಗಿದೆ. ಸ್ವಸ್ತಿಕ, ಸರ್ವತೋಭದ್ರ ಹಾಗೂ ವರ್ಧಮಾನ ಪ್ರಭೇದಗಳು ಚತುರಶ್ರಾಕಾರ ರಚನೆಗಳೆನಿಸಿವೆ. ಪದ್ಮ ಹಾಗೂ ಮಹಾಪದ್ಮ ಪ್ರಭೇದಗಳು ಕ್ರಮವಾಗಿ ಅಷ್ಟಾಶ್ರ ಮತ್ತು ಷೋಡಶಾಶ್ರ ರಚನೆಗಳು. ಇಪ್ಪತ್ತನಾಲ್ಕು ಹಾಗೂ ಮೂವತ್ತೆರಡು ಕೋನಗಳುಳ್ಳ ರಚನೆಗಳನ್ನು ಕೈಲಾಸ ಮತ್ತು ಮೇರುನಾಯಕ ಎಂಬ ಪುನರ್ ಪ್ರಭೇದಗಳಾಗಿ ಗುರುತಿಸಲಾಗಿದೆ.

---

32. ಅದೇ, ಪು : 315, ಅ : 126, ಶ್ಲೋ : 13
33. ಸಮರಾಂಗಣ ಸೂತ್ರಧಾರ, ಪು ; 469, ಅ : 61, ಶ್ಲೋ : 32-33
34. ಅಪರಾಜಿತ ಪೃಚ್ಛಾ, ಪು : 262, ಅ : 105, ಶ್ಲೋ : 2-3

ಅಷ್ಟಕೋಣಾಃ ಪಂಚಭೂಮಾ ಪದ್ಮನಾಮಾಚ ಕಾಮದಃ
ಪಂಚಭೂಮಾಃ ದ್ವಷ್ಟದಲಾ ಮಹಾಪದ್ಮ ಇತಿಸ್ಮೃತಃ
ಚತುರ್ವಿಂಶತಿಭಿರ್ವೃತ್ತಃ ಕೈಲಾಸಃ ಸಪ್ತಭೂಮಿಕಃ
ದ್ವಾತ್ರಿಂಶಧ್ಭಿರ್ದಲೈರ್ವೃತ್ತಃ ಸಭವೇನ್ಮೇರುನಾಯಕಃ[35]

ಚತುರಶ್ರಾಕಾರ ರಚನೆಗಳಲ್ಲಿ ಕರ್ಣಕೂಟ, ಹಾರಾಂತರ, ಪಂಜರ, ಶಾಲಾ ರಚನೆಗಳ ಅಳತೆ ಅಂತರಗಳು ವ್ಯತ್ಯಾಸವಿದ್ದು ಪ್ರತಿಪ್ರಭೇದಗಳಿಗೂ ಪ್ರತ್ಯೇಕ ವಿವರಣೆ ಇದೆ. ವೃತ್ತಕ ಜಾತಿಯಲ್ಲಿ ಕೇವಲ ಕರ್ಣಕೂಟಗಳಿದ್ದು ಮಧ್ಯೆ ಪಂಜ-ರಾದಿಗಳಿಲ್ಲ.

ಕೂಟಯೋರುಭಯೋರ್ಮಧ್ಯೇ ಸೂಕರಾನನ ಸನ್ನಿಭಂ[36]

ಚತುರಶ್ರಾಕಾರ ತಲಚ್ಛಂದಗಳ ವಿವರಣೆಯಲ್ಲಿ ಹಾರಾಂತರಕ್ಕೆ ಪರ್ಯಾಯವಾಗಿ ಸಲಿಲಾಂತರ, ಜಲಮಾರ್ಗ, ತೋಯಮಾರ್ಗ ಎಂಬ ಪದಗಳೂ ಬಳಕೆಗೊಂಡಿವೆ. ವರ್ಧಮಾನ ಪ್ರಭೇದದಲ್ಲಿ ಶಾಲಾ ರಚನೆಯು ಕರ್ಣಕೂಟದ ಎರಡರಷ್ಟು ಅಗಲ ವುಳ್ಳದ್ದು. ಸ್ವಸ್ತಿಕ ಪ್ರಭೇದದಲ್ಲಿ ಶಾಲಾ ರಚನೆಯು ಕರ್ಣಕೂಟದ ಒಂದೂವರೆ ಯಷ್ಟು ಅಗಲವೆನಿಸಿದೆ. ಸರ್ವತೋಭದ್ರ ಪ್ರಭೇದದಲ್ಲಿ ಕರ್ಣಕೂಟ ಹಾಗೂ ಶಾಲಾ ರಚನೆಯ ನಡುವೆ ಪಂಜರ ರಚನೆಯಿಲ್ಲದೆ ಮತ್ತೊಮ್ಮೆ ಕೂಟ ರಚನೆಯಿದೆ. ಇವು ಪ್ರಭೇದಗಳ ಸ್ಥೂಲ ಲಕ್ಷಣಗಳು. ದಾಕ್ಷಿಣಾತ್ಯ ಸಂಪ್ರದಾಯದಲ್ಲಿ ಕೂಟ, ಶಾಲಾ ಪಂಜರಾದಿ ಜೋಡಣೆಯೊಂದಿಗೆ ಕೋಷ್ಠ ರಚನೆಯಿದೆ. ಔತ್ತರೇಯ ದ್ರಾವಿಡ ಶೈಲಿಯ ಭೂಮಿ ರಚನೆಯಲ್ಲಿ ಕೋಷ್ಠಕ್ಕೆ ಸ್ಥಾನವಿಲ್ಲ.

ಸಮರಾಂಗಣ ಸೂತ್ರಧಾರ ಗ್ರಂಥದಲ್ಲಿ ಚತುರಶ್ರಾಕಾರ ಪ್ರಭೇದಗಳ ವಿವರಣೆ ಕೆಳಕಂಡಂತಿದೆ.

ಇದಾನೀಂ ವರ್ಧಮಾನಸ್ಯ ತಲಚ್ಛಂದೋಽಭಿದೀಯತೇ
ತುರಶ್ರಂಚ ಭಜೇತ್ ಪಂಚದಶಧಾ ಕ್ಷೇತ್ರಮಾದಿತಃ
ಕೂಟಂ ದ್ವಿಭಾಗಿಕಂ ಭಾಗಮೇಕಂ ಸಲಿಲಾಂತರಂ
ಪಂಜರಂ ಸಾರ್ಧಭಾಗಂ ಭಾಗಿಕಂ ಸಲಿಲಾಂತರಂ
ಚತುರ್ಭಾಗಾಭವೇತ್ ಶಾಲಾ....[37]

---

35. ಅದೇ, ಪು : 449, ಅ : 174, ಶ್ಲೋ : 31-32
36. ಸಮರಾಂಗಣ ಸೂತ್ರಧಾರ, ಪು : 471, ಅ : 61, ಶ್ಲೋ : 43
37. ಅದೇ, ಪು :470, ಅ : 61, ಶ್ಲೋ : 44-45

ಕ್ಷೇತ್ರವು ಗರ್ಭಗೃಹದ ಒಟ್ಟು ಭಾಗವನ್ನು ಗುರುತಿಸಿದರೂ, ತಲಚ್ಛಂದದ ಆಳತೆಯನ್ನು ವಿವರಿಸುವಲ್ಲಿ ಒಂದು ಪಾರ್ಶ್ವದ ವಿಸ್ತಾರವನ್ನು ಗಣನೆಗೆ ತೆಗೆದು ಕೊಂಡಿದೆ. ಈ ಭಾಗವನ್ನು ಹದಿನೈದು ಭಾಗಗಳಾಗಿ ವಿಭಾಗಿಸಿ ಕರ್ಣಕೂಟ-೨ ಭಾಗ, ಸಲಿಲಾಂತರ-೧ ಭಾಗ, ಪಂಜರ- ಒಂದೂವರೆ ಭಾಗ, ಸಲಿಲಾಂತರ-೧ ಭಾಗ, ಮತ್ತು ಶಾಲಾ-೪ ಭಾಗವೆನಿಸಿದೆ. ನಂತರ ಸಲಿಲಾಂತರ, ಪಂಜರ, ಸಲಿಲಾಂತರ, ಕರ್ಣಕೂಟಗಳು ಮರುಕಳಿಸುತ್ತವೆ. ಇದು ವರ್ಧಮಾನ ಪ್ರಭೇದದ ವಿವರಣೆ.

ಸ್ವಸ್ತಿಕ ಪ್ರಭೇದದ ವಿವರಣೆ ಕೆಳಕಂಡಂತಿದೆ.

> ಚತುರಶ್ರ ಸಮಂ ಕ್ಷೇತ್ರಂ ಅಷ್ಟಾವಿಂಶತಿಧಾಭಜೇತ್
> ಕುರ್ಯಾತ್‌ಕೂಟಂ ಚತುರ್ಭಾಗಂ ದ್ವಿಭಾಗಂ ಸಲಿಲಾಂತರಂ
> ತ್ರಿಭಾಗಂ ಪಂಜರಂ ತದ್ವತ್‌ದ್ವಿಭಾಗಂ ಸಲಿಲಾಂತರಂ
> ಶಾಲಾ ಷಡ್ಭಾಗಕೀ ಕುರ್ಯಾತ್ ಜಲಮಾರ್ಗಂ ದ್ವಿಭಾಗಿಕಂ[38]

ಸ್ವಸ್ತಿಕ ತಲಚ್ಛಂದದಲ್ಲಿ ಕ್ಷೇತ್ರವನ್ನು ಇಪ್ಪತ್ತೆಂಟು ಭಾಗಗಳಾಗಿ ವಿಭಾಗಿಸಿ ಕರ್ಣಕೂಟ-೪ ಭಾಗ, ಸಲಿಲಾಂತರ-೨ ಭಾಗ, ಪಂಜರ-೩ ಭಾಗ ಸಲಿಲಾಂತರ-೨ ಭಾಗ, ಮತ್ತು ಶಾಲಾ-೬ ಭಾಗ ಎನಿಸಿದೆ ನಂತರ, ಸಲಿಲಾಂತರ, ಪಂಜರ, ಸಲಿಲಾಂತರ, ಕೂಟ ರಚನೆಗಳಿವೆ. ಸರ್ವತೋಭದ್ರ ತಲಚ್ಛಂದದಲ್ಲಿ ಪಂಜರಕ್ಕೆ ಬದಲಾಗಿ ಕೂಟ ರಚನೆಯಿದೆ.

> ಇದಾನೀಂ ಸರ್ವತೋಭದ್ರ ತಲಚ್ಛಂದೋಽಭಿದೀಯತೇ
> ಚತುರಶ್ರೀ ಕೃತೇಕ್ಷೇತ್ರೇ ಗರ್ಭಂಕುರ್ಯಾತ್ ದ್ವಿಭಾಗಿಕಂ
> ಕುರ್ಯಾತ್ ತ್ರಿಭಾಗಿಕಂ ಕೂಟಂ ಜಲಮಾರ್ಗಂ ದ್ವಿಭಾಗಿಕಂ
> ತ್ರಿಭಾಗಂ ತತಃಕೂಟಂ ತೋಯಮಾರ್ಗಂ ದ್ವಿಭಾಗಿಕಂ
> ಶಾಲಾಷ್ಟಭಾಗಕೀಕುರ್ಯಾತ್ ಜಲವತ್ಮಾ ದ್ವಿಭಾಗಿಕಂ[39]

ಈ ರಚನೆಯಲ್ಲಿ ಕರ್ಣಕೂಟ-೩ ಭಾಗ, ಸಲಿಲಾಂತರ-೨ ಭಾಗ, ಪುನಃ ಕೂಟ-೩ ಭಾಗ, ಸಲಿಲಾಂತರ-೨ ಭಾಗ ಮತ್ತು ಶಾಲಾ ರಚನೆಯು ೮ ಭಾಗವೆನ್ನಿಸಿದೆ. ಈ ಪ್ರಭೇದಗಳನ್ನು ದೇವಾಲಯಗಳಲ್ಲಿ ಗುರುತಿಸಬೇಕಾಗಿದೆ.

ಸಮರಾಂಗಣ ಸೂತ್ರಧಾರ ಗ್ರಂಥವು ಹನ್ನೆರಡು ಭೂಮಿಯವರೆಗಿನ ಊರ್ಧ್ವ

---

38. ಅದೇ, ಶ್ಲೋ : 50-52
39. ಅದೇ, ಪು : 471 : ಅ : 61 ಶ್ಲೋ: 56-58

ಕ್ರಮ ರಚನೆಯನ್ನು ವಿಸ್ತಾರವಾಗಿ ಬಣ್ಣಿಸಿದೆ. ಊರ್ಧ್ವಕ್ರಮದ ಅಳತೆಯೊಂದಿಗೆ ವಿಸ್ತಾರವನ್ನೂ ಸೂಚಿಸಿದೆ. ಆದರೆ ಈ ವಿವರಗಳು ಹಲವೆಡೆ ಅಸ್ಪಷ್ಟವಾಗಿದ್ದು ಸಂಪೂರ್ಣವಾಗಿ ಅರ್ಥೈಸಲು ಸಾಧ್ಯವಾಗಿಲ್ಲ. ಅಪರಾಜಿತಪೃಚ್ಛಾ ಗ್ರಂಥವು ಏಕಭೂಮಿ, ತ್ರಿಭೂಮಿ, ಪಂಚಭೂಮಿ ಮತ್ತು ಸಪ್ತಭೂಮಿ ರಚನೆಗಳನ್ನು ಮಾತ್ರ ವಿವರಿಸಿದೆ. ಇದರೊಂದಿಗೆ ತಲಚ್ಛಂದದ ರಚನೆಯನ್ನೂ ನೀಡಿದೆ. ಈ ವಿವರಣೆಗಳ ಪ್ರಕಾರ, ತ್ರಯಾಂಗವು ಏಕಭೂಮಿಯೊಂದಿಗೆ, ಪಂಚಾಂಗವು ತ್ರಿಭೂಮಿಯೊಂದಿಗೆ, ಸಂಪ್ತಾಂಗವು ಸಂಚಭೂಮಿಯೊಂದಿಗೆ ನವಾಂಗವು ಸಪ್ತ ಭೂಮಿಯೊಂದಿಗೆ ಯೋಜಿಸಲಾಗಿದೆ. ಅಂಗರಚನೆಯಲ್ಲಿ ಕರ್ಣ, ಪ್ರತಿರಥ ಹಾಗೂ ಭದ್ರಭಾಗಗಳೇ ಮೂಲ. ಉಪರಥ, ಪ್ರತ್ಯಂಗ ಇತ್ಯಾದಿಗಳು ಮೂಲವನ್ನೇ ಆಶ್ರಯಿಸಿದ್ದು ಸಪ್ತಾಂಗ, ನವಾಂಗ ರಚನೆಗಳಿಗೆ ಕಾರಣವಾಗಿದೆ. ಅಪರಾಜಿತ ಪೃಚ್ಛಾ ಗ್ರಂಥದಲ್ಲಿ ಏಕಭೂಮಿ ರಚನೆಯನ್ನು ಕೆಳಕಂಡಂತೆ ವಿವರಿಸಲಾಗಿದೆ.

> ಪೀಠೋರ್ಧ್ವೇ ಕರ್ಣಮಾನೇನ ವಿಭಕ್ತಂ ಪಂಚಭಾಗಿಕಂ
> ಸಾರ್ಧಭಾಗೇ ಭವೇತ್ ಜಂಘಾ ಸಪಾದ ಃ ಕೂಟಕೋದಯಃ
> ವೇದೀ ಪಾದೋನಭಾಗಸ್ಯಾಡ್ ಘಂಟಾ ವೈಸಾರ್ಧಭಾಗಿಕಾ
> ಊರ್ಧ್ವೇಃಕಲಶಮಾಖ್ಯಾತಂ ಕರ್ತವ್ಯಂ ಸರ್ವಕಾಮದಂ[40]

ಪ್ರಾಸಾದಲಕ್ಷಣವನ್ನು ವಿವರಿಸುವಲ್ಲಿ ಪೀಠದಿಂದ ಮೇಲಕ್ಕೆ ಕಲಶದವರೆಗೆ ಇರುವ ಭಾಗವನ್ನು ಗುರುತಿಸಲಾಗಿದೆ. ಈ ವಿವರಣೆಯಲ್ಲಿ ಕಲಶದ ಎತ್ತರವು ಒಟ್ಟು ಎತ್ತರದಲ್ಲಿ ಸೇರಿಲ್ಲವೆಂದು ಗಮನಿಸಬಹುದು. ಮೇಲ್ಕಂಡ ವಿವರಗಳಲ್ಲಿ ಪೀಠದ ಎತ್ತರವನ್ನು ಗುರುತಿಸಿಲ್ಲವಾದರೂ, ಪೀಠವು ಎರಡು ಭಾಗವುಳ್ಳದ್ದು. ಪೀಠಾನಂತರ ಜಂಘಾ–ಒಂದೂವರೆ ಭಾಗ, ಕೂಟ–ಒಂದೂಕಾಲು ಭಾಗ, ವೇದಿ–ಮುಕ್ಕಾಲು ಭಾಗ, ಘಂಟಾ–ಒಂದೂವರೆ ಭಾಗ ಎಂದು ಗುರುತಿಸಿದೆ.

ಸಮರಾಂಗಣ ಸೂತ್ರಧಾರ ಗ್ರಂಥದಲ್ಲಿ ಏಕಭೂಮಿ ರಚನೆಯು ಐದು ಹಸ್ತಗಳಷ್ಟು ವಿಸ್ತಾರವುಳ್ಳದ್ದು ; ಏಳು ಹಸ್ತಗಳಷ್ಟು ಊರ್ಧ್ವಕ್ರಮವುಳ್ಳದ್ದು. ಇದೇ ರೀತಿ ಹನ್ನೆರಡು ಭೂಮಿಯವರೆಗೆ ದೇವಾಲಯದ ಎತ್ತರ ಮತ್ತು ಅಗಲವನ್ನು ಗುರುತಿಸಲಾಗಿದೆ. ಜಂಘಾಭಾಗದ ವಿವರಣೆಯಲ್ಲಿ "ಜಂಘಾ ಕರ್ತವ್ಯಾ ಸ್ತಂಭ ಯುತಾ'' ಎಂದಿರುವುದರಿಂದ ಜಂಘಾಭಾಗದಲ್ಲಿ ಸ್ತಂಭದ ಸ್ತರಗಳು ಸಾಮಾನ್ಯವಾಗಿದೆ. ಇದರೊಂದಿಗೆ ದಾಕ್ಷಿಣಾತ್ಯ ಸಂಪ್ರದಾಯದಲ್ಲಿ ಕಂಡುಬರುವ ಪ್ರಸ್ತರದ ಸ್ತರಗಳನ್ನೂ ಕಾಣಬಹುದು. ಆದರೆ ಪ್ರಸ್ತರ ಅಥವಾ ಛಾದ್ಯವೆನ್ನುವ ಪ್ರತ್ಯೇಕ

---

40. ಅಪರಾಜಿತ ಪೃಚ್ಛಾ, ಪು : 447, ಅ : 147, ಶ್ಲೋ : 9-10

ವರ್ಗವಿಲ್ಲದೆ ಜಂಘಾ ಭಾಗದೊಂದಿಗೆ ಸೇರ್ಪಡೆಯಾಗಿದೆ. ಸಮರಾಂಗಣ ಸೂತ್ರ ಧಾರ ಗ್ರಂಥದ ವಿವರಣೆಯಂತೆ, ಜಂಘಾ ಭಾಗದ ಸ್ತರಗಳಾಗಿ, ಮಾಲಾ, ಲಶುನ, ಭರಣಿ, ವೀರಗಂಡ, ಉಜ್ವಲ, ವೀರಗಂಡ, ಹೀರಕ, ಪಟ್ಟ, ಪಟ್ಟಿಕಾ, ವಸಂತ, ವಸಂತ ಪಟ್ಟಿಕಾ, ಕಪೋತ ಮುಂತಾದವನ್ನು ಗುರುತಿಸಬಹುದು, ಈ ಗ್ರಂಥದ ಪ್ರಕಾರ ಸರ್ವತೋಭದ್ರ ಇತ್ಯಾದಿ ಪ್ರಭೇದಗಳಿಗೆ ಇಂತಿಷ್ಟೇ ಭೂಮಿರಚನೆ ಎಂಬ ಸೂತ್ರವಿಲ್ಲ. ಐದು ಭೂಮಿಯವರೆಗಿನ ರಚನೆ ಸಾಮಾನ್ಯವೆನಿಸಿದೆ.

ಪಂಚ ಭೂಮಿಕಾ ಪರ್ಯಂತಂ ಕಾರ್ಯಾಃ ಸಾಧಾರಣ ಕ್ರಿಯಾಃ[41]

ಅಪರಾಜಿತ ಪೃಚ್ಛಾ ಗ್ರಂಥದ ತಲಚ್ಛಂದದ ವಿವರಣೆಯಲ್ಲಿ ಶಾಲಾ ಕೂಟಾದಿ ಗಳ ಉಲ್ಲೇಖವಿಲ್ಲ. ತ್ರಯಾಂಗ, ಪಂಚಾಂಗಾದಿ ವಿವರಣೆಯಲ್ಲಿ ಭದ್ರ, ಕರ್ಣ, ಪ್ರತಿರಥಾದಿಗಳನ್ನು ಮಾತ್ರ ಉಲ್ಲೇಖಿಸಿದೆ. ಭೂಮಿ ರಚನೆಯು ಹೆಚ್ಚಾದಂತೆ ಜಂಘಾ ಮತ್ತು ಕೂಟ ಭಾಗಗಳು ಪುನರಾವರ್ತನೆಗೊಳ್ಳುತ್ತವೆ. ಈ ಗ್ರಂಥದ ಪ್ರಕಾರ ತ್ರಯಾಂಗ ರಚನೆಯಲ್ಲಿ ಐಂದ್ರೋದ್ಭವ, ರಾಜಹಂಸ, ನಂದನ, ಸಿಂಹ ಕರ್ಣ ಮುಂತಾಗಿ ನಾಲ್ಕು ಪುನಃ ಪ್ರಭೇದಗಳಿವೆ. ಈ ಪ್ರಭೇದಗಳ ವೈಶಿಷ್ಟ್ಯಗಳು ಅರ್ಥವಾಗದು. ಅಪರಾಜಿತ ಪೃಚ್ಛಾ ಗ್ರಂಥದ ಪ್ರಕಾರ ಪಂಚಾಂಗ, ಸಪ್ತಾಂಗ, ಮತ್ತು ನವಾಂಗ ರಚನೆಗಳು ಕ್ರಮವಾಗಿ ವರ್ಧಮಾನ, ಸ್ವಸ್ತಿಕ ಮತ್ತು ಸರ್ವತೋ ಭದ್ರ ಪ್ರಭೇದಗಳಿಗೆ ಹಾಗೂ ಇನ್ನಿತರ ಪುನಃ ಪ್ರಭೇದಗಳಿಗೆ ಉಲ್ಲೇಖಗೊಂಡಿವೆ. ಇವು ಕ್ರಮವಾಗಿ ತ್ರಿಭೂಮಿ, ಪಂಚಭೂಮಿ ಮತ್ತು ಸಪ್ತಭೂಮಿ ರಚನೆಗಳೆ ನಿಸಿವೆ.

ಇವೆರಡೂ ಗ್ರಂಥಗಳ ವಿವರಣೆಯಲ್ಲಿ ಕೆಲವು ವ್ಯತ್ಯಾಸಗಳು ಕಂಡು ಬಂದಿದ್ದು, ಪ್ರಸ್ತುತ ಕಾಣಲಾಗುವ ದೇವಾಲಯಗಳಲ್ಲಿ ಗುರುತಿಸುವಾಗ ಕೊಂಚ ಗೊಂದಲ ವೆನಿಸುವುದು ಸಹಜ. ಈ ಬಗ್ಗೆ ಎಚ್ಚರ ಆಗತ್ಯವೆನಿಸಿದೆ.

ಭೂಮಿ ರಚನೆಯ ನಂತರ ವೇದೀ ಭಾಗವಿದೆ. ವೇದಿ ಅಥವಾ ವೇದಿಕಾ ರಚನೆಯ ಮೊದಲು ಮತ್ತು ನಂತರ ಕಂಠರಚನೆಯನ್ನು ಸಮರಾಂಗಣ ಸೂತ್ರಧಾರ ಗ್ರಂಥವು ಗುರುತಿಸಿದೆ.

ಭಾಗಂ ಕಂಠಃ ಪಟ್ಟಿಕಾ ಚ ವೇದೀ ಕಾರ್ಯ ದ್ವಿಭಾಗಕೀ
ಭೇದೋಭಾಗೇನಕರ್ತವ್ಯಃ ಕಂಠಾಶ್ಚಾನ್ಯ ತ್ರಿಭಾಗಿಕಃ
ಪಟ್ಟಿಕಾಂ ಪದ್ಮ ಪತ್ರೀಂಚ ವಿದಧೀತ ಸ್ತರ ಸ್ತರಂ[42]

41. ಸಮರಾಂಗಣ ಸೂತ್ರಧಾರ, ಪು :486, ಅ : 62, ಶ್ಲೋ : 171
42. ಅದೇ., ಪು : 485, ಅ : 62, ಶ್ಲೋ 162-163

ಅಪರಾಜಿತ ಪೃಚ್ಛಾ ಗ್ರಂಥಕಾರನು ವೇದೀಬಂಧವೆಂದು ಗುರುತಿಸಿದ್ದು, ಏಕ ಸಂಘಾಟ, ದ್ವಿಸಂಘಾಟ, ತ್ರಿಸಂಘಾಟ ಎಂದು ಮೂರು ವಿಧಗಳನ್ನು ಗುರುತಿಸಿದ್ದಾನೆ. ಈ ವೈವಿಧ್ಯವು ಅಲಂಕರಣಕ್ಕೆ ಸಂಬಂಧಿಸಿದೆ. ಉದಾಹರಣೆ ಗಳಿಲ್ಲದೆ ಅರ್ಥೈಸಲು ಸಾಧ್ಯವಾಗಿಲ್ಲ.

ಸಂಘಾಟೀ ಪ್ರಥಮೇ ಕುರ್ಯಾನ್ ಮಕರಾನ್ ವಿಕೃತಾನನಾನ್
ದ್ವಿತೀಯೇ ಕೋಟಪಾಲಾಂಶ್ಚ ಕಂಟಕೇ ತೃತೀಯಕೇ[43]

ದೇವಾಲಯಗಳಲ್ಲಿ ಕಂಟಕ ರಚನೆಯನ್ನು ಕರ್ಣಕೂಟದೊಂದಿಗೆ ಕಾಣ ಬಹುದೇ ಹೊರತು ಘಂಟಾ ರಚನೆಯೊಂದಿಗೆ ಕಾಣಲಾಗಿಲ್ಲ. ಔತ್ತರೇಯ ದ್ರಾವಿಡ ಶೈಲಿಯನ್ನು ಗುರುತಿಸಲು ಆಧಾರವೆನಿಸಿರುವ ಕಂಟಕವನ್ನು ಪೀಠ ಹಾಗೂ ಭೂಮಿ ರಚನೆಯಲ್ಲಿ ಮಾತ್ರ ಕಾಣಬಹುದು. ವೇದೀ ರಚನೆಯ ನಂತರ ಘಂಟಾ ರಚನೆ ಯನ್ನು ಕಾಣುತ್ತೇವೆ. ಭೂಮಿ ರಚನೆಯಲ್ಲಿ ಕಾಣುವ ಕರ್ಣಕೂಟವು ಸಾಮಾನ್ಯ ವಾಗಿ ಘಂಟಾರಚನೆಯನ್ನು ಹೋಲುತ್ತದೆ. ಘಂಟಾ ರಚನೆಯು ಔತ್ತರೇಯ ನಾಗರಾದಿ ಶೈಲಿಗಳಲ್ಲಿ ಕಂಡು ಬರುವ ಆಮಲಸಾರಕ್ಕೆ ಪರ್ಯಾಯ ರಚನೆಯೆನಿಸಿದೆ. ದಾಕ್ಷಿಣಾತ್ಯ ದೇವಾಲಯಗಳಲ್ಲಿ ಕಂಠಾನಂತರ ಶಿಖರವಿದೆ. ಈ ದೇವಾಲಯಗಳ ನಾಗರ ಶೈಲಿಯ ಶಿಖರವು ಘಂಟಾರಚನೆಗೆ ಅತ್ಯಂತ ಸಮೀಪದ ರಚನೆಯೆನಿಸಿದೆ. ದಾಕ್ಷಿಣಾತ್ಯ ಶೈಲಿಯ ಶಿಖರದ ಸ್ವರೂಪದ ಅಳತೆ ಹಾಗೂ ವಿವರಣೆಗಳು ಸ್ಪಷ್ಟ ವಿಲ್ಲ.

ಅಪರಾಜಿತ ಪೃಚ್ಛಾ ಗ್ರಂಥಕಾರನು ದ್ರಾವಿಡೀ ಮತ್ತು ವರಾಟೀ ಎಂಬ ಪ್ರಭೇದಗಳನ್ನು ಗುರುತಿಸಿದ್ದಾನೆ. ದ್ರಾವಿಡೀ ರಚನೆಯು ಚತುರಶ್ರಾಕಾರ ಎನಿಸಿ ದರೆ, ವರಾಟೀ ರಚನೆಯು ಎಂಟು, ಹದಿನಾರು ಮತ್ತು ಮೂವತ್ತೆರಡು ಕೋನ ವುಳ್ಳದ್ದು. ದ್ರಾವಿಡೀ ಘಂಟಾ ರಚನೆಯು ನಾಲ್ಕು ಮುಖಗಳಲ್ಲಿ ನಾಸಿಕಾರಚನೆ ಯನ್ನು ಹೊಂದಿದೆ. ವರಾಟ ಘಂಟಾ ರಚನೆಯು "ಮಂದಾರ ಪುಷ್ಪಕಾಕಾರ" ಎಂದು ಹೆಸರಿಸಲ್ಪಟ್ಟದೆ. ಔತ್ತರೇಯ ದ್ರಾವಿಡ ಶೈಲಿಯ ನಕ್ಷತ್ರಾಕಾರ ಅಥವಾ ವೃತ್ತಾಕ ತಲಚ್ಛಂದವುಳ್ಳ ದೇವಾಲಯಗಳಲ್ಲಿ ವರಾಟಘಂಟಾ ರಚನೆಯನ್ನು ಕಾಣ ಬಹುದು. ಇವು ನಾಸಿಕ ರಚನೆಯಿಲ್ಲದೆ ಪುಷ್ಪಾಕಾರವೆನಿಸಿದೆ. ವರಾಟ ಶೈಲಿಯನ್ನು ಗುರುತಿಸಲು ಸಾಧ್ಯವಾಗಿಲ್ಲ. ದ್ರಾವಿಡೀ ಘಂಟಾ ರಚನೆಯ ವಿವರಗಳು ಕೆಳ ಕಂಡಂತಿದೆ.

---

43. ಅಪರಾಜಿತ ಪೃಚ್ಛಾ, ಪು: 449, ಅ: 174, ಶ್ಲೋ: 40

ದ್ವಿರಷ್ಟ ಭಾಗ ವಿಸ್ತಾರೇ ಉಚ್ಛ್ರಾಯೇ ದಶಭಾಗತಃ
ಅಂತಃ ಪತ್ರಂ ಭವೇತ್ ಭಾಗಂ ಭಾಗಾರ್ಧಂ ಚೈವಪಟ್ಟಿಕಾ
ಕರ್ಣಸ್ತು ಸಾರ್ಧಭಾಗಶ್ಚ ತದೂರ್ದ್ವೇ ಪದ್ಮ ಪತ್ರಿಕಾ
ಸ್ಕಂಧಃ ಷಡ್ಭಾಗಿಕೋ ಜ್ಞೇಯ ಉಚ್ಛ್ರಾಯೇ ಭಾಗ ಸಂಖ್ಯಯಾ
ಷಡ್ಭಾಗಶ್ಚ ಭವೇತ್ ಸ್ಕಂದೋ ನಿರ್ಗಮಃ ಪಂಚಭಾಗಿಕಃ
ದ್ರಾವಿಡೀ ಚ ಭವೇತ್ ಘಂಟಾ ನಾಸಿಕೋಪಾಂಗ ಶೋಭಿತಾ[44]

ಸಮರಾಂಗಣ ಸೂತ್ರಧಾರ ಗ್ರಂಥದಲ್ಲಿ ಏಕ ಭೂಮಿ ರಚನೆಯ ವಿವರಣೆ ಯೊಂದಿಗೆ ಘಂಟಾ ಎನ್ನುವುದಕ್ಕೆ ಬದಲಾಗಿ ಕೂಟ ಎಂದೇ ನಿರ್ದೇಶಿಸಿದ್ದಾನೆ. ಕೂಟದ ಅಲಂಕಾರವು ನಾಸಿಕಾ ರಚನೆಯುಳ್ಳದ್ದು.

ನಾಸಿಕಾ ಪದ್ಮಯುಕ್ತಂ ತದೂರ್ಧ್ವೇ ಕಲಶೋಭವೇತ್[45]
ದ್ವಿಭೂಮಿಕಾ ರಚನೆಯಲ್ಲಿ ಅಳತೆಯನ್ನು ಗುರುತಿಸುತ್ತಾ
ಭಾಗಾರ್ಧಂ ವಿಸ್ತೃತಿಸ್ತಸ್ಯ ವಿಸ್ತಾರಾರ್ಧಂ ಸಮುಚ್ಛ್ರಿತಿಃ[46]

ಎಂದು ವಿವರಿಸಿದ್ದಾನೆ. ಗರ್ಭಗೃಹದ ಅಗಲ ಅಥವಾ ಒಟ್ಟು ಕ್ಷೇತ್ರದ ಅಗಲದ ಅರ್ಧದಷ್ಟು ವಿಸ್ತಾರ ಮತ್ತು ಅದರ ಅರ್ಧದಷ್ಟು ಎತ್ತರವನ್ನು ಘಂಟಾ ಭಾಗಕ್ಕೆ ಆರೋಪಿಸಲಾಗಿದೆ.

ನಾಲ್ಕು ಭೂಮಿ ರಚನೆಯ ವಿವರಣೆ ಕೆಳಕಂಡಂತಿದೆ.

ಸ್ತರಾಣಾಂ ವಿಂಶತಿ ಘಂಟಾ ಭವೇತ್ ಗರ್ಭಾರ್ಧ ವಿಸ್ತೃತಾ
ಚಂದ್ರಶಾಲಾಶ್ಚ ಕರ್ತವ್ಯಾ ದರ್ಶನಿಯಾ ಚತುರ್ದಿಶಾಂ[47]

ಐದುಭೂಮಿ ರಚನೆಯಲ್ಲಿ "ಸರ್ವತೋಭದ್ರ ಸಂಯುಕ್ತಾ ಚಂದ್ರಶಾಲಾ ವಿಭೂಷಿತಾ" ಎಂದಿದೆ.

ಚಂದ್ರಶಾಲಾ ಪದದ ಬಳಕೆ ಕೊಂಚ ಗೊಂದಲವನ್ನುಂಟು ಮಾಡಿದೆ. ಏಕ ಭೂಮಿ ರಚನೆಯಲ್ಲಿ ಕೂಟಾಲಂಕಾರಕ್ಕೇ ನಾಸಿಕಾ ಎಂದಂತೆ ಇನ್ನಿತರ ಭೂಮಿ ರಚನೆಯಲ್ಲಿ 'ಘಂಟಾಕಾರಕ್ಕೆ ಚಂದ್ರ ಶಾಲಾ ಎಂದು ಬಳಸಿರುವ ಸಾಧ್ಯತೆಗಳಿವೆ. ಆದರೆ ಮತ್ತಷ್ಟು ಸಾಕ್ಷ್ಯಾಧಾರಗಳು ಬೇಕು.

---

44. ಅದೇ, ಪು : 352, ಅ : 142, ಶ್ಲೋ : 8-10
45. ಸಮರಾಂಗಣ ಸೂತ್ರಧಾರ, ಪು : 473, ಅ : 62, ಶ್ಲೋ : 12
46. ಅದೇ, ಪು : 474, ಅ : 62, ಶ್ಲೋ : 32
47. ಅದೇ, ಪು : 480, ಅ : 62, ಶ್ಲೋ : 103-104

ಅಪರಾಜಿತಪೃಚ್ಛಾ ಗ್ರಂಥದಲ್ಲಿರುವ ವರಾಟಘಂಟಿಕಾ ವಿವರಣೆಯು ಕೆಳಕಂಡಂತಿದೆ.

ಪೃಥುತ್ವಂ ತು ದ್ವಾದಶಾಂಶಮುಚ್ಛ್ರಯೋ ನವಭಾಗಿಕಂ
ಕರ್ಣಸ್ತಥಾ ಚೈಕಭಾಗಃ ಸ್ಕಂಧಾದ್ಯಂ ಚಾಷ್ಟಭಾಗಿಕಂ
ಅಷ್ಟಾಶ್ರೋರ್ಧ್ವೆ ಷೋಡಶಾಶ್ರಾ ತತೋ ದ್ವಾತ್ರಿಂಶದಶ್ರಕಾ
ಮಂದಾರ ಪುಷ್ಪಕಾರಾಕಾರಾ ಕಾರ್ಯಾ ವರಾಟ ಘಂಟಿಕಾ[48]

ಘಂಟಾ ರಚನೆಯ ನಂತರ ಕಲಶವಿದೆ. ದಾಕ್ಷಿಣಾತ್ಯ ದೇವಾಲಯಗಳಲ್ಲಿ ಶಿಖರಾನಂತರ ಸ್ತೂಪಿಯಿದ್ದು ಔತ್ತರೇಯ ಸಂಪ್ರದಾಯದಲ್ಲಿ ಕಲಶವು ಸ್ತೂಪಿಗೆ ಪರ್ಯಾಯ ರಚನೆಯಾಗಿದೆ. ಕಲಶ ರಚನೆಯನ್ನು ಅಪರಾಜಿತ ಪೃಚ್ಛಾ ಮತ್ತು ಸಮರಾಂಗಣ ಸೂತ್ರಧಾರ ಗ್ರಂಥಗಳು ಚಿತ್ರಿಸಿವೆ. ಅಪರಾಜಿತ ಪೃಚ್ಛಾ ಗ್ರಂಥವು ಎರಡು ವಿಧದ ಅಳತೆಯನ್ನು ವಿವರಿಸಿದ್ದು ದ್ರಾವಿಡಾದಿ ಶೈಲಿಗಳಿಗೆ ಪ್ರತ್ಯೇಕ ಮಾನವನ್ನು ಹೇಳಿದೆ.

ವರಾಟೇ ದ್ರಾವಿಡೇ ಚೈವ ಭೂಮಿಜೇ ಚೈವ ವಿಮಾನಕೇ
ಪ್ರಾಸಾದ ಸ್ಯತು ಷಷ್ಠಾಂಶೇ ಸಮಸ್ತ ವಲಭೀ ಷುಚ[49]

ಕಲಶದ ಮಾನವು ದೇವಾಲಯದ ಆರನೇ ಒಂದು ಭಾಗದಷ್ಟು ಎಂದು ವಿವರಿಸಿದ್ದರೂ ಲಭ್ಯವಿರುವ ದೇವಾಲಯಗಳಲ್ಲಿ ಈ ಅಳತೆ ಅಸಂಭವವೆನ್ನಿಸಿದೆ. ಈ ಗ್ರಂಥವು ಗುರುತಿಸುವ ಕಲಶವು ಪದ್ಮ ಪತ್ರ, ಕರ್ಣಿಕಾ, ಪದ್ಮ, ಅಂಡಕ ಗ್ರೀವ ಅರ್ಕಪಟ್ಟಿಕಾ, ಪದ್ಮ, ಬೀಜಪುರವೆಂಬ ಸ್ತರಗಳನ್ನು ಹೊಂದಿದೆ.

ಕಲಶರಚನೆಯ ವಿವರಗಳು ಕೆಳಕಂಡಂತಿದೆ.

ಪದ್ಮ ಪತ್ರ ನಿಭಾಕಾರಾ ತ್ರಿಪದಾ ಪದ್ಮ ಪತ್ರಿಕಾ
ಕರ್ಣಿಕಾ ಪದ ಮೇಕಂ ತು ಸಪಾದಃ ಪದ್ಮ ಸಂಭವಃ
ದ್ವಿಭಾಗಂಚಾಂಡಕಂ ಕುರ್ಯಾದ್ ವೃತ್ತಾಕಾರಂ ಸಲಕ್ಷಣಂ
ಗ್ರೀವಾ ಪಾದೋನಭಾಗಾಸ್ಯಾದ್ ಭಾಗಾರ್ಧಂಚಾರ್ಕ ಪಟ್ಟಿಕಾ
ಲತಿನೇಚ ಪ್ರಕರ್ತವ್ಯಾ ಅರ್ಧಂ ವೈ ಪದ್ಮಪತ್ರಿಕಾ
ತ್ರಿಭಾಗಂ ಬೀಜಪೂರಂ ಚ ಅಧಿಕಸ್ಯ ಪದ್ಮಾಕೃತಿಃ
ಉಚ್ಛ್ರಾಯಃ ಕಥಿತಶ್ಚೇತ್ಥಂ ವಿಸ್ತಾರಂ ಶೃಣು ಸಾಂಪ್ರತಂ
ಪದ್ಮ ಪತ್ರ ತ್ರಿಭಿರ್ಭಾಗೈ ದ್ವಿಭಾಗಾ ಕರ್ಣಿಕಾವೃತಾ

48. ಅಪರಾಜಿತಪೃಚ್ಛಾ, ಪು : 353, ಅ : 142, ಶ್ಲೋಕ : 12
49. ಅದೇ, ಪು : 353, ಅ : 143, ಶ್ಲೋ : 15

ಪದ್ಮಾಗ್ರೇ ಪತ್ರಿಕಾ ಚೈವ ಚತರ್ುಭಾರ್ಗಾ ಚ ವಿಸ್ತರೇ
ಷಡ್ಭಾಗಾ ಮಂಡಕಂ ಚೈವ ಗ್ರೀವಾ ಮಧ್ಯೇದ್ವಿಭಾಗಿಕಾ
ಅರ್ಕಪಟ್ಟಿ ಚತುರ್ಭಾಗಾ ಸಾರ್ಧತ್ರಯಂಶಾಚ ಪತ್ರಿಕಾ
ಸಾರ್ಧದ್ವಯಂ ಬೀಜಪೂರಂ ನಿಮ್ನಾಗ್ರೇ ಪದ್ಮಕಾಕೃತಿ[50]

ಸಮರಾಂಗಣ ಸೂತ್ರಧಾರ ಗ್ರಂಥವು ಪದ್ಮ, ಕುಂಭ, ಗ್ರೀವ ಕರ್ಣಿಕಾ, ಬೀಜಪೂರ ಸ್ತರಗಳುಳ್ಳ ಕಲಶವನ್ನು ದ್ರಾವಿಡ ಶೈಲಿಗೆ ನಿರ್ದೇಶಿಸಿದೆ.

ಕುರ್ವೀತ ತ್ರಿಸ್ತರಂ ಪದ್ಮಂ ಚಿತ್ರ ಪತ್ರ ಸಮನ್ವಿತಂ
ತಸ್ಯೋಪರಿ ಭವೇತ್ ಕುಂಭ ಶ್ಚತುರ್ದಶವಿಭಾಗಿಕಃ
ಗ್ರೀವಾ ದ್ವಿಭಾಗಿಕಾ ಕಾರ್ಯ ಕರ್ಣಶ್ಚೈವ ತಥಾವಿಧಃ
ಬೀಜಪೂರಂ ತತಃ ಕಾರಾರ್ಯ ಶೋಭಾ ಸಂಯುಕ್ತ ಮರ್ಧತಃ[51]

ಮೇಲ್ಕಂಡ ವಿವರಣೆಗಳಿಂದ ಕಲಶದ ಸ್ಥೂಲ ಸ್ವರೂಪದ ಪರಿಚಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಲಭ್ಯವಿರುವ ಕಲಶ ರಚನೆಯನ್ನು ಗುರುತಿಸಬೇಕು. ಕಲಶ ರಚನೆಯ ಸ್ತರಗಳ ಅಳತೆಯಲ್ಲಿ ಕೊಂಚ ಬದಲಾಗುವ ಸಾಧ್ಯತೆಗಳಿವೆ.

ಕರ್ನಾಟಕದ ಕಲ್ಯಾಣ ಚಾಲುಕ್ಯರ ಹಾಗೂ ಹೊಯ್ಸಳರ ಕಾಲದ ದೇವಾಲಯಗಳನ್ನು ವೇಸರ ಶೈಲಿ ಎಂದು ಗುರುತಿಸುವ ಪರಿಪಾಠ ಈವರೆಗೆ ನಡೆದು ಬಂದಿದೆ. ಇನ್ನಿತರ ದೇವಾಲಯಗಳನ್ನು ನಾಗರ ಮತ್ತು ದ್ರಾವಿಡ ಎಂದು ವಿವರಿಸುವಲ್ಲಿ ಸಂಪ್ರದಾಯ ಮತ್ತು ಶೈಲಿಗಳ ಬಗ್ಗೆ ಖಚಿತ ಅರಿವಿಲ್ಲದೆ ವಿದ್ವಾಂಸರು ಬಳಸಿದ್ದಾರೆ. ಔತ್ತರೇಯ ಮತ್ತು ದಾಕ್ಷಿಣಾತ್ಯ ಸಂಪ್ರದಾಯಗಳನ್ನು ಮೊದಲು ಗುರುತಿಸಿಕೊಂಡು, ನಂತರ ಆಯಾ ಸಂಪ್ರದಾಯದ ಅಡಿಯಲ್ಲಿ ಶೈಲಿಗಳನ್ನು ಪ್ರತ್ಯೇಕಿಸಬೇಕು ; ಈ ವರ್ಗೀಕರಣದ ದೃಷ್ಟಿಕೋನವನ್ನು ಅರ್ಥಮಾಡಿಕೊಳ್ಳಬೇಕು. ಕಲ್ಯಾಣಿ ಚಾಲುಕ್ಯರ ಮತ್ತು ಹೊಯ್ಸಳರ ಕಾಲದ ಬಹುಪಾಲು ದೇವಾಲಯಗಳು ಔತ್ತರೇಯ ದ್ರಾವಿಡ ಶೈಲಿಗೆ ಸೇರಿದ್ದು ಎನ್ನುವುದು ನಿರ್ವಿವಾದ. ಈದಿಸೆಯಲ್ಲಿ ಮತ್ತಷ್ಟು ಅಧ್ಯಯನ ನಡೆಯಬೇಕಾಗಿದೆ.

---

50. ಅದೇ, ಪು : 354, ಅ : 143, ಶ್ಲೋ : 24-29
51. ಸಮರಾಂಗಣ ಸೂತ್ರಧಾರ, ಪು : 485, ಅ : 62, ಶ್ಲೋ : 165-166

ಕೂ.ಸ. ಅಪರ್ಣ

# ಉಪಪೀಠಗಳು ಮತ್ತು ಅಧಿಷ್ಠಾನಗಳು

## (ಶಾಸ್ತ್ರಗ್ರಂಥಗಳ ಹಿನ್ನೆಲೆಯಲ್ಲಿ)

### ಪ್ರವೇಶ

ಭದ್ರತೆ ಮತ್ತು ಆಕರ್ಷಣೆಯ ದೃಷ್ಟಿಯಿಂದ ಹಾಗೂ ಎತ್ತರವಾಗಿ ಕಾಣುವಂತೆ ಮಾಡುವ ಉದ್ದೇಶದಿಂದ ಕೆಲವು ದೇವಾಲಯಗಳಲ್ಲಿ ಅಧಿಷ್ಠಾನದ ಕೆಳಗೆ ಕಟ್ಟಿರುವ ಭಾಗವೇ 'ಉಪಪೀಠ'. ಷಡ್ವರ್ಗ ದೇವಾಲಯಗಳ[1] ಊರ್ಧ್ವಮುಖ ಕ್ರಮದ ರಚನೆಯನ್ನು ಗುರುತಿಸುವಲ್ಲಿ, ಉಪಪೀಠ ಭಾಗವು ಸೇರಿರುವುದಿಲ್ಲ, ಇದು ಶಿಲ್ಪಿ/ನಿರ್ಮಾತೃವಿನ ಆಶಯಕ್ಕೆ ಬಿಟ್ಟದ್ದು, ಎಲ್ಲ ದೇವಾಲಯಗಳಲ್ಲೂ ಉಪಪೀಠವು ಕಂಡು ಬರುವುದಿಲ್ಲ. ಆದರೂ ಆಲಯಕ್ಕೆ ಶೋಭೆ, ಔನ್ನತ್ಯ ಮತ್ತು ರಕ್ಷಣೆಯ ದೃಷ್ಟಿಯಿಂದ ಉಪಪೀಠವನ್ನು ಕಟ್ಟಬೇಕೆಂಬ ನಿಯಮವು ಗ್ರಂಥಗಳಲ್ಲಿದ್ದು[2], ಮಾನಸಾರ (೧೩), ಕಾಶ್ಯಪಶಿಲ್ಪ (೫) ಕಾಮಿಕಾಗಮ (೫೨), ಪಾದ್ಮಸಂಹಿತೆ (೭), ಮಯಮತ

---

1 ದೇವಾಲಯಗಳಲ್ಲಿ, ಊರ್ಧ್ವಮುಖ ಕ್ರಮದಲ್ಲಿ ಆರು ಭಾಗಗಳಿದ್ದು, ಅವುಗಳನ್ನು ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ, ಕಲಶ ; ಎಂದು ಗುರುತಿಸುತ್ತಾರೆ. ಈ ಆರು ಭಾಗಗಳಿಂದ ಕೂಡಿದ ದೇವಾಲಯಗಳನ್ನು 'ಷಡ್ವರ್ಗ ದೇವಾಲಯಗಳು' ಎಂದು ಗುರುತಿಸಲಾಗಿದೆ.

2 ಮಯಮತ-ಅ. 13, ಶ್ಲೋಕ 1-3 ; ಅಜಿತಾಗಮ—11.1 (ಕ್ರಿಯಾಪಾದ) ಪಾದ್ಮಸಂಹಿತೆ-(ಕ್ರಿಯಾಪಾದ) 7.1 ; ಶಿಲ್ಪರತ್ನ, ಉದ್ಧೃತ-ಭಾರತೀಯ ಶಿಲ್ಪಸಾರ-ಪು. 17 ದೀಪ್ತಾಗಮ-3.1, ಉದ್ಧೃತ-ಅಜಿತಾಗಮ.
ಆವರಣದಲ್ಲಿರುವ ಸಂಖ್ಯೆಗಳು, ಆಯಾ ಗ್ರಂಥದಲ್ಲಿ ಈ ವಿಷಯವನ್ನು ಕುರಿತು ಹೇಳುವ ಅಧ್ಯಾಯವನ್ನು ಸೂಚಿಸುತ್ತವೆ.

(೧೩), ಮುಂತಾದ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ಈ ಬಗ್ಗೆ ವಿವರಗಳು ದೊರೆಯುತ್ತವೆ.

**ವಿಂಗಡಣೆ**

ಉಪಪೀಠವು ಅಧಿಷ್ಠಾನದ ಕೆಳಗೆ ಬರುವ ಭಾಗವೆಂದು ಮಾನಸಾರ[3] ಮತ್ತು ಮಯಮತಗಳು[4] ಗುರುತಿಸಿವೆ. ಇದರಲ್ಲಿ ಬರುವ ಅಂಗಗಳ ಬಗ್ಗೆ ಹೇಳುವಾಗ ಮಾನಸಾರವು 'ಜನ್ಮಾದಿ ಪಟ್ಟಿಕಾಂತಕಂ[5] ಎಂದಿದ್ದು, 'ಜನ್ಮನ್' ಎಂಬುದು ಉಪಪೀಠನ ಮೊದಲ ಅಂಗವೆಂದೂ, 'ಪಟ್ಟಿಕಾ'ವು ಕೊನೆಯ ಅಂಗವೆಂದೂ ಸೂಚಿಸುತ್ತಿದೆ. ಇದರೊಂದಿಗೆ ಉಪಪೀಠದಲ್ಲಿ ಕಂಧರ, ಕಪೋತ ಮುಂತಾದ ಅಂಗಗಳೂ ಇರುತ್ತವೆ. ಆದರೆ, ಅಧಿಷ್ಠಾನದಲ್ಲಿ ಪ್ರಮುಖ ಪಾತ್ರ ವಹಿಸುವ ಮತ್ತು ಅನಿವಾರ್ಯವಾಗಿ ಕಾಣಬರುವ 'ಕುಮುದಾ' ಅಂಗ ಮಾತ್ರ ಯಾವುದೇ ಉಪಪೀಠದಲ್ಲಿರುವುದಿಲ್ಲ ; ಇದರಲ್ಲಿ 'ಕಂಠ'ವು ಎತ್ತರವಾಗಿರುತ್ತದೆ.

**ವಿಧಗಳು**

ಉಪಪೀಠದಲ್ಲಿ ಇರುವ ಅಂಗೋಪಾಂಗಗಳ ಆಧಾರದಿಂದ ಶಾಸ್ತ್ರಗ್ರಂಥಗಳು ಎರಡು ರೀತಿಯ ವಿಂಗಡಣೆಯನ್ನು ಮಾಡಿವೆ ೧) ಅಂಗಗಳ ಸಂಖ್ಯೆಯ ಆಧಾರದಿಂದ ೨) ಅಂಗೋಪಾಂಗಗಳ ಅಸ್ತಿತ್ವದ ಆಧಾರದಿಂದ. ಅಂಗಗಳನ್ನು ಹೆಚ್ಚಿಸಿ ಕಡಿಮೆ ಮಾಡುವುದರಿಂದ ಉಪಪೀಠದಲ್ಲಿ ವಿಭಿನ್ನ ರಚನೆಯನ್ನು ತರಬಹುದಾಗಿದ್ದು, ಅಂಗಗಳ ಸಂಖ್ಯೆಯ ಆಧಾರದಿಂದ ಅವುಗಳನ್ನು 'ಚತುಃಪಂಚಷಡಂಶ ಸಪ್ತಾಷ್ಟಾಂಗ ಉಪಪೀಠ'ಗಳೆಂದು ಕರೆಯಬಹುದೆಂದು ಕಾಮಿಕಾಗಮ ಮುಂತಾದ ಗ್ರಂಥಗಳಲ್ಲಿ ಹೇಳಿದೆ.[6]

ಶಾಸ್ತ್ರಗ್ರಂಥಗಳಲ್ಲಿ ಉಲ್ಲೇಖಿಸಿರುವ ಉಪಪೀಠದ ವಿಧಗಳೆಂದರೆ—ಕಾಶ್ಯಪ ಶಿಲ್ಪದಲ್ಲಿ ಭದ್ರ, ಪ್ರತಿಭದ್ರ, ಪ್ರತಿಸುಂದರ, ಸೌಭದ್ರ, ಕಲ್ಯಾಣಿಕಾ ವಿಧಗಳೂ, ಶಿಲ್ಪರತ್ನದಲ್ಲಿ ಪ್ರತಿಭದ್ರ, ಮಂಚಭದ್ರ. ಸುಭದ್ರಾ, ಕಲ್ಯಾಣಕಾರಣ, ಪ್ರತಿಸುಂದರ ವಿಧಗಳೂ, ಮಾನಸಾರದಲ್ಲಿ ವೇದಿಭದ್ರ, ಪ್ರತಿಭದ್ರ ಮತ್ತು ಮಂಚಭದ್ರಗಳೂ, ಮಯಮತ ಮತ್ತು ಪಾದ್ಮಸಂಹಿತೆಯಲ್ಲಿ ವೇದಿಭದ್ರ, ಪ್ರತಿಭದ್ರ ಮತ್ತು ಸುಭದ್ರ

---

3. 13, ಸಾಲು 2
4. 13, 1
5. 13, ಸಾಲು—5
6. ಕಾಮಿಕಾಗಾಮ – 52, 29 ; ಪಾದ್ಮಸಂಹಿತೆ (ಕ್ರಿಯಾಪಾದ)—7-8 ; ಮಯಮತ—13-7-8 ಇತ್ಯಾದಿ.

ವಿಧಗಳೂ ಉಲ್ಲೇಖಿಸಲ್ಪಟ್ಟಿವೆ. ಅಜಿತಾಗಮ ವಿಮಾನಾರ್ಚನಕಲ್ಪ ಮತ್ತು ರೌರವಾಗಮದಲ್ಲಿ ಉಪಪೀಠದ ಬಗ್ಗೆ ಉಲ್ಲೇಖವಿಲ್ಲ. ಕಾಮಿಕಾಗಮ ಮತ್ತು ಅಜಿತಾಗಮದಲ್ಲಿ ಅಂಗಗಳು, ಅವುಗಳ ಅಂಶ (=ಅಳತೆ)ಗಳನ್ನು ಹೇಳಿದ್ದು, ಆದರಲ್ಲಿ ಯಾವ 'ವಿಧ' ಎಂಬುದರ ಬಗ್ಗೆ ಹೇಳಿಲ್ಲ.

ಆಲಯಗಳಲ್ಲಿ ಮುಖ್ಯವಾಗಿ ಕಾಣಬರುವ ಉಪಪೀಠದ ವಿಧಗಳೆಂದರೆ—ವೇದಿಭದ್ರ, ಸುಭದ್ರ ಮತ್ತು ಪ್ರತಿಭದ್ರ.

**ವೇದಿಭದ್ರ** :—ಗ್ರಂಥಗಳ ಪ್ರಕಾರ, ವೇದಿಭದ್ರ ರೀತಿಯ ಉಪಪೀಠವು, ಪಾದುಕ, ಕಂಪ, ಕಂಠ, ಕಂಪ, ವಾಜನ, ಕಂಪಗಳಿಂದ ಕೂಡಿರಬೇಕು.[7] ಇದರಲ್ಲೇ ಪಾದುಕದ ನಂತರ ಮತ್ತು ಕಂಪದ ನಂತರ 'ಪದ್ಮ'ವನ್ನು ಮಾಡಿದರೆ ಅದು 'ಅಷ್ಟಾಂಗ ವೇದಿಭದ್ರ, ಎನಿಸುತ್ತದೆ.[8] ಮಯಮತದಲ್ಲಿ, ವೇದಿಭದ್ರ ಉಪಪೀಠಕ್ಕೆ ಉಪಾನ, ಕಂಪ, ಗ್ರೀವ, ಕಂಪ—ಈ ಅಂಗಗಳನ್ನು ಮಾತ್ರ ಹೇಳಲಾಗಿದ್ದು, ಇದು ಸರಳ ರಚನೆ ಎನ್ನಬಹುದು. ಕಾಮಿಕಾಗಮ ಗ್ರಂಥದಲ್ಲಿ ಹೆಸರನ್ನು ಕೊಟ್ಟಿಲ್ಲವಾದರೂ, ಆದರ ೧೫-೧೯ನೇ ಶ್ಲೋಕಗಳು ಬಹುಶಃ ವೇದಿಭದ್ರ ಉಪಪೀಠ ರಚನೆಯನ್ನು ಕುರಿತು ಹೇಳಿರುವಂತಿದೆ.[9] ಅಜಿತಾಗಮ ದಲ್ಲಿರುವ ಉಪಪೀಠದ ೫ ವಿಧಗಳು (ಅವುಗಳನ್ನು ಗ್ರಂಥವು ಹೆಸರಿಸಿಲ್ಲ), ಪಾದ್ಮ ಸಂಹಿತೆಯ 'ಸುಭದ್ರ', ಕಾರಣಾಗಮದ ಶ್ರೀಕರ, ಲಲಿತ ಮತ್ತು ಭದ್ರ ಉಪಪೀಠ ಗಳು, ಕಾಶ್ಯಪಶಿಲ್ಪದ 'ಭದ್ರ' ಉಪಪೀಠ ಈ ಎಲ್ಲವೂ ವೇದಿಭದ್ರದ ಬೇರೆ ಬೇರೆ ರೂಪಗಳೇ ಎನ್ನಿಸುವಷ್ಟು ಅಲ್ಪ ವ್ಯತ್ಯಾಸವನ್ನು ಹೊಂದಿವೆ.[10] ಮಯಮತದಲ್ಲಿ ಹೇಳಿರುವ 'ಸುಭದ್ರ'ದ ಎರಡನೇ ವಿಧವೂ ಕೂಡಾ 'ವೇದಿಭದ್ರಕ್ಕೇ ಹತ್ತಿರವಾಗಿದೆ ಎನ್ನಬಹುದು[11] (೧೬ಬಿ-೧೯)

**ಸುಭದ್ರ** :—'ಸುಭದ್ರ' ರೀತಿಯ ಮೊದಲನೇ ವಿಧದಲ್ಲಿ, ಮಯಮತವು, ಜನ್ಮ, (ಕಂಠ), ವಾಜನ, ಕಂಪ, ಕಂಠವನ್ನು ಹೇಳಿ, ನಂತರ ಗೋಪಾನ ಮತ್ತು

---

7. ಮಯಮತ—13, 6—8 ; ಮಾನಸಾರ—13, ಸಾಲು. 36—52 ; ಪಾದ್ಮಸಂಹಿತೆ—7, 6—7.
8. ಪಾದ್ಮಸಂಹಿತೆ—7, 6—7 ; ಮಯಮತ—13, 6—8 ; ಶಿಲ್ಪರತ್ನ, ಉದ್ಧೃತ ಭಾರತೀಯ ಶಿಲ್ಪಸಾರ, ಪು, 24
9. 52, 15—19.
10. ಕಾಶ್ಯಪ—5, 8—11 ; ಅಜಿತಾಗಮ—11.3 12 ; ಪಾದ್ಮಸಂಹಿತೆ—7, 16—20 ; ಕಾರಣಾಗಮ—I. 1 ಬಿ—15 ಎ (ಉದ್ಧೃತ—ಅಜಿತಾಗಮ ಪುಟ, 68)
11. ಅ. 18 (ಉದ್ಧೃತ—ಭಾರತೀಯ ಶಿಲ್ಪಸಾರ—ಪು, 29)

ಊರ್ಧ್ವಕಂಪವನ್ನು ಹೇಳಿದೆ. ಶಿಲ್ಪರತ್ನದಲ್ಲೂ, 'ಸುಭದ್ರ'ದಲ್ಲಿ ಇದೇ ಅಂಗಗಳನ್ನು ಹೇಳಲಾಗಿದ್ದು, ಇದರಲ್ಲಿ, ಆರಂಭದಲ್ಲಿ ಕಂಠದ ನಂತರ ಮಹಾಪದ್ಮವನ್ನು ಹೇಳಿದೆ.

**ಪ್ರತಿಭದ್ರ** :—'ಪ್ರತಿಭದ್ರ' ಉಪಪೀಠ ರಚನೆಯಲ್ಲಿ ಪಾದುಕ, ಪದ್ಮ, ಕಂಪ, ಗಲ, ಕಂಪ, ಪದ್ಮ, ಕಪೋತ ಇರುವುದಲ್ಲದೆ, ಕಪೋತದ ಮೇಲೆ ಆಲಿಂಗ, ಅಂತರಿಕ, ಪ್ರತಿ, ವಾಜನವೂ ಇರುವುದೆಂದು ಗ್ರಂಥಗಳು ಸೂಚಿಸಿವೆ.[12] ಪಾದ್ಮಸಂಹಿತೆಯ ಪ್ರತಿಭದ್ರ ಉಪಪೀಠ ರಚನೆಯಲ್ಲಿ, ಎರಡನೇ ವಿಧವು ಕಾಮಿಕಾಗಮದ ೨೦–೨೧ನೇ ಶ್ಲೋಕಗಳಿಗೆ (ಅ. ೫೨) ತಾಳೆಯಾಗುತ್ತಿದ್ದು, ಬಹುಶಃ ಅದೂ ಪ್ರತಿಭದ್ರ ಪ್ರಭೇದವೇ ಆಗಿರಬೇಕು.[13] ಕಾಶ್ಯಪ ಮತ್ತು ಶಿಲ್ಪರತ್ನದ 'ಪ್ರತಿಸುಂದರ' ಪ್ರಭೇದವು, ಪ್ರತಿಭದ್ರದಂತೆ ಕಪೋತವನ್ನು ಹೊಂದಿರುವುದಾದರೂ ಇದರಲ್ಲಿ ಪಾದುಕಾ, ಪದ್ಮ, ಕಂಪದ ನಂತರ (ಗಲ, ಕಂಪ, ಪದ್ಮದ ಕೆಳಗೆ) ಆಲಿಂಗ, ಅಂತರಿಕ, ಪ್ರತಿ, ವಾಜನಗಳು ಬರುತ್ತವೆ. ಇದೂ ಕೂಡ ಪಾದ್ಮಸಂಹಿತೆಯ 'ಪ್ರತಿಭದ್ರ'ದ ಎರಡನೇ ವಿಧಕ್ಕೆ ತಾಳೆಯಾಗುತ್ತಿದ್ದು, ಇದನ್ನೂ 'ಪ್ರತಿಭದ್ರ'ದ ಗುಂಪಿಗೇ ಸೇರಿಸಬಹುದಾಗಿದೆ. ಅಂತೇ ದೀಪ್ತಾಗಮದ ೧೬೮–೧೯ನೇ ಶ್ಲೋಕವೂ ಕೂಡ ಬಹುಶಃ ಪ್ರತಿಭದ್ರ ರಚನೆಗೆ ಅನ್ವಯಿಸಬಲ್ಲುದಾಗಿದೆ.[14]

## ಮಂಚಭದ್ರ

ಮಂಚಭದ್ರ ಉಪಪೀಠದ ಬಗ್ಗೆ ಮಾನಸಾರದಲ್ಲಿ ಮಾತ್ರ[15] ಉಲ್ಲೇಖವಿದ್ದು[16], ಬಹುಪಾಲು ಇದು ಎರಡು ಹಂತದಂತೆ ರಚನೆಯಾಗಿರುವುದನ್ನು ಕಾಣಬಹುದಾಗಿದೆ. ಒಂದು ಹಂತದಲ್ಲಿ ಪಾದಕ, ಪದ್ಮ, ಕಂಠ, ಕಪೋತವೂ, ಇನ್ನೊಂದು ಹಂತದಲ್ಲಿ ಅದರ ಮೇಲೆ ಮತ್ತೆ ಕಂಠ, ಕಪೋತ, ಆಲಿಂಗ, ಅಂತರಿತ, ಪ್ರತಿ, ವಾಜನಗಳೂ

---

12. ಪಾದ್ಮಸಂಹಿತೆ—7. 13—14 ; ಮಾನಸಾರ—13 ಸಾಲು 53—89 ; ಕಾಶ್ಯಪಶಿಲ್ಪ—5. 12—15 (ಪಾದ್ಮಸಂಹಿತೆಯ ಒಂದು ಉಪ ವಿಧದಲ್ಲಿ ಕಂಠವನ್ನು ಹೇಳಿಲ್ಲ ; ಆದರೆ ಉಪಪೀಠದ ಕಂಠ ಇದ್ದೇ ಇರುತ್ತದೆ.)
13. ಪಾದ್ಮಸಂಹಿತೆ—7.13—14
14. ಆದರೂ ಅದರಲ್ಲಿ ಅಂಗಗಳನ್ನು ಸರಿಯಾಗಿ ಹೇಳಿಲ್ಲ. (ಉದ್ಧೃತ—ಅಜಿತಾಗಮ, ಪು—68.) ಇದನ್ನು ಸರ್ವಭದ್ರ ಎಂದು ಗ್ರಂಥವು ಕರೆದಿದ್ದರೂ ಇದು, ಅದರ ಹಿಂದಿನ ಶ್ಲೋಕದಲ್ಲಿ ಹೇಳಿರುವ ಪ್ರತಿಭದ್ರದ ಒಳಭೇದವೆನ್ನಿಸುತ್ತದೆ.
15. 13 ಸಾಲು 90—124
16. ವಿಶ್ವಕರ್ಮ ವಾಸ್ತುಶಾಸ್ತ್ರದ ಉಲ್ಲೇಖ ಮಾತ್ರ ದೊರೆತಿದ್ದು, ವಿವರವು ನನಗೆ ದೊರೆತಿಲ್ಲ. (ಉದ್ಧೃತ—ಅಜಿತಾಗಮ—ಪು. 91—92)

ಬರುತ್ತವೆ. ಶಿಲ್ಪರತ್ನದಲ್ಲಿ ಮಂಚಭದ್ರವನ್ನು ಹೆಸರಿಸಿದ್ದರೂ ಅದರ ಅಳತೆಯ ಬಗ್ಗೆ ಹೇಳಿಲ್ಲ.[17]

## ದೇವಾಲಯಗಳಲ್ಲಿ ಉಪಪೀಠ ರಚನೆ

ಪ್ರಾಚೀನ ಕಾಲದ ದೇವಾಲಯಗಳಲ್ಲಿ ಉಪಪೀಠದ ರಚನೆ ಕಂಡುಬರುವುದಿಲ್ಲ. ಬಾದಾಮಿ, ಐಹೊಳೆ, ಪಟ್ಟದಕಲ್ಲಿನ ದೇವಾಲಯಗಳಲ್ಲಿ ಉಪಪೀಠವನ್ನು ರಚಿಸಿಲ್ಲ. ಬನ್ನೇರುಘಟ್ಟದ (ಬೆಂಗಳೂರು) ಚಂಪಕಧಾಮಸ್ವಾಮಿ ದೇವಾಲಯಗಳಲ್ಲಿ 'ವೇದಿಭದ್ರ' ಉಪಪೀಠವಿದೆ. ಕಂಬದಹಳ್ಳಿಯ ಶಾಂತಿನಾಥ ಬಸದಿಯಲ್ಲಿ ಸುಭದ್ರ ರೀತಿಯ ಉಪಪೀಠವನ್ನು ಕಾಣಬಹುದು.[18] ಅರಳುಗುಪ್ಪೆಯ ಕಲ್ಲೇಶ್ವರ ದೇವಾಲಯದಲ್ಲಿ ಉಪಪೀಠದ ಮೇಲ್ಭಾಗ ಮಾತ್ರ ಸ್ಪಷ್ಟವಾಗಿದ್ದು, ಇದರಲ್ಲಿ ಕಂಠ, ಕಪೋತ ಮತ್ತು ಕಂಪ—ಈ ಭಾಗಗಳನ್ನು ಮಾತ್ರ ಕಾಣಬಹುದಾಗಿದೆ. ಇದರಿಂದ ಇದನ್ನು 'ಸುಭದ್ರ' ರೀತಿಗೆ ಸೇರಿಸಬಹುದು. ಹಂಪೆಯ ರಾಮಚಂದ್ರ (=ಹಜಾರರಾಮ) ದೇವಾಲಯಕ್ಕೆ ಸೇರಿದ ದೇವೀ ದೇವಾಲಯದ ಉಪಪೀಠವು ಬಹುಪಾಲು ಅದಿಷ್ಠಾನದಂತೇ ರಚಿತವಾಗಿರುವುದು ವಿಶೇಷವಾಗಿದೆ. ಇದರಲ್ಲಿ ಕಟಕಾವೃತ ಕುಮುದವಿದೆಯಾದರೂ ಕಂಠವು ಪ್ರಧಾನವಾಗಿರುವುದರಿಂದ ಮತ್ತು ಸ್ಥಾನದ ಕಾರಣದಿಂದ ಅದನ್ನು ಉಪಪೀಠವೇ ಎನ್ನಬೇಕಾಗಿದೆ. ಮಾನಸಾರದಲ್ಲಿ ಪ್ರತಿಭದ್ರದ ಅನೇ ವಿಧದಲ್ಲಿ ಜನ್ಮ, (ಕಂಪ) ಪದ್ಮ, ಕಂಪ ಹೇಳಿ, ನಂತರ ಕರ್ಣ, ಕಂಪ, ಅಂಬುಜ, ರತ್ನಪಟ್ಟ, ದಲ, ಕ್ಷೆಪಣ, ಕರ್ಣ, ಕ್ಷೆಪಣ, ಅಂಬುಜಗಳನ್ನು ಹೇಳಿದೆ ; ಮುಂದಿನ ಭಾಗವಾಗಿ ಇತರ ಗ್ರಂಥಗಳಂತೇ ಕಪೋತ ಇತ್ಯಾದಿಗಳನ್ನು ಹೇಳಿದೆ. ಹಂಪೆಯ, ಮೇಲೆ ಹೇಳಿದ ದೇವಾಲಯವನ್ನು ಗಮನಿಸಿದರೆ, ರತ್ನಪಟ್ಟದ ಸ್ಥಾನದಲ್ಲಿ 'ಕುಮುದ'ವು ಬಂದಿರುವುದು ಸ್ಪಷ್ಟ. ಅಲ್ಲದೆ, ಉಳಿದಂತೆ ಮೇಲೆ ಹೇಳಿದ ಮಾನಸಾರದ 'ವಿಧ'ದೊಂದಿಗೇ ಹೋಲುತ್ತಿರುವುದೂ ಸ್ಪಷ್ಟ. 'ರತ್ನಪಟ್ಟ'ವು ಸೂಕ್ತವಲ್ಲವೆಂದೇನೋ ಇಲ್ಲಿ ಹೀಗೆ ಕುಮುದವನ್ನು ತಂದಿರಬಹುದು. ಈ ಉಪಪೀಠದ ಮೇಲಿರುವ ಅಧಿಷ್ಠಾನವೂ ಇದೇ ರೀತಿ ರಚನೆಯಾಗಿರುವುದೂ, ಹಂಪೆಯ ಇತರ ದೇವಾಲಯಗಳಲ್ಲೂ ಹೀಗೆ ಇರುವುದು—ಗಮನಾರ್ಹ ಅಂಶ.

ಉಪಪೀಠದ 'ಕಂಠ'ವನ್ನು ಗಜ, ಸಿಂಹ, ವ್ಯಾಲ–ಇತ್ಯಾದಿಗಳಿಂದ ಅಲಂಕರಿಸ

---

17. ಉದ್ಧೃತ—ಭಾರತೀಯ ಶಿಲ್ಪಸಾರ—ಪು. 38—39

18. ಎನ್‌ಸೈಕ್ಲೋಪೀಡಿಯ ಆಫ್ ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್‌ನಲ್ಲಿ (ಸಂ. 1 ಭಾಗ—2 ಪು. 88—89) ಇದನ್ನು 'ಷಡಂಗ ವೇದಿಭದ್ರ' ಎಂದು ಕರೆಯಲಾಗಿದೆ. ಆದರೆ ಇದರಲ್ಲಿ ಕಪೋತವಿರುವುದರಿಂದ ಇದನ್ನು 'ಪ್ರತಿಭದ್ರ' ರೀತಿಯೆಂದು ಇಲ್ಲಿ ಗುರುತಿಸಲಾಗಿದೆ.

ಬೇಕೆಂದು ಗ್ರಂಥಗಳು[19] ಸಾರಿದ್ದರೂ, ಬಹುಪಾಲು ಉಪಪೀಠಗಳು ಸರಳವಾದ ರಚನೆಯನ್ನು ಹೊಂದಿವೆ.

## ಅಧಿಷ್ಠಾನ

### ಪ್ರವೇಶ

ಒಂದು ಕಟ್ಟಡವು ನಿಲ್ಲಲು 'ಆಧಾರ'ವಾಗಿರುವ ಭಾಗವನ್ನು "ಅಧಿಷ್ಠಾನ" ಎನ್ನುವರು. ಅಂತೆಯೇ ದೇವಾಲಯಕ್ಕೆ ಆಧಾರವಾಗಿ ನಿರ್ಮಿಸಲ್ಪಟ್ಟಿರುವ, ಗೋಡೆಯ ಕೆಳಭಾಗದಲ್ಲಿ ಬರುವ ಬಾಗವೇ ಅಧಿಷ್ಠಾನ. ಆಲಯದಲ್ಲಿ ಊರ್ಧ್ವ ಮುಖ ಕ್ರಮದಲ್ಲಿ (ಉಪಪೀಠವಿಲ್ಲದಿದ್ದಲ್ಲಿ) ಅಧಿಷ್ಠಾನವೇ ಮೊದಲ ಭಾಗವಾಗಿರುತ್ತದೆ. ಉಪಪೀಠವಿದ್ದರೂ, ಷಡ್ವರ್ಗ ಕ್ರಮದಲ್ಲಿ ಇದೇ ಮೊದಲ ಭಾಗವಾದ್ದರಿಂದ ಇದನ್ನು 'ಆದ್ಯಂಗ' ಎಂದು ಕರೆಯುತ್ತಾರೆ.[20] ಮಸೂರಕ, ವಸ್ತ್ವಾಧಾರ, ಧರಾತಲ, ತಲ, ಕುಟ್ಟಿಮ, ಧರಣೀ, ಭುವನ, ಪೃಥ್ವೀ, ಭೂಮಿ—ಮುತಾದುವು ಅಧಿಷ್ಠಾನಕ್ಕಿರುವ ಪರ್ಯಾಯ ಪದಗಳು.[21] ಅಜಿತಾಗಮ (೧೩), ಮಾನಸಾರ(೧೪), ಮಯಮತ (೧೪), ಕಾಶ್ಯಪಶಿಲ್ಪ (೬), ಪಾದ್ಮಸಂಹಿತೆ (೭), ಕಾಮಿಕಾಗಮ (೫೩) ವಿಮಾನಾರ್ಚನ ಕಲ್ಪ (೮) ಇತ್ಯಾದಿ ಆಗಮ ಮತ್ತು ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ[22] ಅಧಿಷ್ಠಾನವನ್ನು ಕುರಿತಾಗಿ ವಿವರಗಳಿದ್ದು, ಅಧಿಷ್ಠಾನ ರಚನೆಯ ಕ್ರಮ, ಆದರ ಅಂಗೋಪಾಂಗಳು ಮತ್ತು ಪ್ರಭೇದಗಳು—ಈ ಬಗ್ಗೆ ಸಾಕಷ್ಟು ವಿವರಗಳು ದೊರೆಯುತ್ತವೆ.

### ರಚನೆ

ಅಧಿಷ್ಠಾನದ ಸ್ಥಾನ ಮತ್ತು ಸ್ಥಳದ ಬಗ್ಗೆ ನಿರ್ದೇಶನ ಮಾಡುತ್ತಾ ಮಾನಸಾರವು, ಇದನ್ನು ಭೂಮಿಯ ಮೇಲಿರುವ ಉಪಪೀಠದ ಮೇಲೆ ಕಟ್ಟಬೇಕೆಂದೂ,

---

19. ಮಯಮತ—13. 19ಬಿ—20 ; ಅಜಿತಾಗಮ—11—13
    ಮಾನಸಾರ—13 ಸಾಲು 146—153
20. ಕಾಮಿಕಾಗಮ—52. 80ಬಿ—81ಎ ; ಮಯಮತ—14—40
21. ಕಾಮಿಕಾಗಮ—ಅದೇ ; ಮಾನಸಾರ—14. 3—8
    ಕಾಶ್ಯಪಶಿಲ್ಪ—61. —2 ; ಮಯಮತ ಅದೇ—
22. 'ಶಿಲ್ಪರತ್ನ'ದ ಬಗ್ಗೆ ಭಾರತೀಯ ಶಿಲ್ಪಸಾರದಲ್ಲೂ, ಕಾರಣಾಗಮ, ಸುಪ್ರಭೇದಾಗಮ, ಈಶಾನ ಶಿವಗುರು ದೇವಪದ್ಧತಿ, ದೀಪ್ತಾಗಮ—ಇವುಗಳ ಬಗ್ಗೆ ಅಜಿತಾಗಮದಲ್ಲೂ ಉದ್ಧರಿಸಲಾಗಿದ್ದು, ಅದರಂತೆ, ಆಯಾ ಶಾಸ್ತ್ರ ಗ್ರಂಥಗಳಲ್ಲಿ ಕ್ರಮವಾಗಿ, 19ನೇ ಅಧ್ಯಾಯ ; ಭಾಗ—1, ಅ. 5 ; ಭಾಗ—1, ಅ. 81 ; ಭಾಗ 4 ಪು. 309 (3) ; 2ನೇ ಪಟಲ—ಇವುಗಳಲ್ಲಿ ಅಧಿಷ್ಠಾನದ ಬಗ್ಗೆ ಉಲ್ಲೇಖಗಳು ದೊರೆಯುತ್ತಿವೆ.

ಅಧಿಷ್ಠಾನವು ವಾಸದ ಮನೆ, ದೇವಾಲಯ....ಮಂಟಪ, ಗೋಪುರಗಳಲ್ಲಿ ಬರುವು ದೆಂದೂ ಹೇಳಿದೆ.[23] ಅಧಿಷ್ಠಾನ ರಚನೆಯ ಬಗ್ಗೆ ಮಯಮತದಲ್ಲಿ ದೊರೆಯುವ ವಿವರವೆಂದರೆ—ಭೂಮಿಯಲ್ಲಿ ನಿಧಿಯನ್ನು ಇಟ್ಟು, ಅದರ ಮೇಲೆ ಬಂದು ಹಾಸು ಗಲ್ಲನ್ನು (=ಹೋಮ) ಅದಕ್ಕೆ ಸರಿಹೊಂದುವಂತೆ ಜೋಡಿಸಬೇಕು. ಹೀಗೆ, ಭೂಮಿಯನ್ನು ಒಂದು ಮಟ್ಟಕ್ಕೆ, ಎತ್ತರಕ್ಕೆ ಮಾಡಿಕೊಂಡ ಮೇಲೆ, ಈ ಉಪಾನ ವನ್ನು ಮಾಡಬೇಕು. ಇದನ್ನು ಜನ್ಮನ್/ಉಪಾನ ಎಂದೂ ಅದರಲ್ಲಿ ಹೇಳಲಾಗಿದೆ. ಇದರ ಮೇಲೆ ಬರುವುದೇ ಪದ್ಮ ಮತ್ತು ಉಪೋಪಾನ. ಹೀಗೆ, ಮಯಮತವು ಅಧಿಷ್ಠಾನ ರಚನೆಯ ಆರಂಭಿಕ ಹಂತವನ್ನು ಸ್ಪಷ್ಟಪಡಿಸುತ್ತಿದೆ. ಇಂತಹುದೇ ವಿವರವು ಕಾಶ್ಯಪ ಶಿಲ್ಪದಲ್ಲೂ ಇದೆ.[24]

ಮೊದಲೇ ತಿಳಿಸಿರುವಂತೆ, ಅಧಿಷ್ಠಾನವು ದೇವಾಲಯಕ್ಕೆ ಆಧಾರವಾಗಿರುವ ಭಾಗ, ದೇವಾಲಯದ ಭಾರವು ಅಧಿಷ್ಠಾನದ ಮೇಲೂ ಬೀಳುವುದರಿಂದ ಅದನ್ನು ಅನೇಕ ಅಂಗ-ಉಪಾಂಗಗಳೊಂದಿಗೆ ಭದ್ರವಾಗಿ ರಚಿಸಬೇಕಾಗುತ್ತದೆ. ಈ ಅಂಗ ಗಳ ಬಗ್ಗೆ ಗ್ರಂಥಗಳಲ್ಲಿ ವಿವಿಧ ಉಲ್ಲೇಖಗಳು ದೊರೆಯುತ್ತವೆ. ಕಾಶ್ಯಪಶಿಲ್ಪದಲ್ಲಿ ಉಪಾನ, ಜಗತೀ, ಕೂಪ (=ಕುಮುದ ?) ಖಂಡ (=ಕಂಠ) ಪಟ್ಟಿಕಾಗಳನ್ನು ಹೇಳಿದ್ದು, ಇದನ್ನು 'ಪಂಚವರ್ಗ' ಎಂದಿದೆ.[25] ಮಾನಸಾರದಲ್ಲಿ ಉಪಾನ, ಜಗತೀ, ಕುಂಭ, ಕಂಧರ, ಪ್ರಸ್ತರಗಳನ್ನು ಪಂಚವರ್ಗವೆಂದು ಹೇಳಿದೆ ಮತ್ತು ಕಾಮಿಕಾಗಮವು, ಇದನ್ನೇ ಸಂಕ್ಷಿಪ್ತವಾಗಿ 'ಜನ್ಮಾದಿ ಪಂಚವರ್ಗೇಷು' ಎಂದು ಹೇಳಿದೆ.[26] ಪಾದ್ಮಸಂಹಿತೆಯಲ್ಲಿ ಉಪಾನ, ಜಗತೀ, ಪದ್ಮ, ಕಂಠ, ಕಂಪ, ಪಟ್ಟಿಕಾ, ನಿದ್ರಿಕಾ (=ಕಪೋತ), ಪದ್ಮ, ಸ್ಕನ್ದ (=ಆಲಿಂಗ/ಕಂಠ), ಅಂತರಿತ —ಹೀಗೆ ಅಧಿಷ್ಠಾನದಲ್ಲಿ ಹನ್ನೆರಡು ಅಂಗಗಳೆಂದು ಹೇಳಿದೆ.[27] ಇದರಲ್ಲಿ ಕುಮುದ, ಪ್ರತಿ ಮತ್ತು ವಾಜನಗಳು ಬಿಟ್ಟು ಹೋಗಿರುವುದಲ್ಲದೆ, ಪದ್ಮವನ್ನು ಎರಡು ಬಾರಿ ಹೇಳಿರುವುದರಿಂದ ಹತ್ತು ಅಂಗಗಳ ಹೆಸರು ಮಾತ್ರ ದೊರೆಯುತ್ತಿದೆ. ಇಲ್ಲಿ ಕಾಮಿಕಾಗಮ ಮತ್ತು ಕಾಶ್ಯಪಶಿಲ್ಪಗಳು ಒಂದೇ ಅಧಿಷ್ಠಾನದಲ್ಲಿ ಕಾಣಬರುವ ಮುಖ್ಯ ಅಂಗಗಳನ್ನು ಕುರಿತು ಹೇಳಿದ್ದರೆ, ಪಾದ್ಮಸಂಹಿತೆಯು ಅಧಿಷ್ಠಾನಗಳಲ್ಲಿ ಒಟ್ಟಾರೆಯಾಗಿ ಕಾಣಬಹುದಾದ ಎಲ್ಲ ಅಂಗಗಳ ಹೆಸರನ್ನೂ ಉಲ್ಲೇಖಿಸಿದೆ ಎನ್ನ ಬಹುದು.

---

23. 14, ಸಾಲು-397–404
24. 14 1–9
25. ಇದನ್ನು ಮೇಲ್ಪಾಯ ಎನ್ನಬಹುದೇನೊ !
26. 6, 3-11 ಶಿಲ್ಪರತ್ನ. ಉದ್ಧೃತ್ತ, ಭಾರತೀಯ ಶಿಲ್ಪಸಾರ-ಪು-141–42
27. ಅದೇ-6–22, ಮಾನಸಾರ, ಉದ್ಧೃತ-ಭಾರತೀಯ ಶಿಲ್ಪಸಾರ, ಪು-48

ಅಧಿಷ್ಠಾನದಲ್ಲಿ ಪ್ರಧಾನವಾಗಿ ಕಾಣಬರುವ 'ಕುಮುದ'ದಲ್ಲಿ ಮೂರು ಬಗೆಯಿದ್ದು, ಇದನ್ನು ವೃತ್ತಕುಮುದ, ತ್ರಿಪಟ್ಟ ಕುಮುದ ಮತ್ತು ಅಷ್ಟಾಶ್ರ ಕುಮುದ ಎಂದು ಹೇಳಬಹುದು. ಕೆಲವು ಗ್ರಂಥಗಳಲ್ಲಿ ಅಷ್ಟಾಶ್ರ ಕುಮುದ ಮತ್ತು ವೃತ್ತಕುಮುದದ ಉಲ್ಲೇಖ ಮಾತ್ರವೇ ಇದ್ದು, ತ್ರಿಪಟ್ಟ ಕುಮುದವನ್ನು ಮಾನಸಾರ ಮತ್ತು ವಿಮಾನಾರ್ಚನ ಕಲ್ಪ ಗ್ರಂಥಗಳು ಮಾತ್ರ ಸ್ಪಷ್ಟವಾಗಿ ಉಲ್ಲೇಖಿಸಿವೆ.[28] ಮಾನಸಾರದಲ್ಲಿ "ವೃತ್ತಂ ವಿಧಿಂ ತ್ರಿಪಟ್ಟಂ ವಾ ಧಾರಾಯ ಕಟಕಾನ್ವಿತಂ"[29] ಎಂದು ಹೇಳಿದ್ದು, ಅಷ್ಟಾಶ್ರ ಕುಮುದವನ್ನು ಇಲ್ಲಿ 'ಧಾರಾ' ಎಂದು ಕರೆದಿರುವುದಲ್ಲದೆ, ಅದು 'ಕಟಕ'ದಿಂದ ಕೂಡಿರಬೇಕು ಎಂದು ಹೇಳಿರುವುದು ಸ್ಪಷ್ಟವಾಗುತ್ತದೆ.[30] ಇದೇ ಗ್ರಂಥದಲ್ಲಿ ತ್ರಿಪಟ್ಟವನ್ನು ಪುಷ್ಪ, ರತ್ನಗಳಿಂದಲೂ, ವೃತ್ತ ಕುಮುದವನ್ನು ಕಟಕ (=ಬಳೆ)ದಿಂದಲೂ ಅಲಂಕರಿಸಬೇಕು ಎಂದು ಹೇಳಿರುವುದರಿಂದ[31] ಕಟಕಾಲಂಕರಣವು ವೃತ್ತ ಕುಮುದಕ್ಕೆ ಹೊಂದುವುದೇ ಹೊರತು ಧಾರಾ ಕುಮುದಕ್ಕಲ್ಲವೆನ್ನಬಹುದು. ದೇವಾಲಯಗಳಲ್ಲೂ ಕಟಕಾಲಂಕರಣವನ್ನು ವೃತ್ತ ಕುಮುದದಲ್ಲೇ ಕಾಣುತ್ತೇವೆ. ಗ್ರಂಥಗಳಲ್ಲಿ ಅಷ್ಟಾಶ್ರ ಕುಮುದದ ಉಲ್ಲೇಖವಿದ್ದರೂ, ರಚನೆಯಲ್ಲಿ ಇದರ ಬಳಕೆ ಕಡಿಮೆಯೆಂದೇ ಹೇಳಬಹುದಾಗಿದೆ, ಬದಲಿಗೆ, ತ್ರಿಪಟ್ಟ ಕುಮುದವನ್ನು ಹೆಚ್ಚಾಗಿ ಕಾಣುತ್ತೇವೆ.[32] 'ಕೈರವ' ಎಂಬ ಪದವು ಕುಮುದಕ್ಕೆ ಪರ್ಯಾಯವಾಗಿ ಶಿಲ್ಪರತ್ನ ಮತ್ತು ಮಯಮತಗಳಲ್ಲಿದ್ದು, ಇದನ್ನು ಪ್ರತಿ ಬಂಧ ಪ್ರಭೇದದಲ್ಲಿ ಹೇಳಿರುವುದರಿಂದ, ಕೈರವವು ವೃತ್ತ ಕುಮುದವನ್ನೇ ಸೂಚಿಸುತ್ತದೆ ಎನ್ನಬಹುದಾದರೂ ಅಜಿತಾಗಮದಲ್ಲಿ ಇದೇ ಪದವು ಪಾದಬಂಧ ಮತ್ತು ಪ್ರತಿಬಂಧ-ಎರಡೂ ಪ್ರಭೇದಗಳಲ್ಲಿದೆ. ಈ ಕಾರಣದಿಂದ, ಇದು ಎರಡೂ ರೀತಿಯ ಕುಮುದಗಳಿಗೆ ಅನ್ವಯಿಸುವ ಸಾಧ್ಯತೆ ಇದೆ. ಕುಮುದದೊಂದಿಗೆ ಪದ್ಮವನ್ನೂ ಹೇಳಿದ್ದರೆ, ಅಲ್ಲಿ ವೃತ್ತ ಕುಮುದ ಬರುವುದೆಂಬ ಸೂಚನೆಯು ಕಾಶ್ಯಪದಲ್ಲಿದೆ.[33] 'ಊರ್ಧ್ವಕಂಪ' ಎಂಬ ಪದವನ್ನು ಗ್ರಂಥಗಳಲ್ಲಿ ಬಳಸಿದ್ದು, ಇದನ್ನು 'ಗಳ'ದ ಮೇಲೆ ಬರುವ ಕಂಪ ಮತ್ತು ಅಧಿಷ್ಠಾನದ ಕೊನೆಯಲ್ಲಿ

---

28. 52. 84ಬಿ-86 ಶಿಲ್ಪರತ್ನ, ಉದ್ಧೃತ-ಭಾರತೀಯ ಶಿಲ್ಪಸಾರ, ಪು-145
29. 7. 27ಬಿ-28ಎ
30. ಮಾನಸಾರ—14, ಸಾಲ-238 ; ವಿಮಾನಾರ್ಚನಕಲ್ಪ-ಅಷ್ಟಮಪಟಲ. ಪು. 30 ಮಾನಸಾರದಲ್ಲಿ ಷಡಶ್ರ ಕುಮುದದ ಉಲ್ಲೇಖವೂ ಇದೆ,
31. 14 ಸಾಲು 238.
32. ಇದರಿಂದ ವಿದ್ವಾಂಸರು ಅಷ್ಟಾಶ್ರ ಕುಮುದವನ್ನು 'ಧಾರಾವೃತ್ತ' ಎಂದು ಕರೆಯುತ್ತಿದ್ದರೂ, ಇದನ್ನು 'ಧಾರಾಕುಮುದ' ಎನ್ನುವುದು ಸೂಕ್ತವೆನಿಸುತ್ತದೆ.
33. ಮಾನಸಾರ—4-ಸಾಲು. 73-76.

ಬರುವ ಕಂಪ—ಎರಡಕ್ಕೂ ಬಳಸಲಾಗಿದೆ. ಕೆಲವೆಡೆ ಉಪರಿಪಟ್ಟಿಕಾ, ಊರ್ಧ್ವ ಪಟ್ಟಿಕಾ ಎಂಬ ಪದಗಳನ್ನೂ ಅಧಿಷ್ಠಾನದ ಕೊನೆಯ ಅಂಗಕ್ಕೆ ಬಳಸಿದೆ.[34]

### ಅಂಗಗಳು

ಅಧಿಷ್ಠಾನದ ಈ ಅಂಗಗಳಿಗೆ ಪರ್ಯಾಯ ಪದಗಳೂ, ಸಮಾನಾಂತರ ಪದಗಳೂ ಗ್ರಂಥಗಳಲ್ಲಿ ದೊರೆಯುತ್ತವೆ. ಪಂಕಜ, ಅಬ್ಜ, ದಲ, ಕಮಲ, ಅಂಬುಜ—ಇವು 'ಪದ್ಮ'ದ ಪರ್ಯಾಯ ಪದಗಳಾದರೆ, ಗಲ, ಕಂಧರ, ಗ್ರೀವ—ಇವು 'ಕಂಠ'ದ ಪರ್ಯಾಯ ಪದಗಳಾಗಿವೆ. ಉಪಾನ, ಪಾದುಕಾ, ಜನ್ಮನ್, ಖುರ—ಈ ಎಲ್ಲವೂ ಅಧಿಷ್ಠಾನದ ಮೊದಲ ಅಂಗಕ್ಕೆ ಇರುವ ಬೇರೆ ಬೇರೆ ಹೆಸರುಗಳಾಗಿವೆ. 'ಜಗತೀ'ಗೆ 'ವಪ್ರ", ಎಂಬ ಪದವೂ, ಕಪೋತಕ್ಕೆ 'ಗೋಪಾನ' ಎಂಬ ಪರ್ಯಾಯ ಪದಗಳೂ, ಕಂಪಕ್ಕೆ ಕ್ಷೇಪಣ, ಕುಮುದಕ್ಕೆ 'ಕುಂಭ' ಎಂಬ ಸಮಾನಾಂತರ ಪದಗಳೂ ಮಾನಸಾರದಲ್ಲಿವೆ. ಕಾಶ್ಯಪಶಿಲ್ಪದಲ್ಲಿ ಕುಂಭಕ್ಕೆ 'ಘಟ' ಎಂದೂ ಕಂಠಕ್ಕೆ 'ಖಂಡ' ಎಂದೂ ಇದ್ದರೆ, ಪಾದ್ಮಸಂಹಿತೆಯಲ್ಲಿ ಕಪೋತಕ್ಕೆ 'ನಿದ್ರಾ' ಎಂದಿದೆ. ಇದರೊಂದಿಗೆ, ರಚನಾತ್ಮಕವಾಗಿ ಕೆಲವು ಬದಲಾವಣೆಗಳಾಗಿದ್ದು, 'ಕರ್ಣ' ಎಂದು ಗ್ರಂಥವು ಹೇಳಿರುವಲ್ಲಿ 'ಕಂಪ'ವನ್ನೂ, 'ಪಟ್ಟ' ಎಂದಿರುವೆಡೆ 'ಪದ್ಮ'ವನ್ನೂ ಬಿಡಿಸಿರುವುದನ್ನು ದೇವಾಲಯಗಳಲ್ಲಿ ಕಾಣುತ್ತೇವೆ.

### ಅಂಗಗಳ ರಚನೆ

ಮಾನಸಾರದಲ್ಲಿ ಅಧಿಷ್ಠಾನದ ಸ್ಥಾನವನ್ನು/ಅಂಗಗಳನ್ನು 'ಜನ್ಮಾದಿ ವಾಜನಾಂತಂ[35] ಎಂದಿದ್ದು, ಇದು ಅಧಿಷ್ಠಾನದ ಮೊದಲ ಮತ್ತು ಕೊನೆಯ ಅಂಗವನ್ನು ಸೂಚಿಸುತ್ತಿದೆ. ಅಧಿಷ್ಠಾನದಲ್ಲಿ ಬರುವ ಇತರ ಅಂಗಗಳ ರಚನಾಕ್ರಮದ ಬಗ್ಗೆ ದೊರೆಯುವ ವಿವರಗಳೆಂದರೆ—ಕಾರಣಾಗಮದಲ್ಲಿ, ಉಪಾನದ ಮೇಲೆ 'ಜಗತೀ' ರಚಿಸಬೇಕೆಂದು ಹೇಳಿದೆ.[36] ಕಾಮಿಕಾಗಮದಲ್ಲಿ ಜಗತೀ, ಕೈರವ, ವೇತ್ರ (= ?), ಮಹಾವಾಜನ—ಈ ಅಂಗಗಳು ಹೊರ ಚಾಚಿರುವೆಂದಿದೆ.[37] ವಿಮಾನಾರ್ಚನ ಕಲ್ಪದಲ್ಲಿ, ಜಗತೀ, ಕುಮುದಗಳು ಸಮವಾಗಿರಬೇಕೆಂದಿದೆಯಲ್ಲದೆ,

---

34. ಐಹೊಳೆಯ ದುರ್ಗ ದೇವಾಲಯ ಮತ್ತು ನಾಗರಾಳ್‌ನ ನಾಗನಾಥ ದೇವಾಲಯ ಮುಂತಾದಡೆಗಳಲ್ಲಿ ಇಂತಹ ಕುಮುದವಿದೆ.
35. 6, 117.
36. ಅಧಿಷ್ಠಾನದ ಈ ಕೊನೆಯ ಅಂಗವನ್ನು 'ಪ್ರತೀ' ಎಂದು ವಿದ್ವಾಂಸರು ಗುರುತಿಸಿದ್ದು, ವಿಮಾನಾರ್ಚನ ಕಲ್ಪದಲ್ಲೂ ಒಂದೆಡೆ (ಪು. 32-33) ಹಾಗೆ ಬರುವುದಾದರೂ, ಅದರ ವಿವರ ನನಗೆ ಸ್ಪಷ್ಟವಾಗಿಲ್ಲ.
37. 14. ಸಾಲು. 9

ಕಂಠ, ಪಟ್ಟಿಕಾಂಬುಜ (?) ಕಂಪ-ಇವು ಸಮಾನವಾಗಿ ಹೊರಚಾಚಿರಬೇಕೆಂದಿದೆ.[38] (ಆದರೆ 'ಪಟ್ಟಿಕಾ' ಅಂಗವು ಕಂಪಕ್ಕಿಂತಲೂ ಹೊರಚಾಚಿದ್ದು, ಜಗತೀಗೆ ಸಮನಾಗಿರುತ್ತದೆ). ಮಯಮತದಲ್ಲೂ ಕುಮುದ ಮತ್ತು ಜಗತಿಯು ಒಂದೇ ಸಮನಾಗಿ ಹೊರಚಾಚಿರಬೇಕೆಂದಿದೆ.[39] ಕಾಶ್ಯಪಶಿಲ್ಪದಲ್ಲಿ ಈ ವಿವರಗಳಿದ್ದರೂ, ಹೆಚ್ಚು ಸ್ಪಷ್ಟವಾಗಿಲ್ಲ.[40] ಮಾನಸಾರದಲ್ಲೂ ಈ ಬಗ್ಗೆ ಕೆಲವು ವಿವರಗಳಿದ್ದರೂ, ಹೆಚ್ಚು ಶೋಭೆ ಮತ್ತು ಬಲವರ್ಧನೆಗೆ ಅನುಗುಣವಾಗಿ ಈ ರಚನೆಗಳನ್ನು ಮಾಡಬೇಕೆಂದಿದೆ.[41] ದೇವಾಲಯದ ಅಧಿಷ್ಠಾನಗಳನ್ನು ಗಮನಿಸಿದಾಗ, ಅವು ಬಹುಪಾಲು ಇದೇ ರೀತಿಯಾಗಿ ರಚನೆಗೊಂಡಿವೆ ಎನ್ನಬಹುದು. ಜಗತೀ, ಕುಮುದ, ವಾಜನ, ಪಟ್ಟಿಕಾ, ಕಪೋತ—ಇವು ಹೊರಚಾಚಿರುವ ಭಾಗಗಳಾಗಿದ್ದು, ಗಳ, ಕಂಪ, ಆಲಿಂಗ, ಅಂತರಿತ, ಪ್ರತಿ—ಇವು ಒಳಸರಿದ ಭಾಗಗಳಾಗಿವೆ. 'ಉಪಾನ'ವು ಈ ಎಲ್ಲದಕ್ಕಿಂತಲೂ ಹೊರಚಾಚಿರುತ್ತದೆ; 'ಪದ್ಮ'ವು ಒಂದು ಅಂಗಕ್ಕೆ ಹೊಂದಿಕೊಂಡಂತೆ ಬರುತ್ತದೆ.

## ಪಾದಬಂಧ ಮತ್ತು ಪ್ರತಿಬಂಧ ಪ್ರಭೇದಗಳು

ಅಧಿಷ್ಠಾನವನ್ನು ಹೀಗೆ ನಾನಾ ಅಂಗೋಪಾಂಗಗಳಿಂದ ಭದ್ರವಾಗಿ ರಚಿಸಬಹುದಲ್ಲದೆ, ಈ ಬೇರೆ ಬೇರೆ ಅಂಗ-ಉಪಾಂಗಗಳನ್ನು ಸೇರಿಸುವುದರಿಂದ/ಬಿಡುವುದರಿಂದ ವಿಭಿನ್ನ ರೀತಿಯಲ್ಲಿ ರಚಿಸಬಹುದಾಗಿದೆ. ಇವುಗಳ ಬಗ್ಗೆ ವಿವರಿಸುವಾಗ, ಗ್ರಂಥಗಳು ಮುಖ್ಯ ಎರಡು ವಿಸ್ತೃತ ಪ್ರಭೇದಗಳನ್ನು ಗುರುತಿಸಿಕೊಂಡಿದ್ದು, ಇವುಗಳನ್ನು 'ಪಾದಬಂಧ' ಮತ್ತು 'ಪ್ರತಿಬಂಧ' ಎಂದು ಹೇಳುತ್ತವೆ. ಈ ಪ್ರಭೇದ ವಿಂಗಡಣೆಯ ಆಧಾರವೆಂದರೆ—'ಕುಮುದ.' ಕಾಶ್ಯಪಶಿಲ್ಪದಲ್ಲಿ, ವೃತ್ತಕುಮುದವಿದ್ದರೆ 'ಪ್ರತಿಬಂಧ'ವೆಂದೂ, ಅಷ್ಟಾಶ್ರ ಕುಮುದವಿದ್ದರೆ 'ಪಾದಬಂಧ'ವೆಂದೂ ಹೇಳಲಾಗಿದೆ.[42] ಪಾದ್ಮಸಂಹಿತೆಯಲ್ಲಿ, 'ಪ್ರತಿಬಂಧ'ದ ಬಗ್ಗೆ ಇದೇ ಹೇಳಿಕೆ ಇರುವುದಲ್ಲದೆ, ಪ್ರತಿಬಂಧ ಅಧಿಷ್ಠಾನದಲ್ಲಿ 'ಪ್ರತೀ'ಯನ್ನು[43] ಯಾವ ಕಾರಣಕ್ಕೂ

---

38. 1, 5, 18 (ಉದ್ಧೃತ-ಅಜಿತಾಗಮ-ಪು. 86)
39. 52. 81ಬಿ—84
44. ಅಷ್ಟಮ ಪಟಲ—ಪು. 33
41. 14. 17—18
42. 6. 17—20, ಶಿಲ್ಪರತ್ನದಲ್ಲೂ ಅಂಗಗಳ ನಿರ್ಗಮದ ಬಗ್ಗೆ ಹೀಗೇ ಉಲ್ಲೇಖವಿದೆ. ಉದ್ಧೃತ—ಭಾರತೀಯ ಶಿಲ್ಪಸಾರ, ಪು. 142
43. 14, ಸಾಲು 380—81

ಛೇದನ ಮಾಡಬಾರದೆಂದಿದೆ.[44] ವಿಮಾನಾರ್ಚನಕಲ್ಪ,[45] ಮಯಮತ[46] ಮತ್ತು ಕಾಮಿಕಾಗಮದಲ್ಲಿ[47] ಛೇದನದ ಬಗ್ಗೆ ಮಾತ್ರ ಹೇಳಲಾಗಿದೆ.[48] ದೇವಾಲಯಗಳಲ್ಲಿ ಅಷ್ಟಾಶ್ರ ಕುಮುದಕ್ಕಿಂತಲೂ ತ್ರಿಪಟ್ಟ ಕುಮುದವೇ ಹೆಚ್ಚಾಗಿ ಬಳಕೆಯಲ್ಲಿರುವುದರಿಂದ ಮತ್ತು ವಿಮಾನಾರ್ಚನಕಲ್ಪವು 'ತ್ರಿಪಟ್ಟ'ವನ್ನು ಸಾಂದರ್ಭಿಕವಾಗಿ ಉಲ್ಲೇಖಿಸಿರುವುದರಿಂದ, ತ್ರಿಪಟ್ಟ ಕುಮುದವಿರುವ ಅಧಿಷ್ಠಾನಗಳೂ ಪಾದಬಂಧಕ್ಕೇ ಸೇರುತ್ತವೆ ಎನ್ನಬಹುದು. ಇದು ಪಾದಬಂಧ ಅಧಿಷ್ಠಾನ ರಚನೆಯಲ್ಲಿ ಕಂಡುಬಂದಿರುವುದೂ ಕೂಡಾ ಇದನ್ನೇ ಸಮರ್ಥಿಸುತ್ತದೆ.

ಟಿ.ವಿ. ಮುತ್ತಾಚಾರ್ಯರು ತಮ್ಮ ಗ್ರಂಥದಲ್ಲಿ "ಮಾನಸಾರವು ಎಂಟುಮುಖದ ಕುಮುದವಿರುವ ಅಧಿಷ್ಠಾನವನ್ನು 'ಪಾದಬಂಧ ಪ್ರಭೇದ'ವೆಂದೂ, ವೃತ್ತಾಕಾರದ ಕುಮುದವಿರುವ ಅಧಿಷ್ಠಾನವನ್ನು 'ಪ್ರತಿಬಂಧ ಪ್ರಭೇದ'ವೆಂದೂ ಗುರುತಿಸಿರುವುದಲ್ಲದೆ ಕುಮುದರಹಿತವಾದುದನ್ನೂ 'ಮಂಚಕ'ವೆಂದೂ ಹೇಳಿದೆ" ಎಂದು ಸೂಚಿಸಿದ್ದಾರೆ.[49] ಶಿಲ್ಪರತ್ನದಲ್ಲೂ ಈ ಸೂಚನೆ ಇದೆ.[50] ಮಂಚಕದಲ್ಲಿ ಕೊನೆಯ ಅಂಗವಾಗಿ ಪಟ್ಟಿಕಾ/ಕಪೋತ ಬರುತ್ತದೆ.

### ಅಧಿಷ್ಠಾನದ ವಿಧಗಳು

ಈ ಪಾದಬಂಧ ಮತ್ತು ಪ್ರತಿಬಂಧ ಪ್ರಭೇದದಲ್ಲಿ ಅನೇಕ ಉಪಭೇದಗಳನ್ನು ಗ್ರಂಥಗಳಲ್ಲಿ ಗುರುತಿಸಲಾಗಿದೆ. ಕೆಲವು ಗ್ರಂಥಗಳಲ್ಲಿ ಅವುಗಳನ್ನು ಕುಮುದದ ಆಧಾರದ ಮೇಲೆ ಪಾದಬಂಧ/ಪ್ರತಿಬಂಧ ಎಂದು ವರ್ಗೀಕರಿಸಲಾಗಿದೆ. ಕಾಶ್ಯಪ

---

44. ಕಾಶ್ಯಪಶಿಲ್ಪ—6.26
45. ಕಾಮಿಕಾಗಮ ಮತ್ತು ವಿಮಾನಾರ್ಚನ ಕಲ್ಪದಲ್ಲಿ ಪ್ರತ್ಯಂಗ ಮತ್ತು ಪಟ್ಟಿಕಾಂಗ—ಎಂಬ ಉಲ್ಲೇಖವಿದ್ದು, ಇಲ್ಲಿ ಅಧಿಷ್ಠಾನದ ಕೊನೆಯ ಅಂಗವಾಗಿ ಪ್ರತೀ ಮತ್ತು ಪಟ್ಟಿಕಾವನ್ನು ಸೂಚಿಸುತ್ತಿದೆ. (ಕ್ರಮವಾಗಿ 52—31 ಮತ್ತು ಪು. 32) ಇದು, ಬಹುಶಃ ಪ್ರತಿಬಂಧ ಮತ್ತು ಪಾದಬಂಧಕ್ಕೆ ಕ್ರಮವಾಗಿ ಅನ್ವಯಿಸಿ, ಈ ವಿಂಗಡಣೆಯನ್ನು ಈ ಗ್ರಂಥಗಳು ಬೇರೊಂದು ದೃಷ್ಟಿಯಿಂದ ಗಮನಿಸಿರುವಂತಿದೆ.
46. ಪಾದ್ಮಸಂಹಿತೆ—ಕ್ರಿಯಾಪಾದ—7. 30
47. ಅಷ್ಟಮಪಟಲ—ಪು. 32
48. 14—45
49. 52. 84—86
50. 'ಸೌತ್ ಇಂಡಿಯನ್ ಟೆಂಪಲ್ ಕಾಂಪ್ಲೆಕ್ಸ್' ಎಂಬ ಗ್ರಂಥದಲ್ಲಿ ಟಿ.ವಿ.ಮಹಾಲಿಂಗಂ ರವರು ವೃತ್ತಕುಮುದವಿದ್ದರೆ ಪಾದಬಂಧವೆಂದೂ, ತ್ರಿಪಟ್ಟಕುಮುದವಿದ್ದರೆ ಪ್ರತಿ-ಬಂಧವೆಂದೂ, ತಪ್ಪಾಗಿ ಹೇಳಿದ್ದಾರೆ (ಪು. 18)

ಶಿಲ್ಪದಲ್ಲಿ ಒಟ್ಟು ೨೨ ವಿಧಗಳನ್ನು ಹೇಳಿದ್ದು, ಪಾದಬಂಧ, ಅಂಬೋಜ ಕೇಸರ, ಶ್ರೇಣೀಬಂಧ, ವಪ್ರಬಂಧ, ಸುಂದರ, ಅಂಬುಜಕಾಂತ ಅಧಿಷ್ಠಾನಗಳನ್ನು ಪಾದ ಬಂಧ ಪ್ರಭೇದವೆಂದೂ, ಪ್ರತಿಬಂಧ, ಪ್ರತಿವಕ್ತ್ರ, ಪ್ರತಿಸುಂದರ, ಪ್ರತಿಕ್ರಮ, ಶ್ರೀಬಂಧ, ಮಂಚಬಂಧ, ಅಬ್ಜಬಂಧ, ಶ್ರೀಕಂಠ, ಕರೀರ, ಕಲಶ, ಶ್ರೀಕಾರ, ನಳಿನಕಾಂತ, ಶ್ರೀಸೌಂದರ್ಯ, ಸ್ಕಂದಸ್ಕಂದ—ಈ ಬಂಧಗಳನ್ನು ಪ್ರತಿಬಂಧ ಪ್ರಭೇದ ವೆಂದೂ ಗುರುತಿಸಲಾಗಿದೆ. ಆದರೆ, ಆ ಗ್ರಂಥದಲ್ಲೇ ಹೇಳಿರುವ ಅಂಗಗಳನ್ನು ಗಮನಿಸಿದರೆ, ಶ್ರೀಕಾಂತ, ಶ್ರೇಣೀಬಂಧ, ವಪ್ರಬಂಧ, ಅಂಬುಜಕಾಂತ ಬಂಧಗಳು ಪ್ರತಿಬಂಧಕ್ಕೆ ಸೇರುತ್ತವೆ.[50] ಈಶಾನಶಿವ ಗುರುದೇವ ಪದ್ಧತಿಯಲ್ಲಿ ಪಾದಬಂಧ, ವಪ್ರಬಂಧ, ಚಾರುಬಂಧ ಮತ್ತು ಪುಷ್ಕಲಬಂಧಗಳನ್ನು ಪಾದಬಂಧವೆಂದೂ, ಪ್ರತಿಬಂಧ, ಪ್ರತಿಕ್ರಮ, ಶ್ರೀಬಂಧ ಮತ್ತು ಕಪೋತಬಂಧಗಳನ್ನು ಪ್ರತಿಬಂಧ, ಪ್ರಭೇದವೆಂದೂ ಪರಿಗಣಿಸಲಾಗಿದೆ. ಕಾರಣಾಗಮದಲ್ಲಿ ೮ ರೀತಿಯ ಅಧಿಷ್ಠಾನ ಗಳನ್ನು ಹೇಳಲಾಗಿದ್ದು, ಇದರ ಪ್ರಕಾರ, ಪಾದ, ಪದ್ಮ, ಪದ್ಮಪುಷ್ಕಲ, ಪದ್ಮಾಸನ ಬಂಧಗಳು ಪಾದಬಂಧಕ್ಕೂ, ಪ್ರತಿಬಂಧ, ಪ್ರತಿಕ್ರಮ, ಪ್ರಕೀರ್ಣಕ, ಪ್ರತಿಸುಂದರ ಬಂಧುಗಳು ಪ್ರತಿಬಂಧ ಪ್ರಭೇದಕ್ಕೂ ಸೇರುತ್ತವೆ, ಉಳಿದ ಗ್ರಂಥಗಳಲ್ಲಿ ಈ ವಿಂಗಡಣೆ ಕಂಡುಬರುವುದಿಲ್ಲ ; ಅಧಿಷ್ಠಾನದ ಬೇರೆ ಬೇರೆ ವಿಧಗಳ ಬಗ್ಗೆ ಮಾತ್ರ ಹೇಳಲಾಗಿದೆ.

ಮಾನಸಾರದಲ್ಲಿ ಪಾದಬಂಧ, ಉರಗಬಂಧ, ಪ್ರತಿಕ್ರಮ, ಕುಮುದ, ಪುಷ್ಪ ಪುಷ್ಕಲ, ಶ್ರೀಬಂಧ, ಮಂಚಬಂಧ, ಶ್ರೇಣೀಬಂಧ, ಪದ್ಮ, ಕುಂಭ, ಕಲಶ, ವಪ್ರ, ವಜ್ರ, ಶ್ರೀಭೋಗ, ರತ್ನ, ಪಟ್ಟ, ಕುಕ್ಷಿ, ಕಂಪ, ಶ್ರೀಕಾಂತ—ಈ ೧೯ ಬಂಧಗಳ ಬಗ್ಗೆ ಹೇಳಲಾಗಿದೆ.[51] ಮಯಮತದಲ್ಲಿ, ಪಾದ, ಉರಗ, ಪ್ರತಿಕ್ರಮ, ಪದ್ಮ ಕೇಸರ, ಪುಷ್ಪಪುಷ್ಕಲ, ಶ್ರೀಬಂಧ, ಮಂಚಬಂಧ, ಶ್ರೀಕಾಂತ, ಶ್ರೇಣೀಬಂಧ, ಪದ್ಮಬಂಧ, ವಪ್ರಬಂಧ, ಕಪೋತಬಂಧ, ಪ್ರತಿಬಂಧ ಮತ್ತು ಕುಶಲಬಂಧವೆಂದು ಒಟ್ಟು ೧೪ ವಿಧಗಳನ್ನೂ, ದೀಪ್ತಾಗಮದಲ್ಲಿ ಪಾದಬಂಧ, ಪ್ರತಿಬಂಧ, ಪ್ರತಿಕ್ರಮ, ಪದ್ಮ, ಕಲಾಬಂಧ (=ಕಲಶಬಂಧ ?), ವಪ್ರಬಂಧ, ಪದ್ಮಕೇಸರ, ಶ್ರೇಣೀಬಂಧ,

---

50.(ಎ) ಈ ಸಂಬಂಧದ ಶ್ಲೋಕ/ಪಾಠವನ್ನು ಈ ಗ್ರಂಥದಲ್ಲಿ ಉದ್ಧರಿಸಲಾಗಿದ್ದು (ಪು. 48), ಈ ವಿಷಯವನ್ನು ಟಿ.ವಿ. ಮಹಾಲಿಂಗಂ ಅವರು ತಮ್ಮ South Indian Temple Complex ಎಂಬ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ(ಪು.18)

50.(ಬಿ) ಶಿಲ್ಪರತ್ನ—ಉದ್ಧೃತ ; ಭಾರತೀಯ ಶಿಲ್ಪಸಾರ, ಪು. 140—41

51. 'ಶ್ರೀಕಾಂತ'ದಲ್ಲಿ' ಮಂಚಬಂಧದಂತೇ' ಎಂದೂ, ಅಂಬುಜಕಾಂತದಲ್ಲಿ ಮತ್ತು ಶ್ರೇಣೀಬಂಧದಲ್ಲಿ ಘಟ (=ವೃತ್ತ ಕುಮುದ) ಎಂದೂ, ವಪ್ರಬಂಧದಲ್ಲಿ ದಳ ದೊಂದಿಗೆ ಕುಮುದ (=ವೃತ್ತ ಕುಮುದ) ಎಂದೂ ಹೇಳಿರುವುದರಿಂದ ಇವು ಪ್ರತಿಬಂಧ ಪ್ರಭೇದಕ್ಕೇ ಸೇರಬೇಕಾಗುತ್ತದೆ.

ಕಪೋತಬಂಧ (<ಪಂಚಬಂಧ=ಮಂಚಬಂಧ ?),[52] ಶ್ರೀಕಾಂತ, ಶ್ರೀಬಂಧ—ಎಂದು ಒಟ್ಟು ೧೨ ವಿಧಗಳನ್ನು ಹೇಳಲಾಗಿದೆ. ವಿಮಾನಾರ್ಚನಕಲ್ಪದಲ್ಲಿ ಪಾದ, ಪದ್ಮ, ಪುಷ್ಪ, ಶ್ರೀಪ್ರಿಯಾಂಬುಜ, ಪ್ರತಿಕ್ರಮ, ಕಪೋತ ಮತ್ತು ಶ್ರೀಬಂಧ ಎಂದು ಒಟ್ಟು ೮ ವಿಧಗಳಿದ್ದರೆ, ಪಾದ್ಮಸಂಹಿತೆಯಲ್ಲಿ, ಪಾದ, ಪದ್ಮ, ಪ್ರತಿ ಮತ್ತು ಕಪೋತಬಂಧ—ಎಂದು ೪ ವಿಧಗಳೂ, ಸುಪ್ರಭೇದಾಗಮದಲ್ಲಿ ಪಾದ, ಪದ್ಮ, ಚಾರು ಮತ್ತು ಪ್ರತಿಕ್ರಮ ಎಂದು ೪ ವಿಧಗಳೂ ಇವೆ. ಅಜಿತಾಗಮದಲ್ಲಿ ಎರಡು ರೀತಿಯ ಪಾದಬಂಧವನ್ನೂ, ಮೂರು ರೀತಿಯ ಪ್ರತಿಬಂಧವನ್ನೂ ಹೇಳಿರುವುದಲ್ಲದೆ, ಸುರಪಥ, ಕಪೋತಬಂಧ ಮತ್ತು ಪದ್ಮಬಂಧಗಳ ಬಗ್ಗೆಯೂ ಹೇಳಲಾಗಿದೆ. ವಿಶ್ವಕರ್ಮ ವಾಸ್ತುಶಾಸ್ತ್ರದಲ್ಲಿ, ಮಂಚಭದ್ರ, ಬೋಧಿಭದ್ರ (=ವೇದಿಭದ್ರ ?), ವಾಜೀಭದ್ರ, ಕುಮುದಭದ್ರ, ಮಂಚಬಂಧ, ವಾಜೀಬಂಧ, ಕುಮುದಬಂಧ, ಬೋಧಿಬಂಧ (=ವೇದಿಬಂಧ ?) ಇವುಗಳನ್ನು ಹೇಳಲಾಗಿದೆ.[53] ಸಾಮಾನ್ಯವಾಗಿ 'ಭದ್ರ' ಎಂಬ ಪದವನ್ನು ಉಪಪೀಠದ ಸಂಬಂಧದಲ್ಲೂ, 'ಬಂಧ' ಎಂಬುದನ್ನು ಅಧಿಷ್ಠಾನದ ಸಂದರ್ಭದಲ್ಲೂ ಗ್ರಂಥಗಳಲ್ಲಿ ಬಳಸಿರುವುದರಿಂದಲೂ, ಮೊದಲ ನಾಲ್ಕು ಹೆಸರುಗಳು ಇಲ್ಲಿ ಪುನರಾವರ್ತನೆಯಾಗಿರುವುದರಿಂದಲೂ, ಇಲ್ಲಿನ ಮೊದಲ ನಾಲ್ಕು ಹೆಸರುಗಳು ಉಪಪೀಠಕ್ಕೂ, ಕೊನೆಯ ನಾಲ್ಕು ಹೆಸರುಗಳು ಅಧಿಷ್ಠಾನಕ್ಕೂ ಅನ್ವಯಿಸುತ್ತದೆಂದು ಊಹಿಸಬಹುದಾಗಿದೆ. ಕಾಮಿಕಾಗಮದಲ್ಲಿ ಅಧಿಷ್ಠಾನದ ವಿಧಗಳನ್ನು ಹೆಸರಿಸಿಲ್ಲ ; ಪಾದಬಂಧ ಮತ್ತು ಪ್ರತಿಬಂಧ ಪ್ರಭೇದಗಳ ಬಗ್ಗೆ ಹೇಳಿ, ಅನಂತರ ಅದರದರ ಕೆಳಗೆ ಬೇರೆ ಬೇರೆ ರೀತಿಯ ಅಧಿಷ್ಠಾನಗಳ ಅಂಗಗಳು ಮತ್ತು ಅಳತೆಯ ಬಗ್ಗೆ ಮಾತ್ರ ಹೇಳಿದೆ. ಆದ್ದರಿಂದ, ಇತರ ಗ್ರಂಥಗಳ ಸಹಾಯದಿಂದ ಇದನ್ನು ವಿಂಗಡಿಸಿಕೊಂಡು, ಅದರಂತೆ ಅದರಲ್ಲಿ ಹೇಳಿರುವ ಅಧಿಷ್ಠಾನದ ವಿಧಗಳನ್ನು ಗುರುತಿಸಿಕೊಳ್ಳಬೇಕಾಗಿದೆ. ರೌರವಾಗಮದಲ್ಲಿ, ಪ್ರತಿಬಂಧ, ಅಂಘ್ರಿಬಂಧ—ಎಂಬ ಉಲ್ಲೇಖ ಮಾತ್ರವೇ ಇದ್ದು, ಅಧಿಷ್ಠಾನದ ಬಗ್ಗೆ ಹೆಚ್ಚಿನ ವಿವರವಿಲ್ಲ.[54]

---

52. ಈ ಗ್ರಂಥದಲ್ಲಿ ಅಧಿಷ್ಠಾನ ವಿಧಗಳು ಮತ್ತು ಅವುಗಳ ಅಂಗಾಂಗಗಳನ್ನು ಗುರುತಿಸುವಾಗ, ನನಗೆ ತಿಳಿದ ಮಟ್ಟಿಗೆ ಪಿ. ಕೆ. ಆಚಾರ್ಯರವರು ತಪ್ಪು ಮಾಡಿರುವಂತೆ ತೋರುತ್ತದೆ. ಕೆಲವೆಡೆ ಅವರು ಅಧಿಷ್ಠಾನ ವಿಧದ ಶೀರ್ಷಿಕೆಯ ಕೆಳಗೆ ಕೊಟ್ಟಿರುವ ಅಂಗಗಳು ಅದರ ಮುಂದಿನ ಶೀರ್ಷಿಕೆಗೆ ಅನ್ವಯವಾಗುತ್ತದೆ. ಇದನ್ನು 'ಭಾರತೀಯ ಶಿಲ್ಪಸಾರ' ಗ್ರಂಥದ ಉಲ್ಲೇಖಗಳೂ ಸಮರ್ಥಿಸುತ್ತವೆ.
53. ಅಜಿತಾಗಮ—ಪು. ೮೮ರಲ್ಲಿರುವ ಉಲ್ಲೇಖ
54. ದೀಪ್ತಾಗಮ, ಈಶಾನಶಿವಗುರುದೇವ ಪದ್ಧತಿ, ಸುಪ್ರಭೇದಾಗಮ, ವಿಶ್ವಕರ್ಮ ವಾಸ್ತುಶಾಸ್ತ್ರ—ಇವುಗಳ ಬಗ್ಗೆ ಅಜಿತಾಗಮದಲ್ಲಿ ಉದ್ಧರಿಸಲಾಗಿದೆ (ಪು. 91-9೭) ಸುಪ್ರಭೇದಾಗಮದ ಬಗ್ಗೆ ಪಿ.ಕೆ. ಆಚಾರ್ಯರವರು ತಮ್ಮ ಮಾನಸಾರ ಸೀರೀಸ್—ಸಂ. VII—ರಲ್ಲೂ 'ಅಧಿಷ್ಠಾನ'ದ ಬಗ್ಗೆ ಹೇಳುವಾಗೆಲ್ಲಾ ಉಲ್ಲೇಖಿಸಿದ್ದಾರೆ.

ಈ ವಿವಿಧ ರೀತಿಯ ಅಧಿಷ್ಠಾನಗಳಲ್ಲಿ ಬರುವ ಅಂಗೋಪಾಂಗಗಳ ಬಗ್ಗೆ ಗ್ರಂಥಗಳಲ್ಲಿ ವಿವರಗಳನ್ನು ಕಾಣಬಹುದಾದರೂ, ಆ ಎಲ್ಲ ರೀತಿಯ ಅಧಿಷ್ಠಾನಗಳನ್ನು ದೇವಾಲಯ ರಚನೆಯಲ್ಲಿ ಬಳಸಿಲ್ಲ. ದೇವಾಲಯದಲ್ಲಿ ಬಳಸಿಕೊಂಡಿರುವ ಕೆಲವು ಅಧಿಷ್ಠಾನ ವಿಧಗಳೆಂದರೆ, ಪಾದಬಂಧ, ಪ್ರತಿಬಂಧ, ಪದ್ಮಬಂಧ, ಕಪೋತಬಂಧ, ಮಂಚಬಂಧ, ಶ್ರೀಬಂಧ—ಮುಂತಾದವುಗಳು.

**ಪಾದಬಂಧ** :—ಪಾದಬಂಧ ಅಧಿಷ್ಠಾನದ ಮುಖ್ಯ ಅಂಗಗಳೆಂದರೆ, ಉಪಾನ, ಜಗತೀ, ಕುಮುದ, ಕಂಪ, ಗಲ, ಕಂಪ ಪಟ್ಟಿಕಾ, ಮತ್ತು ಕಂಪ. ಈ ಬಗ್ಗೆ ಎಲ್ಲ ಗ್ರಂಥಗಳಲ್ಲೂ ಬಹುಪಾಲು ಒಂದೇ ರೀತಿಯ ಉಲ್ಲೇಖಗಳಿವೆ.[55] (ಸುಪ್ರ




55. ಸಂ.2-39, 25.

ಭೇದಾಗಮದ ವಿವರ ಮಾತ್ರ ಅಷ್ಟು ಸರಿಯಾಗಿಲ್ಲ. 'ಊರ್ಧ್ವಪಟ್ಟಿಕಾ'ವನ್ನು ಇದರಲ್ಲಿ ಮೊದಲೇ ಹೇಳಿದೆಯಲ್ಲದೆ, ಕೊನೆಯಲ್ಲಿ, ಮಹಾಪಟ್ಟಿಯ ನಂತರ 'ಕಂಪ'ದ ಬದಲು 'ವಾಜನ'ವನ್ನು ಹೇಳಿದೆ.) ವಿಮಾನಾರ್ಚನಕಲ್ಪದಲ್ಲಿ ಕೊನೆಯ ಅಂಗವನ್ನು 'ಊರ್ಧ್ವಪಟ್ಟಿಕಾ' ಎಂದೂ, ಕಾಮಿಕಾಗಮದಲ್ಲಿ ಇದನ್ನು 'ವಾಜನ' ವೆಂದೂ, ದೀಪ್ತಾಗಮದಲ್ಲಿ 'ಮಹಾಪಟ್ಟೀ' ಎಂದೂ ಹೇಳಲಾಗಿದೆ. ದೀಪ್ತ ಮತ್ತು ಕಾಮಿಕಾಗಮಗಳಲ್ಲಿ ಪಟ್ಟಿಕಾದ ಮೇಲೆ ಬರುವ 'ಕಂಪ'ವನ್ನು ಉಲ್ಲೇಖಿಸಿಲ್ಲ.

ಈ ಪಾದಬಂಧ ಅಧಿಷ್ಠಾನವನ್ನು ಮಡಿವಾಳದ ಸ್ವಯಂಭುವೇಶ್ವರ, ಆಗರದ ನರಸಿಂಹ—ದೇವಾಲಯಗಳಲ್ಲಿ ಕಾಣಬಹುದು.

**ಪ್ರತಿಬಂಧ** :—ಈ ಅಧಿಷ್ಠಾನದಲ್ಲಿ ಮುಖ್ಯವಾಗಿ ಜಗತೀ, ವೃತ್ತಕುಮುದ,



ಆಲಿಂಗ, ಅಂತರಿತ, ಪ್ರತಿ, ವಾಜನಗಳು ಬರುತ್ತವೆ.[56] 'ಪ್ರತಿಕ್ರಮ' ರೀತಿಯು ಅಧಿಷ್ಠಾನವೂ 'ಪ್ರತಿಬಂಧ' ರೀತಿಯ ಒಂದು ಒಳಭೇದವೆಂದು ತೋರುತ್ತದೆ, ವ್ಯಾಳ ಸಿಂಹ, ಗಜ-ಇತ್ಯಾದಿ ಪ್ರತಿಮುಖಗಳನ್ನು ಬಿಡಿಸಿದ್ದು, 'ಪ್ರತಿಕ್ರಮ' ಎಂಬ ಉಲ್ಲೇಖವು ಮಯಮತದಲ್ಲಿದ್ದು ಅದರಲ್ಲಿ ಹೇಳಿರುವ ಪ್ರತಿಕ್ರಮದ ಅಂಗೋಪಾಂಗಗಳೂ ಪ್ರತಿಬಂಧದ ಅಂಗೋಪಾಂಗಗಳೂ ಒಂದೇ ಆಗಿವೆ.[57] ಬಹುಶಃ ಈ ಕಾರಣದಿಂದಲೇ ತಲಕಾಡಿನ ಪಾತಾಳೇಶ್ವರ ದೇವಾಲಯ, ಕಂಬದ ಹಳ್ಳಿಯ ಪಂಚಕೂಟ ಬಸದಿ—ಇವುಗಳ ಅಧಿಷ್ಠಾನಗಳನ್ನು 'ಪ್ರತಿಕ್ರಮ' ರೀತಿಯೆಂದು ಗುರುತಿಸಲಾಗಿದೆ.[58]

**ಪದ್ಮಬಂಧ** :—ವಿಮಾನಾರ್ಚನಕಲ್ಪದ ಪ್ರಕಾರ[59] ಪದ್ಮಬಂಧ ಅಧಿಷ್ಠಾನದ ಅಂಗಗಳೆಂದರೆ—ಉಪಾನ, ಪದ್ಮ, ಕಂಪ, ಜಗತೀ, ತ್ರಿವರ್ಗ (=ತ್ರಿಪಟ್ಟ), ಕುಮುದ, ಕಂಪ, ಕಂಠ, ಕಂಪ, ಮಹಾಪಟ್ಟಿಕಾ, ಪದ್ಮ ಮತ್ತು ಕಂಪ.[60] ಈ ಭಾಗಗಳು ಇತರ ಗ್ರಂಥಗಳಿಗಿಂತ[61] ಸ್ವಲ್ಪ ಭಿನ್ನವಾಗಿರುವುದಾದರೂ, ಇದರಲ್ಲಿ ಸುಪ್ರಭೇದಾಗಮದಂತೆ ಜಗತಿಯನ್ನೂ, ಕೊನೆಯ ಅಂಗವಾಗಿ ಆಲಿಂಗ, ಅಂತರಿತ ಪ್ರತಿವಾಜನಗಳ ಬದಲು, ಗ್ರೀವ—ಪಟ್ಟಿಕಾಗಳನ್ನೂ ಹೇಳಿದೆ. ಆದರೆ ಸುಪ್ರಭೇದಾಗಮದಲ್ಲಿ ವೃತ್ತಕುಮುದದ ಸೂಚನೆ ಇದ್ದರೆ, ಈ ಗ್ರಂಥದಲ್ಲಿ 'ತ್ರಿಪಟ್ಟ'ವೆಂದು ಸ್ಪಷ್ಟವಾಗಿ ಹೇಳಿರುವುದರಿಂದ, ಈ ಗ್ರಂಥದ ಪ್ರಕಾರ ಪದ್ಮಬಂಧ ಅಧಿಷ್ಠಾನವನ್ನು, ಈ ಕಾರಣದಿಂದ ಪಾದಬಂಧ ಪ್ರಭೇದಕ್ಕೆ ಸೇರಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ, ಸಿರಿವಾಳ್‌ನ ನಾಲ್ಕನೇ ಸಂಖ್ಯೆಯ ದೇವಾಲಯದ

---

56. ಅಜಿತಾಗಮ—13. 2-3 ಮತ್ತು 4 ; ವಿಮಾನಾರ್ಚನಕಲ್ಪ-8, ಪುಟ, 30, ಸುಪ್ರಭೇದಾಗಮ—I, 31, 23-26 ; ದೀಪ್ತಾಗಮ—2, 14ಬಿ-16 ; ಮಯಮತ—14. 19-20 ; ಕಾಶ್ಯಪಶಿಲ್ಪ-6, 33-35 ; ಮಾನಸಾರ-14, ಸಾಲು 10-22, ಇತ್ಯಾದಿ.
57. ಮಯಮತ—14, 36ಬಿ ; ಕಾಶ್ಯಪಶಿಲ್ಪ—6, 30-32 ; ಅಜಿತಾಗಮ—13 8—10 ; ದೀಪ್ತಾಗಮ—2, 16ಬಿ—19ಎ ; ಕಾರಣಾಗಮ I, 5,35-37 ; ವಿಮಾನಾರ್ಚನಕಲ್ಪ—3, ಪು, 31 ; ಶಿಲ್ಪರತ್ನ-ಅ. 19 (ಉದ್ಧೃತ-ಭಾರತೀಯ ಶಿಲ್ಪಸಾರ-ಪು. 129-130)
58. 14. 23-24 (ಇತರ ಗ್ರಂಥಗಳಲ್ಲೂ ಇಂತಹುದೇ ಉಲ್ಲೇಖಗಳಿವೆ..) ವಿಮಾನಾರ್ಚನಕಲ್ಪ-8, ಪು. 31 ; ಮಾನಸಾರ—14 ಸಾಲು 44-64 ಇತ್ಯಾದಿ
59. ಎನ್ಸೈಕ್ಲೋಪೇಡಿಯ ಆಫ್ ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್—ಸಂ. 1, ಭಾಗ—2, ಚಿತ್ರ. 66ಸಿ ಮತ್ತು ಡಿ (ಪು. 199 ಮತ್ತು 197)
60. ಅಷ್ಟಮ ಪಟಲ—ಪು. 30

ಪದ್ಮಬಂಧ ಅಧಿಷ್ಠಾನವು ಸುಪ್ರಭೇದಾಗಮಕ್ಕಿಂತಲೂ[61] ವಿಮಾನಾರ್ಚನಕಲ್ಪದ ವಿವರಗಳನ್ನೇ ಹೋಲುವಂತಿದೆ. ಒಂದು ವ್ಯತ್ಯಾಸವೆಂದರೆ, ಈ ಗ್ರಂಥದಲ್ಲಿ ಹೇಳಿರುವಂತೆ ಗ್ರೀವ, ಪಟ್ಟಿಕಾದ ಬದಲಿಗೆ, ಇಲ್ಲಿ ಆಲಿಂಗ, ಅಂತರಿತ, ಪ್ರತಿ, ವಾಜನಗಳನ್ನು ರಚಿಸಲಾಗಿದೆ. ಶ್ರವಣ ಬೆಳಗೊಳದ ಚನ್ನಣ್ಣ ಬಸದಿಯ ಅಧಿಷ್ಠಾನದಲ್ಲಿ ಪದ್ಮೋಪಾನ (ಮಹಾಪದ್ಮ), ಕಂಪ, ಗಳ, ಕಂಪ, ವೃತ್ತಕುಮುದ, ಗಳ, ಕಂಪ, ಪದ್ಮ, ವಾಜನಗಳಿದ್ದು, ಇದು ಸಾಮಾನ್ಯವಾಗಿ ಎಲ್ಲ ಗ್ರಂಥಗಳೂ ಹೇಳುವ ಪದ್ಮಬಂಧ ಅಧಿಷ್ಠಾನದ ರೀತಿಯಲ್ಲಿದೆ.[62]

**ಕಪೋತಬಂಧ :** ಜಗತೀ, ವೃತ್ತಕುಮುದ ಮತ್ತು ಕಪೋತಗಳು ಕಪೋತ ಬಂಧ ಅಧಿಷ್ಠಾನದ ಮುಖ್ಯ ಅಂಗಗಳು.[63] ಪಾದ್ಮಸಂಹಿತೆಯಲ್ಲಿ, 'ಗ್ರೀವ' ಆದ ನಂತರ ಬರಬೇಕಾದ ಕಂಪಕ್ಕೆ ಬದಲಾಗಿ, 'ಕಂಠ' ಎಂದು ತಪ್ಪಾಗಿದೆ. ಇದೇ ಪಾದ್ಮಸಂಹಿತೆ ಮತ್ತು ಕಾಮಿಕಾಗಮಗಳಲ್ಲಿ[64] ಕಪೋತದ ಕೆಳಗೆ ಗಲ, ಕಂಪವನ್ನು ಹೇಳಲಾಗಿಪ್ಪು, ಐಹೊಳೆಯ ಮೇಗುತಿ ಮುಂತಾದ ದೇವಾಲಯಗಳಲ್ಲಿ ಅಧಿಷ್ಠಾನವು ಇದೇ ರೀತಿಯಾಗಿದೆ. ಶಿಲ್ಪರತ್ನದ 'ಕಲಶಬಂಧ' ವಿಧವು ಕಪೋತಬಂಧವನ್ನೇ ಹೋಲುತ್ತದೆ.[65] ಅಜಿತಾಗಮ,[66] ಈಶಾನಶಿವ ಗುರುದೇವಪದ್ಧತಿಗಳಲ್ಲಿ

---

61 ಕಾಮಿಕಾಗಮದಲ್ಲೂ ಇದೇ ರೀತಿ ಇದ್ದು ಆದರಲ್ಲೂ ಜಗತೀ, ತ್ರಿಪಟ್ಟವನ್ನು ಹೇಳಿ, ಪಾದಬಂಧದಲ್ಲಿ ಸೇರಿಸಿದೆ.

62 ಅಜಿತಾಗಮ-13, 11-13 ; ಸುಪ್ರಭೇದಾಗಮ-I, 31, 18-22 ; ವಿಮಾನಾರ್ಚನಕಲ್ಪ-8, ಪುಟ. 30 ; ಮಯಮತ-14, 34 ; ಶಿಲ್ಪರತ್ನ-ಅ. 19 (ಉದ್ಧೃತ : ಭಾರತೀಯ ಶಿಲ್ಪಸಾರ-ಪು. 134—35) : ಕಾಶ್ಯಪಶಿಲ್ಪ—6,65—67 ; ಮಾನಸಾರ—14 ಸಾಲು 144—169 ; ಪಾದ್ಮಸಂಹಿತೆ—7, 40—45

63 ನನ್ನ ಒಂದು ಲೇಖನದಲ್ಲಿ (ಇತಿಹಾಸದರ್ಶನ—ಸಂ. 7, ಪು—59) ಈ ಅಧಿಷ್ಠಾನವನ್ನು ಸುಪ್ರಭೇದಾಗಮಕ್ಕೆ ಹತ್ತಿರವಾಗಿವೆಯೆಂದು ತಪ್ಪಾಗಿ ಹೇಳಿದ್ದೇನೆ.

64 ಅದೇ ಲೇಖನದಲ್ಲಿ ಇದನ್ನು 'ಶ್ರೀಬಂಧ'ವೆಂದು ತಪ್ಪಾಗಿ ಗುರುತಿಸಿದ್ದೇನೆ.

65 ಮಯಮತ—14. 36 ಎ ; ಶಿಲ್ಪರತ್ನ—ಅ.19 (ಉದ್ಧೃತ : ಭಾರತೀಯ ಶಿಲ್ಪಸಾರ—ಪು. 139) ; ಅಜಿತಾಗಮ—13. 6—7 ; ದೀಪ್ತಾಗಮ—2, 50—53 (ಉದ್ಧೃತ : ಅಜಿತಾಗಮ ಪು. 88) ; ಈಶಾನಶಿವಗುರುದೇವ ಪದ್ಧತಿ—IV, ಪು 309 (ಉದ್ಧೃತ—ಅದೇ) ; ವಿಮಾನಾರ್ಚನ ಕಲ್ಪ—8, ಪು. 32 ; ಪಾದ್ಮಸಂಹಿತೆ—7. 48—54.

66 ಪಾದ್ಮಸಂಹಿತೆ—ಕ್ರಿಯಾ. 7. 50 ; ಕಾಮಿಕಾಗಮ—52.67ಎ—70 ಎ.

ಕಪೋತಬಂಧದ[67] ಬಗ್ಗೆ ಹೇಳಿದ್ದರೂ, ಇದರಲ್ಲಿ ಜಗತಿಯನ್ನು ಹೇಳಿಲ್ಲ ; ಆದರೆ, ಕಪೋತದ ಮೇಲೆ ಆಲಿಂಗ, ಅಂತರಿತ, ಪ್ರತಿ, ವಾಜನಗಳನ್ನು ಹೇಳಿದೆ. ಆದ್ದರಿಂದ, ಇದು ಕಪೋತಬಂಧಕ್ಕೆ ಹೊಂದುವಂತೆ ತೋರುವುದಿಲ್ಲ. ವಿಮಾನಾರ್ಚನ ಕಲ್ಪದಲ್ಲಿ 'ಕಪೋತಬಂಧ'ವನ್ನು ಹೇಳಿದ್ದರೂ, ಇದಕ್ಕೂ ಶ್ರೀಬಂಧಕ್ಕೂ ಹೆಚ್ಚಿನ ವ್ಯತ್ಯಾಸವನ್ನು ಹೇಳಿಲ್ಲವಾದ್ದರಿಂದ ಇದರ ವಿವರವನ್ನು ಅಸ್ಪಷ್ಟವೆಂದೇ ತಿಳಿಯಬೇಕಾಗಿದೆ.[68]

ಕಪೋತಬಂಧ ಅಧಿಷ್ಠಾನವನ್ನು ಸೋಮನಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯದಲ್ಲಿ ಕಾಣಬಹುದು.

**ಮಂಚಬಂಧ :** ಈ ಅಧಿಷ್ಠಾನವು[69] ಕಪೋತಬಂಧದಂತೇ ಇದ್ದರೂ, ಇದರಲ್ಲಿ ಕಪೋತದ ಮೇಲೆ ಇನ್ನೊಂದು ಹಂತವಾಗಿ ಆಲಿಂಗ, ಅಂತರಿತ, ಪ್ರತಿ, ವಾಜನಗಳು ಬರುತ್ತವೆ.[70] ದೀಪ್ತಾಗಮದಲ್ಲಿ ಈ ಎಲ್ಲಾ ಅಂಗಗಳನ್ನೂ ಹೇಳಿದ್ದು, ಅದನ್ನು ಕಪೋತಬಂಧವೆಂದೇ ಗುರುತಿಸಿದೆ.[71] ಆದರೆ ಇದರಲ್ಲಿ ಕಪೋತವನ್ನು ಸ್ಪಷ್ಟವಾಗಿ ಹೇಳಿಲ್ಲ. ಆದರಲ್ಲಿ ಹೇಳಿರುವ 'ಪದ್ಮ-೩ ಅಂಶ' ಎನ್ನುವುದೇ ಕಪೋತದ ಸ್ಥಾನವಿರಬೇಕು (ಕೊನೆಯಲ್ಲಿ 'ನಾಸಿಯುಕ್ತ' ಎಂದೂ ಉಲ್ಲೇಖಿಸಿರುವುದರಿಂದ, ಕಪೋತ ಹೇಳಬೇಕಾಗಿತ್ತೆಂಬುದು ಸ್ಪಷ್ಟವಾಗುತ್ತದೆ). ಒಟ್ಟು ಅಂಗಗಳ ದೃಷ್ಟಿಯಿಂದ ನೋಡಿದಾಗ ಇದು ಕಪೋತಬಂಧಕ್ಕಿಂತಲೂ ಮಂಚಬಂಧ ರೀತಿಯನ್ನು ಹೋಲುತ್ತದೆಯೆಂದು ಇತರ ಗ್ರಂಥಗಳ ಸಹಾಯದಿಂದ ಹೇಳಬಹುದಾಗಿದೆ.

ಹೀಗೆ ಗ್ರಂಥಗಳಲ್ಲಿ ಕಪೋತಬಂಧ ಮತ್ತು ಮಂಚಬಂಧದ ಬಗ್ಗೆ ಉಲ್ಲೇಖಿಸುವಾಗ ಗೊಂದಲಗಳಿರುವುದು ಕಂಡು ಬರುತ್ತದೆ. 'ಮಂಚಬಂಧ'

---

67 ಉದ್ಧೃತ—ಭಾರತೀಯ ಶಿಲ್ಪಸಾರ—ಪು. 54. ಇದರಲ್ಲೇ 'ಕರೀರಬಂಧ' ಎಂಬ ಅಧಿಷ್ಠಾನವನ್ನು ಹೇಳಿದ್ದು, ಇದು ಕಪೋತ ಬಂಧವನ್ನೇ ಹೋಲುತ್ತಿರುವುದಲ್ಲದೆ, ಕೊನೆಯಲ್ಲಿ ಕಪೋತ ಬಂಧವೆಂದೇ ಹೇಳಿರುವುದರಿಂದ, ಇದೂ ಕೂಡಾ ಕಪೋತ ಬಂಧದ ಒಂದು ಒಳ ಭೇದವೆನ್ನಬಹುದೇನೋ ! (ಅದೇ. ಪು. 138)

68 13. 6—7

69. ಉದ್ಧೃತ—ಅಜಿತಾಗಮ—ಪು. 88

70. ಅಪ್ಪಮಪಟಲ—ಪು. 31

71. ಈ ಮಂಚಬಂಧ ಅಧಿಷ್ಠಾನಕ್ಕೂ, ಹಿಂದೆ ಹೇಳಿದ ಮಂಚಕ ಪ್ರಭೇದಕ್ಕೂ ಭಿನ್ನತೆ ಇದ್ದು ಮಂಚಕ ರೀತಿಯ ಅಧಿಷ್ಠಾನಗಳನ್ನು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ.

ಎಂದು ಕೆಲವು ಗ್ರಂಥಗಳು ಉಲ್ಲೇಖಿಸಿರುವುದರ ಅಂಗಗಳನ್ನು ಕಪೋತಬಂಧದಲ್ಲಿ ಕೆಲವು ಗ್ರಂಥಗಳು ಸೇರಿಸಿವೆಯಲ್ಲದೆ, ಕೆಲವು ಗ್ರಂಥಗಳ ವಿವರವೂ ಸರಿಯಾಗಿಲ್ಲ. ಶಿಲ್ಪರತ್ನ ಮತ್ತು ಮಯಮತ ಬಿಟ್ಟು, ಎಲ್ಲ ಗ್ರಂಥಗಳಲ್ಲೂ ಕಪೋತಬಂಧ ಮತ್ತು ಮಂಚಬಂಧದಲ್ಲಿ ಯಾವುದಾದರೂ ಒಂದನ್ನು ಮಾತ್ರ ಹೇಳಿರುವುದೂ ಗಮನಾರ್ಹ ವಾಗಿದೆ. ಈಹಿನ್ನೆಲೆಯೇ ಬಹುಶಃ ವಿದ್ವಾಂಸರೂ ಕೆಲವು ಮಂಚಬಂಧ ಅಧಿಷ್ಠಾನಗಳನ್ನು ಕಪೋತಬಂಧವೆಂದು ಗುರುತಿಸಲು ಕಾರಣವಾಗಿರಬಹುದು. ಹೇಗಿದ್ದರೂ, ಎರಡೂ ರೀತಿಗಳ ಬಗ್ಗೆಯೂ ಗ್ರಂಥಗಳಲ್ಲಿ ಉಲ್ಲೇಖವಿರುವಾಗ, ಎರಡೂ ವಿಧಗಳನ್ನೂ ಒಪ್ಪಿಕೊಳ್ಳುವುದು ಅನಿವಾರ್ಯವಾಗುವುದಲ್ಲದೆ, ಅವುಗಳನ್ನು ಗ್ರಂಥಗಳ ಹಿನ್ನೆಲೆಯಲ್ಲಾದರೂ ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ.

### ವಿವಿಧ ಅಧಿಷ್ಠಾನಗಳ ಪ್ರಾಚೀನತೆ

**ಶ್ರೀಬಂಧ :** ಶ್ರೀಬಂಧ ಅಧಿಷ್ಠಾನವು ಉಪಾನ, ಮಹಾ ಪದ್ಮ, ವೃತ್ತಕುಮುದ, (ಪದ್ಮದೊಂದಿಗೆ) ಕಂಪ, ಗಲ, ಕಂಪ, ಕಪೋತ, ಆಲಿಂಗ, ಅಂತರಿತ, ಪ್ರತಿ, ವಾಜನಗಳನ್ನು ಹೊಂದಿರುತ್ತದೆ.[72]

ಹೀಗೆ, ವಿವಿಧ ರೀತಿಯ ಅಧಿಷ್ಠಾನಗಳನ್ನು ಗ್ರಂಥಗಳಲ್ಲೂ ದೇವಾಲಯ ಗಳಲ್ಲೂ ಕಾಣುತ್ತೇವೆ. ಪ್ರಾಚೀನ ಕಾಲದ ದೇವಾಲಯಗಳಲ್ಲಿ ಮಂಚಕದಂತೆ ಸರಳವಾದ ಅಧಿಷ್ಠಾನಗಳಿದ್ದರೆ. ಬಾದಾಮಿ ಚಾಲುಕ್ಯರ ಮಧ್ಯಕಾಲಾನಂತರದ ದೇವಾಲಯಗಳಲ್ಲಿ ಪಾದಬಂಧ, ಪ್ರತಿಬಂಧ, ಕಪೋತಬಂಧ ಅಧಿಷ್ಠಾನಗಳನ್ನೂ, ಆದರೊಂದಿಗೇ ಮಂಚಬಂಧ ಅಧಿಷ್ಠಾನಗಳನ್ನೂ ಕಾಣುತ್ತೇವೆ. ರಾಷ್ಟ್ರಕೂಟರ ಕಾಲದಲ್ಲಿ ಕಪೋತಬಂಧ ಮತ್ತು ಅಪರೂಪವಾಗಿ ಪದ್ಮಬಂಧ ಅಧಿಷ್ಠಾನಗಳ ಬಳಕೆ ಯಾಗಿದೆ. ಗಂಗ ಮತ್ತು ನೊಳಂಬರ ಕಾಲದಲ್ಲಿ ಪಾದಬಂಧವು ಹೆಚ್ಚು ಪ್ರಸಿದ್ಧಿಗೆ ಬಂದೆ. 'ಶಾಂತರ'ರಲ್ಲಿ ಪಾದಬಂಧ ಮತ್ತು ಕಪೋತಬಂಧ—ಎರಡೂ ರೀತಿ ಗಳು ಕಾಣಬರುತ್ತಿದ್ದು, ವಿಜಯನಗರ ಕಾಲದ ದೇವಾಲಯಗಳಲ್ಲಿ 'ಶ್ರೀಬಂಧ' ಅಧಿಷ್ಠಾನವು ಹೆಚ್ಚಾಗಿ ಕಾಣಬರುತ್ತದೆ.

ದೇವಾಲಯಗಳಲ್ಲಿ ವಿವಿಧ ಅಧಿಷ್ಠಾನಗಳನ್ನು ರಚಿಸಿರುವ ರೀತಿ ಮತ್ತು ಗ್ರಂಥಗಳಲ್ಲಿನ ಸಂಬಂಧಿತ ಉಲ್ಲೇಖಗಳನ್ನು ಹೋಲಿಸಿ ನೋಡಿದರೆ, ಪಾದಬಂಧವು

---

72. ಕಾಶ್ಯಪಶಿಲ್ಪ—6. 56—59 ; ಮಯಮತ—14. 31 ; ಮಾನಸಾರ— 14 ಸಾಲು :—109—122 ; ಶಿಲ್ಪರತ್ನ—ಅ. 19 (ಉದ್ಧೃತ ಭಾರತೀಯ ಶಿಲ್ಪಸಾರ—ಪು. 112)

ಎಲ್ಲಿ ಗ್ರಂಥಗಳಿಗೂ (ಸುಪ್ರಭೇದಾಗಮದ ವಿವರ ಸರಿಯಾಗಿಲ್ಲ), ಪ್ರತಿಬಂಧವು ಶಿಲ್ಪರತ್ನಕ್ಕೂ, ಪದ್ಮಬಂಧವು ವಿಮಾನಾರ್ಚನ ಕಲ್ಪಕ್ಕೂ, ಕಪೋತಬಂಧವು ಮಯಮತ ಮತ್ತು ಕಾಮಿಕಾಗಮಗಳಿಗೂ, ಮಂಚಬಂಧವು ಎಲ್ಲ ಗ್ರಂಥಗಳಿಗೂ, ಶ್ರೀಬಂಧವು ಕಾಶ್ಯಪಶಿಲ್ಪ ಮತ್ತು ಮಾನಸಾರ ಗ್ರಂಥಗಳಿಗೂ ಬಹುಪಾಲು ತಾಳೆ ಯಾಗುತ್ತದೆಂದು ಹೇಳಬಹುದು.

○

ಡಾ|| ದೇವರಕೊಂಡಾರೆಡ್ಡಿ

# ಕೋಲಾರ ಜಿಲ್ಲೆಯ ಶಾಸನೋಕ್ತ ಶಿಲ್ಪಿಗಳು

ನಾಗರೀಕತೆಯ ಬೆಳವಣಿಗೆಯ ಹಂತಗಳಲ್ಲಿ ಶಿಲ್ಪಿಗಳ ಪಾತ್ರ ಬಹು ಪ್ರಮುಖವಾದದ್ದು. ಬೇಟೆಯಾಡುವಾಗ ಮೊದಲಿಗೆ ಬರೀ ತೋಳ್ಬಲವನ್ನು ಬಳಸಿದ ಮಾನವ ಮುಂದೆ ಕಲ್ಲನ್ನೂ, ಕಲ್ಲಿನಿಂದ ಮಾಡಿದ ಆಯುಧಗಳನ್ನು ಬಳಸಿದ. ನದೀ ಪಾತ್ರಗಳು ಮುಂತಾದೆಡೆ ದೊರಕುವ ಕಲ್ಲುಗಳನ್ನು ಉಜ್ಜಿ ಒಂದು ಆಕಾರಕ್ಕೆ ತಂದು ಆಯುಧಗಳನ್ನಾಗಿ ಪರಿವರ್ತಿಸುವ ಒಂದು ವರ್ಗವೇ ಆ ಕಾಲಕ್ಕೆ ಇದ್ದಿರಬೇಕು. ಮುಂದೆ ಕಲ್ಲಿನ ಸ್ಥಾನದಲ್ಲಿ ಲೋಹ ಬಂದ ಮೇಲೆ ಕಲ್ಲಿನ ಆಕಾರಕ್ಕೆ ಲೋಹವನ್ನು ಎರಕ ಹೊಯ್ದು ನಾಗರೀಕತೆಯ ಬೆಳವಣಿಗೆಯಲ್ಲಿ ಒಂದು ಮುಖ್ಯ ಹಂತವನ್ನು ಗುರುತಿಸಬಹುದಾಗಿದೆ. ಕ್ರಿ. ಪೂ. ೧೦೦೦೦ ದಿಂದ ೫೦೦೦ ವರ್ಷಗಳ ಈ ಹಂತದಲ್ಲಿ ಲೋಹಗಾರಿಕೆ ಬಹು ಮುಖ್ಯ ಕಸಬಾಗಿದ್ದುದು ಉತ್ಖನನಗಳಿಂದ ತಿಳಿಯುತ್ತದೆ. ತಾಮ್ರ, ಕಬ್ಬಿಣ ಮುಂತಾದ ಲೋಹಗಾರಿಕೆ ಈ ಕಾಲದಲ್ಲಿ ಬಹು ಪ್ರಮುಖವಾಗಿತ್ತು.

ನಾಗರೀಕತೆ ಬೆಳೆದಂತೆ ಮನುಷ್ಯ ತನ್ನ ಸಾಹಸಗಳನ್ನು ಹಾಗೂ ಘಟನೆಗಳನ್ನು ಸರಿಯಾದ ನೆಲೆ ದೊರಕಿದಾಗ ದಾಖಲಿಸುತ್ತಾ ಬಂದ. ಅವೇ ಆದಿಮಾನವನ ಚಿತ್ರಗಳು. ಎಲ್ಲಾ ಮಾನವರೂ ಈ ಕಾರ್ಯವನ್ನು ಮಾಡಿರಲಾರರು. ಕಲಾವಿದನಾದ ಮನುಷ್ಯ ಇದನ್ನು ದಾಖಲಿಸಿರಬೇಕು. ಮುಂದೆ ಬರವಣಿಗೆ ಬಳಕೆಗೆ ಬಂದಾಗ ಮತ್ತೆ ಅದೇ ದಾಖಲೆ ಬೇರೆ ರೀತಿಯಲ್ಲಿ ಆಗಿದೆ.

ಈ ದಾಖಲಿಕೆಯನ್ನು ಆದಿಕಾಲದಿಂದ ಶಿಲಾಯುಧಗಳನ್ನು ಮಾಡುತ್ತಿದ್ದ, ಅಲ್ಲಿಂದ ಮುಂದೆ ಲೋಹದ

ಆಯುಧಗಳನ್ನು ಮಾಡುತ್ತಿದ್ದ ಕಸುಬಿನ ವ್ಯಕ್ತಿಗಳೇ ಮಾಡಿರಬೇಕು. ಕಾಲಕಳೆದಂತೆ ಅಥವಾ ಅವರವರಿಗೆ ದೊರೆತ ಆಶ್ರಯ, ಹಣ ಮುಂತಾದವುಗಳಿಂದ ಈ ಕಸಬಿವರಲ್ಲಿ ಐದು ವಿಭಾಗಗಳಾಗಿರಬೇಕು. ಇಂತಹ ಗುಂಪನ್ನು ಮುಂದೆ ಮಾನವ ಶಾಸ್ತ್ರದಲ್ಲಿ ಪಂಚಾಲರೆಂದು ಗುರುತಿಸುತ್ತೇವೆ.

ಪಂಚಾಲರೆಂದು ಗುರುತಿಸುವ ಈ ಗುಂಪಿನಲ್ಲಿ ಲೋಹ, ಶಿಲೆ, ಕಾಷ್ಟಗಳ ಕಸಬನ್ನು ಒಂದೊಂದು ಗುಂಪು ತಮ್ಮದಾಗಿಸಿಕೊಂಡಿತು. ಶಾಸನಗಳ ರಚನೆ ಆರಂಭವಾದ ಮೇಲೆ ಇದರ ರಚನೆಯಲ್ಲಿ ಅನೇಕರ ಕೈವಾಡವಿದ್ದರೂ ಮುಖ್ಯ ಪಾತ್ರ ಶಿಲ್ಪಿಯದೇ; ಕಲ್ಲನ್ನು ಸಿದ್ಧಪಡಿಸಿ ಕಲ್ಲಿನ ಮೇಲೆ ಬರೆದಿರುವುದನ್ನು ಕೆತ್ತುವ ಕೆಲಸ ಈತನದೇ. ಕವಿಗಳು ಸಿದ್ಧಪಡಿಸಿದ ಶಾಸನವನ್ನು ಲಿಪಿಗಾರರು ಕಲ್ಲಿನ ಮೇಲೆ ಬರೆಯುತ್ತಿದ್ದರು. ಅದನ್ನು ಶಿಲ್ಪಿಗಳು ಕೆತ್ತುತ್ತಿದ್ದರು. ಶಾಸನ ಪಾಠ ಬರೆದವನ ಹೆಸರು ಸಹಜವಾಗಿ ಇದರಲ್ಲಿ ಸೇರಿರುತ್ತಿತ್ತು. ಆದರೆ ಕೆತ್ತಿದವನ ಹೆಸರು ಸೇರಿರುತ್ತಿರಲಿಲ್ಲ. ಶಾಸನರಚಕ ವಿದ್ಯಾವಂತನಾಗಿರುತ್ತಿದ್ದ. ಶಿಲ್ಪಿ ಅನಕ್ಷರಸ್ಥನಾಗಿರುತ್ತಿದ್ದ, ಹೀಗಾಗಿ ಬಹಳಷ್ಟು ಅಂದರೆ ಶೇ ೯೦ ರಷ್ಟು ಶಾಸನಗಳಲ್ಲಿ ಶಿಲ್ಪಿಯ ಹೆಸರು ಕಾಣಬರುವುದಿಲ್ಲ. ಶಿಲ್ಪಿ ವಿದ್ಯಾವಂತನೂ ಪ್ರಭಾವಿಯೂ ಆಗಿದ್ದಲ್ಲಿ ಶಾಸನದ ಅಂತ್ಯದಲ್ಲಿ ತನ್ನ ಹೆಸರನ್ನು ಸೇರಿಸುತ್ತಿದ್ದ. ಅಂದು ಪ್ರಾರಂಭವಾದ ಈ ಹೆಸರು ಉಲ್ಲೇಖಿಸದ ಪರಂಪರೆ ಇಂದಿನ ಕಾಲದವರೆಗೂ ಮುಂದುವರಿದೇ ಇದೆ. ಇದಕ್ಕೆ ಶಿಲ್ಪಿಯು ತನ್ನ ಹೆಸರು ತಿಳಿಸಬಾರದೆಂಬ ನಿಯಮ ಬೇರೆ. ಜಗದ್ವಿಖ್ಯಾತ ಕಲಾಕೃತಿಗಳನ್ನು ರಚಿಸಿದವರು ವಿದ್ಯಾವಂತರಾಗಿದ್ದರೂ ತಮಗೆ ತಾವೇ ಹೆಸರು ಹೇಳಬಾರದೆಂಬ ನಿಯಮವನ್ನು ಹಾಕಿಕೊಂಡಿದ್ದು ದುರ್ದೈವ. ಗೊಮ್ಮಟ, ಕೊಂಡಜ್ಜಿಯ ಅಲ್ಲಾಳನಾಥ ಮುಂತಾದವುಗಳ ಮುಖ್ಯ ಸೂತ್ರಧಾರಿ ಯಾರೆಂಬುದು ಇಂದಿಗೂ ತಿಳಿದಿಲ್ಲ. ಧರ್ಮಗಳು ಬದಲಾದರೂ ನಿಯಮಗಳನ್ನು ಬದಲಿಸಿಕೊಂಡಿಲ್ಲ. ಹೀಗಾಗಿ ಶಿಲ್ಪಿಗಳು ತಮ್ಮ ಹೆಸರನ್ನು ಹೇಳದೆ ತಮ್ಮ ಅಸ್ತಿತ್ವವನ್ನೇ ಮರೆತರು. ಪ್ರಾಚೀನ ಕಾಲದಲ್ಲಿ ದೊರೆಯುವ ತಾಮ್ರ ಶಾಸನಗಳಲ್ಲಿ ಶಿಲ್ಪಿಗಳು ತಮ್ಮ ಹೆಸರನ್ನು ಹೇಳಿಕೊಂಡಿರುತ್ತಾರಾದರೂ ಆಶ್ರಯದಾತನ ವಂಶದ ಹೆಸರಿನಲ್ಲಿ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ. ವಿಜಯನಗರ ಕಾಲದ ತಾಮ್ರ ಶಾಸನಗಳಲ್ಲಿ ಒಂದಿಬ್ಬರು ಶಾಸನ ರಚಕರ ಉಲ್ಲೇಖ ಮಾತ್ರ ಬಂದಿದ್ದು ಬೇರೆಡೆಯಲ್ಲಿ ದೊರಕುವ ವಿಜಯನಗರದ ಶಾಸನಗಳಲ್ಲೂ ಅದೇ ಹೆಸರುಗಳು ಕಾಣಬರುತ್ತವೆ. ಹೀಗಾಗಿ ಶಾಸನಗಳು ವಂಶಪಾರಂಪರ್ಯವಾಗಿ ಈ ಕೆತ್ತನೆಯ ಮನೆತನವನ್ನು ಉಲ್ಲೇಖಿಸುತ್ತವೆ. ಶಿಲ್ಪಿಗಳನ್ನು ಶಾಸನಗಳಲ್ಲಿ ತ್ವಷ್ಟಕಾರ, ಶಟ್ಟಿಕಾರ, ಶಿಲ್ಪಿ, ಕಮ್ಮಟಿಕರ್ಮರ, ಪಂಚಲ, ವಿಶ್ವಕರ್ಮಣ, ತಚ್ಚಕ ಕಲುಕುಟಿಗ ಮುಂತಾದ ಹೆಸರು

ಗಳಿಂದ ಉಲ್ಲೇಖಿಸಲಾಗಿದೆ. ಇವರ ಹೆಸರುಗಳು ಅಂತ್ಯದಲ್ಲಿ ಆಚಾರ್ಯ, ಆಚಾರಿ, ಓಜದಿಂದ ಕೊನೆಯಾಗುತ್ತವೆ. ಹೀಗಾಗಿ ಇವರನ್ನು ಹೊಯ್ಸಳರ ಕಾಲದ ಶಿಲ್ಪಿಗಳು, ಹಾಗೆಯೇ ಇಂದಿನ ವಿಶ್ವಕರ್ಮ ಜನಾಂಗದೊಡನೆ ಗುರುತಿಸಬಹುದಾಗಿದೆ. ಹೀಗಾಗಿ ಊರು ಊರುಗಳಲ್ಲಿರುವ ದೇವಾಲಯ, ಬಸದಿ, ಕೋಟೆ–ಕೊತ್ತಳಗಳು, ಶಾಸನಗಳು ಕೆರೆಗಳು ಮುಂತಾದವೆಲ್ಲಾ ಇವರ ಕೊಡುಗೆ. ನಾಗರೀಕತೆಗೆ ಇದಕ್ಕಿಂತ ಬೇರೆ ಕೊಡುಗೆ ಏನಿದೆ ? ಇಂದಿನ ಇಂಜಿನಿಯರುಗಳಂತೆ, ಹಿಂದೆ ಇವರು ಕಾರ್ಯ ನಿರ್ವಹಿಸಿರುತ್ತಾರೆ.

ಈ ಜಿಲ್ಲೆಯಲ್ಲಿ ಶಾಸನಗಳೇ ಅಲ್ಲದೆ ತೂಬುಗಳನ್ನು, ಕೆರೆಗಳನ್ನು, ದೇವಾಲಯುಗಳನ್ನು ಮನೆ ಬಾಗಿಲುಗಳನ್ನು ಮಾಡಿದ ವಿಶ್ವಕರ್ಮರ ಉಲ್ಲೇಖ ಬರುತ್ತದೆ. ಮೊದಲೇ ಹೇಳಿದಂತೆ ತಾಮ್ರ ಶಾಸನಗಳ ಲಿಪಿಕಾರರು ತಮ್ಮ ಹೆಸರನ್ನು ಹೇಳಿರುವುದು ಕಡಿಮೆ. ಆದರೆ ಆ ಕಾಲದ ಅರಸರ ಹೆಸರಿನಲ್ಲಿ ಅಥವಾ ಅವರ ವಂಶದ ಹೆಸರಿನಲ್ಲಿ ತಮ್ಮನ್ನು ಗುರುತಿಸಿಕೊಂಡಿರುತ್ತಾರೆ. ನೊಣಮಂಗಲದ ಗಂಗ ಅರಸ ಅವಿನೀತನ ಕಾಲದ ಶಾಸನವನ್ನು ಬರೆದವನು ಮಾರಿಷೇಣತ್ವಟ್ಟಕಾರ. ಅವಿನೀತನ ಮಗ ದುರ್ವಿನೀತನ ಅನೇಕ ಶಾಸನಗಳನ್ನು ಬರೆದವನು ಕೂನಾಚಾರ್ಯ ಎಂಬುವವನು. ಇವನು ತನ್ನನ್ನು 'ಕೊಜ್ಜುಗಿ ಪರಿದುನ್ದಟ, ಎಂದೇ ಗುರುತಿಸಿಕೊಂಡಿದ್ದಾನೆ. ಶ್ರೀ ಪುರುಷನ ಶಾಸನವೊಂದರಲ್ಲಿ ವಿಶ್ವಕರ್ಮಣ ಲಿಖಿತಂ ಎಂದು ಹೇಳಿ ತನ್ನ ವಂಶವನ್ನು ಹೇಳಿಕೊಂಡಿರುತ್ತಾನೆ. ಗಟ್ಟುಕಾಮಧೇನುಹಳ್ಳಿಯ ಈಶ್ವರ ದೇವಾಲಯುವನ್ನು ಮಾಡಿದವನು ವಿಮ್ಮಾಚಾರಿ, ಹಾಗೆಯೇ, ಬೂದಿಕೋಟೆ ಶಾಸನದಲ್ಲಿ ಶಿಲ್ಪಿ ತನ್ನನ್ನು 'ಶ್ರೀ ಪುರುಷತಾಚ್ಚನ್' ಎಂದು ಗುರುತಿಸಿಕೊಂಡಿದ್ದಾನೆ. ಅಂದರೆ ಶ್ರೀಪುರುಷನ ಆಧೀನದಲ್ಲಿದ್ದವನೆಂದರ್ಥ. ವಿಜಯನಗರದ ತಾಮ್ರ ಶಾಸನಗಳಲ್ಲಿ ಗಣಪಯಾರ್ಯ ಮತ್ತು ಅವನ ಮಗ ವೀರಣಾಚಾರ್ಯನ ಉಲ್ಲೇಖ ಬರುತ್ತದೆ. ಆಲಂಬಗಿರಿ ಶಾಸನವನ್ನು ಈ ಗಣಪಯಾರ್ಯನ ಮಗ ವೀರಣಾಚಾರ್ಯ ಬರೆದಂತೆ ಹೇಳಿದೆ.

ಈ ಶಾಸನಗಳನ್ನು ಉಳಿದಂತೆ ಇನ್ನಿತರ ಶಿಲಾದಾನ ಶಾಸನಗಳಲ್ಲಿ ಶಿಲ್ಪಿಗಳ ಹೆಸರು ಬರುವುದೇ ಕಡಿಮೆ. ಮೊದಲೇ ಹೇಳಿದಂತೆ, ಶಾಸನ ರಚಕನೇ ಬೇರೆ, ಶಿಲ್ಪಿಯೇ ಬೇರೆಯಾಗಿರುವುದು ಇದಕ್ಕೆ ಕಾರಣವಾಗಿರಬೇಕು. ಹೀಗಾಗಿ ದಾನ ಶಾಸನಗಳಲ್ಲಿ ಶಾಸನವನ್ನು ಕೆತ್ತಿದ ಶಿಲ್ಪಿಗಳ ಹೆಸರು ಕಾಣಬರುವುದಿಲ್ಲ.

ಇದಕ್ಕೆ ವಿರುದ್ಧವಾಗಿ ರಚಿತವಾಗಿರುವ ವೀರಗಲ್ಲುಗಳಲ್ಲಿ ಮತ್ತು ತಮ್ಮ ನೇತೃತ್ವದಲ್ಲಿ ರಚಿತವಾಗಿರುವ ಕೆರೆಯ ತೂಬು, ದೇವಾಲಯುಗಳಲ್ಲಿ ಶಿಲ್ಪಿಗಳ ಹೆಸರು ಸಾಮಾನ್ಯವಾಗಿ ಕಾಣಬರುತ್ತದೆ. ವೀರಗಲ್ಲುಗಳು ಶಾಸ್ತ್ರೋಕ್ತವಾಗಿ

ರಚಿತವಾದವುಗಳಲ್ಲವೆಂಬುದನ್ನು ಈ ಸಂದರ್ಭದಲ್ಲಿ ಜ್ಞಾಪಿಸಿಕೊಳ್ಳಬಹುದು. ಯಾವುದಾದರೂ ಒಂದು ಊರಿನಲ್ಲಿ ಒಂದೇ ಕಾಲದ ಐದಾರು ವೀರಗಲ್ಲುಗಳು ಒಟ್ಟಿಗೆ ಕಂಡುಬಂದಾಗ ಅವುಗಳಲ್ಲಿ ಯಾವುದಾದರೂ ಒಂದರಲ್ಲಿ ಶಿಲ್ಪಿಯ ಹೆಸರು ಕಂಡುಬಂದಲ್ಲಿ ಆ ಎಲ್ಲಾ ಶಾಸನಗಳನ್ನು ಒಬ್ಬನೇ ಶಿಲ್ಪಿ ಮಾಡಿರುತ್ತಾನೆಂದು ಭಾವಿಸಬೇಕು. ಬಹುತೇಕ ವೀರಗಲ್ಲುಗಳಲ್ಲಿ ಶಿಲ್ಪಿಗಳ ಹೆಸರು ಸಿಕ್ಕುತ್ತದೆ. ಈ ವೀರಗಲ್ಲುಗಳನ್ನು ಮಾಡಿದ ಶಿಲ್ಪಿಗಳು ಸ್ವಲ್ಪ ಮಟ್ಟಿನ ಅಕ್ಷರಸ್ಥರಾಗಿದ್ದರು. ಶಾಸನ ಪಾಠವನ್ನು ಬರೆದವರೂ ಅವರೇ ಕೆತ್ತಿದವರೂ ಅವರೇ ಹೀಗಾಗಿ ಸಮಯೋಚಿತ ಶಿಲ್ಪದೊಂದಿಗೆ ಅದನ್ನು ಕೆತ್ತಿ ತಮ್ಮ ಹೆಸರನ್ನು ಹಾಕಿಕೊಂಡಿರುತ್ತಾರೆ. ವೀರಗಲ್ಲುಗಳನ್ನು ರಚಿಸಿದ ಅನೇಕ ಶಿಲ್ಪಿಗಳ ಹೆಸರುಗಳು ನಮಗೆ ದೊರೆಯುತ್ತದೆ. ಕೊಯತೂರ ಕಾಸಿಗ, ಬಿಜಯಿತಮಂಗಳದ ಅಯ್ನೂಮ್ಯಾಚಾರಿ, ಕಾಳಾಚಾಟ್, ಕುಮ್ಬಿಊರನ್, ಆನಂದೂರ ಕೋಟಿ ಅಚ್ಚಾರಿ, ತಾಯಲೂರ ಪೇರಣ್ಣ, ಆನಂದೂರ ಮುದಾಚ್ಚಾರಿ, ಬನ್ನಾಚಾರಿ, ನನ್ನಿ ಮರಜನನ್, ತಿಪಾಜನಮಗ ಮುದ್ದೋಜ, ಅಮೃತಾಪುರಂ ಲಿಂಗಾಚಾರಿ, ಬಸವನಮಗ ಮಲ್ಲಾಚಾರಿಸಾಣಿಪಾಪನ್ನ ಕುಮಾರಡು ವೆಂಕನ್ನ, ದೇವಡಿಯ ಮಗ ದೇವೋಜ, ತಿಲ್ಲರದ ಬಿಂಗೋರಿಯಗ ಚಿಂಣೋಜ ಮುಂತಾದ ಹೆಸರುಗಳು ದೊರೆಯುತ್ತವೆ.

ಈ ಮೇಲಿನ ಹೆಸರುಗಳಲ್ಲಿ ಬಹು ಮುಖ್ಯವಾದವನು ಮತ್ತು ಹೆಚ್ಚಿಗೆ ವೀರಗಲ್ಲುಗಳನ್ನು ಕೆತ್ತಿದವನು ಕೊಯತೂರ ಕಾಸಿಗ ಎಂಬುವವನು. ಇವನನ್ನು ಶಾಸನಗಳು ವಿಕ್ರಮಾದಿತ್ಯ ಬಹುಗುಣತೇಜನೆಂಬ ವಿಶೇಷಣದಿಂದಲೇ ಹೆಚ್ಚಾಗಿ ಕರೆದಿರುವುದು. ಮುಳಬಾಗಿಲ ತಾಲ್ಲೂಕಿನ ತಾವರೆಕೆರೆ ಮತ್ತು ಯೆಲ್ದೂರಿನ ಅನೇಕ ವೀರಗಲ್ಲುಗಳು, ಕೋಲಾರ ತಾಲ್ಲೂಕಿನ ಹರಳಕುಂಟೆ ವೀರಗಲ್ಲುಗಳು ಇವನ ರಚನೆಗಳು ಇವನು ಕ್ರಿ. ಶ. ೯೬೦ ರ ಸುಮಾರಿಗೆ (೯೬೬) ಜೀವಿಸಿದ್ದಂತೆ ತಿಳಿಯುತ್ತದೆ, ಇವನ ತಂದೆಯ ಹೆಸರು 'ವಿಜಯಿತಾಚಾರಿ' ಎಂದೂ ಇವನ ಸ್ಥಳ ಕೊಯತೂರು ಎಂದೂ ಶಾಸನಗಳಿಂದ ತಿಳಿಯುತ್ತದೆ. ಕೊಯತೂರನ್ನು ತಮಿಳುನಾಡಿನ ಈಗಿನ ಕೊಯಮತ್ತೂರೆಂದು ಡಾ ಎಸ್. ಶೆಟ್ಟರ್ ಗುರುತಿಸುತ್ತಾರೆ. ಆದರೆ ಅದು ಸರಿಯಲ್ಲ ಅದು ಚಿತ್ತೂರು ಜಿಲ್ಲೆಯಲ್ಲಿನ ಒಂದು ಗ್ರಾಮವಾಗಿದೆ. ಹೀಗಾಗಿ ಕಾಸಿಗ ಅರ್ಥಾತ್ ವಿಕ್ರಮಾದಿತ್ಯ ಬಹುಗುಣತೇಜ ಚಿತ್ತೂರು ಪ್ರದೇಶದಿಂದ ಈ ಪ್ರದೇಶಕ್ಕೆ ರಾಜಾಶ್ರಯವನ್ನರಸಿ ಬಂದಿರಬೇಕು. ಈತನ ವೀರಗಲ್ಲುಗಳಲ್ಲಿ ವಿಷಯಕ್ಕಿಂತ ಶಿಲ್ಪಗಳು ಬಹುಮಾರ್ಮಿಕವಾಗಿವೆ ಹಾಗೂ ಅರ್ಥಪೂರ್ಣವಾಗಿವೆ.

ಇನ್ನೊಬ್ಬ ಶಾಸನೋಕ್ತ ಶಿಲ್ಪಿಯೆಂದರೆ ಬಿಜಯಿತಮಂಗಲದ ಅಯ್ನಾಮ್ಬಾಚಾರಿ ಚಿಂತಾಮಣಿ ತಾಲ್ಲೂಕಿನ ಅನೂರಿನ ವೀರಗಲ್ಲನ್ನು ರಚಿಸಿದ್ದಾನೆ.

ಈತನ ಪೂರ್ವೋತ್ತರಗಳು ದೊರೆಯದಿದ್ದರೂ ಈತ ಬಿಜಯಿತಮಂಗಲದವನೆಂದು ಹೇಳಿಕೊಂಡಿರುವುದರಿಂದ ಈತನು ಕೋಲಾರ ಜಿಲ್ಲೆಯವನು. ಬಿಜಯಿತ ಮಂಗಲವೇ ಈಗಿನ ಬಂಗಾರಪೇಟೆ ತಾಲ್ಲೂಕಿನ ಬೇತಮಂಗಲ, ಇವನ ಕಾಲವೂ ೧೦ನೇ ಶತಮಾನಕ್ಕೆ ಸೇರುತ್ತದೆ.

ಸುಮಾರು ೯ನೇ ಶತಮಾನದಲ್ಲಿ ಆನಂದೂರು ಎಂಬಲ್ಲಿ ವಾಸವಾಗಿದ್ದ ಕೋಟಿ ಆಚ್ಚಾರಿ ಎಂಬುವವನು, ಶ್ರೀನಿವಾಸಪುರ ತಾಲ್ಲೂಕಿನ ವೆಂಕಟಪುರಂ ವೀರಗಲ್ಲಿನ ರಚಕನಾಗಿದ್ದರೆ, ಶಿಡ್ಲಘಟ್ಟ ತಾಲ್ಲೂಕಿನ ಭಕ್ತರಹಳ್ಳಿ ವೀರಗಲ್ಲನ್ನು ಅದೇ ಆನಂದೂರಿನ ಮೂದಚ್ಚಾರಿ ಮಾಡಿದಂತೆ ತಿಳಿಸುತ್ತದೆ. ಬಂಗಾರಪೇಟೆ ತಲ್ಲಪಲ್ಲಿಯ ಶಾಸನವನ್ನು ತಾಯಲೂರ 'ಕಮ್ಮರಮ್ಮನ ಮಗನ್ ಪೇರಣ್ಣ ಮಾಡಿ ಪ್ರಸಿದ್ಧಿ' ಯನ್ನು ಪಡೆದ. ಉಳಿದವರ ಬಗ್ಗೆ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಕೆಲವು ಶಾಸನಗಳಲ್ಲಿ ತಂದೆಯ ಹೆಸರು ಉಲ್ಲೇಖವಾಗಿದೆ ಅಂತಹವುಗಳಲ್ಲಿ ಚಿಂತಾಮಣಿ ತಾಲ್ಲೂಕಿನ ಕೋನಪ್ಪನಹಳ್ಳಿಯ ಗರುಡಗಂಬವನ್ನು ಮಾಡಿದ ವನು ದೇವಡಿಯಮಗ ದೇವೋಜ, ಪೇಳ್ಗಲ್‌ಬುರೆಯ ಮಾರಿ ದೇವಾಲಯ ವನ್ನು ಕಟ್ಟಿದವನು ಬಸವನ ಮಗ ಮಲ್ಲಾಚಾರಿ, ಗುಲಗುಂಜೀಹಳ್ಳಿಯ ದೇವಾಲಯಗಳನ್ನು ಕಟ್ಟಿದವನು ತಿಪ್ಪಾಜನ ಮಗ ಮುದ್ದೋಜ. ಶೆಟ್ಟಿಹಳ್ಳಿ ಕೆರೆ ಮತ್ತು ಅದರ ತೂಬನ್ನು ಮಾಡಿದ ಮುಖ್ಯಶಿಲ್ಪಿ ತಿಲ್ಲರದ ಬಿಂಗೋಜಿಯ ಮಗ ಚಿಂಣೋಜ. ಅಲ್ಲದೆ ಕಲ್ಲಹಳ್ಳಿಯ ಶಾಸನಗಳನ್ನು ಬರೆದವನು ಕುಮ್ಬಿಊರ, ಜಗತನಹಳ್ಳಿಯ ವೀರಗಲ್ಲನ್ನು ಮಾಡಿದ ಕಾಳಾಚಾರಿ ಕುಡುವಿತಿಯ ಶಾಸನವನ್ನು ಕೆತ್ತಿದ ಅಮೃತಾಪುರಂ ಲಿಂಗಾಚಾರಿ, ಬೂದಿಕೋಟೆ ಶಾಸನ ಬರೆದ ಶ್ರೀಪುರುಷ ತ್ರಾಚ್ಚ ಜಾಕನಪಲ್ಲಿಯ ವೀರಗಲ್ಲಿನ ಶಿಲ್ಪಿ ಬನ್ನಾಚಾರಿ, ಅವನಿಯ ಕೆರೆಯನ್ನು ಮಾಡಿದ ಮರಜ, ಗಟ್ಟುಕಾಮಧೇನುಹಳ್ಳಿಯ ಈಶ್ವರದೇವಾಲಯವನ್ನು ಮಾಡಿದ ನೊಟಂಬಾಚಾರಿ. ಇವರ ಬಗ್ಗೆ ಹೆಚ್ಚಿನ ವಿವರಗಳು ದೊರೆಯುವುದಿಲ್ಲ.

ಶಾಸನಗಳನ್ನು ಕೆತ್ತಿದ ಈ ಶಿಲ್ಪಿಗಳಿಗೆ ನೀಡುತ್ತಿದ್ದ ಸಂಭಾವನೆಯೇನು ? ಎಂಬ ಪ್ರಶ್ನೆ ಬರುತ್ತದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಕೆಲವು ಶಾಸನಗಳಲ್ಲಿ ಕೆಲವು ವಿವರಗಳು ತಿಳಿಯುತ್ತವೆ. ಉತ್ತನೂರಿನ ಶಾಸನದಲ್ಲಿ ಅದನ್ನು ಕೆತ್ತಿದ ಶಿಲ್ಪಿಗೆ ಒಂದು ಖಂಡುಗ ಬತ್ತದ ಗದ್ದೆಯನ್ನು ಬಿಟ್ಟಂತೆ ಹೇಳಿದೆ. ಇದೇ ಸರಿಸುಮಾರು ಕಾಲದ ಗುಮ್ಮರೆಡ್ಡಿಪುರ ಶಾಸನದಲ್ಲಿ ಒಂದು ಖಂಡುಗ ವಾಪಕ್ಷೇತ್ರವನ್ನು ನೀಡಿದಂತೆ ಹೇಳಿದೆ. ಗಟ್ಟುಕಾಮಧೇನುಹಳ್ಳಿಯ ಶಿವದೇವಾಲಯವನ್ನು ನಿರ್ಮಿಸಿದ ನೊಟಂಬಾಚಾರಿಗೆ ಖಣ್ಡುಗ ಗದ್ದೆ ಧಾರೆಯೆರೆದು ನೀಡಿರುತ್ತಾರೆ.

ಈ ಜಿಲ್ಲೆಯ ಪ್ರಾಚೀನ ಶಿಲ್ಪಿಗಳ ಕೊಡುಗೆಯ ಬಗೆಗೆ ಎರಡು ಮಾತುಗಳು

ಹೇಳುವುದು ಸೂಕ್ತ. ಆದೆಂದರೆ ದೇವಾಲಯ ಶಿಲ್ಪಿಗಳು: ಇವರು ಧ್ಯಾನ ಶ್ಲೋಕಗಳನ್ನು ಆಧರಿಸಿ ಶಿಲ್ಪಗಳನ್ನು ಕೆತ್ತಿದ್ದಾರೆ. ಎರಡನೆಯವು; ಶಾಸನ ಶಿಲ್ಪಿಗಳು ಯಾವ ಧ್ಯಾನ ಶ್ಲೋಕಗಳು ನೆರವೂ ಇಲ್ಲದೆ ಶಿಲ್ಪಿ ತನ್ನ ಪ್ರತಿಭೆಯನ್ನು ಮೆರೆದ ಕ್ಷೇತ್ರವಿದು. ಹುನುಗುಂದ, ಬಲ್ಲ, ತಾವರೇಕೆರೆ ಮುಂತಾದ ಕಡೆ ಗುಂಪುಗುಂಪಾಗಿ ದೊರೆಯುವ ವೀರಗಲ್ಲುಗಳಲ್ಲಿ ಅನೇಕ ವೈವೀದ್ಯಗಳನ್ನು ಶಿಲ್ಪಿ ಮೆರೆದಿದ್ದಾನೆ. ವಿಕ್ರಮಾದಿತ್ಯ ಬಹುಗುಣತೇಜನ ವೀರಗಲ್ಲು, ಕೋಲಾರಮ್ಮನ ದೇವಾಲಯದಲ್ಲಿನ ವೀರಗಲ್ಲು ಇಂತಹ ವೈವಿಧ್ಯವನ್ನು ತೋರಿಸುವವಾಗಿವೆ.

○

ಅ.ಲ. ನರಸಿಂಹನ್

# ಕರ್ನಾಟಕದಲ್ಲಿ ಬೌದ್ಧ ಶಿಲ್ಪ ಮತ್ತು ಚಿತ್ರಗಳು

ಕರ್ನಾಟಕದಲ್ಲಿಯ ಬೌದ್ಧ ನೆಲೆಗಳ ಬಗ್ಗೆ, ಬೌದ್ಧ ಧರ್ಮ ಉಲ್ಲೇಖಿಸುವ ಶಾಸನಗಳ ಬಗ್ಗೆ, ಉತ್ಖನನ ಇತ್ಯಾದಿಗಳಲ್ಲಿ ದೊರೆತ ವಿವಿಧ ಬಗೆಯ ಶಿಲ್ಪಗಳ ಬಗ್ಗೆ ಎಂ. ಚಿದಾನಂದ ಮೂರ್ತಿ[1], ಅ. ಸುಂದರ[2], ತಾಳ್ತಜೆ ವಸಂತ ಕುಮಾರ್[3], ಎಸ್. ಶ್ರೀಕಂಠಶಾಸ್ತ್ರಿ[4], ಎಸ್.ಕೆ. ರಾಮಚಂದ್ರರಾವ್[5], ಎಚ್.ಆರ್. ರಘುನಾಥ ಭಟ್[6], ಹುಲ್ಲೂರು ಶ್ರೀನಿವಾಸ ಜೋಯಿಸ್[7], ಜ್ಯೋತ್ಸ್ನಾಕಾಮತ್[8], ಚೆನ್ನಕ್ಕ ಎಲಿಗಾರ[9],

---

1. ಎಂ. ಚಿದಾನಂದ ಮೂರ್ತಿ ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ; ಪುಟ. 114 ಮತ್ತು 'ಬೌದ್ಧ ಕೇಂದ್ರ. 'ಕಲಾವತಿ' ನಗರದ ಅಭಿಜ್ಞೆ ಈಗಿನ ಕಲ್ಕ ಚೊತೆ' ಸಾಧನೆ, ಜನವರಿ 1986, ಜೂನ್ 1987, ಪುಟ. 12-19
2. ಅ. ಸುಂದರ, 'ವಡಗಾಂವ್ ಮಾಧವ ಪುರದಲ್ಲಿ ದೊರೆತ ಮಣ್ಣಿನ ಗೊಂಬೆಗಳು' ಕರ್ನಾಟಕ ಭಾರತಿ, 10-2. 1977, ಪುಟ. 61 ಮತ್ತು 'ಹಂಪೆಯಲ್ಲಿ ದೊರೆತಿರುವ ಎರಡನೆಯ ಶತಮಾನದ ಎರಡು ಅಪೂರ್ವ ಬಿಳಿಯ ಜೇಡಿಮಣ್ಣಿನ ಗೊಂಬೆಗಳು' ಇತಿಹಾಸ ದರ್ಶನ, 1990, ಪುಟ. 29-30
3. ತಾಳ್ತಜೆ ವಸಂತ ಕುಮಾರ್, ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, 1989.
4. ಎಸ್. ಶ್ರೀಕಂಠ ಶಾಸ್ತ್ರಿ, ಪುರಾತತ್ತ್ವ ಶೋಧನೆ, 1960, ಪುಟ. 193
5. ಎಸ್.ಕೆ. ರಾಮಚಂದ್ರರಾವ್, 'ಕರ್ನಾಟಕದಲ್ಲಿ ಬೌದ್ಧ ಧರ್ಮ ಮತ್ತು ಅಲ್ಪ ಸಂಖ್ಯಾತ ಮತಗಳು' (ಅನು) ಎಂ. ಚಿದಾನಂದ ಮೂರ್ತಿ, ಕರ್ನಾಟಕ ಪರಂಪರೆ, ಸಂಪುಟ. 1, 1970, ಪುಟ. 204-6
6. ಎಚ್.ಆರ್. ರಘುನಾಥ ಭಟ್, 'ಕರ್ನಾಟಕದಲ್ಲಿ ಶಾತವಾಹನರ ಕಲೆ', ಕರ್ನಾಟಕ ಶಾಸನ ಕಲೆ, ಪುಟ. 93-104.
7. ಹುಲ್ಲೂರು ಶ್ರೀನಿವಾಸ ಜೋಯಿಸ್. 'ಚಿತ್ರದುರ್ಗಜಿಲ್ಲೆಯಲ್ಲಿ ಬೌದ್ಧ ಧರ್ಮದ ಕುರುಹುಗಳು,' ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, (ಸಂ) ಬಿ.ವಿ. ವೈಕುಂಠರಾಜು, ಪುಟ. 25
8. ಜ್ಯೋತ್ಸ್ನಾಕಾಮತ್, ಕರ್ನಾಟಕದ ಶಿಕ್ಷಣ ಪರಂಪರೆ, 1988, ಪುಟ. 3-4
9. ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಯರು, 1990, ಪುಟ. 95

ಎ.ಎಂ. ಅಣ್ಣಿಗೇರಿ[10], ಎಸ್. ನಾಗರಾಜು[11], ಎಂ.ವಿ. ವಿಶ್ವೇಶ್ವರ[12], ಎಚ್.ವಿ. ಶ್ರೀರಂಗರಾಜು[13], ಇತ್ಯಾದಿ ಅನೇಕರು ಹಲವಾರು ಉಪಯುಕ್ತ ಮಾಹಿತಿಯನ್ನು ನೀಡಿದ್ದಾರೆ. ಈ ಲೇಖನಗಳಿಂದ ಕರ್ನಾಟಕದಲ್ಲಿಯ ಬೌದ್ಧ ಕೇಂದ್ರಗಳು ಹಾಗೂ ಬೌದ್ಧ ಪರವಾದ ಶಿಲ್ಪಗಳ ಬಗ್ಗೆ ಮಾತ್ರ ಮಾಹಿತಿಗಳು ದೊರೆಯುತ್ತವೆ. ಕಲೆಯ ದೃಷ್ಟಿಯಿಂದ ಇವುಗಳ ಪರಿಶೀಲನೆಯ ಆಗತ್ಯವಿದೆ.

**ಬೌದ್ಧ ಚಿತ್ರಕಲೆ :**

ಚಿತ್ರಕಲೆ ಇರುವ ಸ್ಥಳಗಳಿಗೆ ಬೌದ್ಧ ಭಿಕ್ಷುಗಳು ಹೋಗಬಾರದೆಂಬ ಕಟ್ಟಾಜ್ಞೆಯೊಂದಿಗೆ, ಬುದ್ಧನೇ ಮೊದಲಿಗೆ ತನ್ನ ಚಿತ್ರವನ್ನು ತಾನೇ ಬರೆದ ಎಂಬ ಪರಸ್ಪರ ವಿರುದ್ಧವಾದ ಹೇಳಿಕೆಗಳು ದೊರೆಯುತ್ತವೆ. ಹಾಗೂ ಈಗ ಭಾರತದಲ್ಲಿ ಮೊದಲಿಗೆ ದೊರೆಯುವ ಶಿಷ್ಟ ಸಂಪ್ರದಾಯದ ಚಿತ್ರ ಅಜಂತೆಯಲ್ಲಿದ್ದು ಅದು ಬೌದ್ಧ ಮತೀಯವಾಗಿಯೇ ಇದೆ. ಸಿಲೋನ್, ಟಿಬೆಟ್, ಮಧ್ಯ ಏಷ್ಯಾಗಳಲ್ಲಿ ಆರಂಭ ಕಾಲದ ಬೌದ್ಧ ಚಿತ್ರಕಲೆ ಕಂಡುಬರುತ್ತದೆ.

ಬೌದ್ಧ ಚಿತ್ರಕಲೆಯ ಉಗಮದ ಬಗ್ಗೆ ದಿವ್ಯಾವಧಾನದಲ್ಲಿ ಸ್ವಾರಸ್ಯಕರವಾದ ನಿರೂಪಣೆ ದೊರೆಯುತ್ತದೆ. ಸಿಂಧ್ ಬಳಿಯ ರೋಕುಕ ನಗರದ ಅರಸು ರುದ್ರಯಾನನು ಬಿಂಬಸಾರನಿಗೆ ಕೆಲವು ಬಹುಮಾನಗಳನ್ನು ಕಳಿಸಿದನೆಂದೂ, ಬಿಂಬಸಾರ ಮರಳಿ ಬಹುಮಾನಿಸಲು ಬುದ್ಧನ ಸಲಹೆ ಕೇಳಿದಾಗ ಆತ ತನ್ನದೇ ಚಿತ್ರವನ್ನು ಪಟದ ಮೇಲೆ ಬರೆದು ಕಳಿಸಲು ತಿಳಿಸಿದಾಗ ಬಿಂಬಸಾರನ ಆಸ್ಥಾನ ಕಲಾವಿದರು ಬುದ್ಧನ ಚಿತ್ರ ರಚಿಸಹೋಗಿ ಆತನ ಪ್ರಭಾವಲಯದಿಂದ ಅದು ಸಾಧ್ಯವಾಗದಿರುಲು ಬುದ್ಧ ತನ್ನ ನೆರಳು ಗೋಡೆಯ ಮೇಲೆ ಬೀಳುವಂತೆ ನಿಂತಾಗ ಕಲಾವಿದರು ಆದರ ಹೊರರೇಖೆಯನ್ನು ಚಿತ್ರಿಸಿಕೊಂಡರೆಂದೂ, ಬುದ್ಧನೇ ಯಾವ ಬಣ್ಣಗಳಿಂದ ಅದನ್ನು ತುಂಬಬೇಕೆಂದು ತಿಳಿಸಿದನೆಂದೂ, ಆದರಂತೆ ಕಲಾವಿದರು ರಚಿಸಿದ ಮೇಲೆ ಕೆಲವು ಧಾರ್ಮಿಕ ಸಂದೇಶಗಳನ್ನು ಬರೆದು ರುದ್ರಯಾನನಿಗೆ ಕಳಿಸಿ ಕೊಡಲಾಯಿತೆಂದೂ ತಿಳಿಸಿದ್ದು ಮುಂದೆ ಬೌದ್ಧ ವಿಹಾರಗಳ (monasteries)

---

10. ಎ.ಎಂ. ಅಣ್ಣಿಗೇರಿ, ಐಹೊಳೆ, ಸಂಸ್ಕೃತಿ ಮತ್ತು ಕಲೆ, 1974, ಪುಟ. 114
11. S. Nagaraju. 'Vestiges to Buddhist Art, Homage to Karnataka 1982, Pgs 25-34
12. M.V. Visweswara, 'Hampi-Originally a Buddhist Site' March of Karnataka, Oct 1988
13. ಎಚ್.ವಿ. ಶ್ರೀರಂಗರಾಜು, 'ಕರ್ನಾಟಕದಲ್ಲಿ ಬೌದ್ಧ ಧರ್ಮ,' ಅವಲೋಕನ ; 1985, ಪುಟ. 160

ಸ್ಥಾಪನೆಯಾಗಿ ಅವುಗಳಲ್ಲಿ ಚಿತ್ರಗಳನ್ನು ಅಲಂಕಾರಕ್ಕಾಗಿ ಸೇರಿಸಿದಾಗ ಸ್ವತಃ ಬುದ್ಧನೇ ಯಾವ ವಿಷಯಗಳನ್ನು ಚಿತ್ರೀಕರಿಸಬೇಕು, ಯಾವುದನ್ನು ಚಿತ್ರಿಸಬಾರದು ಎಂದು ತಿಳಿಸಿದ.[14] ಈ ವೇಳೆಗೆ ಸತ್ಯ, ವೈಣಿಕ, ನಾಗರ ಮತ್ತು ಮಿಶ್ರ ಎಂಬ ನಾಲ್ಕು ಬಗೆಯ ಚಿತ್ರ ಪದ್ಧತಿ ಬಂದಿದ್ದು ಅವುಗಳಲ್ಲಿ ನಾಗರ ಎಂಬುದು ಗ್ರಾಮೀಣ ಹಾಗೂ ಜನಜೀವನವನ್ನು ಬಿಂಬಿಸುವ, ಮುಖ್ಯವಾಗಿ ಪ್ರೇಮ ಮತ್ತು ಲೈಂಗಿಕ ಚಿತ್ರಗಳಾಗಿದ್ದು, ಮನರಂಜನೆಗಾಗಿಯೇ ಬರೆದಿರುವಂತಹವು. ಇವುಗಳನ್ನು ಬಿಂಬಸಾರನ ಅರಮನೆಯಲ್ಲಿ ಬರೆದಿದ್ದರಿಂದ ಅವು ಬೌದ್ಧ ಭಿಕ್ಷುಗಳ ಸಂಯಮ ಮತ್ತು ಮನೋನಿಗ್ರಹಗಳಿಗೆ ವ್ಯತಿರಿಕ್ತವಾದುದರಿಂದ ಭಿಕ್ಷುಗಳು ಹಾಗೂ ಭಿಕ್ಷುಣಿಯರು ಅಲ್ಲಿಗೆ ಹೋಗಬಾರದೆಂದು ಬುದ್ಧ ಅಪ್ಪಣೆ ಮಾಡಿದ್ದ. ಅದರಿಂದಾಗಿಯೇ ಅಜಂತೆಯಲ್ಲಿ 'ಸಾತ್ವಿಕ' ಬಗೆಯ ಚಿತ್ರಗಳ ರಚನೆಯಾಗಿದೆಯೆಂದು ವಿದ್ವಾಂಸರ ಅಭಿಪ್ರಾಯ.[15] ಪ್ರಾಯಶಃ ಹೀನಯಾನ ಕಾಲದಲ್ಲಿ ಬುದ್ಧನ ಆಕೃತಿಯ ಚಿತ್ರಣ ನಿಷಿದ್ಧವಿದ್ದು, ಆತನ ಸ್ಥಾನದಲ್ಲಿ ಸಾಂಕೇತಿಕವಾಗಿ ಶೂನ್ಯ ಸಿಂಹಾಸನ ಧರ್ಮಚಕ್ರ, ಪಾದ, ಸ್ತೂಪಗಳೇ ಇದ್ದು ಮಹಾಯಾನ ಕಾಲದಲ್ಲಿ ಬುದ್ಧನ ಮೂರ್ತಿಯ ರಚನೆ ಆರಂಭವಾಗಿದ್ದು ಬುದ್ಧನೇ ತನ್ನ ಚಿತ್ರ ರಚನೆಗೆ ಅನುಮತಿ ನೀಡಿದ ಅಥವಾ ತಾನೇ ತನ್ನ ಚಿತ್ರ ರಚಿಸಿಕೊಟ್ಟ ಎಂದೂ,[16] ಅಥವಾ ತಾನಿಲ್ಲದ ವೇಳೆಯಲ್ಲಿ ಗಂಧದಲ್ಲಿ ತನ್ನ ಮೂರ್ತಿಯನ್ನು ರಚಿಸಿ ಪೂಜಿಸಿರಿ[17] ಎಂದು ಹೇಳಿದ ಎಂಬಂತೆ ಬುದ್ಧನಿಗೇ ಆರೋಪಿಸಿರಬಹುದು.

ಬೌದ್ಧಧರ್ಮ ಪ್ರಸರಿಸಿದ ಕಡೆಗಳಲ್ಲಿ ಎರಡರಿಂದ ಎಂಟನೆಯ ಶತಮಾನದವರೆಗೆ ಧಾರ್ಮಿಕ ಚಿತ್ರಗಳ ರಚನೆಯಾದಂತೆ ತಿಳಿದುಬರುತ್ತದೆ. ಎರಡರಿಂದ ಏಳನೆಯ ಶತಮಾನದವರೆಗೆ ಅಜಂತ ಹಾಗೂ ಬಾಗ್‌ಗಳಲ್ಲಿ ಬೌದ್ಧ ಚಿತ್ರಗಳ ರಚನೆ ಪ್ರಸಿದ್ಧ ವಿಷಯ. ಅಂತೆಯೇ ಮಧ್ಯ ಚೈನಾದಲ್ಲಿ ಐದರಿಂದ ಎಂಟನೇ ಶತಮಾನದವರೆಗೂ ಬೌದ್ಧ ಚಿತ್ರಗಳು ರಚಿತವಾಗಿದ್ದು ಗಣೇಶ, ಈಶ್ವರ, ವಿಷ್ಣುಗಳ ಚಿತ್ರಗಳೂ ಇದ್ದು ಅಜಂತೆಯನ್ನು ಬಹಳವಾಗಿ ಹೋಲುತ್ತದೆಯಲ್ಲದೆ ಭಾರತದಿಂದ ದೋಣಿಯಲ್ಲಿ ಬುದ್ಧನ ವಿಗ್ರಹವನ್ನು ತರುತ್ತಿರುವ ಚಿತ್ರವೂ ಇದೆ.[18] ಚೀನಾದಿಂದ ೪–೫ನೇ

---

14. (Quot) O C. Gangoly 'The Glorious Beginning', Panorama of Indian Painting, P. 3
15. Ibid, P. 3-4
16. Mulk Raj Anand, Chitralakshna, 1989 P. 9-10
17. B. K. Gururaja Rao, 'Lord Buddha in Indian Art'. Studies in Indian Culture, 1986, P. 256
18. Anil-de-Silve Vigier, Indian Influence in the art of Tun-Huang, The Times of India Annual-1971

ಶತಮಾನದಲ್ಲಿ ಬಂದಿದ್ದ ಫಾಹಿಯಾನ್ ಸೂತ್ರಗಳೊಂದಿಗೆ ಪ್ರತಿಮೆಗಳ ಚಿತ್ರಗಳನ್ನೂ ಬರೆದುಕೊಂಡು ಹೋದ.[19] ಅಂತೆಯೇ ಹುಯೆನ್‌ತ್ಸಾಂಗ್ ೬೪೦ರ ವೇಳೆಯಲ್ಲಿ ಬಂದಿದ್ದು ಕಂಚಿಯ ಬೌದ್ಧ ಸಂಘಾರಾಮಗಳು ಬನವಾಸಿಯ ಸಂಘಾರಾಮ ವಿಹಾರ ಗಳಲ್ಲದೆ ಬೌದ್ಧ ಪ್ರತಿಮೆಗಳ ಬಗ್ಗೆ ಹೇಳುವನಲ್ಲದೆ ಅಜಂತೆಯ ಚಿತ್ರಗಳನ್ನೂ ಕುರಿತೂ ವಿವರಣೆ ನೀಡುತ್ತಾನೆ.[20] ಮಧ್ಯಏಷಿಯಾದಲ್ಲಿಯೂ ಎರಡರಿಂದ ಎಂಟನೇ ಶತಮಾನಕ್ಕೆ ಸೇರಿದ ಬೌದ್ಧ ಪರವಾದ ಅನೇಕ ಚಿತ್ರಗಳು ದೊರೆತಿದ್ದು ಶೈಲಿಯಲ್ಲಿ ಅಜಂತೆಗಿಂತ ಭಿನ್ನವಾಗಿದೆಯಲ್ಲದೆ ಬಟ್ಟೆ ಕಾಗದದ ಮೇಲೆ ಒಂಭತ್ತು ಹತ್ತನೆಯ ಶತಮಾನದಲ್ಲಿ ರಚಿತವಾದ ಬುದ್ಧನ ಚಿತ್ರಗಳು ದೊರೆಯುತ್ತವೆ.[21] ಮಧ್ಯ ಏಷಿಯಾದ ಖೈಜಿಲ್ (Qyzyl) ನಲ್ಲಿಯ ಭಿತ್ತಿ ಚಿತ್ರವೊಂದರಲ್ಲಿ(೭–೮ನೇ ಶತಮಾನ) ಬುದ್ಧನ ಪರಿನಿರ್ವಾಣವನ್ನು ಬಟ್ಟೆಯ ಮೇಲೆ ರಚಿಸಿ ಅಜಾತ ಶತ್ರುವಿಗೆ ತೋರಿಸು ತ್ತಿರುವ ಭಿತ್ತಿಚಿತ್ರವಿದೆ.[22] ಶ್ರೀಲಂಕಾದ ಮಡವೇಲ, ಖುದಿವಿಹಾರ, ದೆಂಬುಲ್ಲ, ಪೋಲನ್ನಾರ್ವ ಇತ್ಯಾದಿ ಹಲವಾರು ಕಡೆಗಳಲ್ಲಿ ಹತ್ತರಿಂದ ಹನ್ನೆರಡನೇ ಶತಮಾನಕ್ಕೆ ಸೇರಿದ ಬೌದ್ಧ ಭಿತ್ತಿಚಿತ್ರಗಳಿದ್ದು ಅವು ಅಜಂತೆಯನ್ನು ಹೋಲುವುದಾಗಿ ತಿಳಿದಿದೆ.[23] ಕರ್ನಾಟಕದಲ್ಲಿ ಅಶೋಕನ ಕಾಲದಲ್ಲಿ ಹೀನಯಾನವೂ ಮುಂದೆ ಐದನೇ ಶತಮಾನದ ವರೆಗೆ ಮಹಾಯಾನವೂ ನಂತರ ಏಳನೆಯ ಶತಮಾನದಲ್ಲಿ ವಜ್ರಯಾನದ ಪ್ರಭಾವವೂ ಆಯಿತೆಂದು ಎಂ. ಚಿದಾನಂದಮೂರ್ತಿ ಅವರು ಪ್ರತಿಪಾದಿಸಿದ್ದು[24] ಅದಕ್ಕೆ ಬೌದ್ಧ ಶಿಲ್ಪಿಗಳ ಆಧಾರವನ್ನೂ ಕೊಡಬಹುದು. ಸನ್ನತಿಯಲ್ಲಿ ದೊರಕಿರುವ ಹಾಗೂ ಗುಲ್ಬರ್ಗ ಮ್ಯೂಸಿಯಂನಲ್ಲಿರುವ ಅನೇಕ ಫಲಕಗಳಲ್ಲಿ ಬುದ್ಧನ ಚಿಹ್ನೆ ರೂಪದ 'ಪಾದ'ವಷ್ಟೇ ಇದ್ದು ಅದನ್ನು ಸಿಂಹಾಸನದಲ್ಲಿ ಇರಿಸಿ ಪೂಜಿಸುವಂತಿದೆ. ಇದು ಹೀನಯಾನದ ಪದ್ಧತಿ. ಮಹಾಯಾನದ ಕಾಲದಲ್ಲಿ ಬುದ್ಧನ ಚಿತ್ರ ರೂಪಿಸುವ ಪದ್ಧತಿ ಬಂದಿದ್ದು, ಈ ಮೇಲೆ ನೋಡಿದ ಭಿತ್ತಿ ಚಿತ್ರಗಳು ಮಹಾಯಾನ ಕಾಲದ್ದಾಗುತ್ತದೆ. ಕದ್ರಿ, ಹಂಪೆ, ಹೈಗುಂದ, ಬಬ್ರುವಾಡ ಇತ್ಯಾದಿಗಳಲ್ಲಿ ದೊರಕಿರುವ ಬುದ್ಧನ ಶಿಲ್ಪಗಳು ಈ ಕಾಲಕ್ಕೆ ಸೇರುತ್ತವೆ. ವಜ್ರಯಾನ ಕಾಲದಲ್ಲಿ

---

19. ಎಚ್.ಎಲ್. ನಾಗೇಗೌಡ, ಪ್ರವಾಸಿ ಕಂಡ ಇಂಡಿಯಾ, ಸಂಪುಟ : 1, ಪು. 178
20. ಅದೇ, ಪು. 249-52
21. Mario Bussagli, Central Asian Painting. London, 1978 Illustration in Pgs 116, 117, 118, 120 etc
22. C. Shivaramamurti, Painter in Ancient India, P. 54, Fig. 69
23. Lucien. F. Rajakaruna Nayake, 'Temple Art in Srilanka' Indirama, VII : I Jan-Mar 1982. P. 42-56
24. ಎಂ. ಚಿದಾನಂದಮೂರ್ತಿ, ಕ.ಶಾ.ಸಾಂ.ಅ. ಪೂರ್ವೋಕ್ತ, ಪು. 123

ತಾರಾಭಗವತಿಯ ಆರಾಧನೆ ಕರ್ನಾಟಕದಲ್ಲಿ ಅಧಿಕವಾಗಿದ್ದಂತೆ ಕಂಡುಬರುತ್ತದೆ. ಆಕೆಯನ್ನು ಕುರಿತ ಹಲವು ಉಲ್ಲೇಖಗಳು ಬರುವುದಲ್ಲದೆ ಆಕೆಯ ಹೆಸರಿನಲ್ಲಿ ೩-೪ ವಿಹಾರಗಳು ಇದ್ದಂತೆ ಕಂಡುಬರುತ್ತದೆ. ಎರಡು ಭಗ್ನ ಶಿಲ್ಪಗಳು ದೊರೆಯುತ್ತವೆ. ಇದೇ ವೇಳೆಯಲ್ಲಿ 'ಬುದ್ಧ', ವಿಷ್ಣುವಿನ ದಶಾವತಾರಗಳಲ್ಲಿ ಒಂದಾಗಿ ಸೇರಿದಂತೆ ಕಂಡುಬರುತ್ತದೆ. ಇಲ್ಲಿ ಆತ 'ಬುದ್ಧ' ಆದರೂ 'ಜೈನ'ನಂತೆ ದಿಗಂಬರನಾಗಿದ್ದು 'ವೈಷ್ಣವ' ಅವತಾರಗಳಲ್ಲಿ ಒಂದಾಗಿ ಕಂಡುಬರುತ್ತಾನೆ.

**ದಶಾವತಾರಗಳಲ್ಲಿ**

ದಶಾವತಾರಗಳಲ್ಲಿ 'ಬುದ್ಧ' ಬರುವುದು ಒಂದು ಪ್ರಭೇದವಾಗಿ. ಬಲರಾಮನನ್ನು ಒಂದು ಅವತಾರವಾಗಿ ಪರಿಗಣಿಸುವವರಲ್ಲಿ ಬುದ್ಧ ಇರುವುದಿಲ್ಲ. ಶ್ರೀವೈಷ್ಣವರ ಪ್ರಕಾರ ಬಲರಾಮ ಎಂಟನೇ ಅವತಾರ, ಕೃಷ್ಣ (ಒಂಭತ್ತು). ಮಾಧ್ವರ ಲೆಕ್ಕಾಚಾರದಂತೆ ಕೃಷ್ಣ (ಎಂಟು) ಬುದ್ಧ (ಒಂಭತ್ತು). ಬಲರಾಮ ಶೇಷನ ಅವತಾರವೆಂದು ಇವರು ನಂಬುವುದರಿಂದ ಆತ (ವಿಷ್ಣುವಿನ) ಅವತಾರವಲ್ಲ ಎಂದು ಹೇಳುವ ವಸುಂಧರ ಅವರು ೧೫೫೦ರ ವೇಳೆಯಲ್ಲಿ ವಿಜಯನಗರದಲ್ಲಿ ಶ್ರೀ ವೈಷ್ಣವರ ಪ್ರಭಾವವಿದ್ದರೂ, ಮಾಧ್ವ ದಾಸರ ಪದಗಳಿಂದ ಸ್ಫೂರ್ತಿಗೊಂಡು ವಿಠಲ ಮಂಟಪದ ಕಂಬಗಳಲ್ಲಿ ಬೌದ್ಧಾವತಾರ ಕೆತ್ತಿದ್ದಾರೆ. ದಾಸರ ಪದಗಳಲ್ಲಿ ಸಹ ಬಲರಾಮನಿಗೆ ಸ್ಥಾನವಿಲ್ಲ ಎಂದು ಹೇಳುತ್ತಾರೆ.[25] ವಾಮನ ಬೇಂದ್ರೆ ಅವರು ಕವಿ ಲಕ್ಷ್ಮೀಶನದು ಚಿಕ್ಕಮಗಳೂರು ಬಳಿಯ ದೇವನೂರು ಎಂದು ಸಾಧಿಸಲು ಲಕ್ಷ್ಮೀಶನ ಕೀರ್ತನೆಯೊಂದರಲ್ಲಿ 'ಹರಿಚರಣನಾಗಿ ವೇದವನು ತಂದೆ, ಹರಿವಾಹಿನಿಯ ನೀನಾಳ್ದೆ, ಹಲಸುತಗೊಲಿದು ಹೆಂಗಳ ವ್ರತ ಕೆಡಿಸಿದೆ' ಎಂದಿರುವುದೂ ದೇವನೂರಿನ ಲಕ್ಷ್ಮೀಕಾಂತ ದೇವರ ಪ್ರಭಾವಳಿಯಲ್ಲಿ ಬಲರಾಮ (ಎಂಟು) ಹಾಗೂ ಬೆತ್ತಲೆ ಬಾಲಕೃಷ್ಣ (ಒಂಭತ್ತು)ರ ಶಿಲ್ಪಗಳಿದ್ದು ಬೌದ್ಧಾವತಾರ ಎಂದರೆ ಬಾಲಕೃಷ್ಣ ಎಂದು ನಂಬುವ ಒಂದು ಸಂಪ್ರದಾಯ ಆ ನೆಲೆಯಲ್ಲಿ ಇರುವುದಾಗಿ ತಿಳಿಸುತ್ತಾರೆ.[26] ಸಾಮಾನ್ಯವಾಗಿ ಚಿತ್ರ ಶಿಲ್ಪಗಳಲ್ಲಿ ಬಾಲಕ ಕೃಷ್ಣನನ್ನು ಬೆತ್ತಲೆಯಾಗಿ ಚಿತ್ರಿಸುವಂತೆ ಇಲ್ಲಿಯೂ ಇರುವಂತಿದೆ. ಮಲ್ಲರಸನ ದಶಾವತಾರ ಚರಿತೆಯಲ್ಲಿ ತ್ರಿಪುರ ಸಂಹಾರ ಕಾಲದಲ್ಲಿ ಕೃಷ್ಣನೇ ನಗ್ನನಾಗಿ ನಿಲ್ಲುತ್ತಾನೆ (ಕೃಷ್ಣಂಗೆ ನಗ್ನತೆಯೆಂದರೆ ಮಾಡಿದುದು, ಮಿಕ್ಕರಂ ಬಿಟ್ಟಪುದೇ)[27] ಎಂದು ತಾಳ್ತಜೆ ಅವರು ಹೇಳುತ್ತಾರೆ.

---

25. ವಸುಂಧರ ಫಿಲಿಯೋಜ, 'ಪುರಂದರದಾಸರು ಮತ್ತು ವಿಜಯನಗರ', ಬೆಳುವಲ, ಪು. 501
26. ವಾಮನ ಬೇಂದ್ರೆ, ಲಕ್ಷ್ಮೀಶನ ಜೈಮಿನಿ ಭಾರತ, 1969. ಪು. 42-53
27. (ಉದ್ಧೃತ) ತಾಳ್ತಜೆ ವಸಂತಕುಮಾರ್, ಪೂರ್ವೋಕ್ತ, ಪು. 184

ಹರಿವಂಶದಲ್ಲಿ ತ್ರಿಪುರ ಸಂಹಾರದ ಪ್ರಸಂಗ ಬಂದು ವಿಷ್ಣುವಿನ ನೆರವನ್ನು ಶಿವ ಪಡೆಯುವನಾದರೂ ನಗ್ನತೆಯ ಪ್ರಸಂಗ ಬರುವುದಿಲ್ಲ.[28] ಶಾಂತಲಿಂಗ ದೇಶಿಕನು ತ್ರಿಪುರ ಸಂಹಾರ ಕುರಿತು ಹೇಳುವಾಗ (೧೬೭೨) ವಿಷ್ಣುವಿನ ಕುಹಕದಿಂದ ಲಿಂಗ ಧಾರಣೆ ಬಿಟ್ಟರೆಂದು ಹೇಳುವನೇ ವಿನಾ ವಿಷ್ಣು ಬೆತ್ತಲೆ ನಿಲ್ಲುವುದಿಲ್ಲ.[29] ಈ ಪ್ರಸಂಗ ಬರುವುದು ಜಾನಪದ ಕಥೆಯಲ್ಲಿ. ತ್ರಿಪುರದ ಹೆಂಗಳೆಯರ ಪಾತಿವ್ರತ್ಯ ಕೆಡಿಸಿದಾಗ ಶಿವನಿಗೆ ತ್ರಿಪುರನನ್ನು ಸಂಹರಿಸುವುದು ಸಾಧ್ಯವೆಂದು ತಿಳಿದು ಕೃಷ್ಣ ಬುಡಬುಡಿಕೆಯವನ ವೇಷ ಧರಿಸಿ, ತ್ರಿಪುರನ ಏಳು ಜನ ಹೆಣ್ಣು ಮಕ್ಕಳಿಗೆ 'ಮಧ್ಯ ರಾತ್ರಿ ಕೆರೆಯಲ್ಲಿ ಸ್ನಾನ ಮಾಡಿದಾಗ ಹುಟ್ಟುವ ಅರಳಿಮರವನ್ನು ಬೆತ್ತಲೆಯಾಗಿ ತಬ್ಬಬೇಕು' ಎಂದು ಹೇಳಿ ಅವರು ಹಾಗೆ ಮಾಡಿದಾಗ ಮರವೇ ಕೃಷ್ಣ ಆಗಿ ಹೆಂಗಳೆಯರ ಪಾತಿವ್ರತ್ಯ ಹೋಗಿ ಶಿವನಿಗೆ ಜಯವಾಗುತ್ತದೆ.[30] ಇನ್ನೊಂದು ಕಥೆ ಯಂತೆ ಬುಡಬುಡಿಕೆಯವ ಶಿವ, ಮರವಾಗಿ ನಿಂತವನು ವಿಷ್ಣು.[31] ಈ ಕಥೆಯನ್ನು ಕಳೆದ ಶತಮಾನದ ಅಂತ್ಯದಲ್ಲಿದ್ದ ತಿಪ್ಪೋಜಿ ಎಂಬ ಕಲಾಕಾರ ಶಿವಮೊಗ್ಗೆಯಲ್ಲಿ ವಿಷ್ಣುವಿನ ಪ್ರಭಾವಳಿಯಲ್ಲಿ ಚಿತ್ರಿಸಿದ್ದಾನೆ. ಅಲ್ಲಿ ಮರದ ಸುತ್ತ ನಗ್ನ ಸ್ತ್ರೀಯರಿ ರುವುದು ಹಾಗೂ ನಗ್ನವಾಗಿ ನಿಂತಿರುವ ಪುರುಷನೊಬ್ಬನನ್ನು ಚಿತ್ರಿಸಿದೆ.[32]

ಪುರುಷ ಸನ್ಯಾಸಿ ನಗ್ನನಾಗಿರುವುದು ಜೈನಿನಲ್ಲಿ. ದಶಾವತಾರ ಕುರಿತ ಸಾಹಿತ್ಯ, ಶಾಸನ, ಶ್ಲೋಕ ಇತ್ಯಾದಿಗಳಲ್ಲಿ 'ಬೆತ್ತಲೆ ನಿಂತಿಹ' ಬುದ್ಧ ಎಂದು ಹೇಳದೇ ಹೋಗಿದ್ದರೆ ಚಿತ್ರ, ಶಿಲ್ಪಗಳಲ್ಲಿ ದಶಾವತಾರಕ್ಕೆ ಸಂಬಂಧಿಸಿದಂತೆ ಇರುವ ನಗ್ನ ಪುರುಷಮೂರ್ತಿಗಳನ್ನು 'ಜೈನ'ರ ಯಾವುದೋ ತೀರ್ಥಂಕರ ಎಂದೇ ಭ್ರಮಿಸ ಬಹುದಿತ್ತು. ಹೀಗೆ ಭ್ರಮಿಸಿ ಅಥವಾ ಚಿತ್ರಶಿಲ್ಪಗಳಲ್ಲಿಯ 'ನಗ್ನಾವತಾರ'ದಿಂದ ಸುಲಭದಲ್ಲಿ ಬದಲಿಸಬಹುದೆಂಬಂತೆ, ೧೪೭೨ರಲ್ಲಿ ಶಿಶುಮಾಯಣ ಜೈನಪರವಾದ

---

28. ಶ್ರೀ ಹರಿಚರಿತೆ, ಹರಿವಂಶ ಮಹಾಪುರಾಣ (ಸಂ) ಪಂಡರಿನಾಥಾಚಾರ್ಯ ಗಲಗಲಿ, ಹುಬ್ಬಳ್ಳಿ, ಪು. 65-67. ಇಲ್ಲಿ ವಾಮನ ಮತ್ತು ಪರಶುರಾಮರ ಮಧ್ಯ ದತ್ತಾತ್ರೇಯ ಎಂಬ ಅವತಾರ ಕಲ್ಪಿಸಿದೆ. ಪು. 162
    ಪುರಾಣನಾಮ ಚೂಡಾಮಣಿ, ಪು. 258
29. ಶಾಂತಲಿಂಗ ದೇಶಿಕ, 'ಭೈರವೇಶ್ವರ ಕಾವ್ಯದ ಕಥಾಮಣಿ' ಸೂತ್ರ ರತ್ನಾಕರ, ಭಾಗ : 1, ಪು. 31-2
30. ಕನ್ನಡ ಜಾನಪದ ವಿಶ್ವಕೋಶ, ಸಂಪುಟ 1, ಪು. 861
31. ಅದೇ,
32. ಸಂತೋಷಕುಮಾರ ಗುಲ್ವಾಡಿ, 'ಕರ್ನಾಟಕದ ಸಾಂಪ್ರದಾಯಿಕ ಚಿತ್ರಕಲೆ' 'ಉದಯವಾಣಿ' ದೀಪಾವಳಿ ಸಂಚಿಕೆ 1980. ಈ ಚಿತ್ರವನ್ನು ಕೊಟ್ಟ ಲೇಖಕರು ಜಲಕ್ರೀಡೆಯ ದೃಶ್ಯದೆಂದು ತಪ್ಪಾಗಿ ತಿಳಿಸಿದ್ದಾರೆ.

'ತ್ರಿಪುರ ದಹನ ಸಾಂಗತ್ಯ' ರಚಿಸಿ ಹರಿ ನಿರ್ವಾಣವಲ್ಲಿ ನಿಂದು ಹೆಂಡಿರ ವ್ರತ ಕೆಡಿಸಿದ ನೆಂಬ ಮಾತು ಸರಿಯಲ್ಲವೆಂದು ಹೇಳಿ, 'ಖ್ಯಾತಿಪಡೆದ ತ್ರಿಪುರವನು ಜಾತರೂಪನು ತಳೆದಾದೀಶ್ವರ ಸುಟ್ಟ' ಎಂದು ಶಿವನಿಗೂ 'ಜಾತರೂಪು' (ದಿಗಂಬರತ್ವ) ಹತ್ತಿಸಿದ್ದರೂ ಕಥೆಯಲ್ಲಿ ಪತ್ನಿಯರ ಪಾತಿವ್ರತ್ಯ ಭಂಗದ ಪ್ರಸಂಗವೇ ಬರುವುದಿಲ್ಲ.[33] ಭಿಕ್ಷಾಟನಾ ಚರಿತ್ರೆಯಲ್ಲಿಯೂ (೧೫೫೦) ದಶಾವತಾರಗಳನ್ನು ಹೇಳುವಾಗ 'ಪುರಸಾಧಕ' ಎಂದು ಕೃಷ್ಣನನ್ನು ಕರೆದಿದ್ದು ಅನುವಾದಕರು ತ್ರಿಪುರಗಳ ಗೆದ್ದವನು (ಬುದ್ಧಾವತಾರ) ಎಂದು ಅರ್ಥೈಸುತ್ತಾರೆ.[34] ಯಕ್ಷ-ಯಕ್ಷಿಯರಲ್ಲಿ ದಿಗಂಬರತ್ವದ ಕಥೆಯೊಂದು ಬರುತ್ತದೆ. ಸೋಮಶರ್ಮ ಎಂಬ ಬ್ರಾಹ್ಮಣನ ಹೆಂಡತಿ ವೈದೀಕದ ದಿನ ಬ್ರಾಹ್ಮಣನಿಗೆ ಬಡಿಸುವ ಮೊದಲೇ ನಗ್ನ ಮುನಿಗಳಿಗೆ ಬಡಿಸಿ, ಗಂಡನಿಂದ ಶಿಕ್ಷೆಗೆ ಒಳಗಾಗಿ, ಶಾಪದಿಂದ ಊರು ಸುಡಲು ಬ್ರಾಹ್ಮಣರು ಸಾಕ್ಷಾತ್ ನಾರಾಯಣನೇ ನಗ್ನ ಸಾಧುವಿನ ರೂಪದಲ್ಲಿ ಬಂದಿರಬೇಕೆಂದು ಕ್ಷಮೆ ಕೇಳುತ್ತಾರೆ.[35] ಎಂದರೆ ಬ್ರಾಹ್ಮಣರಿಗೂ, ನಾರಾಯಣನ ನಗ್ನ ರೂಪಿನ ಪರಿಚಯ ದಶಾವತಾರದ ಮೂಲಕ ಆಗಿದ್ದಿರಬಹುದು.

---

33. ಶಿಶುಮಾಯಣ, ತ್ರಿಪುರ ದಹನ ಸಾಂಗತ್ಯ, (ಸಂ) ಎಸ್. ಬಸವಾರಾಧ್ಯ, ಕ.ಸಾ.ಪ. 1956, ಪು. ೫

    ನಿರ್ವಾಣ ರೂಪಿಗಲ್ಲವೆ ಮೂರು ಪುರವರ
    ಸರ್ವಥಾ ವಶವಾಗದೆಂದು
    ನಿರ್ವಾಣರೈದೆ ಪೇಳಲು ನಿಂದ ಗಡ ಹರಿ
    ಪೂರ್ವದೊಳೊಗೆದ ರೂಪಿನಲಿ ‖ 31 ‖

    ಲೋಕಪೂಜಿತನಾದ ಹರಿ ತ್ರಿಪುರದೊಳುಳ್ಳ
    ನೇಕಪತಿವ್ರತೆಯರನು
    ಶಾಕುಮಾಡಿ ವ್ರತಗಳ ಕೆಡಿಸುವುದು ವಿ
    ವೇಕವೆ ಪೇಳಿ ಕೋವಿದರು ‖ 32 ‖

    ಈ ತೆರನಲ್ಲ ಮಹಾತಿಶಯದೊಳತಿ
    ಖ್ಯಾತಿವಡೆದ ತ್ರಿಪುರವನು
    ಜಾತಿರೂಪನು (ವ) ತಳೇದಾದೀಶ್ವರ ಸುಟ್ಟ
    ಕೌತುಕವನು ಪೇಳುವೆನು ‖ 35 ‖

34. ಗುರುಲಿಂಗವಿಭು ಭಿಕ್ಷಾಟನಾ ಚರಿತೆ (ಅನು) ಬಿ.ವಿ. ಶಿರೂರ, ಕ.ಸಾ.ಪ. 1982 ಸಂ: 3. ಪ 45, ಪು. 72 (ಹಾಡಿ ಹರಿಯು ದಶಾವತಾರಮುಂ ಎಂಬುದಕ್ಕೆ 'ಕಮಲಾಕ್ಷನವತಾರಗಳ' ಎಂಬ ಪಾಠಾಂತರವಿದ್ದು ಅದೂ ಸ್ವೀಕಾರಯೋಗ್ಯವಾಗಿದೆ ಛಂದಸ್ಸಿನಿಂದಲ್ಲ, ವಸ್ತುವಿನಿಂದ)
35. ಹಂಪನಾ ; ಯಕ್ಷ-ಯಕ್ಷಿಯರು, ಪು. 78, (ಕೂಶ್ಮಾಂಡಿನಿ ದೇವಿಯ ಕಥೆ)

ಒಟ್ಟಿನಲ್ಲಿ ಬಾಲಕೃಷ್ಣ ನಗ್ನನಾಗೇ ಇದ್ದುದು ಕೃಷ್ಣನಿಗೂ, ತ್ರಿಪುರ ಸಂಹಾರ ದಲ್ಲಿ ವಿಷ್ಣು ನಗ್ನನಾದುದರಿಂದ ಆತನಿಗೂ, ಜೈನರಲ್ಲಿ ಸನ್ಯಾಸಿಗಳು ನಗ್ನರಾಗೇ ಇರುವುದರಿಂದ ಅವರ ಮೂಲಕವೂ ವಿಷ್ಣುವಿನ ಅವತಾರವೊಂದಕ್ಕೆ ನಗ್ನತ್ವ ತರಲಾಯಿತೆಂದು ಭಾವಿಸಬಹುದು. ಇಷ್ಟಾದರೂ ಅದು 'ಬುದ್ಧ' ನೇ ಏಕಾಯಿ ತೆಂಬ ಪ್ರಶ್ನೆ ಉಳಿಯುತ್ತದೆ. ದಾವಣಗೆರೆಯ ಕ್ರಿ. ಶ. ೫೩೪ ರ ತಾಮ್ರ ಪಟದಲ್ಲಿ 'ಆಜೀವಿಕ' ಎಂದರೆ 'ಜೈನ ಸನ್ಯಾಸಿ' ಎಂದಂತೆ ಬೌದ್ಧ ಭಿಕ್ಷು ಎಂದೂ ಅರ್ಥೈಸಲಾಗಿದೆ.[36] ಸಿದ್ಧಾಯತನಕ್ಕೆ ದಾನವನ್ನು ಉಲ್ಲೇಖಿಸುವ ಶಾಸನವೊಂದು ಪ್ರಸ್ತಾಪಿಸುವ 'ಸರ್ವಜ್ಞ' ಎನ್ನುವುದು ಬೌದ್ಧ ಮತ್ತು ಜೈನ ಆಚಾರ್ಯರನ್ನು ಸೂಚಿಸುತ್ತದೆ.[37] 'ಜಿನ' ಎಂಬುದು ಜಿತೇಂದ್ರಿಯ (Conqueror of passion) ಎಂಬುದಾಗಿ 'ಬುದ್ಧ'ನಿಗೆ ಬಳಸಿದ್ದು ಬೌದ್ಧ ಹಾಗೂ ಜೈನ ಪರಸ್ಪರ ಸಂಬಂಧಿ ಎಂಬುದಕ್ಕೆ[38] (ಜಿನನಾಥ, ಅಜಿತನ, ಜಿನಸೇನಾಚಾರ್ಯ ಇತ್ಯಾದಿ). ಹಲವಾರು ಉದಾಹರಣೆಗಳು. ಹಲವಾರು ಸಾಮ್ಯಗಳು ಜೈನ—ಬೌದ್ಧದಲ್ಲಿದ್ದು ಇವುಗಳಿಂದಾಗಿ 'ಜೈನ ಬೌದ್ಧರಿಗೆ ವ್ಯತ್ಯಾಸ ಮಾಡದ ಗೊಂದಲ ಅಲ್ಲಲ್ಲಿದೆ' ಎಂಬ ಅಭಿಪ್ರಾಯ ವನ್ನು ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರು ತಾಳಿರುವರಲ್ಲದೆ.[39] ಮೆಕೆಂಝಿಯ (೧೮೦೭) ಜೈನ ಧರ್ಮವನ್ನು ಕುರಿತಾದ ಬರಹಗಳು ಆಗಿನ ವಿದ್ವಾಂಸರ ಗಮನ ವನ್ನು ಸೆಳೆದವೆಂದೂ, ಬೌದ್ಧ ಮತ್ತು ಜೈನ ಧರ್ಮಗಳು ಬೇರೆ ಎಂಬ ಸ್ಪಷ್ಟ ಕಲ್ಪನೆಯು ಆ ಹಿಂದಿನವರಿಗೆ ಇರಲಿಲ್ಲವೆಂದೂ ಶ್ರೀನಿವಾಸ ಹಾವನೂರ ಅವರು ತಿಳಿಸುತ್ತಾರೆ.[40] ಕ್ಲೆಮೆನ್ ಆಲೆಕ್ಸಾಂಡ್ರಿನಸ್ ಎಂಬಾತ ಬೌದ್ಧ ಶ್ರಮಣರು ಇಡೀ ಜೀವಿತವೆಲ್ಲ ಬೆತ್ತಲೆ ತಿರುಗುತ್ತಾರೆ ಎಂದು ಕ್ರಿ. ಶ. ೨೦೦ರಲ್ಲಿ ಹೇಳಿದ್ದರೆ[41], ಬೌದ್ಧ ಮತೀಯನೇ ಆಗಿದ್ದ ಹುಯೆನ್—ತ್ಸಾಂಗ್, '(ಕಂಚಿಯಲ್ಲಿ) ಹತ್ತು ಸಾವಿರ ಭಿಕ್ಷುಗಳು ನೂರಾರು ಸಂಘಾರಾಮುಗಳಲ್ಲಿ ವಾಸಿಸುತ್ತಾರೆ. ಎಂಬತ್ತು ದೇವಸ್ಥಾನಗಳಿವೆ. ಅವುಗಳಲ್ಲಿ ದಿಗಂಬರ ದೇವಸ್ಥಾನಗಳೇ ಹೆಚ್ಚು' ಎಂದು

---

36. ಎಂ. ಚಿದಾನಂದ ಮೂರ್ತಿ, ಕ. ಶಾ. ಸಂ. ಅ. ಪೂರ್ವೋಕ್ತ; ಪು. 112—3
37. MAR 1933, pg 116
38. Sarat Chandra Das, Accounts of Painting (Quot) B. N. Goswamy; A. L. Dhamen, An Early Document of Indian Art, pg 112 (Refer also Foot Note 22 here)
39. ಟಿ. ವಿ. ವೆಂಕಟಾಚಲ ಶಾಸ್ತ್ರಿ, 'ಬೌದ್ಧ ಧರ್ಮ ಮತ್ತು ಕನ್ನಡ ಸಾಹಿತ್ಯ', ಹರತಿಸಿರಿ; ಪು. 127.
40. ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, 1974; ಪು. 137
41 ಎಚ್.ಎಲ್. ನಾಗೇಗೌಡ, ಪ್ರವಾಸಿ ಕಂಡ ಇಂಡಿಯಾ ಸಂಪುಟ; 1 ಪು. 129

ಹೇಳುತ್ತಾನೆ.[42] ಆದರೆ ಬೌದ್ಧರಲ್ಲಿ ದಿಗಂಬರರು ಇದ್ದಂತೆ ತಿಳಿದು ಬರುವುದಿಲ್ಲವಾದ್ದರಿಂದ ಇದನ್ನು ಹೇಗೆ ಅರ್ಥೈಸಬೇಕೊ ತಿಳಿಯದು. ಬೌದ್ಧ ರಾಮಾಯಣದಲ್ಲಿ ರಾಮ ಬುದ್ಧನ ಹಿಂದಿನ ಒಂದು ಅವತಾರ. ಬೌದ್ಧ ಕತೆಗಳಲ್ಲಿ ರಾಮಾಯಣದ ಪ್ರಸಂಗವಿರುವಂತೆ[43] ಬಳ್ಳಿಗಾವೆಯ ತಾರಾಭಗವತಿಯ ಶಾಸನದಲ್ಲಿ ಆಕೆಯೊಂದಿಗೆ ಕೇಶವದೇವರ ಹೆಸರೂ ಇದೆ. ತಾರಾಭಗವತಿಯು ಬೌದ್ಧರು ಹಿಂದುಗಳಿಂದ ಸ್ವೀಕರಿಸಿದ ಒಬ್ಬ ದೇವತೆ.[44] ಜೈನರಾಗಲಿ, ಬೌದ್ಧರಾಗಲೀ ವಿಷ್ಣುವಿನ ಅವತಾರಗಳಲ್ಲಿ ಒಂದಾದ 'ಬೆತ್ತಲೆನಿಂದಿಹ' ಮೂರ್ತಿಯನ್ನು ಸ್ವೀಕರಿಸಿ, ದೇವಾಲಯ ಇತ್ಯಾದಿಗಳಲ್ಲಿ ಶಿಲ್ಪವಾಗಿ ಇಲ್ಲವೆ ಚಿತ್ರವಾಗಿ ರಚಿಸಿದಂತೆ ಕರ್ನಾಟಕದಲ್ಲಿ ಕಂಡು ಬರುವುದಿಲ್ಲ. ವೈಷ್ಣವ ಅಥವ ಶೈವ ದೇವಾಲಯಗಳಲ್ಲಿ ದಶಾವತಾರದ ಚಿತ್ರ ಶಿಲ್ಪಗಳಲ್ಲಿ—ಅದೂ ಒಂದು ಪ್ರಬೇಧದಲ್ಲಿ 'ಬೆತ್ತಲೆ ನಿಂದಿಹ' ಮೂರ್ತಿ ಅಥವ ಚಿತ್ರವನ್ನು ಕಾಣಬಹುದು. ಮಥುರದ ಬುದ್ಧನ ಶಿಲ್ಪವೊಂದರಲ್ಲಿ ಆತನ ಮೈಮೇಲೆ ತೆಳುವಾದ ಬಟ್ಟೆಯಿದ್ದರೂ ಒಳಗಿನ ಅಂಗಗಳು ಸ್ಪಷ್ಟವಾಗಿ ಕಾಣುವಂತೆ ಚಿತ್ರಿಸಿದೆ.[45]

**ಕೃತಿ ರಚನೆಗಳಲ್ಲಿ**

ಶಿಲ್ಪಗಳಲ್ಲಿ ಶಿಲೆ, ಅಮೃತಶಿಲೆ, ಲೋಹ ಹಾಗೂ ಗಾರೆಯ ಕೆಲವು ಶಿಲ್ಪಗಳು ಕರ್ನಾಟಕದಲ್ಲಿ ದೊರೆತಿದ್ದು ಕಲೆಯ ದೃಷ್ಟಿಯಿಂದ ಹೆಚ್ಚು ವಿಭಿನ್ನವಾಗಿಲ್ಲವೆಂದು ಹೇಳಬಹುದು. ಅ. ಸುಂದರ ಅವರಿಗೆ ಹಂಪೆಯಲ್ಲಿ ದೊರೆತ ಜೇಡಿ ಮಣ್ಣಿನ ಗೊಂಬೆ ಬುದ್ಧ ಅಥವ ಬೋಧಿಸತ್ವನದಾಗಿದ್ದು ಅಧೋವಸ್ತ್ರ ನೆರಗೆಯಾಗಿ ಮಂಡಿಯ ವರೆಗೆ ಇಳಿಬಿದ್ದಿರುವುದು. ಅದು ಯೋಧನದಾಗಿ ಕಂಡುಬರದೆ ಗಾಂಧಾರ ವಿಗ್ರಹಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಬೋಧಿಸತ್ವನದಂತಿದ್ದು, ಗ್ರೀಕೋ ರೋಮನ್ ಶೈಲಿಯಲ್ಲಿರುವ ಇದು ಸ್ಥಳೀಯವಲ್ಲವೆಂದೂ ಗಾಂಧಾರದಿಂದ ತಂದಿರಬೇಕೆಂದು ಊಹಿಸಲಾಗಿದೆ.[46] ಅಂತೆಯೇ ಹಂಪೆಯಲ್ಲಿ ದೊರೆತ ಅಮೃತ ಶಿಲೆಯ ಆಯಕ ಸ್ತಂಭದಲ್ಲಿ ಹೂಬಳ್ಳಿಯಿಂದ ಅಲಂಕರಿಸಿದ ಪೀಠದಲ್ಲಿ ಬುದ್ಧ ಕುಳಿತಿದ್ದು ಭಕ್ತರು ಅಚೆ ಈಚೆ ಕುಳಿತು ಪೂಜಿಸುತಿದ್ದಾರೆ. ಇವುಗಳನ್ನು ಗುಲ್ಬರ್ಗ ಪ್ರದೇಶದಿಂದ ತಂದಿರಬೇಕೆಂಬ ಬಿ. ನರಸಿಂಹಯ್ಯ ಅವರ ಊಹೆ ಸರಿಯಲ್ಲವೆಂದೂ ಆದಿ ಮಾನವ

42. ಅದೇ ; ಪು. 249
43. ತಾಳ್ತಜೆ ವಸಂತ ಕುಮಾರ್, ಪೂರ್ವೋಕ್ತ : ಪು. 137
44. E. C, VII SK 170, 1055 A. D. 1067 A. D.
    C. Hayavadana Rao, Mysore Gazetteer, II : i, pg 150
45. Charles Fabri, Discovering Indian Sculpture, pg 34—35
46. ಅ. ಸುಂದರ, 'ಹಂಪೆಯಲ್ಲಿ ದೊರೆತಿರುವ ...' ಇತಿಹಾಸ ದರ್ಶನ; 1990 ಪು. 30

ನಿಂದ ಹಿಡಿದು ವಿಜಯನಗರ ಕಾಲದವರೆಗೂ ಅಲ್ಲಿ ಮಾನವ ಇದ್ದುದರಿಂದ ಬೌದ್ಧ ಧರ್ಮವೂ ಇದ್ದಿರಬಹುದೆಂದು ಎಂ. ವಿ. ವಿಶ್ವೇಶ್ವರ ಅವರು ವಾದಿಸುತ್ತಾರೆ.[47] ಆದರೂ ಇವುಗಳು ರಚನೆಯ ದೃಷ್ಟಿಯಿಂದ ಸ್ಥಳೀಯವಾಗಿ ಕಂಡುಬರುವುದಿಲ್ಲ. ಬುದ್ಧನ ಶಿಲ್ಪ ರಚನೆಯೆ ಗ್ರೀಕ್‌ನಿಂದ ಬಂದದ್ದು.[48] ಅಲ್ಲಿಂದ ಸಾಂಚಿಯ ಮೂಲಕ ನಾಗಾರ್ಜುನ ಕೊಂಡಕ್ಕೆ ಬಂದದ್ದು.[49] ಐಹೊಳೆಯ ಬೌದ್ಧ ಚೈತ್ಯದ ಬಾಗಿಲುಗಳ ಮೇಲೆ ಚಿಕ್ಕ ಚಿಕ್ಕ ಅಂಕಣಗಳಲ್ಲಿ ಬುದ್ಧನ ಜೀವನವನ್ನು ನಿರ್ದೇಶಿಸುವ ಚಿಕ್ಕ ಅಳತೆಯ ಶಿಲ್ಪಗಳಲ್ಲಿ ಕಂಡುಬರುವ ದುಂಡುತನ, ವಸ್ತ್ರವಿರುವ ರೀತಿ ಇತ್ಯಾದಿಗಳು–ಕೆಂಪು ನುಣುಪುಕಲ್ಲಿನಲ್ಲಿದ್ದು ಕಾರ್ಲ ಇತ್ಯಾದಿ ಗುಹಾಲಯಗಳ ಶಿಲ್ಪವನ್ನು ಬಹಳ ವಾಗಿ ಹೋಲುತ್ತವೆ. ಐಹೊಳೆಯಲ್ಲಿಯೇ ಗರ್ಭಗುಡಿಯಲ್ಲಿ ಶಿರೋರಹಿತ ಮೂರ್ತಿಯಿದ್ದು ಅದು ಬುದ್ಧನ ಯಾವುದೋ ಒಂದು ಪ್ರಬೇಧವಿದ್ದಿರಬಹುದು. ಮಾಳಿಗೆಯ ಮೇಲಿನ ಹೊರ ಹಜಾರದ ಮೇಲ್ಛಾವಣಿಯಲ್ಲಿ ಮುಕ್ಕೊಡೆಗಳ ಕೆಳಗೆ ಧ್ಯಾನಿ ಬುದ್ಧನ ಉಬ್ಬು ಶಿಲ್ಪವಿದೆ.[50] ಉಳಿದಂತೆ ಬುದ್ಧನದೇ ಮೂರ್ತಿ ದೊರೆಯು ವುದು. ಕದ್ರಿಯಲ್ಲಿರುವ ಹತ್ತನೇ ಶತಮಾನದ ಎರಡು ಕೈಗಳ ಧ್ಯಾನಿ ಬುದ್ಧನ ಲೋಹದ ಮೂರ್ತಿಯೊಂದಿಗೆ ನಾಲ್ಕು ಕೈಗಳ ಅದೇ ಕಾಲದ ಅವಲೋಕಿತೇಶ್ವರ ಹಾಗೂ ಲೋಕೇಶ್ವರರ ಲೋಹದ ಮೂರ್ತಿಗಳನ್ನೂ ಕಾಣಬಹುದು. ಬುದ್ಧ ಸರಳವಾಗಿದ್ದು ಉತ್ತರೀಯವನ್ನು ಬೆನ್ನಮೇಲೆ ಮಡಿಸಿ ಹಾಕಿ ಕೊಂಡಂತಿದ್ದರೆ ! ಕಿರೀಟಧಾರಿ ಅವಲೋಕಿತೇಶ್ವರ ಹಾರ, ತೋಳಬಂದಿ, ಬಳೆ, ಡಾಬು ಇತ್ಯಾದಿ ಹಲವಾರು ಆಭರಣಗಳಿಂದ ಅಲಂಕೃತನಾಗಿದ್ದಾನೆ. ಹಾಗೂ ಬುದ್ಧನ ಮೂರ್ತಿ ಗಳು ಬಬ್ರುವಾಡ (ಅಂಕೋಲ ಬಳಿಯ) ಬಿದರಹಳ್ಳಿ, ಮಲಾಜಿ (ಸಿರ್ಸಿ ತಾಲ್ಲೂಕು) ಹಾಗೂ ಬೆಡಸಗಾವ್ (ಮುಂಡಗೋಡ ತಾಲ್ಲೂಕು)ಗಳಲ್ಲಿಯೂ ಸಿಕ್ಕಿವೆಯೆಂದೂ ಸನ್ನತಿಯ ಈಗಿನ ಚಂದ್ರಲಾಂಬ ದೇವಾಲಯವೇ ಹಿಂದೆ ಬೌದ್ಧ ದೇವಾಲಯವಾಗಿರ ಬೇಕೆಂದೂ ತಿಳಿದು ಬರುತ್ತದೆ.[51] ವಡಗಾಂವ್ ಮಾಧವಪುರದ ಗುಂಡನೆಯ

---

47. M. V. Visweswara, Opp, Cit.
48. Vidya Dehejia, 'Greek Influence on Buddhist Art' Looking again at Indian Art, Delhi 178, pg. 38—45
49. B. K. Gururaja Rao, Opp. Cit. Pg. 259
50. ಪರಿವೀಕ್ಷಣೆ: ಐಹೊಳೆ-26. 12-1987
51. Suryanath U Kamath, 'Buddhist tradition once prevailed in parts of Karnataka', March of Karnatnka, April, 1991, pg 14

ಮುಖದ ಉದ್ದನೆಯ ತ್ರಿಕೋಣಾಕಾರದ ಕಿರೀಟದ ಗಾರೆಯ ಶಿರೋಭಾಗ ಬುದ್ಧನ ದೆಂದು ಹೇಳಲಾಗಿದೆ.[52]

ಗಾರೆ ಹಾಗೂ ಸುಡಾವೆ ಮಣ್ಣಿನ (Terracotta) ಶಿಲ್ಪಗಳು ಸನ್ನತಿ ಹಾಗೂ ಬನವಾಸಿಗಳಲ್ಲಿ ಸುಮಾರು ಸಂಖ್ಯೆಯಲ್ಲಿ ದೊರೆತಿವೆ. ಒಳಗೆ ಟೊಳ್ಳಾಗಿದ್ದು ಹೊರಗೆ ಹೊಳೆಯುವ ಕೆಂಪು ಬಣ್ಣದ ಟೆರಾಕೋಟಾ ಶಿಲ್ಪಗಳನ್ನು ಅಚ್ಚಿನಿಂದ (Mould) ಮಾಡಿರಬೇಕೆಂದು ಊಹಿಸಲಾಗಿದೆ. ವಿವಿಧ ಭಂಗಿಯ ಸ್ತ್ರೀ ವಿಗ್ರಹಗಳು, ಅವುಗಳ ಆಭರಣ ಕೇಶ ವಿನ್ಯಾಸಗಳು ವೈವಿಧ್ಯಮಯವಾಗಿದೆ. ಬೆರಳುಗಳ ವಿವರ ಸ್ಪಷ್ಟವಾಗಿ ಮೂಡಿಲ್ಲ. ಕೆಲವು ಕುದುರೆ ಇತ್ಯಾದಿ ಪ್ರಾಣಿಗಳು, ಯಕ್ಷ-ಯಕ್ಷಿಯರ ಮೂರ್ತಿ ಗಳೂ ದೊರೆತಿವೆ. ಬನವಾಸಿಯಲ್ಲಿ ಕಲ್ಲು ಹಲಗೆಯ ಮೇಲಿನ ನಾಗಶಿಲ್ಪ, ಶಿಲ್ಪ ಕಲೆಯ ದೃಷ್ಟಿಯಿಂದ ಸುಂದರ ಮತ್ತು ಪ್ರಮಾಣಬದ್ಧವಾಗಿದೆ. ಇದನ್ನು ಹೋಲುವ ಹಲವಾರು ನಾಗಗಳ ಪಟ್ಟಿಕೆಗಳು ಸನ್ನತಿಯಲ್ಲಿಯೂ ದೊರಕಿವೆ. ಸನ್ನತಿ ಯಲ್ಲಿ ಆ ಪ್ರದೇಶದಲ್ಲಿ ದೊರಕುವ ಕೆಳದರ್ಜೆಯ ಅಮೃತಶಿಲೆಯ ಫಲಕಗಳಲ್ಲಿ ಬುದ್ಧನ ಜನನ, ಆತನ ಸಿಂಹಾಸನ, ಬುದ್ಧಪಾದ, ಬೋಧಿವೃಕ್ಷ ಇತ್ಯಾದಿಗಳನ್ನು ರೆಕ್ಕೆಯುಳ್ಳ ಕುದುರೆ ಅದರ ಹಿಂದೆ ಶಕ್ತಿಶಾಲಿ ಕೋಣಗಳು ಓಡುತ್ತಿರುವಂತೆ ಇರುವ ಫಲಕದಲ್ಲಿ ಎತ್ತಿದ ಕೊಂಬು ಬಾಲಗಳು, ಅಂಗಾಂಗ ಸೌಷ್ಟವ, ಗಾಂಭೀರ್ಯ ಎಲ್ಲವೂ ಸೊಗಸಾಗಿದೆ. ಗುಲ್ಬರ್ಗ ಪ್ರದೇಶದಲ್ಲಿ ಕೆಲವು ಛಾಯಾ ಕಂಬಗಳು ದೊರೆತಿದ್ದು ಅವುಗಳ ಮೇಲೆ ಸಾಮಾನ್ಯವಾಗಿ ಎತ್ತಿನ ಗಾಡಿಯ ಮುಂದೆ ವಿಶ್ರಮಿಸಿ ಕೊಳ್ಳುತ್ತಿರುವ ಎತ್ತುಗಳ ಚಿತ್ರವಿದ್ದು ಅಲ್ಲಿಗೆ ಜೀವನ ಪಯಣ ಮುಗಿಯಿತೆಂಬ ಸಂಕೇತಗಳಂತೆ ತೋರುತ್ತದೆ (ಆ ಸ್ಮಾರಕ ಶಿಲೆಗೆ ಕಾರಣನಾದವನ) ಕೆಲವು ಕಂಬ ಗಳಲ್ಲಿ (ಪ್ರಾಯಶಃ ರಾಜ ಇತ್ಯಾದಿ ಪ್ರಮುಖರಿಗೆ ಹಾಕಿಸಿದರೆ) ರಾಜಕಾರಣಿ ಕುಳಿತಂತೆ, ಚಾಮರಧಾರಿಣಿ ನಿಂತಂತೆ ಇಲ್ಲವೆ ಸ್ತೂಪದ ಆಯಕ ಕಂಬಗಳ ಮೇಲೆ ಉಪ್ಪರಿಗೆಯುಳ್ಳ ದೊಡ್ಡ ಮನೆಯಲ್ಲಿ ದಂಪತಿಗಳು ಸಂಭಾಷಿಸುತ್ತಿರುವಂತೆ ಉಬ್ಬು ಶಿಲ್ಪಗಳು ಇರುವುದುಂಟು. ಈ ಫಲಕಗಳು ಶಾತವಾಹನರ ಕಾಲದ್ದಾಗಿದ್ದು ಕೆಲವು ಬೌದ್ಧ ಚಿಹ್ನೆಗಳನ್ನು ಹೊಂದಿರುವುದರಿಂದ ಬೌದ್ಧ ಕಲೆಯೇ ಆಗುತ್ತದೆ.[53]

ಬುದ್ಧನೆ ತನ್ನ ಚಿತ್ರ ರಚಿಸಲು ಹೇಳಿದ ಹಾಗೂ ತಾನಿಲ್ಲದಾಗ ಪೂಜಿಸಲು

---

52. ಅ. ಸುಂದರ, 'ವಡಗಾಂವ್ ಮಾಧವಪುರದಲ್ಲಿ ದೊರೆತ ಮಣ್ಣಿನ ಗೊಂಬೆಗಳು' ಕರ್ನಾಟಕ ಭಾರತಿ, 10 : 2, 1977, ಪು. 61, ಚಿತ್ರ :
53. ವಿವರಗಳಿಗೆ ಎಚ್.ಆರ್. ರಘುನಾಥಭಟ್, 'ಕರ್ನಾಟಕದಲ್ಲಿ ಶಾತವಾಹನರ ಕಲೆ' ಕರ್ನಾಟಕ ಶಾಸನ ಕಲೆ, 1977, ಪು. 93-104

ತನ್ನ ಗಂಧದ ಪ್ರತಿಮೆ ಪೂಜಿಸಿರಿ ಎಂದು ಹೇಳಿದನೆಂದು ಇರುವ ಉಲ್ಲೇಖ ಆತನ ನಂತರ ಕೆಲಕಾಲವಾದ ಮೇಲೆ ಹುಟ್ಟಿಕೊಂಡಿದ್ದಿರಬಹುದಾದರೂ ಬೌದ್ಧ ಚಿತ್ರ ಹಾಗೂ ಶಿಲ್ಪಗಳು ಜೊತೆ ಜೊತೆಯಾಗೇ ಬಳಕೆಗೆ ಬಂದುವು ಎಂದು ಈ ಉಲ್ಲೇಖ ದಿಂದ ಸ್ಪಷ್ಟವಾಗುತ್ತದೆ. ಇಂದು ಬೌದ್ಧಪರವಾದ ಚಿತ್ರಗಳು ದೊರಕುವುದು ಅಜಂತೆಯಲ್ಲಿ. ಅಲ್ಲಿಯ ಒಂದನೆಯ ಗುಹೆಯಲ್ಲಿ ಪುಲಕೇಶಿಯ ಚಿತ್ರವಿರುವುದರಿಂದ ಅದರ ಅಂತಿಮ ಕಾಲದಲ್ಲಿ ಕರ್ನಾಟಕದೊಂದಿಗೆ ಸಂಬಂಧವಿರಿಸಿಕೊಂಡಿರಬಹುದು. ಸನ್ನತಿ ಬನವಾಸಿಗಳ ನಂತರ ಶಿಲ್ಪದಲ್ಲಿ ಹಾಗೂ ಅಜಂತೆಯ ನಂತರ ಚಿತ್ರಗಳಲ್ಲಿ ಬುದ್ಧನ ರೂಪ ದೊರೆಯುವುದು ದಶಾವತಾರಗಳಲ್ಲಿ. ಈ ರೀತಿ ಬುದ್ಧನನ್ನು ದಶಾವತಾರಗಳಲ್ಲಿ ಸೇರಿಸುವ ಪದ್ಧತಿ ಏಳನೆಯ ಶತಮಾನದ ಪಲ್ಲವರ ಶಾಸನಗಳಲ್ಲಿ ಇದೆಯೆಂದು ತಿಳಿದರೂ ಮುಧೋಳದ ಶಿಲ್ಪಗಳಲ್ಲಿ ಒಂಭತ್ತನೆಯ ಶತಮಾನದಲ್ಲಿ ಕಾಣಿಸಿಕೊಂಡಿದೆಯೆಂದು ಅ. ಸುಂದರ ಅವರು ತಿಳಿಸುತ್ತಾರೆ.[54] ಹನ್ನೊಂದನೆಯ ಶತಮಾನದ ಕಲ್ಯಾಣ ಚಾಳುಕ್ಯರ ಶೈಲಿಯ, ಸತ್ತಿ (ಅಥಣಿ ತಾಲ್ಲೂಕು)ಯ ನರಸಿಂಹ ದೇವಾಲಯದ ವಿಷ್ಣುವಿನ ಪ್ರಭಾವಳಿಯಲ್ಲಿಯೂ 'ಬೌದ್ಧಾವತಾರ'ವಿದೆ.[55] ಹೊಯ್ಸಳರ ೧೧೭೦ರ ಶಾಸನದಲ್ಲಿ ಕರ್ನಾಟಕದಲ್ಲಿ ಮೊದಲ ಬಾರಿಗೆ ಬೌದ್ಧಾವ ತಾರದ ಪ್ರಸ್ತಾಪವಿರುವುದಾಗಿ ತಿಳಿದುಬರುತ್ತದೆ.[56] ಹೊಯ್ಸಳರ ದೇವಾಲಯಗಳಲ್ಲಿ ಹಾಗೂ ಶೃಂಗೇರಿಯ ವಿದ್ಯಾಶಂಕರ ದೇವಾಲಯದಲ್ಲಿ ಬುದ್ಧನ ದೊಡ್ಡ ಪ್ರಮಾಣದ ಶಿಲ್ಪಗಳನ್ನು ಕಾಣಬಹುದು.

ದಶಾವತಾರದಲ್ಲಿ ಬುದ್ಧನ ಬಿತ್ತಿಚಿತ್ರ ಕರ್ನಾಟಕದಲ್ಲಿ ಮೊದಲ ಬಾರಿಗೆ ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿ ಕಂಡುಬರುತ್ತದೆ. ಅದು ತ್ರಿಪುರ ಸಂಹಾರ ದಲ್ಲಿ ವಿಷ್ಣು ಮರದ ಮುಂದೆ ನಿಂತಿರುವಂತೆ ಇಲ್ಲಿಯೂ ದಶಾವತಾರಗಳಲ್ಲಿ ಒಂಭತ್ತ ನೆಯದಾಗಿ ಚಿತ್ರಿಸಿದೆ.[57] ಉಳಿದಂತೆ ತುಮಕೂರು ಬಳಿಯ ಮಿಂಚುಕಲ್ಲು, ಗೊಲ್ಲಹಳ್ಳಿ, ಕೊಳ್ಳೆಗಾಲದ ಮಂಟಪ ಇತ್ಯಾದಿ ಕೆಲವು ಕಡೆಗಳಲ್ಲಿ 'ಬೌದ್ಧಾವತಾರ' ಕಾಣಬಹುದು.

ಕರ್ನಾಟಕದಲ್ಲಿ ಬೌದ್ಧಧರ್ಮದಂತೆಯೆ ಅವರ ಚಿತ್ರ, ಶಿಲ್ಪಗಳೂ ಕಡಿಮೆ

---

54. (ಉದ್ಧೃತ) ವಿದ್ಯಾ ಮರಳಿಹಳ್ಳಿ, 'ಸೋಮನಾಥಪುರದ ಕೇಶವ ದೇವಾಲಯದ ಪ್ರಾಕಾರ ದೇವತೆಗಳು'—ಒಂದು ವಿವೇಚನೆ, ಮಾನವಿಕ ಭಾರತಿ 2 : 1, ಜನವರಿ 1978

55. ಪರಿವೀಕ್ಷಣೆ, ಸತ್ತಿ, 6-10-1986

56. ತಾಳ್ತಜೆ ವಸಂತಕುಮಾರ್, ಪೂರ್ವೋಕ್ತ, ಪು. 149

57. ಪರಿವೀಕ್ಷಣೆ, ಹಂಪೆ : 25-12-1987

ಪ್ರಮಾಣದಲ್ಲಿ ದೊರೆಯುತ್ತದೆ. ದೊರೆತಿರುವುದೂ ಸಾಕಷ್ಟು ಭಿನ್ನವಾಗಿದೆ. ಸನ್ನತಿ, ಬನವಾಸಿಗಳಲ್ಲಿಯ ಟೆರ್ರಾಕೋಟ ಬೊಂಬೆಗಳು, ಕದ್ರಿಯ ಲೋಹದ ಶಿಲ್ಪಕಲೆಯ ದೃಷ್ಟಿಯಿಂದ ಉಲ್ಲೇಖನೀಯ. ಬಬ್ರುವಾಡ, ಹೈಗುಂದಗಳಲ್ಲಿರುವ ಮೂರ್ತಿಗಳು ಬುದ್ಧನದೇ ಆಗಿರಬಹುದಾದರೂ ನಮಗೆ ಪರಿಚಿತವಾಗಿರುವ ಮೂರ್ತಿಗಳನ್ನು ಹೋಲುವುದಿಲ್ಲ. ದಶಾವತಾರಗಳಲ್ಲಿ ಬುದ್ಧನಿಗೂ ಸ್ಥಾನ ಸಿಕ್ಕಿದ್ದು, ನಗ್ನರೂಪಿನಲ್ಲಾದರೂ ಆತನನ್ನು ಇನ್ನೊಮ್ಮೆ ಕಾಣಲು ಅವಕಾಶವಾಯಿತು. ಆದರಲ್ಲೂ ಎರಡು ಪ್ರಭೇದವಿದೆಯಾದರೂ ಬಲರಾಮನಿಗಿಂತ ಬುದ್ಧನನ್ನೇ ಪ್ರಚುರ ಪಡಿಸಿರುವುದು ಶಿಲ್ಪಗಳಲ್ಲಿ ಅಧಿಕವಾಗಿ ಕಂಡುಬರುತ್ತದೆ. ಪ್ರಭೇದಗಳು ಪ್ರಾದೇಶಿಕ ಭಿನ್ನತೆಗಿಂತ ವೈಷ್ಣವರ ಒಂದು ಉಪಜಾತಿಯ ಭಿನ್ನತೆಯಾಗಿ ಕಂಡುಬರುತ್ತದೆ. ಶೈವರು ಬುದ್ಧನನ್ನೇ ಒಪ್ಪಿಕೊಂಡಿದ್ದಾರೆ. ದಶಾವತಾರಗಳಲ್ಲಿ ಈ ಪ್ರಭೇದಗಳನ್ನು (ಹರಿವಂಶದಲ್ಲಿ ಈ ಎರಡರ ಬದಲು ದತ್ತಾತ್ರೇಯ ಇರುವುದು ಇನ್ನೊಂದು ಪ್ರಭೇದ ಆಗುತ್ತದೆ) ವ್ಯಾಪಕವಾಗಿ ಗುರುತಿಸಿದರೆ ಇನ್ನೂ ಹೆಚ್ಚಿನ ಅಂಶ ತಿಳಿದುಬರಬಹುದು.

○

ಡಾ|| ರು.ಮ.ಷಡಕ್ಷರಯ್ಯ

# ಬಸವಕಲ್ಯಾಣದ ಕೋಟೆ

ಬೀದರ ಜಿಲ್ಲೆಯ ಬಸವಕಲ್ಯಾಣ ನಗರದ ಉತ್ತರಕ್ಕೆ ಬೃಹದಾಕಾರದ ಒಂದು ಪ್ರಾಚೀನ ಕೋಟೆಯಿದೆ. ಈ ಕೋಟೆಯ ಇತಿಹಾಸದ ಬಗೆಗೆ ಡಾ.ಎಸ್.ಕೆ ಜೋಶಿ,[1] ಡಾ. ಶಂಕರ ಡಿ. ಮೂಗಿ[2] ಇವರ ಕೃತಿಗಳು ಮತ್ತು ಬೀದರ ಡಿಸ್ಟ್ರಿಕ್ ಗೆಜೆಟಿಯರ್[3]ಗಳಲ್ಲಿ ಮುಖ್ಯವಾಗಿ ಸ್ಥೂಲ ವಿವರಗಳಿವೆ.

**ಸಾಹಿತ್ಯ :**

ಚಾಲುಕ್ಯ ಅರಸ ಆರನೇ ವಿಕ್ರಮಾದಿತ್ಯನ ಆಸ್ಥಾನ ಕವಿಯಾಗಿದ್ದ ಕಾಶ್ಮೀರದ ಬಿಲ್ಲಣನು ಕಲ್ಯಾಣಪುರದ ಕೋಟೆಯನ್ನು ಪ್ರತಿಯೊಂದು ಗಳಿಗೆಯಲ್ಲೂ ಎಚ್ಚರದಿಂದ ಕಾಯಲಾಗುತ್ತಿತ್ತು ಎಂದಿದ್ದಾನೆ[4] ಬಿಲ್ಲಣನು ತನ್ನ ಕೃತಿಯ ಎರಡನೇ ಸರ್ಗದಲ್ಲಿ ಕಲ್ಯಾಣಪುರವನ್ನು ಆಹವಮಲ್ಲನ ಮಗ ಇಮ್ಮಡಿ ಸೋಮೇಶ್ವರ ರಾಜಧಾನಿಯನ್ನಾಗಿ ಮಾಡಿಕೊಂಡನು. ಆವನು ತನ್ನ ಉತ್ತರಾಪಥದ ದಿಗ್ವಿಜಯದ ನಂತರ ಕೋಟೆಯನ್ನು ಕಟ್ಟಿಸಿದನು. ಈ ರಾಜಧಾನಿ ಕೋಟೆಯನ್ನು ಶತ್ರುಗಳು ಭೇಧಿಸಲು ಅಸಾಧ್ಯವಾಗಿತ್ತೆಂದು ಹೇಳಿರುವನು[5] ಇದೇ ರೀತಿ ಈ ಅರಸನ ಇನ್ನೊಬ್ಬ ಕವಿಯಾಗಿದ್ದ

1. ಎಸ್. ಕೆ. ಜೋಶಿ : ಡಿಫೆನ್ಸ್ ಆರ್ಕಿಟೆಕ್ಚರ್ ಇನ್ ಅರ್ಲಿ ಕರ್ನಾಟಕ, ದೆಹಲಿ
2. ಡಾ. ಶಂಕರ ಡಿ. ಮೂಗಿ : ಬಸವಕಲ್ಯಾಣ ತಾಲೂಕು ದರ್ಶನ, ಐ. ಬಿ. ಹೆಚ್. ಪ್ರಕಾಶನ, ಪು. 6-9, ಬೆಂಗಳೂರು.
3. ಬೀದರ ಡಿಸ್ಟ್ರಿಕ್ಟ್ ಗೆಜೆಟಿಯರ್ 1977, ಬೆಂಗಳೂರು
4. ಬಿಲ್ಹಣ : ವಿಕ್ರಮಾಂಕದೇವ ಚರಿತೆ (ಮೊದಲಿನಿಂದ ಹದಿನೆಂಟನೆಯ ಸಿಂಟ್ರೊವರೆಗೆ)
5. ಅದೇ.

ವಿಜ್ಞಾನೇಶ್ವರನು[6] ಭೂಮಿಯ ಮೇಲೆ ಕಲ್ಯಾಣದಂಥ ಮತ್ತೊಂದು ರಾಜಧಾನಿ ನಗರ ಹಿಂದೆಯೂ ಇರಲಿಲ್ಲ. ಮುಂದೆಯೂ ಹುಟ್ಟುವುದಿಲ್ಲ. ವಿಕ್ರಮಾದಿತ್ಯನಂಥ ಚಕ್ರವರ್ತಿ ಪ್ರಪಂಚದಲ್ಲಿ ಬೇರೆ ಯಾರೂ ಇಲ್ಲ ಎಂದಿದ್ದಾನೆ. ಈ ವಿಜ್ಞಾನೇಶ್ವರನು ಬೀದರ ಜಿಲ್ಲೆಯ ಭಾಲ್ಕಿ ತಾಲೂಕಿನ ಮಾಸಿಮಾಡಿ ಗ್ರಾಮದವನೆಂಬುದು[7] ಗಮನಾರ್ಹ.

ವಚನ ಸಾಹಿತ್ಯದಲ್ಲಿ ಚೆನ್ನಬಸವಣ್ಣನ[8] ವಚನವೊಂದು ಕಲ್ಯಾಣದ ವರ್ಣನೆಯನ್ನು ನೀಡಿದೆ "ಶ್ರೀಮತ್ ಕಲ್ಯಾಣಪುರವು ಹನ್ನೆರಡು ಯೋಜನ ವಿಸ್ತಾರವುಳ್ಳದ್ದು. ಅದಕ್ಕೆ ಮೂನ್ನೂರರ (೩೦೦) ಛತ್ತು ಬಾಗಿಲುವಾಡಗಳು, ಅವುಗಳಿಗೆ ನೂರೈವತ್ತೈದು (೧೫೫) ಸುವರ್ಣದ ಕೆಲಸ ಮಾಡಿದ ಬಾಗಿಲುಗಳು, ನೂರಹದಿನೈದು (೧೧೫) ಚೋರಕಂಡಿಗಳು, ನೂರಹದಿನೈದು (೧೧೫) ಮೋಳಿಯ ಬಾಗಿಲುಗಳು, ಇಪ್ಪತ್ತು (೨೦) ಬಾಗಿಲುಗಳ ಅಳ್ವೇರಿಯೊಳಗಿರುವುದರಿಂದ ಅವುಗಳಿಗೆ ಬಾಗಿಲುಗಳಿಲ್ಲ. ಈ ಪಟ್ಟಣವನ್ನಾವರಿಸಿರುವ ಕೋಟೆಯ ಉದ್ದ ನಾಲವತ್ತೆಂಟು (೪೮) ಯೋಜನೆ, ಬಾಹತ್ತರ ನಿಯೋಗಿಗಳ, ಸಾಮಂತರ, ಮಂಡಳಿಕರ ಮನೆಗಳು ಲಕ್ಷದಂತೆ, ದ್ವಾದಶ ಯೋಜನದ ಸೂರ್ಯವೀಧಿಗಳು ನೂರಿಪ್ಪತ್ತು (೧೨೦), ಅಂತಹವೇ ನೂರಿಪ್ಪತ್ತು (೧೨೦) ಸೋಮವೀಧಿಗಳು, ಅಸಂಖ್ಯಾತವಾದ ಒಳಕೇರಿ, ಹೊರಕೇರಿಗಳು, ಅಲ್ಲಿ ಹಲವಾರು ಶಿವಾಲಯಗಳು, ಅನೇಕ ಸರೋವರಗಳು, "ದಾಸೋಹದ ಮಠಗಳು" ಇದ್ದುವೆಂದು ವರ್ಣಿಸಲಾಗಿದೆ.

ಕಲ್ಯಾಣ ಚಾಲುಕ್ಯ ದೊರೆ ಮುಮ್ಮಡಿ ಸೋಮೇಶ್ವರನ ಮಾನಸೋಲ್ಲಾಸದಿಂದ[9] ಕೋಟೆಯಲ್ಲಿ ಎಷ್ಟು ವಿಧ ಮತ್ತು ಕೋಟೆಯ ಒಳಗೆ ಯಾವ ಯಾವ ವಸ್ತುಗಳು ಸಂಗ್ರಹವಾಗಿರುತ್ತಿದ್ದವು ಎಂಬುದು ತಿಳಿದು ಬರುತ್ತದೆ. ಕೋಟೆಗಳು ಒಂಬತ್ತು ವಿಧವೆಂದು ಮಾನಸೋಲ್ಲಾಸದಲ್ಲಿ ಉಕ್ತವಾಗಿದೆ. ಅವುಗಳು ಜಲದುರ್ಗ, ಗಿರಿದುರ್ಗ, ಪಾಷಾಣದುರ್ಗ, ಇಷ್ಟಿಕ ದುರ್ಗ, ಮೃತ್ತಿಕ ದುರ್ಗ, ಮರುದುರ್ಗ, ವನದುರ್ಗ, ದರದುರ್ಗ ಮತ್ತು ನರದುರ್ಗಗಳೆಂದು ಹೇಳಲಾಗಿದೆ. ಇವುಗಳಲ್ಲಿ ಕಲ್ಯಾಣದ ಕೋಟೆಯು ಪಾಷಾಣದುರ್ಗವಾಗಿರುತ್ತದೆ. ಆರನೇ ವಿಕ್ರಮಾದಿತ್ಯನ

---

6. ಶಾಮರಾವ್ ಎಸ್. ಎಂ. 1913: ಮಿತಾಕ್ಷರ ಆಫ್ ವಿಜ್ಞಾನೇಶ್ವರ ಮತ್ತು ಚಂದ್ರವಸು, ಪು.494 ವಾ 3, ಪು.494, ಅಲಹಾಬಾದ್.
7. ಕುಲಕರ್ಣಿ 1983: ಎಜ್ಯುಕೇಶನ್ ಆ್ಯಂಡ ಕಲ್ಚರಲ್ ಕಂಡಿಶನ್ಸ್ ಆಫ್ ದಿ ಬೀದರ ಆ್ಯಂಡ ಗುಲಬುರ್ಗಾ ರೀಜನ್, ದಿ ಚಾಲುಕ್ಯಾಸ ಆಫ್ ಕಲ್ಯಾಣ, ಪು. 163, ಬೆಂಗಳೂರು.
8. ಹರಿಹರ : ಚೆನ್ನಬಸವಣ್ಣನ ವಚನ (ಕನ್ನಡ), ಪು. 155-56.
9. ಮಾನಸೋಲ್ಲಾಸ, I, VV. 541-555

ಕಾಲದ ಕಲ್ಕೇರಿಯ ಒಂದು ಶಾಸನದಲ್ಲಿ ಗಿರಿದುರ್ಗ, ಜಲದುರ್ಗ ಮತ್ತು ವನದುರ್ಗ ಗಳ ಉಲ್ಲೇಖವಿದೆ. ಕೋಟೆಯ ಒಳಗಡೆ ಯುದ್ಧೋಪಕರಣಗಳು, ಆಹಾರ ಧಾನ್ಯಗಳು, ಔಷಧಿ, ಸಂಪತ್ತು, ಕುದುರೆಗಳು, ಆನೆಗಳು, ಕಾಡುಮೃಗಗಳು, ಯಂತ್ರಗಳು, ನೀರು, ಮೇವು ಇವುಗಳು ಸದಾ ಇರಬೇಕು. ಬ್ರಾಹ್ಮಣರ ಮತ್ತು ಕರಕುಶಲಗಾರರ ಸೇವೆ ಸದಾ ದೊರೆಯುವಂತಿರಬೇಕು. ರಾಜ್ಯ ಭಂಡಾರದಲ್ಲಿ ಯಾವಾಗಲೂ ಬಂಗಾರ, ಬೆಳ್ಳಿ (ನಿಷ್ಕ) ಅಥವಾ ಆಭರಣಗಳು ಶೇಖರವಾಗಿರ ಬೇಕೆಂದು ಹೇಳಲಾಗಿದೆ. ಈ ಕೋಟೆಯನ್ನು ಕಟ್ಟದ ಚಾಲುಕ್ಯರ ಮನೆತನದ ಒಬ್ಬ ಅರಸನ ಕೃತಿ ಇದಾಗಿರುವುದರಿಂದ ಬಹುಶಃ ಈ ಮೇಲೆ ತಿಳಿಸಿದ ವಸ್ತು ಸಾಮಗ್ರಿಗಳು ಈ ಕೋಟೆಯಲ್ಲಿ ಸಂಗ್ರಹ ಮಾಡಿರುವ ಸಾಧ್ಯತೆ ಹೆಚ್ಚು. ಮಾನ ಸೋಲ್ಲಾಸದಲ್ಲಿ ಹೇಳದ ಕೋಟೆಗೆ ಸಂಬಂಧಿಸಿದ ಹಲವಾರು ಹೊಸ ವಿಷಯ ಗಳನ್ನು ಗುತ್ತಿ ಶಾಸನವು ತಿಳಿಸುತ್ತದೆ.

### ಶಾಸನಗಳು

ಕಲ್ಯಾಣದ ಕೋಟೆ, ಅಂತಃಪುರ, ಮುಂತಾದ ಭಾಗಗಳ ವಿವರಗಳು ಬಸವ ಕಲ್ಯಾಣ ನಗರದ ಕೆಲವು ಶಾಸನಗಳಲ್ಲಿ ಉಕ್ತವಾಗಿವೆ. ಈ ಕೋಟೆಯಲ್ಲಿ ಅರಮನೆ, ಆಸ್ಥಾನ, ಅರಮನೆಯ ಅಡಿಗೆ ಮನೆ, ರಾಣಿವಾಸ ಗೃಹ (?), ಭೀಮೇಶ್ವರ ದೇವಾ ಲಯ, ಬ್ರಹ್ಮದೇವಾಲಯ ಮುಂತಾದ ಕಟ್ಟಡಗಳಿದ್ದವು. ಈ ಎಲ್ಲ ಕಟ್ಟಡಗಳು ಇಂದಿನ ಬಸವ ಕಲ್ಯಾಣ ಕೋಟೆಯಲ್ಲಿ ಎಲ್ಲಿದ್ದವು ಹೋಗಿದ್ದವು ಎಂಬುದನ್ನು ಗುರುತಿಸಬೇಕಾಗಿದೆ. ಕಲ್ಯಾಣ ಕೋಟೆ, ಅಂತಃಪುರ, ಅರಮನೆಯ ಅಡಿಗೆ ಮನೆ, ರಾಣಿ ವಾಸಗೃಹ, ಮುಂತಾದ ಭಾಗಗಳನ್ನು ನೋಡಿಕೊಳ್ಳಲು ವಿವಿಧ ದರ್ಜೆಯ ಅಧಿಕಾರಿಗಳ ಹುದ್ದೆಗಳಿದ್ದವು ಬಸವ ಕಲ್ಯಾಣದ ಶಾಸನಗಳಲ್ಲಿ ಈ ಕೋಟೆಯನ್ನು ನೋಡಿಕೊಳ್ಳುತ್ತಿದ್ದ ಹಲವಾರು ಅಧಿಕಾರಿಗಳ ವಿವರಗಳಿವೆ.

### ಕಲ್ಯಾಣಕೋಟೆ—ಅಧಿಕಾರಿಗಳು

ಚಾಲುಕ್ಯರು ಈಗಿನ ಬಸವಕಲ್ಯಾಣವನ್ನು ಸುಮಾರು ಕ್ರಿ. ಶ. ೧೦೪೪ರಲ್ಲಿ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಸುಮಾರು ಒಂದು ಶತಮಾನ ಆಳಿ ದರು.[10] ಇವರ ತರುವಾಯ ಕಳಚುರಿಯರು ಕಲ್ಯಾಣದಿಂದ ಅಲ್ಪಕಾಲ ಆಳಿ ದರು.[11] ತದನಂತರ ಈ ನಗರ ಪ್ರದೇಶವು ವಾರಂಗಲ್ಲಿನ ಕಾಕತೀಯರ ಕೈವಶ

---

10. ಪಿ.ಬಿ. ದೇಸಾಯಿ 1970 : ಎ ಹಿಸ್ಟರಿ ಆಫ್ ಕರ್ನಾಟಕ, ಪು. 169 ಕ. ವಿ. ವಿ. ಧಾರಾವಾಡ.
11. ಅದೇ

ವಾಯಿತು.[12] ಹಾಗೂ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತ ನಡೆಯಿತು. ಈ ನಗರವು ಆ ಕಾಲದಲ್ಲಿ ಕಲ್ಯಾಣ[13]ಪುರ, ಕಲ್ಯಾಣ ಕಲ್ಯಾಣ, ರಾಜಧಾನಿ ಎಂದು ಕರೆಸಿಕೊಂಡಿತು. ಕಲ್ಯಾಣ ಚಾಲುಕ್ಯರ ಇತಿಹಾಸದಲ್ಲಿ ಅವರ ವೈರಿಗಳಾಗಿದ್ದ ಚೋಳರು ಎರಡು ಸಲ ಕಲ್ಯಾಣದ ಕೋಟೆಯ ಮೇಲೆ ದಾಳಿಮಾಡಿ ಬೆಂಕಿಯನ್ನು ಇಟ್ಟರು.[14] ಕ್ರಿ. ಶ. ೧೦೫೦ರ ಮೊದಲು ಕಲ್ಯಾಣದ ಕೋಟೆಯು ಭಸ್ಮವಾಯಿತು, ಬಹುಶಃ ಇಂತಹ ಸಂದರ್ಭದಲ್ಲೇ ಕಲ್ಯಾಣಪುರದಿಂದ ಶೈವ ದ್ವಾರ[15] ಪಾಲಕ ವಿಗ್ರಹಗಳನ್ನು ತಮಿಳುನಾಡಿನ ತಂಜಾವೂರ ಹತ್ತಿರದ ದರಾಸುರಂಗೆ ಚೋಳರು ತೆಗೆದುಕೊಂಡು ಹೋಗಿರಬೇಕು. ಈ ಭಾಗದ ಕ್ರಿ. ಶ. ೧೦೮೦ರ ಒಂದು ಶಾಸನದಿಂದ ಈ ಕೋಟೆಯನ್ನು ರಕ್ಷಣೆ ಮಾಡಿದ ಒಬ್ಬ ಅಧಿಕಾರಿಯು ಕಂಡು ಬರುತ್ತಾನೆ. ಇವನ ಬಗ್ಗೆ **"ಕಲ್ಯಾಣ ಕೋಟೆ ರಕ್ಷಪಾಲ ರಣರಂಗ ಕ್ಷೇತ್ರಪಾಲ ತ್ರಿಭುವನಮಲ್ಲದೇವ ಪಾದಕಮಲ ಭೃಂಗ ಚಾವುಂಡನ ಸಿಂಗ ಮಹಾಮಂಡಳೇಶ್ವರ ಎರೆಯಮರಸ"** ಎಂದು ಶಾಸನದಲ್ಲಿ ಉಲ್ಲೇಖವಾಗಿದೆ.[16] ಅಂದರೆ ಕ್ರಿ. ಶ. 1080ರ ಪೂರ್ವದಲ್ಲೇ ಕಲ್ಯಾಣ ಕೋಟೆಯನ್ನು ಚಾಲುಕ್ಯರ ಮಹಾಮಂಡಳೇಶ್ವರ ಎರೆಯಮರಸನು ಚೋಳರ ಸಂಗಡ ಯುದ್ಧಮಾಡಿ ಕಲ್ಯಾಣ ಕೋಟೆಯನ್ನು ರಕ್ಷಿಸಿ ನಂತರ ಈ ಬಿರುದಾವಳಿಗಳನ್ನು ಪಡೆದಿರಬೇಕು. ಕಲ್ಯಾಣದ ಕೋಟೆ ಮತ್ತು ಅರಮನೆಗಳನ್ನು ಸೋಮಯ್ಯನೆಂಬ ಅಧಿಕಾರಿ ನೋಡಿಕೊಳ್ಳುತ್ತಿದ್ದನೆಂದು ಅಲ್ಲಿಯ ಮತ್ತೊಂದು ಶಾಸನ ಹೇಳಿದೆ.[17]

## ಚರಿತ್ರೆ

ಕಲ್ಯಾಣ ಚಾಲುಕ್ಯರ ಆಳ್ವಿಕೆ ಸು. ಕ್ರಿ. ಶ. ೯೭೩ ರಲ್ಲಿ ಪ್ರಾರಂಭವಾಗಿದ್ದರೂ ಅವರ ರಾಜಧಾನಿಯು ಒಂದು ಸ್ಥಳದಲ್ಲಿ ನೆಲೆಯೂರಿ ಬಹುಕಾಲ ನಿಂತಿರಲಿಲ್ಲ. ಸುಮಾರು ಮುಕ್ಕಾಲು ಶತಮಾನ ಕಾಲ ಹರಣದ ನಂತರ ಕ್ರಿ. ಶ. ೧೦೪೮ರಲ್ಲಿ

---

12. ಎಂ. ರಾಮರಾವ್ 1966 : ಟೆಂಪಲ್ಸ್ ಆಫ್ ಕಾಕತೀಯಾಸ್ ಆಫ್ ಕದಂಬಾಸ್. ತಿರುಪತಿ.
13. ಕಲ್ಯಾಣ ಚಾಲುಕ್ಯರ ನೂರಾರು ಶಾಸನಗಳಲ್ಲಿ ರಾಜಧಾನಿಯಾದ ಕಲ್ಯಾಣದ ಹೆಸರನ್ನು ಕಾಣಬಹುದು.
14. ವಿ. ವೆಂಕಟರಾಯ ಶಾಸ್ತ್ರೀ : 1983 : ಬಿಲ್ಹಣಾಸ್ ವಿಕ್ರಮಾಂಕದೇವ ಚರಿತಂ ದಿ ಚಾಲುಕ್ಯಾಸ್ ಆಫ್ ಕಲ್ಯಾಣ, ಪು. 78-79.
15. ಕೆ. ಜಿ. ಕೃಷ್ಣನ್ 1983 : ಚಾಲುಕ್ಯ—ಚೋಳ ರಿಲೇಶನ್‌ಸಿಪ್ಸ್, ದಿ ಚಾಲುಕ್ಯಾಸ್ ಆಫ್ ಕಲ್ಯಾಣ, ಪು. 33 , ಮಿಥಿಕ್ ಸೊಸೈಟಿ, ಬೆಂಗಳೂರು.
16. ಎಂ. ಮ. ಷಡಕ್ಷರಯ್ಯ 1984 : ಬೀದರ ಜಿಲ್ಲೆಯ ಶಾಸನಗಳು (ಈಗ ಕ. ವಿ. ವಿ. ಮುದ್ರಣಾಲಯದಲ್ಲಿ ಅಚ್ಚು ಆಗುತ್ತಿದೆ.
17. ಅದೇ

ಇಂದಿನ ಬೀದರ ಜಿಲ್ಲೆಯ ಬಸವ ಕಲ್ಯಾಣದಲ್ಲಿ ಚಾಲುಕ್ಯರು ತಮ್ಮ ರಾಜಧಾನಿಯನ್ನು ಆಯ್ಕೆ ಮಾಡಿದರು.[18] ಚಾಲುಕ್ಯರು ಕಲ್ಯಾಣದಲ್ಲಿ ಕೋಟೆಯನ್ನು ಕಟ್ಟಿಸಿದರು. ಇಲ್ಲಿಂದ ಸುಮಾರು ಒಂದು ಶತಮಾನಕ್ಕೂ ಹೆಚ್ಚುಕಾಲ ಆಳಿದರು. ತದನಂತರ ಈ ಕೋಟೆಯು ಒಂದೆರಡು ದಶಕಗಳವರೆಗೆ ಕಳಚುರಿಯರ ಕೈವಶವಾಯಿತು.[19] ಮುಂದೆ ಕಲ್ಯಾಣದಲ್ಲಿ ರಾಜಕೀಯ ಪರಿಸ್ಥಿತಿಯು ಹದಗೆಟ್ಟಿತು. ತದನಂತರ ಕೆಲಕಾಲ ದೇವಗಿರಿ ಸೇಉಣರ ಮತ್ತು ಕೆಲವು ಕಾಲ ವಾರಂಗಲ್ಲಿನ ಕಾಕತೀಯರ ಕೈವಶವಾಯಿತು.[20] ಆಗಾಗ್ಗೆ ಕಾಕತೀಯರಿಗೂ ಮತ್ತು ದೇವಗಿರಿಯ ಸೇವುಣರಿಗೆ ಯುದ್ಧ ಸಂಭವಿಸುತ್ತಿತ್ತು. ಬಹುಶಃ ಈ ಸಂದರ್ಭದಲ್ಲಿ ಕಲ್ಯಾಣವು ಈ ಇಬ್ಬರಿಗೆ ಒಂದು ಸೇತುವೆ ಆಗಿ ಪರಿಣಮಿಸಿರಬೇಕು. ಇದರಿಂದ ಇಲ್ಲಿಯ ವೈಭವದ ರಾಜಕೀಯ ಮತ್ತು ಸಾಂಸ್ಕೃತಿಕ ಮಹತ್ವ ಕಂದಿಹೋಯಿತು !

ಮುಂದೆ ಬಹುಮನಿಗಳ, ನವಾಬರ, ಬರೀದ್ ಷಾಹಿಗಳ, ವಿಜಯನಗರ, ಪೇಶ್ವೆ, ನಿಜಾಮ, ನವಾಬ ಮತ್ತು ಜಾಗೀರದಾರ ಮುಂತಾದವರ ಆಡಳಿತಕ್ಕೆ ಈ ಕೋಟೆಯು ಒಳಗಾಗಿತ್ತು ! ಈಗ ಅದು ಕರ್ನಾಟಕ ಸರಕಾರದ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ ಇಲಾಖೆಯವರ ಮೇಲ್ವಿಚಾರಣೆಯಲ್ಲಿದೆ.

ಕ್ರಿ.ಶ. ೧೩೨೧[21]ರಿಂದ ೧೯೪೮ರ ವರೆಗೆ ಈ ಕೋಟೆಯು ಮುಸ್ಲಿಮರ ಹಿಡಿತದಲ್ಲಿದ್ದಿತ್ತು. ಕೆಳದಿಯ ಶಿವಪ್ಪನಾಯಕನು ವಿಜಯನಗರ ಆರಸರ ಪರವಾಗಿ ಕ್ರಿ.ಶ. ೧೫೯೯–೧೫೬೧ರ ಕಾಲಾವಧಿಯಲ್ಲಿ ದಂಡೆತ್ತಿ ಬಂದು ಈ ಕೋಟೆಯನ್ನು ಸ್ವಾಧೀನಪಡಿಸಿಕೊಂಡನು. ಈ ಕೋಟೆಯನ್ನು ಆಕ್ರಮಿಸಿದ್ದ ಆಮೀರ್, ಆಲಿಬರೀದ್ ಮತ್ತು ಖಾಸಿಂಬಂದರ್ ಮುಂತಾದ ಏಳುಮಂದಿ ತುರ್ಕ ಸರ್ದಾರರನ್ನು ಹಿಡಿದು ವಿಜಯನಗರ ಅರಸರಿಗೆ ಒಪ್ಪಿಸಿದ. ಶಿವಪ್ಪನಾಯಕನಿಗೆ '**ಶತ್ರು ಸಪ್ತಾಂಗ ಹರಣ**' ಎಂಬ ಬಿರುದನ್ನು ಕೊಡಲಾಯಿತು. ಕ್ರಿ.ಶ. ೧೫೬೩ ರಲ್ಲಿ ಆಹಮದ್‌ನಗರ ನಿಜಾಮ ಷಾಹನು ಕುತುಬಷಾನ ನೆರವಿನಿಂದ ಈ ಕೋಟೆಯನ್ನು ಮರಳಿ ಪಡೆದುಕೊಂಡನು. ಅನಂತರ ಶಿವಾಜಿಯು ಆದಿಲ್ ಷಾಹಿಗಳಿಂದ ಕಲ್ಯಾಣದ ನರದುರ್ಗ ಕೋಟೆಗಳನ್ನು ಕಿತ್ತುಕೊಂಡನು.

---

18. ಪಿ. ಬಿ. ದೇಸಾಯಿ : ಅದೇ ಪು. 169
19. ಅದೇ ಪು. 198-202
20. ಅದೇ ಪು. 233–243
21. ಕಲ್ಯಾಣ ಕೋಟೆಯ ಕ್ರಿ.ಶ. 1321 ರಿಂದ ಕ್ರಿ.ಶ. 1948ರ ವರೆಗಿನ ಚರಿತ್ರೆ ವಿಷಯವನ್ನು ಈ ಮೇಲೆ ಹೇಳಿದ ಡಾ. ಶಂಕರ ಮೂಗಿ ಅವರ ಕೃತಿಯಲ್ಲಿ ಮತ್ತು ಬೀದರ ಡಿಸ್ಟ್ರಿಕ್ಟ ಗೆಜೆಟಿಯರನಿಂದ ಆಯ್ದುಕೊಳ್ಳಲಾಗಿದೆ.

ಈ ನರದುರ್ಗ ಕೋಟೆಗಳು ಯಾವುವು ಎಂಬುದನ್ನು ವಿಚಾರಿಸಬೇಕಾಗಿದೆ. ಈ ಕೋಟೆಯಲ್ಲಿರುವ ಮಸೀದೆ ಗೋಡೆಯ ಮೇಲಿನ ಪರ್ಶಿಯನ್ ಶಾಸನದಲ್ಲಿ ಕ್ರಿ.ಶ. ೧೬೬೯ರಲ್ಲಿ ಮಸೀದೆಯನ್ನು ಕಟ್ಟಿಸಿದ ಮತ್ತು ಕೋಟೆಯನ್ನು ಜೀರ್ಣೋದ್ಧಾರ ಮಾಡಿದ ವಿವರಗಳಿವೆ. ಔರಂಗಜೇಬನು ಬಿಜಾಪೂರ ಆದಿಲ್ ಷಾಹಿಯ ಸರ್ದಾರ ಮುಲ್ಲಾ ಅಹಮದ್‌ನಿಂದ ಬೀದರ ಮತ್ತು ಬಸವಕಲ್ಯಾಣ ಕೋಟೆಗಳನ್ನು ಕೈವಶ ಮಾಡಿಕೊಂಡನು. ಹನ್ನೆರಡು ಲಕ್ಷ ರೂಪಾಯಿ, ೨೩೦ ತೋಪುಗಳು, ಮೌಲಿಕ ಖಜಾನೆ ಮತ್ತು ಮದ್ದಿನ ಸಂಗ್ರಹವು ಅವನ ಪಾಲಾಯಿತು. ಕ್ರಿ.ಶ. ೧೭೦೭ರಲ್ಲಿ ಔರಂಗಜೇಬನು ಮರಣ ಹೊಂದಿದ ನಂತರ ಸರ್ದಾರನಾದ ನಿಜಾಉಲ್‌ಮುಲಖನ ವಶಕ್ಕೆ ಈ ಕೋಟೆ ಸೇರಿತು. ಈ ಸರ್ದಾರ ತನ್ನ ಅಳಿಯನಾದ ನವಾಬ ಮೀರ್ ಖಲಂದ್ ಖಾನನಿಗೆ ಇದನ್ನು ಕೊಡ ಮಾಡಿದ್ದನು. ಪೇಶ್ವೆ ಮಾಧವರಾಯನು ಕ್ರಿ.ಶ. ೧೭೬೦ರಲ್ಲಿ ಈ ಕೋಟೆಯಿಂದ ತುರ್ಕರನ್ನು ಹೊಡೆದೋಡಿಸಿ ಅದನ್ನು ತನ್ನ ವಶಕ್ಕೆ ತೆಗೆದುಕೊಂಡನು. ಈ ಯಶ ತಾತ್ಕಾಲಿಕವಾಯಿತು. ದಿಲ್ಲಿಯ ಅಹಮದ್‌ಷ ಅಬ್ದಾಲಿ ಮತ್ತು ಮರಾಠರ ನಡುವೆ ಐತಿಹಾಸಿಕವಾದ ಮೂರನೆಯ ಪಾಣಿಪತ್ ಯುದ್ಧ ನಡೆದು ಅದರಲ್ಲಿ ಮರಾಠರು ಸೋತರು. ನಂತರ ನಿಜಾಮ್ ಅಲಿ ಮರಾಠರಿಂದ ಕೋಟೆಯನ್ನು ವಶಪಡಿಸಿಕೊಂಡನು.

ಉದಗೀರದ ದೇಶಮುಖಿ ಶಿವಲಿಂಗಪ್ಪ ಎಂಬಾತನು ಕ್ರಿ.ಶ. ೧೮೧೯-೨೦ ರಲ್ಲಿ ಈ ಕೋಟೆಯನ್ನು ವಶಪಡಿಸಿಕೊಳ್ಳಲು ಬಹಳ ಪ್ರಯತ್ನಪಟ್ಟನು. ಆದರೆ ಬ್ರಿಟಿಷರು ಆತನನ್ನು ಸದೆಬಡೆದರು. ಸುಬೇದಾರ ಲಿಂಗಪ್ಪನವರ ಹಿರಿತನದಲ್ಲಿ ಕಲ್ಯಾಣ ಮತ್ತು ಬೀದರ ಕೋಟೆಗಳು ಕ್ರಿ.ಶ. ೧೮೫೨ರಲ್ಲಿ ಅವನ ವಶವಾದವು.

ಬ್ರಿಟಿಷರು ಈ ಎರಡು ಸ್ಥಳಗಳ ಕೋಟೆಗಳನ್ನು ಲಿಂಗಪ್ಪನಿಂದ ಮರಳಿ ಪಡೆದು ಹೈದರಾಬಾದ್ ನಿಜಾಮನಿಗೆ ಒಪ್ಪಿಸಿದರು. ನಿಜಾಮನು ಬಸವಕಲ್ಯಾಣ ಕೋಟೆ ಮತ್ತು ೬೮ ಹಳ್ಳಿಗಳನ್ನು ಕೂಡಿಸಿ ತನ್ನ ಸಂಬಂಧಿಕರಿಗೆ ಜಹಗೀರು ಹಾಕಿ ಕೊಟ್ಟನು. ಈ ಕೋಟೆಯು ಅಂದಿನಿಂದ ಕ್ರಿ.ಶ. ೧೯೪೮ರ ವರೆಗೆ ಅವನ ವಶದಲ್ಲಿತ್ತು.

**ಕಲ್ಯಾಣ ಕೋಟೆಯ ದರ್ಶನ :**

ಕಲ್ಯಾಣದ ಕೋಟೆಯನ್ನು ಒಂದು ನೈಸರ್ಗಿಕ ಎತ್ತರದ ಗುಡ್ಡಕ್ಕೆ ಹೊಂದಿಸಿ ಕಟ್ಟಲಾಗಿದೆ. ಸುತ್ತಲಿನ ಬಹುದೂರದ ಪ್ರದೇಶವನ್ನು ಈ ಗುಡ್ಡದ ಮೇಲಿಂದ ನೋಡಬಹುದಾಗಿದೆ. ಕೋಟೆ ಸುತ್ತಲಿನ ಕಂದಕಕ್ಕೆ ಬೇಕಾಗುವ ನೀರು ಬದಿಗೆ ಹರಿವ

ಹಳ್ಳ ಮತ್ತು ಬಾವಿಗಳಿಂದ ದೊರೆತಿರಬೇಕು. ಹೀಗೆ ವಿವಿಧ ಕಾರಣಗಳಿಂದ ಈ ಸ್ಥಳವನ್ನು ಆಯ್ಕೆ ಮಾಡಿ ಅಲ್ಲಿ ಕೋಟೆಯನ್ನು ಕಟ್ಟಲಾಗಿದೆ.

ವಿಶಾಲವಾದ ಗುಡ್ಡ ಪ್ರದೇಶಕ್ಕೆ ಹೊಂದಿಕೊಂಡು ಇಲ್ಲಿ ಎರಡು ಸುತ್ತಿನ ಕೋಟೆಯನ್ನು ಕಟ್ಟಲಾಗಿದೆ. ಈ ಕೋಟೆ ಗೋಡೆಗಳು ಬೃಹದಾಕಾರದಲ್ಲಿವೆ. ಮೊದಲ ಸುತ್ತಿನ ಕೋಟೆ ಗೋಡೆಯನ್ನು ಗುಡ್ಡದ ಬುಡದಲ್ಲಿ ಕಟ್ಟಲಾಗಿದೆ. (**ಚಿತ್ರ ನಂ. ೧**) ಎರಡನೇ ಸುತ್ತಿನ ಕೋಟೆ ಗೋಡೆಯನ್ನು ಗುಡ್ಡದ ಮೇಲಿನ ಪ್ರದೇಶದಲ್ಲಿ ಕಟ್ಟಲಾಗಿದೆ (**ಚಿತ್ರ ನಂ. ೨**) ಒಂದೊಂದು ಸುತ್ತಿನ ಕೋಟೆಯ ಒಳಗೆ ವಿವಿಧ ಕಟ್ಟಡಗಳಿವೆ.

**ಕಂದಕ :**

ಮೊದಲ ಸುತ್ತಿನ ಕೋಟೆ ಗೋಡೆಯ ಸುತ್ತ ಹೊರಗೆ ಆಳವಾದ ಕಂದಕವಿದೆ. ಈ ಕಂದಕಕ್ಕೆ ಸುಮಾರು ೩೦ ರಿಂದ ೪೦ ಮಿ. ಅಗಲದ ಭದ್ರವಾದ ಗೋಡೆಯಿದೆ. ಈ ಕಂದಕದ ಎತ್ತರ ಸುಮಾರು ೩–೧೦ ಮೀಟರ್ ಒಂದನೇ ಸುತ್ತಿನ ಕೋಟೆ ಗೋಡೆಯ ಹೊರಗೆ ಉತ್ತರ ಮತ್ತು ದಕ್ಷಿಣಕ್ಕೆ ಈ ಕಂದಕದಲ್ಲಿ ಎರಡು "ಟ" ಆಕಾರದ ಬಾವಿಗಳುಂಟು. ಈ ನಮೂನೆಯ ಹಲವಾರು ಬಾವಿಗಳು ಬಸವಕಲ್ಯಾಣ ನಗರದಲ್ಲಿವೆ. ಪ್ರಾಚೀನ ಕಾಲದ ಕಟ್ಟಡದ ಶಿಲೆಗಳು ಕಂದಕದ ಗೋಡೆ ಹಾಗೂ ಮೊದಲ ಸುತ್ತಿನ ಕೋಟೆಗೋಡೆಯ ತಳಪಾಯದಲ್ಲಿ ಕಂಡುಬರುತ್ತವೆ. ಇಲ್ಲಿ ಕಂದಕದಲ್ಲಿ ಬಾವಿಗಳನ್ನು ನಿರ್ಮಾಣ ಮಾಡಿರುವುದು ಗಮನೀಯ.

ಕಲ್ಯಾಣ ಚಾಲುಕ್ಯರ ಕಾಲದ ಗುಲ್ಬರ್ಗಾ ಜಿಲ್ಲೆಯ ಚಿತಾಪೂರ ತಾಲೂಕಿನ ಸೇಡಂನಗರದ ಕೋಟೆಯ ಭವ್ಯತೆಯನ್ನು ಅಲ್ಲಿಯ ಶಾಸನಗಳಲ್ಲಿ ಬಹು ಆಕರ್ಷಣೀಯವಾಗಿ ವರ್ಣಿಸಲಾಗಿದೆ. ಈ ಕೋಟೆಯ ಸುತ್ತಲಿನಲ್ಲಿದ್ದ ಆಳವಾದ ಕಂದಕದಲ್ಲಿ ಸದಾ ನೀರು ಸಮುದ್ರದಂತೆ ಹರಿಯುತ್ತಿತ್ತು. ಅದರ ಆಳ ಪಾತಾಳ ಲೋಕವನ್ನು ಮುಟ್ಟುವಂತಿತ್ತು. ಈ ಕೋಟೆಯ ಗೋಡೆಗಳು ಹೆಚ್ಚು ದಪ್ಪ ವಾಗಿದ್ದವು ಹಾಗೂ ಕೋಟೆ ಗೋಡೆಗಳ ಎತ್ತರದ ತುದಿಗಳು ಆಕಾಶವನ್ನು ಚುಂಬಿಸುವಂತಿತ್ತು. ಹೀಗೆ ಇನ್ನೂ ಹೆಚ್ಚಿನ ವರ್ಣನೆಯನ್ನೂ ಅಲ್ಲಿಯ ಶಾಸನ ನೀಡುತ್ತದೆ. ಇಂತಹ ಅದ್ಭುತ ಕೋಟೆಯನ್ನು ಭೇದಿಸುವುದು ವೈರಿಗಳಿಗೆ ಅಸಾಧ್ಯ ವಾಗಿತ್ತೆಂದು ಈ ವರ್ಣನೆಯಿಂದ ಕಾಣುತ್ತದೆ. ಈ ಸ್ಥೂಲ ವಿವರಗಳಿಂದ ಚಾಲುಕ್ಯರ ರಾಜಧಾನಿಯಾಗಿ ಮೆರೆದ ಕಲ್ಯಾಣ ನಗರದ ಕೋಟೆಯು ಸೇಡಂ ನಗರದ ಕೋಟೆಗಿಂತ ಹೆಚ್ಚು ಅದ್ಭುತವಾಗಿಯೂ ವಿಸ್ತಾರವಾಗಿಯೂ, ವೈವಿಧ್ಯ ಮಯವಾಗಿಯೂ ಇದ್ದಿರಬೇಕೆಂದು ಊಹಿಸಬಹುದಾಗಿದೆ.

ಕೋಟೆಯ ಸುತ್ತಲಿನ ಕಂದಕದಲ್ಲಿ ಸದಾ ನೀರು ಹರಿಯುವ ವ್ಯವಸ್ಥೆಯನ್ನು ಕಲ್ಪಿಸಲಾಗಿತ್ತು. ವೈರಿಗಳು ದಾಟಲು ಅಸಾಧ್ಯವಾಗಲೆಂದು ಕಂದಕಗಳಲ್ಲಿ ವಿಷ ಜಂತುಗಳನ್ನು ಬಿಡುತ್ತಿದ್ದರು. ಹೀಗೆ ನಾನಾ ಕಾರಣಗಳಿಂದ ಕೋಟೆ ಗೋಡೆಯ ಸುತ್ತ ಹೊರಗೆ ಕಂದಕಗಳನ್ನು ನಿರ್ಮಿಸುತ್ತಿದ್ದರು. ಆದರೆ ಇಂದು ಬಸವ ಕಲ್ಯಾಣ ನಗರದ ಕೋಟೆಯ ಸುತ್ತಲಿನ ಆಳವಾದ ಕಂದಕವು ಕೆಲವು ಕಡೆ ಕುಸಿದಿದೆ ಮತ್ತು ಹಾಳುಬಿದ್ದಿದೆ. **(ಚಿತ್ರ ನಂ. ೩)**

**ಫಿರಂಗಿ-ತೋಪುಗಳು :**

ಈ ಕೋಟೆಯ ಮೇಲೆ ದೊಡ್ಡ ದೊಡ್ಡ ಪಂಚಲೋಹದ ಫಿರಂಗಿ-ತೋಪುಗಳಿವೆ. ಕೆಲವು ಉದ್ದವಾದ ಫಿರಂಗಿಗಳ ಮೇಲೆ ಲತಾ ಬಳ್ಳಿಗಳ ಸುಂದರ ಅಲಂಕರಣ **(ಚಿತ್ರ ನಂ. ೪)** ಇದೆ. ಇನ್ನು ಕೆಲವು ಫಿರಂಗಿ ಭಾಗಗಳಲ್ಲಿ ಬಳೆಗಳು ಮತ್ತು ಹಿಡಿಕೆಗಳಿವೆ **(ಚಿತ್ರ ನಂ. ೫)** ಕಡೆಗಳಲ್ಲಿ ಶಿಲೆಯ ಗುಂಡುಗಳು ಚದುರಿಹೋಗಿವೆ.

**ಮೊದಲ ಸುತ್ತಿನ ಕೋಟೆ :**

ಈ ಬೃಹದಾಕಾರದ ವೈವಿಧ್ಯಮಯ ಕೋಟೆಗೆ ಒಂದೇ ಪ್ರವೇಶವಿದ್ದು ಅದು ಮೊದಲ ಸುತ್ತಿನ ಕೋಟೆಯ ಪೂರ್ವದಿಕ್ಕಿನಲ್ಲಿದೆ. ಈ ಮೊದಲ ಸುತ್ತಿನ ಕೋಟೆ ಗೋಡೆಯಲ್ಲಿ ವಿವಿಧ ನಮೂನೆಯ ಹದಿನಾಲ್ಕು ಬುರ್ಜುಗಳಿವೆ. ಈ ಪ್ರವೇಶ ದ್ವಾರದ ಸ್ವಲ್ಪ ದೂರದಲ್ಲಿ ಮತ್ತೊಂದು ಎತ್ತರದ ದ್ವಾರವಿದ್ದು ಅಲ್ಲಿಂದ ಕಂದಕದ ಮೇಲೆ ಓರೆಯಾಗಿ ಒಂದು ಅಗಲವಾದ ದಾರಿಯಿರುವುದು. ಈ ಮೊದಲ ಸುತ್ತಿನ ಕೋಟೆಗೋಡೆಗೆ ಹೊಂದಿದ ದ್ವಾರವು ಬೃಹದಾಕಾರದಲ್ಲಿದೆ. ಈ ದ್ವಾರ ಪೂರ್ವಕ್ಕೆ ಮುಖ ಮಾಡಿದೆ. ಈ ದ್ವಾರಕ್ಕೆ ಕಮಾನಿನಾಕಾರದ ಬಾಗಿಲನ್ನು ಜೋಡಿಸಲಾಗಿದೆ. ಈ ಬಾಗಿಲಿಗೆ ದೊಡ್ಡದಾದ ಕದಗಳನ್ನು ದಪ್ಪವಾದ ಮರದಿಂದ ಮಾಡಲಾಗಿದೆ. ಈ ದೊಡ್ಡ ಕದಗಳ ಮೇಲೆ ಕಬ್ಬಿಣದ ಚೂಪಾದ ಮುಳ್ಳಿನ ಮೊನೆಗಳನ್ನು ಕೂಡಿಸಲಾಗಿದೆ. ಈ ಮೊನೆಗಳನ್ನು ಸಮಾಂತರವಾಗಿ ನಾಲ್ಕು ಸಾಲಿನಲ್ಲಿ ಎದುರು ಮುಖ ಮಾಡಿ ಕದಗಳ ಮೇಲೆ ಕೂಡಿಸಲಾಗಿದೆ. ಈ ಕದಕ್ಕೆ ಹೆಚ್ಚು ದಕ್ಕೆ ತಗುಲಿದೆ. ಈ ಕದಕ್ಕೆ ಹೊಂದಿಕೊಂಡು ಇದರ ಬಲಕ್ಕೆ ಕೆಳಗಡೆ ಒಂದು ಚಿಕ್ಕ ಕದವನ್ನು ಕೂಡಿಸಲಾಗಿದೆ. ಈ ಚಿಕ್ಕ ಕದವನ್ನು ಒಳಗಡೆ ಹೋಗಿಬರಲು ಉಪಯೋಗಿಸಲಾಗುತ್ತಿದೆ. **(ಚಿತ್ರ ನಂ. ೬)**

ಈ ಪ್ರವೇಶ ದ್ವಾರ ಹೆಚ್ಚು ದೊಡ್ಡದಾಗಿದೆ. ಎತ್ತರವಾಗಿದೆ ಮತ್ತು ದಪ್ಪವಾಗಿದೆ. ಈ ದ್ವಾರ ಬದಿಗಳಲ್ಲಿ ತೆರೆದ ವಿಶಾಲವಾದ ಅಂಕಣಗಳಿವೆ. ಈ ಅಂಕಣಗಳಲ್ಲಿ ನಿಂತು ಕಾವಲುಗಾರರು ಸದಾ ಎಚ್ಚರದಿಂದ ಕೋಟೆಯನ್ನು ಕಾಯುತ್ತಿದ್ದರು.

ದ್ವಾರದಿಂದ ಒಳಗೆ ಸಾಗಿದರೆ ನಿರ್ದಿಷ್ಟ ಆಯತವಿಲ್ಲದ ವಿಶಾಲವಾದ ತೆರೆದ ಆವರಣ. ಈ ಆವರಣಕ್ಕೆ ಹೊಂದಿ ಪಶ್ಚಿಮಕ್ಕೆ ಮುಖಮಾಡಿದ ಕೊಠಡಿಗಳು ಹಾಗೂ ಮೊದಲ ಸುತ್ತಿನ ಕೋಟೆ ಗೋಡೆಗೆ ಹೊಂದಿದ ಬುರ್ಜುಗಳ ಒಳಮೈಗಳಿವೆ. ಈ ವಿಶಾಲ ಆವರಣದಲ್ಲಿ ಹಲವಾರು ಪ್ರಾಚೀನ ವಿಗ್ರಹಗಳು, ಶಿಲೆಯ ಗುಂಡುಗಳು ಮತ್ತು ಶಾಸನಗಳಿವೆ. ಈ ಆವರಣದ ಮುಂದೆ ಮತ್ತೊಂದು ದ್ವಾರವಿದೆ. ಈ ದ್ವಾರವು ಈ ಮೇಲೆ ಹೇಳಿದ ಪ್ರವೇಶ ದ್ವಾರದ ಗಾತ್ರದಷ್ಟಿದ್ದು ಬದಿಗಳಲ್ಲಿ ಗಟ್ಟಿಮುಟ್ಟಾದ ಸರಪಳಿಗಳನ್ನು ಬಾಗಿಲ ಅಂಚಿನಲ್ಲಿ ಬಿಗಿಯಲಾಗಿದೆ. ಈ ದ್ವಾರವು ಉತ್ತರಕ್ಕೆ ಮುಖಮಾಡಿದೆ. ಈ ದ್ವಾರವೂ ಸಹ ಬಹು ದೊಡ್ಡದಿದೆ ಮತ್ತು ಹೆಚ್ಚು ದಪ್ಪ ನಾಗಿದೆ. ಈ ದ್ವಾರದಿಂದ ಮುಂದೆ ಸಾಗಿದರೆ ಅದರ ದಾರಿ ಬಲಕ್ಕೆ ಸಾಗುತ್ತದೆ. ಸುಮಾರು ಉದ್ದದ ಈ ದಾರಿಯ ಎಡಬದಿಗೆ ಕಟ್ಟೆಗಳಿವೆ. ಕೆಲವು ಕಟ್ಟಡಗಳು ಹೊಂದಿಕೊಂಡಿವೆ. ತೆರೆದ ಈ ಕಟ್ಟೆಗಳಲ್ಲಿ ಅಲ್ಲಲ್ಲಿ ಶಿಲ್ಪಗಳನ್ನು ಕೂಡಿಸಲಾಗಿದೆ. ಈ ದ್ವಾರಕ್ಕೆ ಹೊಂದಿದ ಮೊದಲ ಸುತ್ತಿನ ಕೋಟೆ ಗೋಡೆಯ ಹೊರಮೈಯಲ್ಲಿ ಹಲವಾರು ಪ್ರಾಚೀನ ಶಿಲ್ಪಗಳನ್ನು ಕೂಡಿಸಲಾಗಿದೆ. ಅವುಗಳಲ್ಲಿ ರಾವಣನು ತನ್ನ ರಥಸವಾರಿಯ ಶಿಲ್ಪ ಮುಖ್ಯವಾದುದು.

ಎರಡನೇ ದ್ವಾರದಿಂದ ಹಾಗೆ ಮುಂದೆ ಸಾಗಿದರೆ ಮತ್ತೊಂದು ಚಿಕ್ಕ ದ್ವಾರ ಬರುತ್ತದೆ. ಮೊದಲನೆಯ ಮತ್ತು ಎರಡನೇ ದ್ವಾರ ಬದಿಗೆ ಹಲವಾರು ಕಟ್ಟಡ ಗಳಿರುವುದನ್ನು ಈ ಮೇಲೆ ಹೇಳಿದೆ. ಅವುಗಳಲ್ಲಿ **ಬರೂಕ್‌ಖಾನ್** ಮತ್ತು **ಝೋಲ್‌ಖಾನ್**ಗಳು ಮುಖ್ಯವೆನಿಸಿವೆ.

ಬರೂಖ್‌ಖಾನ್ ಕಟ್ಟಡ ಪ್ರದೇಶದ ಮುಂದೆ ಮತ್ತು ಎರಡನೇ ಸುತ್ತಿನ ಕೋಟೆಗೋಡೆಯ ಹೊರಗೆ ಸುತ್ತ ವಿಶಾಲ ಪ್ರದೇಶವಿದೆ. ಎರಡನೇ ಸುತ್ತಿನ ಕೋಟೆಯ ದ್ವಾರಕ್ಕೆ ಹೋಗುವ ದಾರಿಯ ಮಧ್ಯ ಒಂದು ಎತ್ತರದ ದ್ವಾರ ಉಳಿದಿದೆ. ಈ ದ್ವಾರದ ಪಶ್ಚಿಮಕ್ಕೆ ಅಲ್ಲಲ್ಲಿ ಹಾಳಾದ ಕಟ್ಟಡಗಳನ್ನು ಕಾಣಬಹುದು. ಬಹುಶಃ ಅವುಗಳು ವಿವಿಧ ಅಧಿಕಾರಿಗಳ ಹಾಗೂ ಸೈನ್ಯದಳಗಳ ವಾಸಸ್ಥಳಗಳಾಗಿರಬೇಕು. ಇಲ್ಲಿಂದ ಸ್ವಲ್ಪ ಮುಂದೆ ಹೋದರೆ (ಪಶ್ಚಿಮಕ್ಕೆ) ಮೊದಲ ಸುತ್ತಿನ ಕೋಟೆಗೋಡೆಗೆ ಹೊಂದಿ ನೀರು ಸರಬರಾಜಿನ ವ್ಯವಸ್ಥೆಯಿದೆ. ಅಲ್ಲಿ ಕೋಟೆ ಹೊರಗಡೆ ಕಂದಕ ದಲ್ಲಿರುವ 'ಟಿ' ಆಕಾರದ (ಚಿತ್ರ ನಂ. ೭) ಬಾವಿಯಿಂದ ನೀರನ್ನು ಮೇಲಕ್ಕೆ ಎಳೆಯುಲು ಚರಕ ಮೋಟ ವ್ಯವಸ್ಥೆ ಇದೆ. ಇದಕ್ಕೆ ಹೊಂದಿ ಎತ್ತರ ಇಳಿಜಾರಿನಲ್ಲಿ ಉದ್ದವಾಗಿ ಕಟ್ಟಿದ ಕಟ್ಟಡ. ಈ ಕಟ್ಟಡದ ಇಕ್ಕೆಲಗಳಲ್ಲಿ ಎರಡು ಸಾಲುಗಳ ಕಂಬ ಗಳಿವೆ. ಈ ಆವರಣದ ಮುಂದೆ ಒಂದು ಸುಂದರವಾದ ದೊಡ್ಡ ತೊಟ್ಟಿಯಿದೆ.

ಉತ್ತರ ಮತ್ತು ಪೂರ್ವದ ಕಡೆ ಮೊದಲ ಸುತ್ತಿನ ಕೋಟೆಗೋಡೆಯ ಹೊರ

ಮೈಯಲ್ಲಿ ನೂರಾರು ಪ್ರಾಚೀನ ಶಿಲ್ಪಗಳಿರುವುದನ್ನು ಕಾಣಬಹುದು. ಅವುಗಳಲ್ಲಿ ದೇವಾಲಯಗಳ ಬಾಗಿಲು ಫಲಕ, ಚಂದ್ರಶಿಲಾ ಕಂಬಗಳು ಗೋಡೆ ಫಲಕಗಳಲ್ಲಿ ಮದನಿಕೆ, ಆನೆ, ಸಿಂಹ, ಇತ್ಯಾದಿ ಶಿಲ್ಪಾವಶೇಷಗಳನ್ನು ಕಾಣಬಹುದು. (ಚಿತ್ರ ನಂ. ೮) ಈ ಕೋಟೆಗೋಡೆಯ ತಳಪಾಯದಲ್ಲಿ ಅಲ್ಲಲ್ಲಿ ಮೂಲ ಕಟ್ಟಡದ ಕುರುಹುಗಳನ್ನು ವೀಕ್ಷಿಸಬಹುದು. ಈ ಮೂಲ ಕಟ್ಟಡದ ಕುರುಹುಗಳು ಕಂದಕಕ್ಕೆ ಹೊಂದಿಕೊಂಡಿವೆ

## ಎರಡನೇ ಸುತ್ತಿನ ಕೋಟೆ

ಈ ಮೇಲೆ ಹೇಳಿದ ಬರೂಖ್ ಖಾನ್ ಕಟ್ಟಡ ಮುಂದಿನ ಏಕಾಂಗಿ ಆಗಿ ನಿಂತಿರುವ ದ್ವಾರದ ನಂತರ ಎರಡನೇ ಸುತ್ತಿನ ಕೋಟೆ ಕಡೆಗೆ ದಾರಿ ಹೋಗುತ್ತದೆ. ಅದಕ್ಕೆ ಪ್ರವೇಶ ದ್ವಾರವಿದೆ. ಈ ದ್ವಾರ ಹೆಚ್ಚು ದೊಡ್ಡದಿಲ್ಲ, ಎತ್ತರವಿಲ್ಲ ಮತ್ತು ದಪ್ಪವಿರುವುದಿಲ್ಲ. ಆದರೆ ಅಲ್ಲಿಯ ದಾರಿ ಮಾತ್ರ ಇಕ್ಕಟ್ಟಾಗಿದೆ. ಈ ದಾರಿಯ ಎದುರಿಗೆ ಗೋಡೆಗೆ ಹೊಂದಿದ ಭವ್ಯ ಕಟ್ಟಡವಿದೆ. ಈ ಕಟ್ಟಡದ ಗೋಡೆಯಲ್ಲಿ ಜಾಲಂದ್ರಗಳಿವೆ (ಚಿತ್ರ ನಂ. ೯). ಮುಂದೆ ಈ ದಾರಿಯು ಉತ್ತರ ಕಡೆ ಸಾಗಿದೆ. ಅಲ್ಲೊಂದು ಚಿಕ್ಕ ದ್ವಾರ. ಅಲ್ಲಿಂದ ಮುಂದೆ ಹೋದರೆ ಬಲಗಡೆಗೆ ವಿಶಾಲ ಕಟ್ಟಡ ವಿದೆ. ಇದನ್ನು ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ವಿಭಾಗದವರು ಮ್ಯೂಜಿಯಂ ಮಾಡಿದ್ದಾರೆ.

ಈ ಎರಡನೇ ಸುತ್ತಿನ ಕೋಟೆಯಲ್ಲಿ ಅರಸರಿಗೆ ಸಂಬಂಧಿಸಿದ ವೈವಿಧ್ಯಮಯ ಕಟ್ಟಡಗಳನ್ನು ಕಾಣಬಹುದು. ಅವುಗಳಲ್ಲಿ ಬಿಜ್ಜಳನ ಅರಮನೆ, ಪ್ರಾಚೀನ ಹಿಂದೂ ದೇವಾಲಯ, ರಾಜಮಹಲ್, ನೃತ್ಯ ಮಹಲ್, ರಂಗೀನ ಮಹಲ್, ಹೈದರ್ ಮಹಲ್, ಚಿಲುಮೆಯುಳ್ಳ ಅಲಂಕೃತ ತೊಟ್ಟಿಗಳು, ಫಿರಂಗಿ ಸಿಡಿಮದ್ದನ್ನು ಶೇಖರಿಸುವ ವಿಶಾಲ ಕೊಠಡಿಗಳು, ಪಕ್ಷಿಗಳ ಕೊಠಡಿಗಳು, ನೀರಿನ ತೊಟ್ಟಿಗಳು, ಫಿರಂಗಿ ತೋಪುಗಳು ಮುಖ್ಯವಾಗಿವೆ.

## ಅರಮನೆ ಆವರಣ

ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ ಇಲಾಖೆ ಯವರು ಬಸವಕಲ್ಯಾಣದ ಕೋಟೆಯ ಮ್ಯೂಜಿಯಂವನ್ನು ಬಿಜ್ಜಳನ ಅರಮನೆ ಎಂದು ಕರೆಯುವರು.(ಚಿತ್ರ ನಂ.೧೦)ಇದೊಂದು ಪ್ರಮುಖ ಕಟ್ಟಡ.ಈ ಅರಮನೆಯ ಹಿಂಬದಿಯಲ್ಲಿ ನಿಂತು ದಕ್ಷಿಣ ದಿಕ್ಕಿನ ಕಡೆ ದೃಷ್ಟಿಯನ್ನು ಹಾಯಿಸಿದರೆ ಈಗಿನ ಬಸವ ಕಲ್ಯಾಣ ನಗರದ ಸಂಪೂರ್ಣ ಜನವಸತಿಯ ಪ್ರದೇಶ ಕಾಣುತ್ತದೆ. ಹಾಗೂ ಮೂರು ಕಿ. ಮೀ. ಅಂತರದಲ್ಲಿರುವ ಶಿವಪುರ ಮತ್ತು ನಾರಾಯಣಪುರ ಗ್ರಾಮಗಳ

ಹತ್ತಿರದ ವಿಶಾಲ ಪ್ರದೇಶವು ಗೋಚರಿಸುವುದು. ದೂರದಿಂದ ಬರುವ ಜನರನ್ನು ಇಲ್ಲಿ ನಿಂತು ಸುಲಭವಾಗಿ ನೋಡಬಹುದು. ಈ ಅರಮನೆಯು ಪಶ್ಚಿಮಕ್ಕೆ ಮುಖ ಮಾಡಿದೆ. ಅದರ ಕೆಳಗಡೆ ಅಂದರೆ ಅದರ ಎಡಗಡೆ ಒಂದು ನೆಲಮಾಳಿಗೆಯು ಗೂಡಿದೆ. ಅದಕ್ಕೆ ತಾಲಿಮ್‌ಖಾನೆ (ಗರಡಿಮನೆ) ಎಂದು ಹೆಸರು.

ಈ ಅರಮನೆ ಎದುರು ವಿಶಾಲ ಆವರಣವಿದೆ. ಅರಮನೆ ಬಲಗಡೆಯ ಸ್ಥಳಕ್ಕೆ "ಒಂಟಿ ಕೋಣಿನ ಮಟ್ಟ" ಎಂದು ಹೆಸರು. ಬದಿಯಲ್ಲಿ ಒಂದು ಬಾವಿಯಿದೆ. ಈ ಬಾವಿ ಸುಮಾರು ೧೫೦ ಅಡಿ ಆಳವಿದೆ. ಈ ಬಾವಿಯಲ್ಲಿ ಸದಾ ನೀರು ಇರುವುದು ಕುತೂಹಲ ಸಂಗತಿಯಾಗಿದೆ. ಈ ಬಾವಿಯಿಂದ ನೀರನ್ನು ಸೇದಲು 'ಚರಕ ಮೋಟದ' ವ್ಯವಸ್ಥೆ ಇತ್ತು. ಈಗ ಈ ವ್ಯವಸ್ಥೆ ನಿಂತು ಹೋಗಿದೆ. ಈ ಬಾವಿಯಿಂದ ಬದಿಗಿನ ಅರಮನೆಯ ವಿವಿಧ ಭಾಗಗಳಿಗೆ ನೀರನ್ನು ಸರಬರಾಜು ಮಾಡುತ್ತಿದ್ದರು. ಈ ಭಾವಿ ಬಲಬದಿಗೆ ಒಂದು ದೊಡ್ಡ ತೊಟ್ಟಿಯಿದೆ. ಇದಕ್ಕೆ ಎರಡು ಮೂರು ಕೊಳವೆಗಳಿವೆ. ಈ ಕೊಳವೆಗಳ ಮೂಲಕ ನೀರನ್ನು ವಿವಿಧ ಕಡೆ ವರ್ಗಾಯಿಸುತ್ತಿದ್ದರೆಂದು ತಿಳಿದುಬರುವುದು.

## ಹೈದರ ಮಹಲ್

ಈ ಮ್ಯೂಜಿಯಂ ಹತ್ತಿರದ ಬಾವಿಯ ಪಶ್ಚಿಮಕ್ಕೆ ಅಂದರೆ ಅದರ ಎಡಬದಿಗೆ ಒಂದು ವಿಶಾಲವಾದ ಸುಂದರ ಕಟ್ಟಡವಿದೆ. ಅದಕ್ಕೆ 'ಹೈದರ ಮಹಲ್' ಎಂದು ಹೆಸರು. ಹೈದರ ಮಹಲ್ ಹತ್ತಿರದಲ್ಲಿ ಮೇಲ್ಗಡೆ ಭವ್ಯವಾದ ಒಂದು ದೊಡ್ಡ ತೋಪಿದೆ. ಈ ತೋಪು ೬೯೪ ಸೆಂ. ಮಿ. ಉದ್ದವಿದ್ದು ಅದಕ್ಕೆ 'ನವಗಜ' ತೋಪು ಎಂದು ಕರೆಯುತ್ತಾರೆ. ಹೈದರ ಮಹಲ್ ಒಳಗೆ ವಿಶಾಲವಾದ ತೆರೆದ ಸಭಾಂಗಣವಿದೆ. ಉತ್ತರದ ಗೋಡೆಯ ಮೇಲೆ ಚತುರಸ್ರಾಕಾರದ ಅಲಂಕಾರ ಪಟ್ಟಿಯಿದೆ. ಈ ಗೋಡೆಯಲ್ಲಿ ನೀರು ಮೇಲಿಂದ ಕೆಳಗಡೆ ಬೀಳುವ ವ್ಯವಸ್ಥೆಯಿದೆ. ಇದು ಬಹು ಆಕರ್ಷಣೀಯವಾಗಿದೆ. ಅದರ ಮುಂದೆ ಚತುರಸ್ರಾಕಾರದ ವಿಶಾಲ ಸಭಾಂಗಣದ ಮಧ್ಯ ದೊಡ್ಡದಾದ ನೀರಿನ ತೊಟ್ಟಿಯಿದೆ. ಬದಿಗಳಲ್ಲಿ ಹಲವು ಅಂತಸ್ತಿನ ಗೃಹಗಳಿವೆ. ಈ ಆವರಣದ ಎದುರಿಗೆ ಒಂದು ಸುಂದರ ಕಮಾನುಗಳ ಮಂಟಪವಿದೆ. ಈ ಮಂಟಪದ ಹಿಂದುಗಡೆ ಮಧ್ಯದಲ್ಲಿ ಬಹು ಸುಂದರವಾದ ಅಲಂಕೃತ ಆಸನವಿದೆ. ಈ ಆಸನವು ಮೇಲ್ದರ್ಜೆಯ ವ್ಯಕ್ತಿಗಳು ಅಥವಾ ಅರಸರು ಕೂರುವ ಸ್ಥಳವಾಗಿದೆ. ಅದರ ಮಂಟಪದ ಮುಂದೆ ವಿಶಾಲ ಸಭಾಂಗಣವಿದೆ. ಆ ಮಂಟಪಕ್ಕೆ ನೃತ್ಯ ಮಂಟಪ ಎಂದು ಹೆಸರು. ಈ ಮಂಟಪದ ಎದುರಿನ ಗೋಡೆಯಲ್ಲಿ ನೀರು ಬೀಳುವ ಅಲಂಕಾರಣಗಳು ಎದ್ದು ಕಾಣುತ್ತವೆ. ಈ ರೀತಿಯ ಸಭಾಂಗಣಕ್ಕೆ **ದರ್ಬಾರ ಮಹಲ್** ಎಂದು ಕರೆಯುವರು. ಅಲ್ಲಿಯ ನೃತ್ಯ ಮಂಟಪದ ಎಡಗಡೆಯ

ಅಂತಸ್ಥಿನ ಗೋಡೆಯಲ್ಲಿ ಸಾಲಾಗಿ ದುಂಡಾದ ಕಂಬಗಳಿವೆ. ಬಲಗಡೆಯ ಗೋಡೆಯು ಕಟ್ಟಡದ ಒಂದು ಭಾಗದಲ್ಲಿ ಮದ್ದುಗುಂಡುಗಳ ಸಂಗ್ರಹದ ಕೋಣೆಯಿದೆ.

**ಪಕ್ಷಿ-ಲೆಕ್ಕಪತ್ರಗಳ ಕೊಠಡಿಗಳು**

ಈ ನೃತ್ಯ ಮಹಲಿನ ಹಿಂದುಗಡೆಯಿಂದ ಪೂರ್ವಕ್ಕೆ ಹಲವಾರು ಕೊಠಡಿಗಳಿವೆ. ಅಲ್ಲಿಯ ಮೂರು ಕೊಠಡಿಗಳಲ್ಲಿ ಪಕ್ಷಿಗಳು ಇರುತ್ತಿದ್ದವಂತೆ. ಅದಕ್ಕೆ ಪಕ್ಷಿಗಳ ಕೋಣೆ ಎಂದು ಹೆಸರು. ಈ ಕೋಣೆಗಳ ಎದುರಿಗೆ ಒಂದು ಕೊಠಡಿಯಿದೆ. ಅಲ್ಲಿ ಲೆಕ್ಕಪತ್ರಗಳನ್ನು ಇಡುತ್ತಿದ್ದರಂತೆ. ಆದುದರಿಂದ ಅದನ್ನು ಲೆಕ್ಕಪತ್ರ ಕೊಠಡಿ ಎಂದು ಕರೆಯುವರು.

**ಮಸೀದೆ**

ಪಕ್ಷಿಗಳ ಕೊಠಡಿಯ ಪೂರ್ವ ಬದಿಯಲ್ಲಿ ಮಸೀದೆಯಿದೆ. ಮಸೀದೆಯು ಉತ್ತರಕ್ಕೆ ಮುಖಮಾಡಿದೆ.

**ನೃತ್ಯ ಮಹಲ್**

ಬಿಜ್ಜಳನ ಅರಮನೆಯ ಎದುರಿಗೆ ಮತ್ತು ಮಸೀದೆಯ ಬದಿಗೆ ಒಂದು ಸುಂದರ ಭವ್ಯವಾದ ತೆರೆದ ಕಟ್ಟಡವಿದೆ. ಈ ಕಟ್ಟಡಕ್ಕೆ 'ನೃತ್ಯ ಮಹಲ್' ಎಂದು ಹೆಸರು. ಈ ಆವರಣ ಮಧ್ಯದಲ್ಲಿ ಅಲಂಕಾರಗೊಂಡ ಅಷ್ಟಾಕೃತಿಯ ಸುಂದರವಾದ ತೊಟ್ಟಿ ಯಿದೆ. ಅದರ ಸುತ್ತಲೂ ಆಯತಾಕಾರದಲ್ಲಿ ಚಿಕ್ಕ ಚಿಕ್ಕ ಖಾನೆಗಳಿವೆ. ಈ ಖಾನೆಗಳಲ್ಲಿ ಬಹುಶಃ ವಿವಿಧ ಗಿಡಬಳ್ಳಿಗಳನ್ನು ನೆಟ್ಟು ಬೆಳೆಸುತ್ತಿರಬೇಕು. ಆ ತೊಟ್ಟಿಯ ಇಕ್ಕೆಲಗಳ ಗೋಡೆಗಳ ಮಧ್ಯ ಬಹು ಸುಂದರವಾದ ಆಸನಗಳಿವೆ. ಗಾರೆ ಯಿಂದ ಈ ಆಸನಗಳನ್ನು ಅಲಂಕರಿಸಲಾಗಿದೆ. ಅಲ್ಲಿಯ ತೊಟ್ಟಿ(ಎದುರಿಗೆ) ಪೂರ್ವಕ್ಕೆ ಒಂದು ಮಂಟಪವಿದೆ. ಆ ಮಂಟಪದ ಕಂಬಗಳ ಮೇಲೆ ವಿವಿಧ ರೀತಿಯ ಸುಂದರ ರೇಖಾ ಚಿತ್ರಗಳ ಅಲಂಕಾರ ಪಟ್ಟಿಕೆಗಳಿವೆ. ಇದರಿಂದಾಗಿ ಈ 'ನೃತ್ಯ ಮಹಲ್' ತುಂಬಾ ಮನಮುಟ್ಟುವ ಹಾಗೆ ಕಂಗೊಳಿಸುತ್ತಿದೆ.

**ರಾಜ ಮಹಲ್**

ಈ ಮೇಲೆ ಹೇಳಿದ ನೃತ್ಯ ಮಹಲ್ ಕಟ್ಟಡ ಬದಿಗೆ ದಕ್ಷಿಣಕ್ಕೆ ಹಾಗೂ ಅರಮನೆ ಎಂದು ಕರೆಯುವ ಮ್ಯೂಜಿಯಂ ದಕ್ಷಿಣಕ್ಕೆ ಮತ್ತೊಂದು ತುಂಬಾ ಆಕರ್ಷಣೆಯುಳ್ಳ ಮಹಲ್‌ಯಿದೆ. ಅರಮನೆಗೆ ಬರುವ ದಾರಿಯ ಎಡಗಡೆ ಈ ಮಹಲಿಗೆ ಪ್ರವೇಶವಿದೆ. ಅದರ ಮೊದಲ ಅಂಕಣದಲ್ಲಿ ಸುಂದರ ಪಡಸಾಲೆಯಿದೆ. ಒಳಗಡೆ ಎದುರಿಗೆ ಪೂರ್ವಕ್ಕೆ ಮುಖಮಾಡಿದ ಮೂರು ಕಮಾನುಗಳುಳ್ಳ ಸುಂದರ

ಕಟ್ಟಡವಿದೆ. ಬಹು ವಿಶಾಲವಾದ ಮತ್ತು ತಂಪಾದ ಈ ಮಹಲ್‌ನ ಕಮಾನುಗಳ ಮೇಲೆ ವರ್ಣರಂಜಿತ ವಿವಿಧ ನಮೂನೆಯ ರೇಖಾಚಿತ್ರಗಳಿವೆ. ಮಹಲಿನ ಮುಂದಿರುವ ಎರಡು ಕಮಾನುಗಳ ಮೇಲೆ ವೃತ್ತಾಕಾರದ ರೇಖಾಚಿತ್ರಗಳಿವೆ. ಆ ವೃತ್ತಗಳಿಂದ ಕೆಳಗಿಳಿದ ಉದ್ದವಾದ ಮೊನುಗಳಿವೆ. ಎರಡನೆ ಮತ್ತು ಮೂರನೆ ಕಮಾನಿನ ಮೇಲೆ ಮೊನುಗಳು ಚಿತ್ರಗಳು ಇರುವುದಿಲ್ಲ. ವೃತ್ತಗಳ ಮಧ್ಯ ಹೂಬಳ್ಳಿಗಳ ಅಲಂಕಾರಗಳು ಮೂರೂ ಕಮಾನುಗಳ ಮೇಲಿದೆ. ಈ ಅಲಂಕಾರ ಗಳನ್ನು ಗಾರೆಯಿಂದ ತುಂಬಾ ಸೊಗಸಾಗಿ ಮಾಡಲಾಗಿದೆ. ಈ ಕಟ್ಟಡಕ್ಕೆ ರಾಜರ ಮಹಲ್ ಎಂದು ಕರೆಯುವರು. (ಚಿತ್ರ ನಂ. ೧೧)

**ದೇವಾಲಯ**

ಈ ರಾಜ ಮಹಲಿನ ಬಲಗಡೆ ಒಂದು ಪ್ರಾಚೀನ ದೇವಾಲಯವಿದೆ. ಈ ದೇವಾಲಯದ ಬಲಗಡೆ ಒಂದು ತೆರೆದ ಮಂಟಪವಿದೆ. ಇವುಗಳ ಮುಂದೆ ತೆರೆದ ಅಂಗಳವಿದ್ದು ಅದರ ಮಧ್ಯ ಒಂದು ತೊಟ್ಟಿಯಿದೆ. ದೇವಾಲಯಕ್ಕೆ ಒಂದು ಗರ್ಭ-ಗುಡಿಯಿದೆ. ಗರ್ಭಗುಡಿಯ ನಾಲ್ಕು ಮೂಲೆಗಳಲ್ಲಿ ಅರ್ಧಗಂಭಗಳಿವೆ. ಇದರ ಭುವನೇಶ್ವರಿಯ ನಾಲ್ಕು ಮೂಲೆಗಳಲ್ಲಿ ಅಲಂಕೃತ ಕೀರ್ತಿಮುಖಗಳ ಫಲಕಗಳಿವೆ. ಅವುಗಳ ಮಧ್ಯ ಪದ್ಮಫಲಕವಿದೆ. ಗರ್ಭಗೃಹ ಹಿಂದಿನ ಗೋಡೆಯಲ್ಲಿ ಒಂದು ಜಾಲಂದ್ರವಿದೆ. ಆದರಲ್ಲಿ ದೇವರ ವಿಗ್ರಹವಾಗಲಿ ಅಥವಾ ಅದರ ಪೀಠವಾಗಲಿ ಉಳಿದಿರುವುದಿಲ್ಲ. ಗರ್ಭಗೃಹದ ಬಾಗಿಲು ಚೌಕಟ್ಟಿನ ಮೇಲೆ ವೈವಿಧ್ಯಮಯ ಒಂಭತ್ತು ಶಾಖೆಗಳಿವೆ. ಬಾಗಿಲು ಚೌಕಟ್ಟಿನ ಲಲಾಟಬಿಂಬದ ಮೇಲೆ ಮಧ್ಯದಲ್ಲಿ ಕುಳಿತ ಚತುರ್ಭುಜ ಗಣೇಶನ ಚಿತ್ರವಿದೆ. ಬಾಗಿಲು ಫಲಕದಲ್ಲಿದ್ದ ದ್ವಾರಪಾಲಕರ ಚಿತ್ರಗಳನ್ನು ಸಂಪೂರ್ಣವಾಗಿ ಕಡಿದುಹಾಕಲಾಗಿದೆ. ಆ ಫಲಕಗಳಲ್ಲಿ ಏಳು ವಿವಿಧ ನಮೂನೆಯ ಶಾಖೆಗಳಿವೆ.

ಈ ದೇವಾಲಯವು ಶೈಲಿಯ ದೃಷ್ಟಿಯಿಂಧ ಸುಮಾರು ಕ್ರಿ. ಶ. ೧೧-೧೨ನೇ ಶತಮಾನದ್ದಾಗಿದೆ. ಈ ದೇವಾಲಯವನ್ನು ಲಕ್ಷ್ಮೀಗುಡಿ, ರಾಜ್ಯಲಕ್ಷ್ಮಿ ದೇವಾಲಯ ಎಂದು ಕರೆಯುತ್ತಾರೆ. ಆದರೆ ಈ ಕೋಟೆಯಲ್ಲಿರುವ ಕಲ್ಯಾಣ ಚಾಲುಕ್ಯರ ಜಗದೇಕಮಲ್ಲನ ಒಂದು ಶಾಸನದಲ್ಲಿ 'ಅರಮನೆ ತೆಂಕಣದ ಭೀಮೇಶ್ವರ'ದ ಉಲ್ಲೇಖ ವಿದೆ. ಈಗಿರುವ ಮ್ಯೂಜಿಯಂ ಕಟ್ಟಡವನ್ನು ಅರಮನೆ ಎಂದು ಕರೆಯುವರೆಂದು ಈ ಮೇಲೆ ಹೇಳಿದೆ. ಈ ಅರಮನೆಯ ದಕ್ಷಿಣಕ್ಕೆ ದೇವಾಲಯದ ಕಟ್ಟಡವಿರುವುದು. ಆದುದರಿಂದ ಈ ಕಟ್ಟಡವು ಮೂಲತಃ ಭೀಮೇಶ್ವರ ದೇವಾಲಯವೆಂದು ಗುರುತಿಸ ಬಹುದು.

## ನೀರಿನ ಸಂಪರ್ಕ

ಈ ದೇವಾಲಯ ರಾಜನ ಮಹಲ್ ಎದುರಿಗೆ ಹಾಗೂ ಇನ್ನಿತರ ಕಡೆಗಳಲ್ಲಿ ನೀರಿನ ತೊಟ್ಟಿಗಳಿವೆ. ಈ ತೊಟ್ಟಿಗಳ ಮಧ್ಯ ಆಳವಾದ ಚಿಕ್ಕ ಕೊಳವೆಗಳಿವೆ. ಅವುಗಳ ತಳದಲ್ಲಿ ಸದಾ ನೀರು ಇರುವುದು ಮಹತ್ವದ್ದಾಗಿದೆ. ಮೊದಲನೇ ಸುತ್ತಿನ ಕೋಟೆ ಗೋಡೆ ಹೊರಗೆ ಕಂದಕದಲ್ಲಿ ಉತ್ತರ-ದಕ್ಷಿಣದಲ್ಲಿ ಎರಡು 'ಟಿ' ಆಕಾರದ ಬಾವಿಗಳಿವೆ. ಎರಡನೇ ಸುತ್ತಿನ ಕೋಟೆ ಒಳಗಡೆ ಅರಮನೆ ಹತ್ತಿರ ಚಿಕ್ಕ ಆಳವಾದ ಬಾವಿಯಿದೆ. ಈ ಮೂರು ಬಾವಿಗಳ ನೀರು ತಳದಲ್ಲಿ ಹರಿದಾಡುವ ಸಂಪರ್ಕ ವೇನಾದರೂ ಇದೆಯೇ ? ಹೇಗೆ ? ಎಂಬುದನ್ನು ತಿಳಿಯಬೇಕಾಗಿದೆ. ಈ ಬಾವಿಗಳ ನೀರನ್ನು ಕೋಟೆ ಒಳಗಿನ ವಿವಿಧ ಕೊಠಡಿಗಳಿಗೆ ರವಾನಿಸುವ ಕೊಳವೆಗಳ ಜೋಡಣೆ ಅಲ್ಲಲ್ಲಿದೆ.

## ಕಾಲಮಾನ

ಕೋಟೆ ಗೋಡೆಗಳ ಕೆಳಭಾಗದ ತಳಪಾಯ ಕೋಟೆ ಗೋಡೆಗೆ ಹೊಂದಿರುವ ಹಾಳಾದ ಕಟ್ಟಡಗಳು, ದೇವಾಲಯ, ಶಿಲ್ಪಗಳು ಮುಂತಾದ ಅವಶೇಷಗಳು ಶೈಲಿಯ ದೃಷ್ಟಿಯಿಂದ ಕಲ್ಯಾಣ ಚಾಲುಕ್ಯರ ಕಾಲದ ಅವಶೇಷಗಳೆಂದು ಹೇಳಬಹು. ಆಗಿನ ಅರಮನೆ, ಆಸ್ಥಾನ ಕಟ್ಟಡಗಳು ಅಲ್ಲಿ ಎಲ್ಲಿದ್ದವು ಹೇಗಿದ್ದವು ಎಂಬುದನ್ನು ಈಗ ಗುರುತಿಸಲು ತುಂಬಾ ಕಠಿಣವಾಗಿದೆ. ಇದರಿಂದಾಗಿ ಈಗಿರುವ ಅಲ್ಲಿಯ ಕಟ್ಟಡಗಳಲ್ಲಿ ಮೂಲ ಶೈಲಿ ಲಕ್ಷಣಗಳು ಸಂಪೂರ್ಣವಾಗಿ ಮಾರ್ಪಾಟಾಗಿವೆ. ಅಲ್ಲಿಯ ಮಸೀದಿಯ ಮೇಲಿನ ಶಾಸನದಿಂದ ಇದರ ಮೂಲ ಕಟ್ಟಡಗಳನ್ನು ಕ್ರಿ.ಶ. ೧೭ನೇ ಶತಮಾನದಲ್ಲಿ ಸಮಗ್ರವಾಗಿ ಬದಲಾಯಿಸಿರುವ ಸಾಧ್ಯತೆ ಹೆಚ್ಚು. ಇದಲ್ಲದೆ ಕ್ರಿ.ಶ. ೧೭ನೇ ಶತಮಾನದ ಪೂರ್ವದಲ್ಲಿ ಕಾಲಕಾಲಕ್ಕೆ ಜರುಗಿದ ದಾಳಿ ಆಕ್ರಮಣಕ್ಕೆ ಈ ಕೋಟೆಯು ಬಲಿಯಾಗಿರಬೇಕೆಂದು ಈ ನಗರದ ಚರಿತ್ರೆಯಿಂದ ಅಭಿಪ್ರಾಯ ಪಡ ಬಹುದಾಗಿದೆ.

## ಕೃತಜ್ಞತೆಗಳು

[ಕರ್ನಾಟಕ ವಿಶ್ವವಿದ್ಯಾಲಯ ಕುಲಪತಿಗಳು ಮತ್ತು ಕುಲಸಚಿವರು, ಕರ್ನಾಟಕ ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಮತ್ತು ಶ್ರೀ ಗುರುನಾಥ ಗಡ್ಡೆ ಅವರಿಗೆ ಕೃತಜ್ಞನಾಗಿದ್ದೇನೆ.]

ಲಕ್ಷ್ಮಣ್ ತೆಲಗಾವಿ

# ಚಳ್ಳಕೆರೆ ತಾಲ್ಲೂಕಿನ ಕೆಲವು ಗ್ರಾಮಗಳಿಗೆ ಸಂಬಂಧಿಸಿದ ಒಂದು ಚಾರಿತ್ರಿಕ ದಾಖಲೆ

ಚಿತ್ರದುರ್ಗ ಜಿಲ್ಲೆಯ ಗ್ರಾಮವಾರು ಚರಿತ್ರೆಯ ರಚನೆಗೆ ಅನುಕೂಲವಾಗುವ ಕಾಗದದ ದಾಖಲೆಯೊಂದನ್ನು ಪರಿಚಯಿಸುವುದೇ ಈ ಲೇಖನದ ಉದ್ದೇಶ. ಚಳ್ಳಕೆರೆ ತಾಲ್ಲೂಕಿನ ಕಸಬಾ, ಪರಶುರಾಂಪುರ ಮತ್ತು ತಳಕು ಹೋಬಳಿಗಳಲ್ಲಿಯ ಕೆಲವು ಗ್ರಾಮಗಳ ಬಗೆಗೆ ಈ ದಾಖಲೆಯು ಮುಖ್ಯವಾಗಿ ವಿವರಿಸುತ್ತದೆ. ಸಾಂದರ್ಭಿಕವಾಗಿ ಚಿತ್ರ ನಾಯಕನಹಳ್ಳಿ, ಮದ್ದಿಹಳ್ಳಿ, ಎರಡುಕೆರೆ, ಕೋಡಿಹಳ್ಳಿ, ಕೊಂಡಾಪುರ, ಮೈಲನಹಳ್ಳಿ, ಚಿಂತರ್ಲಹಳ್ಳಿ, ಶಿರಿವಾಳ ದೊಣೇಹಳ್ಳಿ, ಕೋನಾಪುರ, ಚಳಮಡುಗು, ಕಲ್ಯಾಣದುರ್ಗ, ದೊಡ್ಡಗಟ್ಟ, ನಾಗಗೊಂಡನಹಳ್ಳಿ, ಲಕಮಗೊಂಡನಹಳ್ಳಿ, ದುರ್ಗಾವರ, ಕೋಟಿಕೆರೆ, ಜರಿಮಲೆ, ಗುಡೇಕೋಟೆ, ಮದ್ದಗಿರಿ, ಲಿಂಗದಹಳ್ಳಿ, ಬೆನಕನಹಳ್ಳಿ, ಉಳ್ಳರ್ತಿ, ದೇವರ್ಲಹಳ್ಳಿ, ಬೂದಿದಿಬ್ಬದಹಳ್ಳಿ, ರೇಣುಕಾಪುರ, ಬಸವನಪಟ್ಟಣ, ಕರೇಕಲ್ಲು ತಿಮ್ಮಲಾಪುರ, ತಪಸಲಕುಂಟೆ. ಬಾಲೇನಹಳ್ಳಿ, ಗೋಸಿಕೆರೆ, ಚೆನ್ನಮ್ಮನಾಗತಿಹಳ್ಳಿ, ಸವಿಗೊಂಡನಹಳ್ಳಿ, ಭೋಗನಹಳ್ಳಿಬ, ವೀರಮಲ್ಲನಹಳ್ಳಿ, ಬೊಮ್ಮನಕುಂಟೆ, ಪುಟ್ಲಾರಹಳ್ಳಿ, ಕೊರ್ಲ ಕುಂಟೆ, ರತ್ನಗಿರಿಸೀಮೆ, ಮಿಡಗೇಸಿ–ಇವೇ ಮೊದಲಾದ ಊರು ಗಳನ್ನೂ ಕುರಿತು ಹೇಳುತ್ತದೆ.

ಈ ದಾಖಲೆಗೆ ನಿರ್ದಿಷ್ಟ ಹೆಸರು ಇಲ್ಲದಿರುವುದರಿಂದ, ಸದ್ಯಕ್ಕೆ ಇದನ್ನು 'ದಾಖಲೆ'ಯೆಂತಲೇ ಇಲ್ಲಿ ಸಂಬೋಧಿಸಿದೆ. ಈ ದಾಖಲೆಯಲ್ಲಿ ಕಸಬಾ ಹೋಬಳಿಯ ದೊಡ್ಡೇರಿ,

ಪರಶುರಾಂಪುರ ಹೋಬಳಿಯ ಜಾಜೂರು, ಹರವಿಗೊಂಡನಹಳ್ಳಿ, ಮತ್ಸಮುದ್ರ, ಪಗಡಲಬಂಡೆ ಹಾಗೂ ತಳಕು ಹೋಬಳಿಯ ಯಾದಲಕಟ್ಟೆ, ಕ್ಯಾತ ಗೊಂಡನಹಳ್ಳಿ, ಕಾಲುವೇಹಳ್ಳಿ, ಗುಡೇಹಳ್ಳಿ ಮೊದಲಾದ ಗ್ರಾಮಗಳ ಬಗೆಗೆ ಮಾಹಿತಿಯಿದೆ. ಮುಖ್ಯವಾಗಿ, ಇದು ಕೆಲವು ಜಾತಿವರ್ಗಗಳವರ ವೃತ್ತಾಂತವನ್ನು ಒಳಗೊಂಡಿರುವುದ ರಿಂದ, ಅವುಗಳ ಹಿನ್ನೆಲೆಯಲ್ಲಿ ಆಯಾ ಊರುಗಳು, ಕೆಲವು ಕಾಮಗಾರಿಗಳು ಹಾಗೂ ಅಲ್ಲಿಯ ಜಾತ್ರೆ-ಉತ್ಸವ, ಪೂಜಾಕ್ರಮ, ಇತ್ಯಾದಿಗಳ ಪರಿಚಯ ಉಂಟಾಗುತ್ತದೆ.

ಈ ದಾಖಲೆಯಲ್ಲಿರುವುದು ಜಾಜೂರು ಶ್ಯಾನುಭೋಗರ ವಂಶಾವಳಿ, ಯಾದಲ ಕಟ್ಟೆಗ್ರಾಮ ಹುಟ್ಟಿದ್ದು, ಯಾದಲಕಟ್ಟೆ ಗೌಡರ ವಂಶಾವಳಿ, ಯಾದಲ ಕಟ್ಟೆ ತಳವಾರರ ವಂಶಾವಳಿ, ಯಾದಲಕಟ್ಟೆ ಚತುರ್ಗಡಿ ಹೊಲಮೇರೆ ಕಲ್ಲುಗಳು, ಯಾದಲಕಟ್ಟೆ ಕಾಲುವೇ ಹಳ್ಳಿ ಪೂರ್ವಕ್ಕೆ ಆನೇದ ಕಮ್ಮಾರ ಸ್ವಾಸ್ತಿ ಹಾಗೂ ಈಚೆಗೆ ಹೆಣ್ಣುಮಗಳಿಗೆ ಕೊಟ್ಟ ವಿವರಾ, ಯಾದಲಕಟ್ಟೆ ಬೇಗಾರರ ವಂಶಾವಳಿ, ಯಾದಲಕಟ್ಟೆಯಲ್ಲಿ ಆಯಗಾರರ ನಿಗದಿ; ಕ್ಯಾತಗೊಂಡನಹಳ್ಳಿ ಗ್ರಾಮ ಹುಟ್ಟಿದ್ದು, ಕ್ಯಾತಗೊಂಡನಹಳ್ಳಿ ತಳವಾರರ ಸಂತತಿ, ಕ್ಯಾತಗೊಂಡನಹಳ್ಳಿ ಬೇಗಾರರ ವಂಶಾವಳಿ, ಕ್ಯಾತಗೊಂಡನಹಳ್ಳಿಯಲ್ಲಿ ಆಯಗಾರರ ನಿಗದಿ, ಕ್ಯಾತಗೊಂಡನಹಳ್ಳಿಗೂ ಯಾದಲಕಟ್ಟೆಗೂ ರಹದಾರಿ, ಗ್ರಾಮದೇವತೆ ಮಾಡಿದರೆ ಕೊಡುವ ಮರ್ಯಾದೆ ವಿವರಾ, ಯಾದಲಕಟ್ಟೆಯಲ್ಲಿ ಕರಿಯಮ್ಮ, ಮಾರಮ್ಮ ಮಾಡುವ ವಿವರಾ; ಕಾಲುವೇ ಹಳ್ಳಿ ಗ್ರಾಮ ಹುಟ್ಟಿದ್ದು, ಕಾಲುವೇಹಳ್ಳಿ ತಳವಾರರ ಸಂತತಿ, ಕಾಲುವೇಹಳ್ಳಿ ತಳವಾರರು ಗುಡೇಹಳ್ಳಿ ಪೋಬಳದೇವರು ಮಾಡುವ ಪಾಲು ವಿವರಾ, ಕಾಲುವೇ ಹಳ್ಳಿ ಅಕ್ಕಸಾಲಿಕೆ ದೊಡ್ಡೇರಿ ಅಕ್ಕಸಾಲಿಗರು ಸಂಪಾದಿಸಿದ ವಿವರಾ, ಕಾಲುವೇಹಳ್ಳಿ ಬೇಗಾರರ ಸಂತತಿ; ಹರವಿಗೊಂಡನಹಳ್ಳಿ ಗ್ರಾಮ ಹುಟ್ಟಿದ್ದು ; ಮತ್ಸಮುದ್ರ ಗ್ರಾಮ ಹುಟ್ಟಿದ್ದು ಹಾಗೂ ಪಗಡಲಬಂಡೆ ವೃಂದಾವಂದನಹಳ್ಳಿ ಹುಟ್ಟಿದ್ದು. ಇಲ್ಲಿಯ ವೃತ್ತಾಂತಗಳು ಈ ದಾಖಲೆಯು ಒಳಗೊಂಡಿರುವ ವಿವಿಧ ವಿಷಯಗಳ ಬಗೆಗೆ ಅರಹುತ್ತವೆ.

ದಾಖಲೆಯ ಆರಂಭದಲ್ಲಿ, ಇಷ್ಟದೈವಗಳನ್ನು ಸ್ಮರಿಸುವುದರೊಡನೆ ತಮ್ಮ ಸ್ಥಳಮನೆ ವಿದ್ಯಮಾನ, ವಂಶಪರಂಪರೆ ತಿಳಿಯಬೇಕೆಂದು ಜಾಜೂರು ಕಾಮಸಮುದ್ರ ಸ್ಥಳದ ಶ್ಯಾನುಭೋಗ ತಿಪ್ಪಣ್ಣನು ತಮ್ಮ ಹಿರಿಯರು ಹೇಳಿದ್ದು, ತಿಳದಿದ್ದು, ಯಾರಾದರೂ ಬುದ್ಧಿವಂತರು ಹೇಳಿದ್ದು, ತಾನು ತಿಳಿದಿದ್ದು, ಕಂಡಿದ್ದು ಮುಂತಾಗಿ ಶೋಧಿಸಿ ನೋಡಿಕೊಂಡು, ಮೊದಲು ತಮ್ಮ ಹಿರಿಯರು ಕಾಗದದ ಸುರುಳಿಯಲ್ಲಿ ಬರೆದಿದ್ದಂತಹದು ಬಹಳ ಜೀರ್ಣವಾಗಿದ್ದುದರಿಂದ ಅದರಲ್ಲಿ ತಾನು ಕಾಣುವಂತಹ

ವನ್ನು ನೋಡಿಕೊಂಡು, ತನ್ನ ಬುದ್ಧಿವಂತಿಕೆಯಿಂದ ತನ್ನ ಮಗ ರುದ್ರಪ್ಪನ ಸಂಗಡ ಪರೀಧಾವಿ ಸಂವತ್ಸರದಲ್ಲಿ ಮಹಾಕ್ಷಾಮವೂ ಪರಶುರಾಂ ಭಾವೂನ ಅವಾಂತರವೂ ಉಂಟಾದಾಗ ಚಳ್ಳಕೆರೆಗೆ ವಲಸೆ ಹೋಗಿದ್ದಾಗ, ಪಂಚಾಂಗದ ವೆಂಕಪ್ಪನವರ ಮನೆಯಲ್ಲಿ ಬರೆಯಿಸಿದಂತಹ ವಿಚಾರ ಇದಾಗಿದೆಯೆಂಬ ಪ್ರಸ್ತಾವನೆ ಕಂಡು ಬರುತ್ತದೆ. ಮೂಲದಾಖಲೆಯನ್ನು ಆಧರಿಸುವುದರೊಡನೆ ಸಮಕಾಲೀನ ಸಂಗತಿಗಳನ್ನೂ ಸೇರಿಸಿ, ಪರಿಷ್ಕರಿಸಿ ಹಾಗೂ ವಿಸ್ತರಿಸಿ ಇದನ್ನು ಬರೆಯಲಾಗಿದೆಯೆಂಬುದು ಇಲ್ಲಿ ಸ್ಪಷ್ಟಪಡುವ ಅಂಶ.

ಈ ದಾಖಲೆಯು ಹುಟ್ಟಿಕೊಂಡ ಸಂದರ್ಭವು ಗಮನೀಯವಾದುದು. ಇಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಪರಶುರಾಂ ಭಾವೂನ ಅವಾಂತರ ಹಾಗೂ ಮಹಾಕ್ಷಾಮಗಳ ಸಂದರ್ಭವನ್ನು ಚಿತ್ರದುರ್ಗ ನಾಯಕ-ಅರಸರ ವಂಶಾವಳಿಗಳು ಸಮರ್ಥಿಸುತ್ತವೆ. ಈ ವಂಶಾವಳಿಗಳು ದಾಖಲಿಸಿರುವಂತೆ ಪರೀಧಾವಿ ಸಂವತ್ಸರದಲ್ಲಿ ಪೂನಾದಿಂದ ಆರೇರ ಪರಶುರಾಂ ಭಾವೂನ ದಂಡು ಬಂದು ಟಿಪ್ಪುಸುಲ್ತಾನನ ರಾಜ್ಯವನ್ನು ಆಕ್ರಮಿಸಿದ್ದರಿಂದಲೂ ಮಳೆಮಾರು ತಡೆದದ್ದರಿಂದಲೂ ಜನರು ಗ್ರಾಮಗಳ ಬಿಟ್ಟು ಗೂಳೆಯ ಹೋದದ್ದರಿಂದಲೂ ರಾಜ್ಯಕ್ಕೆ ಮಹಾಕ್ಷಾಮ ಬಿದ್ದು, ಅನ್ನವಿಲ್ಲದೆ ಬಹುಜನ ಲಯವಾಯಿತು.

ಇಂತಹ ಪರಿಸ್ಥಿತಿಯು ೧೭೯೨ ರಲ್ಲಿ ಉಂಟಾಗಿದ್ದಿತೆಂಬುದು ಸಮಕಾಲೀನ ಚಾರಿತ್ರಿಕ ದಾಖಲೆಗಳಿಂದ ತಿಳಿದುಬರುತ್ತದೆ. ಮರಾಠಾ ದಳಪತಿ ಪರಶುರಾಂ ಭಾವೂ ತನ್ನ ೨೦,೦೦೦ ದಂಡಿನೊಡನೆ ಶ್ರೀ ರಂಗಪಟ್ಟಣದ ಟಿಪ್ಪುಸುಲ್ತಾನನ ವಿರುದ್ಧ ನಡೆದ ಮೂರನೇ ಆಂಗ್ಲೋ-ಮೈಸೂರು ಯುದ್ಧ (೧೭೯೦-೯೨) ದಲ್ಲಿ ಇಂಗ್ಲಿಷರಿಗೆ ಸಹಾಯ ಮಾಡಲು ಬಂದಿದ್ದನು. ೧೭೯೨ ರಲ್ಲಿ ಶ್ರೀರಂಗಪಟ್ಟಣದ ಮುತ್ತಿಗೆಗೆ ಮುನ್ನ ಪ್ರಾಯಶಃ ಮಾರ್ಚ್ ತಿಂಗಳ ವೇಳೆಗೆ ಚಿತ್ರದುರ್ಗ ಮತ್ತು ಬಿದನೂರುಗಳ ನಡುವಣ ಸೀಮೆಗಳನ್ನು ಲೂಟಿ ಮಾಡುವ ಕಾರ್ಯದಲ್ಲಿ ನಿರತನಾಗಿದ್ದನು. ಆಗ ಚಳ್ಳಕೆರೆ ಸೀಮೆಯಲ್ಲೂ ಇವನು ಅವಾಂತರ ಮಾಡಿರುವುದು ಇದರಿಂದ ವ್ಯಕ್ತಪಡುತ್ತದೆ. ಊರು ಸುಡುವುದು, ತೋಟ-ತೋಪುಗಳನ್ನು ಹಾಳುಗೆಡಹುವುದು, ಜನರನ್ನು ಹಿಂಸಿಸುವುದು, ಮನಸೇಚ್ಛೆ ಲೂಟಿ ಮಾಡುವುದು-ಇವೇ ಮೊದಲಾದ ದುಷ್ಕೃತ್ಯದಲ್ಲಿ ಭಾವೂನ ದಂಡು ತೊಡಗಿದ್ದರಿಂದ ಕೃಷಿಕಾರ್ಯಕ್ಕೆ ತೀವ್ರ ಧಕ್ಕೆ ಒದಗಿತು. ಇದರೊಡನೆ ಅನಾವೃಷ್ಟಿ ಸಹಾ ಉಂಟಾಗಿ ಜನರು ಹಸಿವಿನಿಂದ ಕಂಗೆಟ್ಟು ಬೇರೆಡೆ ವಲಸೆ ಹೋಗುವಂತಾಯಿತು. ಆ ಸಂದರ್ಭದಲ್ಲೇ, ಈ ದಾಖಲೆಯನ್ನು ಬರೆಯಿಸಿದ ತಿಪ್ಪಣ್ಣನು ತನ್ನ ಮಗ ಹಾಗೂ ಇತರರೊಡನೆ ಚಳ್ಳಕೆರೆಗೆ ಬಂದು ನೆಲೆಸಿದುದು ಈ ಹಿನ್ನೆಲೆಯಲ್ಲಿ ಸ್ಪಷ್ಟಪಡುತ್ತದೆ. ಈ

ಮಹಾಕ್ಷಾಮವು ಮೂರು ವರುಷಗಳ ವರೆಗೆ ಮುಂದುವರೆದುದನ್ನು ಹಾಗೂ ಜನವಸತಿಯಿಲ್ಲದೆ ಗ್ರಾಮಗಳು ಹಾಳುಬಿದ್ದುದನ್ನು ಈ ದಾಖಲೆಯು ಸಮರ್ಥಿಸುತ್ತದೆ.

ಹದಿನೆಂಟನೆಯ ಶತಮಾನದ ಕಡೆಯ ದಶಕದಲ್ಲಿ ಪರಿಷ್ಕರಣೆಯೊಡನೆ ವಿಸ್ತರಿಸಲ್ಪಟ್ಟ ಈ ದಾಖಲೆಯಲ್ಲಿ, ಆ ಶತಮಾನದ ಕೆಲವಾರು ಸಂಗತಿಗಳು ಉಲ್ಲೇಖಗೊಂಡಿವೆ. ಅವು ಖಚಿತ ಚಾರಿತ್ರಿಕಾಂಶಗಳಾಗಿವೆಯೆಂಬುದು ಇತರ ಸಮಕಾಲೀನ ದಾಖಲೆಗಳಿಂದ ತಿಳಿಯಬಹುದಾಗಿದೆ.

ಚಿತ್ರದುರ್ಗ ನಾಯಕ-ಅರಸರಿಗೆ ಸಂಬಂಧಿಸಿದ ಇಲ್ಲಿಯ ಕೆಲವಾರು ಸಂಗತಿಗಳು ಗಮನಾರ್ಹವಾದುವು. ಮತ್ತೋಡು, ನಿಡುಗಲ್ಲು ಹಾಗೂ ಸಿರಾ ಸಂಸ್ಥಾನಗಳ ವಿಚಾರಗಳನ್ನು ಅಲ್ಲಲ್ಲಿ ಸೂಕ್ಷ್ಮವಾಗಿ ಹೇಳಲಾಗಿದೆ. ತಿಪ್ಪನಾಯಕ ಹಾಗೂ ವೀರತಿಮ್ಮಣ್ಣನಾಯಕರೆಂಬ ನಿಡುಗಲ್ಲು ಸಂಸ್ಥಾನದ ಈರ್ವರು ದೊರೆಗಳ ಪ್ರಸ್ತಾಪವೂ ಇದರಲ್ಲಿ ಬಂದಿದೆ. ಈ ದೊರೆಗಳು ಗ್ರಾಮನಿರ್ಮಾಣ, ಇತ್ಯಾದಿ ಕಾರ್ಯಗಳಿಗೆ ಪ್ರೋತ್ಸಾಹ ನೀಡಿದ, ಜನರನ್ನು ರಕ್ಷಿಸಿದ ಸಂಗತಿಗಳು ಇಲ್ಲಿ ಪ್ರಾಸಂಗಿಕವಾಗಿ ಉಕ್ತಗೊಂಡಿವೆ. ನಿಡುಗಲ್ಲನ್ನು 'ಮಹಾ ಧರ್ಮಸಂಸ್ಥಾನ'ವೆಂದು ಕರೆದಿರುವುದು ಇಲ್ಲಿಯ ವೈಶಿಷ್ಟ್ಯ.

ಚಿತ್ರದುರ್ಗದ ಅರಸ ಬಿಚ್ಚುಗತ್ತಿ ಭರಮಣ್ಣನಾಯಕನ (೧೬೮೯-೧೭೨೧) ಕಾಲದಿಂದಲೇ ಈ ದಾಖಲೆಯಲ್ಲಿಯ ಸಂಗತಿಗಳು ಆರಂಭಗೊಂಡುದು ಕಂಡು ಬರುತ್ತದೆ. ಈ ದಾಖಲೆಯ ಪ್ರಕಾರ, ಭರಮಣ್ಣನಾಯಕನು 'ಉತ್ಕೃಷ್ಟ ದೊರೆ' ಯಾಗಿದ್ದನು. ಈ ಅರಸನ ಆಡಳಿತ ಕ್ರಮವು ಬಿಗಿಯಿಂದ ಕೂಡಿದ್ದಿತು. ಈತನು ನಿಡುಗಲ್ಲನ್ನು ಸಾಧಿಸಿದ ಸೂಚನೆಯೂ ಇದರಲ್ಲಿದೆ. ಚಿತ್ರದುರ್ಗವನ್ನು 'ಚಿತ್ರಕಲ್' ಎಂತಲೂ ಸಂಬೋಧಿಸಿದೆ. ೧೬೯೫ರಲ್ಲಿ ದೊಡ್ಡೇರಿ ಕದನ ನಡೆದು ಸಿರಾದ ಬಾದಷಹರ ಪ್ರತಿನಿಧಿ ಖಾಸಿಂಖಾನನು ಇಲ್ಲಿ ತನ್ನ ನೆಲೆಯನ್ನು ಸ್ಥಾಪಿಸಿದ ಹಿನ್ನೆಲೆಯಲ್ಲಿ ಕೆಲವಾರು ಅಂಶಗಳು ಇಲ್ಲಿ ಕಂಡುಬರುತ್ತವೆ.

ಭರಮಣ್ಣನಾಯಕನ ಮಗ ಹಿರೇ ಮದಕರಿನಾಯಕನು (೧೭೨೧-೪೮) ಹೊಸದುರ್ಗ, ಮತ್ತೋಡು, ನಾಯಕನಹಟ್ಟಿ, ಹರತಿ ಮೊದಲಾದ ಸಣ್ಣ ಪಾಳೆಯಗಳನ್ನು ಸಾಧಿಸಿದುದನ್ನು ಹಾಗೂ ಆಗ ಮತ್ತೋಡಿನ ದೊರೆಯಾಗಿದ್ದವನು ಹಾಲಪ್ಪನಾಯಕನೆಂಬುದನ್ನು ಕುರಿತು ಈ ದಾಖಲೆ ಹೇಳುತ್ತದೆ. ೧೭೪೮-೪೯ ರಲ್ಲಿ ಮಾಯಕೊಂಡದಲ್ಲಿ ಹಿರೇಮದಕರಿಯು ಬಿದನೂರು ಮತ್ತು ಹರಪನಹಳ್ಳಿಯವರ ವಿರುದ್ಧ ಹೋರಾಟ ನಡೆಸಿ ರಣರಂಗದಲ್ಲೇ ಮೃತಪಟ್ಟನು. ಈ ಯುದ್ಧ ಸಂದರ್ಭದಲ್ಲಿ ಈ ನಾಯಕನು ಮರಾಠರ ಸಿದ್ಧೋಜಿ (ಗುತ್ತಿಯ ಸಿದ್ಧೋಜಿರಾವ್

ಘೋರ್ಪಡೆ) ಯನ್ನು ಕರೆದು ಕೊಂಡು ದಂಡಿನೊಡನೆ ಆಣಜಿಯ ಬಳಿಯಲ್ಲಿ ಇಳಿದು ಕೊಂಡಿದ್ದನೆಂಬ ಸಂಗತಿ ಚರಿತ್ರೆಯ ಗ್ರಂಥಗಳಲ್ಲಿದೆ. ಈ ದಾಖಲೆಯು ಈ ಯುದ್ಧ ಸಂದರ್ಭವನ್ನು ಸೂಚಿಸುವುದರೊಡನೆ, ಹಿರೇಮದಕರಿಯು ಸಿದ್ಧೋಜಿಯ ಭೇಟಿಗೆ ಮುಲುಕ ಲೋಟಿಯ (ಪಾವಗಡ ತಾಲ್ಲೂಕು) ಬಳಿಗೆ ಬಂದಿದ್ದನೆಂಬ ಹೊಸ ಅಂಶ ವೊಂದನ್ನು ಹೊರಗೆಡಹುತ್ತದೆ. ಅಲ್ಲದೆ, ಆಗ ಹಿರೇಮದಕರಿಯು ಹೊಲಮೇರೆ ಸರಹದ್ದಿನಲ್ಲಿ ಬಂದು ನಿಂತು ಬೊಮ್ಮನಕುಂಟೆ, ಪುಟ್ಲಾರಹಳ್ಳಿ, ಕೊರ್ಲಕುಂಟೆಗಳಿಗೆ ಅಡಿಯಾಗಿ ವೃಂದಾವನದಹಳ್ಳಿಯನ್ನು ಹಾಕಿಸಿದ್ದನು. ದುರ್ಗದ ಸೀಮೆ ನಾಯಕವಾಡಿ ಗಳು ಹಾಗೂ ಇತರರ ಸಂಗಡ ಸಹಾ ಕಲ್ಲುಗುತ್ತಿ ಹಾಕಿಸಿ ಹೊಲಮೇರೆ ನಿರ್ಣಯ ಮಾಡಿ ದುರ್ಗಕ್ಕೆ ಹಿಂದಿರುಗಿದನು.

ಇಷ್ಟಲ್ಲದೆ, ಈ ದಾಖಲೆಯು ಹಿರೇಮದಕರಿನಾಯಕನ ತರುವಾಯ ಈತನ ಮಗ (ಇಮ್ಮಡಿ) ಕಸ್ತೂರಿರಂಗಪ್ಪನಾಯಕನು (೧೭೪೪-೫೪) ದೊರೆತನ ಮಾಡಿದು ದನ್ನೂ ಈ ನಾಯಕನು ಮೃತನಾದನಂತರ ಈತನ ತಾಯಿ ಓಬವ್ವನಾಗತಿಯು ಎರಡು ವರ್ಷಗಳ ಕಾಲ ದೊರೆತನದ ದರ್ಪ ನಡೆಸಿಕೊಂಡು ಪ್ರಧಾನಿಗಳ ಮುಖಾಂತರ ದರ್ಬಾರು ನಡೆಸಿಕೊಂಡಿದ್ದಳೆಂಬುದನ್ನೂ ಹೇಳುತ್ತದೆ. ಇದರ ಪ್ರಕಾರ, ರಂಗಪ್ಪನಾಯಕನು ದೊರೆತನ ಮಾಡಿದುದು ಮೂರು ವರುಷಗಳು ಮಾತ್ರ. ಇದು ಪರಿಶೀಲನಾರ್ಹ ಅಂಶ.

ಚಿತ್ರದುರ್ಗ ಸಂಸ್ಥಾನದ ಕೊನೆಯ ದೊರೆ ರಾಜಾವೀರ ಮದಕರಿನಾಯಕನ (ಚಿಕ್ಕ ಮದಕರಿನಾಯಕ: ೧೭೫೪-೭೯) ಆಳ್ವಿಕೆಯಲ್ಲಿ ಕಲ್ಲಿನಾಥಯ್ಯನೆಂಬವನು ಯಾದಲಕಟ್ಟೆ ಮಾಚನಗೌಡನ ಜೊತೆ ಚಿತ್ರದುರ್ಗಕ್ಕೆ ಹೋಗಿ ಐದು ವರಹಗಳನ್ನು ಮದಕರಿನಾಯಕನಿಗೆ 'ಪಾದಗಾಣಿಕೆ' ಇಟ್ಟು ಒಂದು ಮಠವನ್ನು ತನ್ನ ಸ್ವಂತಕ್ಕೆ ಸಂಪಾದಿಸಿಕೊಂಡ ಪ್ರಸಂಗವೂ ಇದರಲ್ಲಿ ದಾಖಲಾಗಿದೆ. ಅಲ್ಲದೆ, ಈ ದೊರೆಯ ದಂಡು ಲಿಂಗದವೀರಹಳ್ಳಿಯನ್ನು ಲೂಟಿ ಮಾಡಿದುದನ್ನೂ, ಕೋನಾಪುರ ಮತ್ತು ಕೊಂಡಾಪುರಗಳಲ್ಲಿ ಕೆಲವರ ಮೂಗು ಕೊಯ್ಯಿಸಿದುದನ್ನೂ ಹೇಳುತ್ತದೆ.

ಚಿತ್ರದುರ್ಗ ಸಂಸ್ಥಾನದ ಅಂತ್ಯದ ಬಗೆಗೂ ಈ ದಾಖಲೆಯಲ್ಲಿ ಮಾಹಿತಿ ಯುಂಟು. ಹೈದರ್‌ಆಲಿಯು (ದೊಡ್ಡನವಾಬರು) ಚಿತ್ರಕಲ್‌ದುರ್ಗಕ್ಕೆ ಮುತ್ತಿಗೆ ಹಾಕಿ, ಮದಕರಿ ನಾಯಕನನ್ನು ಕೈಸೆರೆ ಹಿಡಿದು, ದುರ್ಗವನ್ನು ಸ್ವಾಧೀನ ಮಾಡಿ ಕೊಂಡು ನಾಯಕನನ್ನೂ (ದೊರೆಯವರನ್ನು) ಶ್ರೀರಂಗಪಟ್ಟಣಕ್ಕೆ ಹಿಡಿದುಕೊಂಡು ಹೋದನೆನ್ನುತ್ತದೆ, ಈ ದಾಖಲೆ.

ಇದರೊಡನೆ, ಚಿತ್ರದುರ್ಗದ ಸುಬೇದಾರ್ ಆಗಿದ್ದ ಗೋವಿಂದರಾಯನ

ಪ್ರಸ್ತಾಪವೂ ಇಲ್ಲಿ ಬರುತ್ತದೆ. ಇಂಗ್ಲಿಷರು ಮೈಸೂರು ಪ್ರಾಂತವನ್ನು ಪೂರ್ಣ ವಶಪಡಿಸಿಕೊಂಡ ಮೇಲೆ ದಿವಾನ್ ಪೂರ್ಣಯ್ಯ (ಶ್ರೀಮಂತ ಮಹಾರಾಜೇಶ್ರೀ ಪೂರ್ಣಪ್ಪ) ನ ದಿವಾನಗಿರಿಯ ಸಂದರ್ಭದಲ್ಲಿ ಈ ಗೋವಿಂದ ರಾಯನ ತಮ್ಮ ಶೇಷಗಿರಿರಾಯನು ಅಮಲ್‌ದಾರನಾದುದನ್ನು ಈ ದಾಖಲೆಯು ಹೇಳುತ್ತದೆ.

ಗ್ರಾಮ ವ್ಯವಸ್ಥೆ, ಆಡಳಿತ, ಧರ್ಮ, ಸಂಸ್ಕೃತಿ, ಸಮಾಜ, ಇತ್ಯಾದಿ ಪರಿಸ್ಥಿತಿಗಳ ಬಗೆಗೆ ಈ ದಾಖಲೆಯು ಬೆಳಕು ಚೆಲ್ಲುತ್ತದೆ. ಚಾರಿತ್ರಿಕ ಯುಗದಿಂದ ಈಚೆವರೆಗಿನ ಹಲವಾರು ಸಂಗತಿಗಳು ಇದರಲ್ಲಿ ಸಂಗ್ರಹಗೊಂಡಿವೆ. ಚಳ್ಳಕೆರೆ ತಾಲ್ಲೂಕಿನ ಗ್ರಾಮಗಳ ಅಧ್ಯಯನದ ದೃಷ್ಟಿಯಿಂದ ಇದೊಂದು ಅಮೂಲ್ಯ ದಾಖಲೆ. ಮುಖ್ಯವಾಗಿ, ಚಿತ್ರದುರ್ಗ ನಾಯಕ ಅರಸರ ದಾಖಲೆಗಳಿಗೆ ಇದು ಪೂರಕವಾಗಿದೆ. ಇಲ್ಲಿರುವ ಚಾರಿತ್ರಿಕ ಸಂಗತಿಗಳು ನಂಬಿಕೆಗೆ ಅರ್ಹವಾಗಿದ್ದು, ಉಪಯುಕ್ತವೆನಿಸಿವೆ.

(ಈ ದಾಖಲೆಯನ್ನು ಒದಗಿಸಿದ ಪಾಂಡವಪುರದ ಶ್ರೀ ನಾ. ಪ್ರಭಾಕರ್ ಅವರಿಗೆ ನನ್ನ ಧನ್ಯವಾದಗಳು.)

**ವೇಣುಗೋಪಾಲ ಸೊರಬ**

# ಕನ್ನಡದಲ್ಲಿ ಪ್ರೇಮಕಾವ್ಯ

ಕನ್ನಡದಲ್ಲಿ ಪ್ರೇಮಕಾವ್ಯದ ಭರಪೂರವೇ ಇದೆ. ಪಂಪನಿಂದ ಹಿಡಿದು ಇತ್ತೀಚಿನ ಕವಿಗಳವರೆಗೆ ಪ್ರೇಮದ ವ್ಯಾಖ್ಯಾನ, ಅನುಸಂಧಾನ ಮತ್ತು ನಿರೂಪಣೆ ಬೇರೆ ಬೇರೆ ರೀತಿಯಲ್ಲಿ ನಡೆದು ಬಂದಿದೆ. ಪ್ರಾಚೀನ ಕಾವ್ಯಗಳಲ್ಲಿ ಪ್ರೇಮವೂ ಒಂದು ಕವಿಸಮಯವೇ ಆಗಿದ್ದರೂ, ಉಳಿದ ಕವಿಸಮಯಗಳಂತೆ, ಇದು ಕುರುಡು ಕುರುಡಾಗಿ ಚಿತ್ರಿಸಲ್ಪಟ್ಟಿಲ್ಲ. ಪ್ರಾಚೀನ ಸಂಸ್ಕೃತ ಕವಿಗಳಿಂದ ನಮ್ಮ ಹಿಂದಿನ ಕವಿಗಳು ಪ್ರಭಾವಿತರಾಗಿರುವುದೇ ಹೆಚ್ಚು. ಆದರೂ ಪಂಪ, ಕುಮಾರ ವ್ಯಾಸ, ಹರಿಹರ–ಇಂತಹ ಕವಿಗಳು ಪ್ರೇಮವನ್ನು ಚಿತ್ರಿಸುವ ರೀತಿಯಲ್ಲಿ ಸ್ವಂತಿಕೆ ಇದೆ. ಅದು 'ಶೃಂಗಾರ' ಎನಿಸದೆ, ಪ್ರೇಮಕ್ಕೆ ಹತ್ತಿರ ಬರುತ್ತದೆ.

ಹಾಗೆ ನೋಡಿದರೆ, ಪ್ರಾಚೀನ ಕವಿಗಳ 'ಶೃಂಗಾರ', ಆಧುನಿಕ ಕಾಲದ ನಿಜವಾದ 'ಪ್ರೇಮ'ಕ್ಕಿಂತ ತುಂಬ ಭಿನ್ನ. ಪ್ರಾಚೀನ ಕಾವ್ಯದ ಶೃಂಗಾರ, ದೇವಾಲಯಗಳಲ್ಲಿನ ಶಿಲ್ಪ ಕೃತಿಗಳಂತೆ. ಉದ್ದೇಶದಲ್ಲಿ, ಇವೆರಡಕ್ಕೂ ವಿಭಿನ್ನತೆ ಇರಲು ಸಾಧ್ಯ. ಆದರೆ, ಈ ಉದ್ದೇಶದ ಸಾಫಲ್ಯ ಇರುವುದು, ಇದನ್ನು ಪ್ರೇಕ್ಷಕ/ಓದುಗ ಹೇಗೆ ತೆಗೆದುಕೊಳ್ಳುತ್ತಾನೆ ಎನ್ನುವುದನ್ನು ಅವಲಂಬಿಸಿದೆ. ಅಂದರೆ, ಪ್ರಾಚೀನ ಕಾವ್ಯಗಳಲ್ಲಿನ 'ಶೃಂಗಾರ' ಲಕ್ಷಣ ಗ್ರಂಥಗಳಲ್ಲಿನ 'ಲಕ್ಷ್ಯ'ಗಳಿದ್ದಂತೆ. ಅವು ನೀತಿ ನಿರೂಪಣೆಯ ಸೂತ್ರೀಕರಣಕ್ಕೆ ಹತ್ತಿರವಾಗಿರುತ್ತವೆ. ಅವುಗಳಲ್ಲಿ 'ವಿಭಾವ' 'ಅನುಭಾವ'ಗಳಿಗೇ ಪ್ರಾಮುಖ್ಯ ದೊರೆತು, 'ಸಂಚಾರಿ' 'ವ್ಯಭಿಚಾರಿ' ಭಾವಗಳು ಹಿಂದೆ ಬೀಳುತ್ತವೆ.

ಈ ಹಿನ್ನೆಲೆಯಲ್ಲಿ ನೋಡಿದಾಗ, ಆಧುನಿಕ ಕನ್ನಡ ಕಾವ್ಯದಲ್ಲಿ ಪ್ರೇಮ ನಿರೂಪಣೆ, ಪ್ರಾಚೀನ ಕಾವ್ಯಗಳಲ್ಲಿನ ನಿರೂಪಣೆಗಿಂತ ಭಿನ್ನವಾಗಿದೆ.

* * * *

ಆಧುನಿಕ ಕನ್ನಡ ಕಾವ್ಯದಲ್ಲಿ ಕಂಡು ಬರುವ ಪ್ರೇಮಕಾವ್ಯವನ್ನು ಮುಖ್ಯವಾಗಿ, ದಾಂಪತ್ಯಕ್ಕೆ ಸಂಬಂಧಿಸಿದ ಪ್ರೇಮಕಾವ್ಯ ಮತ್ತು ಮುಕ್ತ ಪ್ರೇಮಕಾವ್ಯ ಎಂದು ಎರಡು ಭಾಗವಾಗಿ ಮಾಡಬಹುದು. ಗೋವಿಂದಪೈ ಅವರ"ನಂದಾದೀಪ"ದಲ್ಲಿ ದಾಂಪತ್ಯ ಜೀವನ ಕುರಿತ ಗೀತಗಳೂ ಬೇಂದ್ರೆಯವರ "ಸಖೀಗೀತ" ಪುಟ್ಟಪ್ಪನವರ ಕೆಲವು ಸಾಂಸಾರಿಕ ಗೀತಗಳು–ಮೊದಲಿನ ಗುಂಪಿಗೆ ಸೇರಿದವುಗಳು. ಪುಟ್ಟಪ್ಪನವರಲ್ಲಿ ಹೆಚ್ಚು ಕಂಡು ಬರುವ ಬಿಡಿ ಭಾವಗೀತಗಳನ್ನು ಒಂದು ಗೂಡಿಸಿದಾಗ ಸಾಂಸಾರಿಕ ಜೀವನದ ಒಂದು ಆಪ್ಯಾಯಮಾನವಾದ ಚಿತ್ರ ಮೂಡಿಬರುತ್ತದೆ. 'ಯಾವ ಜನ್ಮದ ಮೈತ್ರಿ ಈ ಜನ್ಮದಲಿ ಬಂದು, ನಮ್ಮಿಬ್ಬರನು ಮತ್ತೆ ಬಂಧಿಸಿಹುದೊ' ಎಂಬ ತಾತ್ತ್ವಿಕ ನಿಲುವಿನ ಮೇಲೆ ನಿಂತ, ಇಲ್ಲಿನ ದಾಂಪತ್ಯ ಸಂಬಂಧ ಪ್ರೇಮವನ್ನು ಸಾಂಪ್ರದಾಯಿಕ ದೃಷ್ಟಿಯಿಂದ ನೋಡುತ್ತದೆ. ಜತೆಜತೆಗೇ ದೈನಂದಿನ ಘಟನೆಗಳನ್ನು ಭಾವುಕವಾಗಿ ಚಿತ್ರಿಸುವ ಇಲ್ಲಿನ ಕವನಗಳು, ಜೀವನ ಸಾಫಲ್ಯಕ್ಕೆ ಪ್ರೇಮೋದ್ದೀಪನೆ ಅತ್ಯಂತ ಆವಶ್ಯಕ ಎಂಬ ಅಭಿಪ್ರಾಯವನ್ನು ಬಿಂಬಿಸುತ್ತದೆ.

ಆದರೆ ಗೋವಿಂದಪೈ ಅವರ 'ನಂದಾದೀಪ' ಚಿಂತನಶೀಲವಾದದ್ದು. ಇಲ್ಲಿ ಪ್ರೇಮತತ್ತ್ವ, ವ್ಯಕ್ತಿ–ವ್ಯಕ್ತಿಗಳ ನಡುವಣ ಅಂತರಂಗದ ಸಂಬಂಧವನ್ನು ಅರ್ಥೈಸುವ ಕ್ರಮವಾಗಿದೆ. ಇಲ್ಲಿ ಕಂಡು ಬರುವ ನೈಷ್ಠಿಕತೆ ಕೂಡ ಲೌಕಿಕ ಮಟ್ಟವನ್ನು ಮೀರಿದ ನೆಲೆಗೆ ಸೇರಿರುತ್ತದೆ.

ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮಕ್ಕೆ ಒಂದು ಅಭೂತ ಪೂರ್ವಸ್ಥಾನವಿದೆ. 'ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ' 'ನಾರಿ ನಿನ ಮಾರಿ ಮ್ಯಾಗ' ಎಂಬಂತಹ ಸಂಚಾರಿ ಭಾವದ ಕವನಗಳನ್ನು ನೀಡಿದ ಬೇಂದ್ರೆಯವರೇ 'ಸಖೀಗೀತ'ದಂತಹ ಸ್ವಂತ ಜೀವನಾಧಾರಿತ ಕವಿತೆಯನ್ನು ಬರೆದದ್ದು ಸಹಜವಾಗಿಯೇ ಇದೆ. ತಮ್ಮ ಪತ್ನಿ ತೀರಿಕೊಂಡಾಗಲೂ ಈ ಕವಿ ಕಾವ್ಯದ ಮೂಲಕ ಶ್ರದ್ಧಾಂಜಲಿ ನೀಡಿದ್ದು ಅರ್ಥಪೂರ್ಣವಾಗಿಯೇ ಇದೆ. ಹೊಸಗನ್ನಡ ಸಾಹಿತ್ಯದಲ್ಲಿ ತಮ್ಮ ಆತ್ಮಕತೆಯನ್ನು ಅವಲಂಬಿಸಿ ಅತ್ಯುತ್ಕೃಷ್ಟವಾದ ಪ್ರೇಮಕಾವ್ಯವನ್ನು ರಚಿಸಿರುವ ಕವಿ ಎಂದರೆ ಬೇಂದ್ರೆ ಒಬ್ಬರೇ. 'ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೇ' ಎಂಬ ಪಲ್ಲವಿ ಪ್ರೇಮವನ್ನು ಜನ್ಮಾಂತರಗಳಿಗೆ ಒಯ್ಯುವುದಷ್ಟೇ ಅಲ್ಲ, ಪ್ರೇಮ ಜೀವನದ ಸಾತತ್ಯವನ್ನೂ ಧ್ವನಿಪೂರ್ಣವನ್ನಾಗಿ ಮಾಡುತ್ತದೆ. ಐಹಿಕ ಜೀವನದ

ಏಳುಬೀಳುಗಳು, ಕಷ್ಟನಿಷ್ಠೂರಗಳು ಇಲ್ಲಿ ನಿಜವಾಗಿ ಪ್ರೇಮದ ಸರಗುಣಿಕೆಯನ್ನು ಬಿಗಿಯುತ್ತ ಹೋಗುತ್ತವೆ. ಎಲ್ಲವೂ ಪ್ರೇಮಕ್ಕೆ ವಸ್ತುವಾಗುವ ಇಲ್ಲಿನ ಕ್ರಮ, ಪ್ರೇಮದ ಸೀಮಿತ ಅರ್ಥವಲಯವನ್ನು ಹಿಗ್ಗಿಸುತ್ತದೆ. ಬಹುಶಃ ಬೇಂದ್ರೆಯವರ ಈ ಖಂಡಕಾವ್ಯ ಜಗತ್ತಿನ ಅತ್ಯುತ್ತಮ ಪ್ರೇಮಕಾವ್ಯಗಳಿಗೆ ಒಂದು ಒಳ್ಳೆಯ ಉದಾಹರಣೆಯಾಗಿದೆ.

ಕನ್ನಡದ ಸಂದರ್ಭದಲ್ಲಿ ಹೀಗೆ ವೈಯಕ್ತಿಕ ಜೀವನದ ವಿವರಗಳನ್ನು ಅವಲಂಬಿಸಿ ರಚಿಸಿರುವ ಇನ್ನಷ್ಟು ಕಾವ್ಯಗಳು ಬಂದಿಲ್ಲ ಎನ್ನುವುದು ವಿಷಾದದ ಸಂಗತಿ.

* * * *

ಕನ್ನಡದಲ್ಲಿ ಅನುವಾದದ ಮೂಲಕ ಜಗತ್ತಿನ ಬೇರೆ ಬೇರೆ ಭಾಷೆಗಳ ಅತ್ಯುತ್ತಮ ಉದಾಹರಣೆಗಳನ್ನು ಒದಗಿಸಿದವರು ಬಿ.ಎಂ.ಶ್ರೀ. ಮತ್ತು ತಿ.ನಂ.ಶ್ರೀ 'ಇಂಗ್ಲಿಷ್ ಗೀತಗಳ'ಲ್ಲಿ ಬಹಳಷ್ಟು ಕವಿತೆಗಳು ಮುಕ್ತ ಪ್ರೇಮದ ಗುಂಪಿಗೆ ಸೇರಿದವು. ಇಂತಹ ಕಾವ್ಯ ಕನ್ನಡದ ಅಷ್ಟೇ ಏಕೆ ಭಾರತೀಯ ಸಂವೇದನೆಗೆ ಹೊಸತು. 'ನನ್ನ ಪ್ರೇಮದ ಹುಡುಗಿ ತಾವರೆಯ ಹೊಸ ಕೆಂಪು....' ಎನ್ನುವ ಕವಿತೆಯಲ್ಲಿ ಗುಲಾಬಿಯ ಬದಲು ತಾವರೆ ತಂದಿರುವುದು ಶ್ರೀಯವರ ರಸಿಕ ದೃಷ್ಟಿಯ ಒಂದು ಉತ್ತಮ ಕಲ್ಪನೆಗೆ ಸಾಕ್ಷಿ. ಆದರೂ ಹೀಗೆ ತನ್ನ ಪ್ರೀತಿಯ ಹುಡುಗಿಯನ್ನು ಮುಕ್ತಕಂಠದಿಂದ ಹೊಗಳುವ ಕವಿತೆಗಳು ಕನ್ನಡದಲ್ಲಿ ಇದ್ದಿದ್ದನ್ನು ಯಾರಾದರೂ ಎದೆ ತಟ್ಟಿ ಹೇಳಲು ಸಾಧ್ಯವೆ ?

'ಕನಕಾಂಗಿ' ಎಂಬ ಕೋಲ್‌ರಿಜ್ ಕವಿಯ ಅನುವಾದಿತ ಕವನ ಇನ್ನೊಂದು ರೀತಿಯಲ್ಲಿ ಪ್ರೇಮದ ಔನ್ನತ್ಯವನ್ನು ಸಾರುತ್ತದೆ. ಕನಸಿನ ಲೋಕಕ್ಕೆ ಸೇರಿದ ಪ್ರಪಂಚವೊಂದನ್ನು ತೆರೆದಿಡುವ ಲಾವಣಿ ಮಟ್ಟದ ಈ ಕವನ, ಯಾವುದೇ ದೇಶದ ಸನ್ನಿವೇಶಕ್ಕೆ ಬೇಕಾದರೂ ಹೊಂದುವಂತದ್ದು. ಇಂತಹ ಕವನಗಳನ್ನು ಕನ್ನಡ ಜನತೆಗೆ ಪರಿಚಯಿಸುವ ಮೂಲಕ ಶ್ರೀಯವರು ಕನ್ನಡ ಪ್ರೇಮಕಾವ್ಯದ ಕ್ಷಿತಿಜವನ್ನು ವಿಸ್ತಾರಗೊಳಿಸಿದರು.

ಆವರೆ'ಒಲುಮೆ'ಯ ಮೂಲಕ ತೀ.ನಂ.ಶ್ರೀ ನಮ್ಮ ಪ್ರಾಚೀನ ಕವಿಗಳ ರಸಿಕತೆ, ಆದರ ಶುಚಿರುಚಿ ಮತ್ತು ಸ್ವೋಪಜ್ಞತೆಯನ್ನು ನಮ್ಮ ಜನದ ಮುಂದೆ ತೆರೆದಿಟ್ಟರು. ಹೊಸಗನ್ನಡದ ಸಂದರ್ಭದಲ್ಲಿ ಇಷ್ಟೊಂದು ದೊಡ್ಡ ಸಂಗ್ರಹವನ್ನು ನೀಡಿದ ತೀನಂಶ್ರೀ ಯವರ ರಸತಪಸ್ಸು ಮೆಚ್ಚುವಂತದ್ದು. ಒಲುಮೆಯ ಹಲವು ಬಗೆ, ಹಲವು ಹದ ಮತ್ತು ಹಲವು ಇಂಗಿತಗಳನ್ನು ಈ ಕೃತಿಯಲ್ಲಿ ತೆರೆದಿಟ್ಟಿರುವ ತೀ.ನಂ.ಶ್ರೀ, ಪಾಶ್ಚಾತ್ಯ ರಿಂದಲೂ ಒಂದೆರಡು ಉದಾಹರಣೆಗಳನ್ನು ಕೂಡಿಸಿರುವುದು ಔಚಿತ್ಯ ಪೂರ್ಣವಾಗಿದೆ.

'ಇಂಗ್ಲಿಷ್ ಗೀತಗಳು' ನವೋದಯ ಕವಿಗಳಿಗೆ ಮಾರ್ಗದರ್ಶಿಯಾದಂತೆ 'ಒಲುಮೆ'ಯೂ ಕೂಡ ಮಾರ್ಗದರ್ಶನ ಮಾಡುವ ಸಾಮರ್ಥ್ಯ ಪಡೆದಿದೆ. ಆದರೆ ಅದನ್ನು ಯಶಸ್ವಿಯಾಗಿ ಬಳಸಿಕೊಂಡವರು ಎಂದರೆ ಕೆ.ಎಸ್.ನ. ಒಬ್ಬರೇ ಎಂದು ಹೇಳಬಹುದು.

ತೀನಂಶ್ರೀಯವರ ಸಮಾನ ಧರ್ಮಿಯರಾದವರು ಪು.ತಿ.ನ, ಆದರೂ ಪು ತಿ.ನ ಕೃಷ್ಣರಾಧೆಯರ ಒಲವನ್ನು ಸೂಚಿಸುವ ಗೀತೆಗಳನ್ನು ಮಾತ್ರವೇ ಬರೆದದ್ದು, ಪು ತಿ ನ ಯಾಕೆ ಸ್ವತಂತ್ರ ಒಲವಿನ ಹಾಡುಗಳನ್ನು ಬರೆಯಲಿಲ್ಲ ಎಂಬುದು ಅಭ್ಯಾಸ ಯೋಗ್ಯವಾಗಿದೆ. 'ಅಹಲ್ಯೆ'ಯಲ್ಲಿ–ವಸ್ತುವೇ ಪ್ರೇಮ ಆದ್ದರಿಂದ ಕೆಲವು ಉತ್ತಮ ಪ್ರೇಮಗೀತೆಗಳಿವೆ. ಆದರೆ, ಅವರ ಇಡೀ ಕಾವ್ಯದಲ್ಲಿ ಅದೇ ಬಗೆಯ ಉತ್ತಮ ಪ್ರೇಮಗೀತೆಗಳು ಯಾಕೆ ಮೂಡಿಬರಲಿಲ್ಲ, ಎನ್ನುವುದು ಒಂದು ಮಹತ್ತರ ಪ್ರಶ್ನೆ.

* * * *

ಕೆ.ಎಸ್.ನ.ರವರ ಪ್ರೇಮಕಾವ್ಯ ಸಾಂಸಾರಿಕ ನೆಲೆಗೇ ಸೇರಿದ್ದು. ಭದ್ರವಾಗಿ ಬೇರೂರಿದ ಸಾಂಸಾರಿಕ ಬಂಧದಲ್ಲಿ ಓತಪ್ರೋತವಾಗಿ ಹರಿಯುವ ಗಂಡು ಹೆಣ್ಣುಗಳ ನಡುವಿನ ಪ್ರೀತಿ ಪ್ರೇಮಗಳ ಎಳೆಗಳನ್ನು ನಾವಿಲ್ಲಿ ಕಾಣುತ್ತೇವೆ. 'ಮದುವೆಯಾಗಿ ತಿಂಗಳಿಲ್ಲ ನೋಡಿರಣ್ಣ ಹೇಗಿದೆ ?' 'ರಾಯರು ಬಂದರು ಮಾವನ ಮನೆಗೆ' 'ನಮ್ಮೂರು ಚೆಂದವೊ ನಿಮ್ಮೂರು ಚೆಂದವೊ' ಇಂತಹ ಕವನಗಳಲ್ಲಿ ಕಂಡು ಬರುವ ಆತ್ಮೀಯ ಚಿತ್ರಣ, ಇಂದಿನ ಜೀವನ ಶೈಲಿಗೆ ಹೊರತಾಗಿದ್ದರೂ, ಪ್ರತಿಯೊಬ್ಬನೂ ಸದಾಕಾಲ ಹಾತೊರೆಯುವ ಒಂದು ಪ್ರಾರೂಪವಾಗಿ ಅವುಗಳು ಕಾಡುವ ಗುಣವನ್ನು ಹೊಂದಿವೆ. ಎಲ್ಲ ಕಾವ್ಯವೂ ಇಂತಹ ಆದರ್ಶೀಕೃತ ಚಿತ್ರವೊಂದನ್ನು ರೂಪಿಸುವುದನ್ನೇ ಆದರ್ಶವಾಗಿ ಹೊಂದಿರುತ್ತದೆ. ಈ ದೃಷ್ಟಿಯಿಂದ ಈ ಚಿತ್ರಣ ವನ್ನು ಯಶಸ್ವಿಯಾಗಿ ಮಾಡಿದ ಕೆ.ಎಸ್.ನ ರವರ ಕಾವ್ಯ ಕನ್ನಡದ ಪುಣ್ಯ. ಕ್ವಚಿತ್ತಾಗಿ 'ನನ್ನವಳು, ನನ್ನೆದೆಯ ಹೊನ್ನಾಡನಾಡುವಳು,' 'ಇವಳು ಯಾರು ಬಲ್ಲೆಯೇನೊ' ಎನ್ನುವಂತಹ, ಕವನಗಳು ಒಟ್ಟಿನಲ್ಲಿ ರೋಚಕತೆಯನ್ನು ಹೆಚ್ಚಿಸ ಬಲ್ಲವು; ಆದರೆ ಮೂಲತಃ ಕೌಟುಂಬಿಕ ಒಲವಿಗೇ ಕೆ.ಎಸ್.ನ ಕಾವ್ಯ ಬದ್ಧವಾದದ್ದು. ಅಲ್ಲದೆ, 'ಮೊದಲ ದಿನ ಮೌನ....' ದಂತಹ ಕವಿತೆಗಳ ಮೂಲಕ ಈ ಕೌಟುಂಬಿಕ ಒಲವಿನ ಹಲವು ಸೂಕ್ಷ್ಮ ಎಳೆಗಳನ್ನು ಕೆಎಸ್‌ನ ತಮ್ಮ ಸೂಕ್ಷ್ಮ ಸಂವೇದಿವೀಣೆಯಲ್ಲಿ ಸೆರೆಹಿಡಿದಿದ್ದಾರೆ.

ಜಿ.ಪಿ. ರಾಜರತ್ನಂ ಅವರ ಯೆಂಡ್ಕುಡ್ಕ'ರತ್ನನ ಪದಗಳ'ಲ್ಲಿ ಪುಟ್ನಂಜಿಗೆ ಒಂದು ಮಿದುವಾದ ಸ್ಥಾನವಿದೆ. ಪುಟ್ನಂಜಿಯ ಪ್ರೇಮ ಪ್ರಪಂಚ ಕೆಳವರ್ಗದಒಂದು ಆದರ್ಶ. ಆದರೆ ಅಷ್ಟೇ ಆರ್ದ್ರ ಪ್ರಪಂಚ, ಇಲ್ಲಿ ಕಂಡು ಬರುವ ಭಾವ–ಬಂಧಗಳು,

ಇದುವರೆಗೂ ಶಿಷ್ಟ ಸಾಹಿತ್ಯದಲ್ಲಿ ಹೊಮ್ಮಿ ಬಾರದೆ ಇರುವಂತಹ ಲೋಕಕ್ಕೆ ಸೇರಿದುದು ಎನ್ನುವುದು ಗಮನಾರ್ಹ. ಇಂದು ದಲಿತ ಸಾಹಿತ್ಯದ ಹೆಸರಿನಲ್ಲಿ ಹಕ್ಕುಗಳಿಗಾಗಿ ಹೋರಾಟ ನಡೆಸುವವರ 'ವಿಪ್ಲವಗೀತೆ'ಗಳು, ಆ ಸಮಾಜದ ಒಂದು ದಿಟ್ಟ ನಿಲುವನ್ನು ತೋರಿಸುತ್ತವೆ ನಿಜ. ಆದರೆ ಆ ಸಮಾಜದಲ್ಲಿಯೂ ತನ್ನದೇ ಆದ ಒಲವು ನಿಲುವುಗಳಿಗೆ ಪ್ರೀತಿ ಆದರಗಳಿಗೆ ಅವಕಾಶವಿದೆ, ಎನ್ನುವುದನ್ನು ಪುಟ್ಟಂಜಿ ಹಾಡುಗಳು ನಿರ್ಭಿಡೆಯಾಗಿ ತೋರಿಸುತ್ತವೆ ಎನ್ನುವುದು ಅಭ್ಯಸನೀಯ. ಇಲ್ಲಿನ ಸಾಮಾಜಿಕ ಚೌಕಟ್ಟು ಪರಂಪರಾಗತವಾಗಿದ್ದು, ಅಂದಿನ ಉನ್ನತ ಸಮಾಜ ಎತ್ತಿ ಹಿಡಿದ ಮೌಲ್ಯಗಳನ್ನೇ, ಈ ಕೆಳವರ್ಗದ ಸಮಾಜವೂ ಪ್ರತಿಫಲಿಸುತ್ತದೆ, ಎನ್ನುವುದು ಬೇರೆ ಮಾತು.

*　　　*　　　*　　　*

ಬೆಟಗೇರಿ ಕೃಷ್ಣಶರ್ಮ, ಎಸ್. ವಿ. ಪರಮೇಶ್ವರ ಭಟ್ಟ, ಕಡೆಂಗೋಡ್ಲು ಶಂಕರಭಟ್ಟ–ಇವರುಗಳೂ ಪ್ರೇಮಕಾವ್ಯಕ್ಕೆ ಉತ್ತಮ ಕಾಣಿಕೆಗಳನ್ನು ನೀಡಿದ್ದಾರೆ. ಬೆಟಗೇರಿ ಮತ್ತು ಪರಮೇಶ್ವರ ಭಟ್ಟರು ಭಾವಗೀತೆಗಳ ಕಡೆಗೆ ಒಲವುಳ್ಳವರಾದರೆ, ಕಡೆಂಗೋಡ್ಲು ಅವರ 'ಸಲ್ಮೆ'ಯು ಮೂರು ಕಥನ ಕವನಗಳೂ ಪ್ರೇಮವನ್ನು ಹದವಾದ ರೀತಿಯಲ್ಲಿ ಆಕರ್ಷಕ ಶೈಲಿಯಲ್ಲಿ ಹಿಡಿದಿಡುತ್ತವೆ. ಕಥನ ಕಾವ್ಯದ ಮಟ್ಟದಲ್ಲಿ ಪ್ರೇಮವನ್ನು ವಸ್ತುವಾಗುಳ್ಳ ಇಂತಹ ಕವಿತೆಗಳು ಕನ್ನಡದಲ್ಲಿ ಬೇರೆ ಇಲ್ಲವೇ ಇಲ್ಲ ಎಂದರೆ ಅತಿಶಯೋಕ್ತಿಯಾಗಲಾರದು. ದಕ್ಷಿಣ ಕನ್ನಡದ ಸುಭಗ ಚಿತ್ರವನ್ನು ಹೊನ್ನಿಯ ಮದುವೆಯಲ್ಲಿ ಕಟ್ಟಿ ಕೊಟ್ಟಿರುವ ರೀತಿ, ಆ ಪ್ರೇಮ ಕತೆಗೆ ಒಂದು ಚಿನ್ನದ ಚೌಕಟ್ಟನ್ನೇ ನೀಡಿದೆ.

*　　　*　　　*　　　*

ವಿ.ಕೃ. ಗೋಕಾಕರ ಕಾವ್ಯದಲ್ಲಿ ಅಲ್ಲಲ್ಲಿ ಪ್ರೇಮ ಕವಿತೆಗಳು ಮಿಂಚುತ್ತವೆ. 'ಇಲ್ಲೆ ಇರು ಅಲ್ಲೆ ಹೋಗಿ, ಮಲ್ಲಿಗೆಯನು ತರುವೆನು' ದಂತಹ ಕವಿತೆ, 'ಕಾಶ್ಮೀರ' ಕವಿತೆ ಪ್ರೇಮದ ಉಪಾಖ್ಯಾನಗಳಾಗಿವೆ. ಆದರೆ ಸ್ವಯಂಪೂರ್ಣವಾದ ಪ್ರೇಮ ಕವಿತೆಗಳನ್ನು ಗೋಕಾಕರು ಕೊಟ್ಟಿಲ್ಲವೆಂದೇ ಹೇಳಬೇಕು. ಆದರೆ ಅವರ ಕವಿತೆಗಳ ಉನ್ನತ ಜೀವನಾದರ್ಶದಲ್ಲಿ ಪ್ರೇಮವೂ ಹಾಸುಹೊಕ್ಕಾಗಿದೆ ಎನ್ನುವುದು ಗಮನಿಸಬೇಕಾದ ಸಂಗತಿ.

ಗೋಪಾಲಕೃಷ್ಣ ಅಡಿಗರ 'ನೀ ಬಳಿಯೊಳಿರುವಾಗ್ಗೆ' ಮತ್ತು 'ಮೌನದ ಸುವರ್ಣ ಪುತ್ಥಳಿ'ಗಳು ಉನ್ನತ ಪ್ರೇಮದ, ದಾಂಪತ್ಯ ಮೌಲ್ಯದ ನೀತಿ ನಿರೂಪಣೆಗಳಾಗಿವೆ. ಭಾವೋದ್ಗಮದ ಚಿಲುಮೆಗಳಾದ ಈ ಕವನಗಳು, ನವ್ಯ ಕವಿತೆಯ

ಸಾವಯುವ ಶಿಲ್ಪವನ್ನು ಭೇದಿಸಿ, ಶುದ್ಧ ಭಾವಗೀತೆಗಳಾಗುವ ರೀತಿ ಅದ್ಭುತವಾಗಿದೆ. ಭಾವಸ್ಯಂದಿಯಾದ ಇಲ್ಲಿನ ಜೀವ ದ್ರವ್ಯಕ್ಕೆ ಪ್ರೇಮಕೋಶವೊಂದರ ಪ್ರತ್ಯೇಕ ಅಸ್ತಿತ್ವ ಆವಶ್ಯಕವಾಗಿಲ್ಲ.

ಇವುಗಳೇ ಅಲ್ಲದೆ. ಅಡಿಗರು ನವೋದಯದ ಧಾಟಿಯಲ್ಲಿ ಬರೆದ ಪ್ರೇಮ ಕವನಗಳನ್ನು ಅವರ 'ನಡೆದು ಬಂದ ದಾರಿ'ಯಲ್ಲಿ ನೋಡಬಹುದು. 'ಮುಗುದೆ ಇವಳು ನನ್ನವಳು' ದಂತಹ ಕವಿತೆಗಳು ತೆರೆದು ತೋರುವ ಮುಗ್ಧತೆ, ಅಂದಿನ ಕಾಲದ ತರುಣ ತರುಣಿಯರ ಲೋಕವನ್ನು ಬಿಚ್ಚಿ ತೋರಿಸುತ್ತದೆ. ಪರಂಪರಾಗತವಾದುದನ್ನು ವಿರೋಧಿಸಬೇಕೆನ್ನುವ ಪ್ರಕಟ ಮನಸ್ಸಿನ ಬಂಡಾಯ ಧೋರಣೆ, ಇಲ್ಲಿನ ಕವಿತೆಗಳಲ್ಲಿ ಸ್ವಲ್ಪವೂ ಕಂಡು ಬರುವುದಿಲ್ಲವೆನ್ನುವುದು ಕುತೂಹಲಕಾರಿಯಾಗಿದೆ. 'ಇವಳ ಹೊಟ್ಟೆ ಚರಂಡಿಗಾರು ಕುಕ್ಕಿದರಯ್ಯ....'ಎಂಬಂಥ ಭೂಮಿ ಗೀತದ ಸಾಲುಗಳ ಹಿನ್ನೆಲೆಯಲ್ಲಿ ಮೇಲಿನ ಮಾತುಗಳನ್ನು ಗಮನಿಸಬೇಕು. ಭೂಮಿಗೀತದ ಕವಿತೆಗಳಲ್ಲಿ ಓದುಗರಿಗೆ ಶಾಕ್ ಕೊಡಬೇಕೆನ್ನುವ ಮನೋಭಾವ ಇಲ್ಲಿನ ಕವಿತೆಗಳಲ್ಲಿ ಇಲ್ಲ. ಅಲ್ಲದೆ 'ಮೋಹನ ಮುರಲಿ'ಯಲ್ಲಿ ಭೌತಿಕ ವಿವರಗಳನ್ನು ಕೊಡುವ ಉದ್ದೇಶ, ದೇಹಾತೀತವನ್ನು ಗುರುತಿಸುವುದೇ ಆಗಿರಬೇಕು. ಆದರೆ ಈ ಉದ್ದೇಶದ ಸಾಫಲ್ಯದಲ್ಲಿ ಪ್ರೇಮದ ನಿಜವಾದ ಶ್ರುತಿ ತಪ್ಪಿಹೋಗಿದೆ ಎನ್ನಬೇಕು. ಈ ಕವನದ ಜನಪ್ರಿಯತೆಗೆ ಕವನದಲ್ಲಿ ಬಳಸಿರುವ ಕೃಷ್ಣ–ರಾಧೆಯರ ಪ್ರತಿಮೆ ಹಾಗೂ ಗೇಯತೆಗಳೇ ಕಾರಣ. ನಿಜವಾದ ಪ್ರೇಮ ಕವಿತೆಯಲ್ಲಿರಬೇಕಾದ ಆರ್ದ್ರತೆ, ಕೊಟ್ಟುಕೊಳ್ಳುವ ಗುಣ–ಇವು ಇಲ್ಲಿ ಕಂಡು ಬರುವುದಿಲ್ಲ.

* * * *

ಶ್ರೀ ಚನ್ನವೀರ ಕಣವಿ ಮತ್ತು ಡಾ ಜಿ. ಎಸ್. ಶಿವರುದ್ರಪ್ಪ ಅವರ ಕವಿತೆಗಳಲ್ಲಿ ಭಾವಗೀತಾತ್ಮಕವಾದ ಪ್ರೇಮ ಕವಿತೆಗಳೇ ಅಧಿಕ ರಂಜಕವಾದ ಪ್ರತಿಮೆಗಳೊಂದಿಗೆ ಇವರು ತಮ್ಮ ಕವಿತೆಗಳನ್ನು ರಚಿಸುತ್ತಾರೆ. ಹೆಣ್ಣು, ಗಂಡುಗಳ ಸಂಬಂಧವನ್ನು ಭವ್ಯವಾಗಿ ನೋಡುವ ಇಲ್ಲಿನ ಪ್ರಯತ್ನಗಳು ಉದಾರವಾದೀ ಧೋರಣೆಯನ್ನು ತಳೆಯುತ್ತವೆ, ನೆಲದ ಮಟ್ಟದಲ್ಲಿ ಗುಣಾವಗುಣಗಳನ್ನು ಒರಗೆ ಹಚ್ಚುವ ಕ್ರಮ ಇಲ್ಲಿ ಕಂಡು ಬರುವುದಿಲ್ಲ. ದೈನಂದಿನ ಜೀವನದ ಆಗು ಹೋಗುಗಳನ್ನು ಈ ಕವಿಗಳು ಒಟ್ಟು ಜೀವನ ಕ್ರಮದ ವಿನ್ಯಾಸದಲ್ಲಿನ ವಿವರಗಳು ಎಂಬಂತೆ, ಅವುಗಳ ಮೇಲೆ ಹೆಚ್ಚಿನ ಪ್ರಾಧಾನ್ಯ ಕೊಡುವುದು. ಅನವಶ್ಯಕವೆಂಬಂತೆ ತಮ್ಮ ಕವನಗಳನ್ನು ರಚಿಸುತ್ತಾರೆ.

* * * *

ಪೇಜಾವರ ಸದಾಶಿವರಾಯರ 'ನಾಟ್ಯೋತ್ಸವ' ಮತ್ತು ಗಂಗಾಧರ ಚಿತ್ತಾ

ಲರ 'ಕಾಮ ಸೂತ್ರ' ಹೊಸ ಗನ್ನಡ ಪ್ರೇಮ ಕಾವ್ಯದ ಎರಡು ಅಪೂರ್ವ ಶಿಖರಗಳು ಸದಾಶಿವರಾಯರ ಕವನ ಹೊಸ ಜೀವನ ಶೈಲಿಯೊಂದನ್ನು ಉದ್ಘಾಟಿಸುತ್ತದೆ. ಇದು ವಿಧಿ ನಿಷೇಧಗಳನ್ನು ಮೀರಿದ ಲೋಕ. ಗಂಗಾಧರ ಚಿತ್ತಾಲರ ಕವನ ಅತ್ಯ ಪೂರ್ವವಾದ ರೀತಿಯಲ್ಲಿ ಕಾಮ ಪ್ರಜ್ಞೆಯ ಆವಿರ್ಭಾವ ಮತ್ತು ಸ್ವಸಂಪೂರ್ಣ ವಾದ ಆ ಲೋಕವನ್ನು ಕುರಿತ ಧ್ಯಾನ–ಮನನಗಳ ಚಿತ್ರಣವಾಗಿದೆ.

ಎಚ್. ಎಂ. ಚನ್ನಯ್ಯನವರ 'ಕಾಮಿ' ಮತ್ತು 'ಆಮೆ' ಪ್ರಾಣಿ ಪ್ರಧಾನವಾಗಿ ಕಾಮವನ್ನು ನೋಡುತ್ತದೆ. ದೈಹಿಕ ನೆಲೆಗಟ್ಟನ್ನು ಮೀರಿದ ಲೋಕವೊಂದರ ಕಡೆ ಇದು ನಿರ್ಲಕ್ಷ್ಯ ಮನೋಭಾವ ತಳೆಯುತ್ತದೆ. ಕಾಮವನ್ನೂ ಪಾಶವೀ ಶಕ್ತಿ ಯನ್ನಾಗಿ ಮಾಡುವ ಈ ಪ್ರಯತ್ನದಲ್ಲಿ ಮಾನವಿಕ ಚಾಚುಗಳು ಮೊಂಡಾಗುತ್ತವೆ.

ಹಲವಾರು ಸಂಕೀರ್ಣ ಕವನಗಳನ್ನು ನೀಡಿದ ಲಂಕೇಶ್ ಮತ್ತು ತಿರು ಮಲೇಶ್ ಸ್ಫುಟವಾಗಿ ಪ್ರೇಮ ಕವನಗಳು ಎನ್ನಬಹುದಾದ ಕವಿತೆಗಳನ್ನು ಬರೆಯ ದಿದ್ದುದು ಆಶ್ಚರ್ಯಕರ, ಲಂಕೇಶರ-ಸರೋಜ ಕವನ, ಹೆಚ್ಚಾಗಿ ಸಾಮಾಜಿಕ ಟೀಕೆ ಎನಿಸುತ್ತದೆಯೇ ಹೊರತು ಪ್ರೇಮಕವನ ಎನಿಸುವುದಿಲ್ಲ.

ಚಂದ್ರಶೇಖರ ಕಂಬಾರರ ನೆಲದ ಗುಣವನ್ನು ಮೆರೆಸುವ ಕವನಗಳು ಒಂದು ಲೆಕ್ಕವಾದರೆ, 'ನಮಗೆ ಸ್ವಾತಂತ್ರ್ಯವೇ ಬೇಡ' ಇನ್ನೊಂದು ಲೆಕ್ಕಕ್ಕೆ ಸೇರಿದ್ದು. ಈ ಕವನದಲ್ಲಿ ಕಂಡು ಬರುವ ಸೂಕ್ಷ್ಮ ಗ್ರಹಿಕೆಗಳು, ಪ್ರೇಮಲೋಕದ ವೈಶಿಷ್ಟ್ಯ ವನ್ನು ಗಾಢವಾಗಿ ಚಿತ್ರಿಸುತ್ತದೆ.

ಹೀಗೆ ಹೊಸಗನ್ನಡ ಪ್ರೇಮಕಾವ್ಯ ಹಲವು ಮಜಲುಗಳನ್ನು ದಾಟಿ ಬಂದಿದೆ. ಕಾವ್ಯವೆನ್ನುವುದು ಆದರ್ಶೀಕೃತ ಕಲ್ಪನೆಯ ಸಾಮ್ರಾಜ್ಯಕ್ಕೆ ಸೇರಿದ ಕಾವ್ಯ ಎನ್ನುವ ಭಾವನೆ ನಿಧಾನವಾಗಿ ಹೆಜ್ಜೆ ಹೆಜ್ಜೆಯಾಗಿ ಮಸಕಾಗು ತ್ತಿದೆ.

* * * *

ಕೊನೆಯದಾಗಿ 'ಧಾರೆ' ಎಂಬ ನನ್ನ ಕೃತಿಯನ್ನು ಕುರಿತು ಕೆಲವು ಮಾತು ಗಳನ್ನು ಹೇಳಬಹುದು. ಇಂತಹ ಕಾವ್ಯರಚನೆ ಈ ಕಾಲಕ್ಕೆ ಅಷ್ಟೊಂದು ಸಂಗತ ಎಂದು ಕೆಲವರಿಗೆ ಅನ್ನಿಸದೆ ಇರಬಹುದು. ಆದರೆ ಪರಂಪರಾಗತವಾದ ದೃಷ್ಟಿ ಕೋನವನ್ನು ಬಿಟ್ಟು ನಾನಿಲ್ಲಿ ಬರೆಯತೊಡಗಿದಾಗ, ಮುಕ್ತಾಯದ ಹಂತದಲ್ಲಿ ಕಂಡು ಬಂದದ್ದೇ ಬೇರೆ ಒಂದು ಲೋಕ. 'ಧಾರೆ'ಯನ್ನು ಪ್ರೇಮ ಕಾವ್ಯ ಎಂದು ಕರೆದಿದ್ದೇನೆ. ಆದರೆ ಇಲ್ಲಿ ಗಂಡು ಹೆಣ್ಣುಗಳು ಮೈ ಮುರಿದು ತಮ್ಮನ್ನು ತಾವು

ಕಂಡು ಕೊಳ್ಳುವುದೇ ಮುಖ್ಯವಾಗಿದೆ ಎನಿಸುತ್ತದೆ. ಪ್ರೇಮಕಾವ್ಯಕ್ಕೆ ಹೊಸ ದೊಂದು ಆಯಾಮವನ್ನು ಕೊಡುವುದರಲ್ಲಿ ನನ್ನ ಪ್ರಯತ್ನ ನಾನು ನಡೆಸಿದ್ದೇನೆ. ಈ ಕಾವ್ಯದ ಬಗ್ಗೆ ಪ್ರಬುದ್ಧ-ಅಪ್ರಬುದ್ಧ ಓದುಗರು ವ್ಯಕ್ತ ಪಡಿಸಿರುವ ಭಾವನೆಗಳಿಗೆ ಕೃತಿಕಾರ ಋಣಿಯಾಗಿದ್ದಾನೆ. ಹೊಸಗನ್ನಡ ಪ್ರೇಮಕಾವ್ಯ ಸಂದರ್ಭದಲ್ಲಿ 'ಧಾರೆ' ತನ್ನದೇ ಆದ ಕಾಣಿಕೆಯನ್ನು ಸಲ್ಲಿಸಿದೆ ಎಂಬ ವಿನಮ್ರ ಭಾವನೆ ಲೇಖಕನಲ್ಲಿ ತೃಪ್ತಿ ತಂದಿದೆ.

○

ಡಾ|| ಸೀ. ಕೃ. ರಾಮಶೇಷನ್

# ವಚನಗಳು ಮತ್ತು ಹರಿದಾಸ ಸಾಹಿತ್ಯ ಒಂದು ತೌಲನಿಕ ಸಮೀಕ್ಷೆ

ಸಾಹಿತ್ಯ-ಸರ್ವಹಿತ ಆಗುವುದರ ಜತೆಗೆ, ಸಂಸ್ಕೃತಿಯನ್ನೂ ಬೆಳೆಸುವುದೆನ್ನಲು ಕ್ರಿ. ಶ. ೧೨ನೇ ಶತಮಾನದ ವಚನಕಾರರ ಚಳುವಳಿ ಹಾಗೂ ಕ್ರಿ. ಶ. ೧೪-೧೫ ನೆಯ ಶತಮಾನದ ಹರಿದಾಸರ ಆಂದೋಲನಗಳು ಪ್ರತ್ಯಕ್ಷ ನಿದರ್ಶನ. ನಾವು ಏನಾಗಿದೇವೆಯೊ, ನಮ್ಮ ನಡವಳಿ-ಧರ್ಮ-ಅನುಸರಿಸುವ ನೀತಿ-ಆಚಾರ-ವಿಚಾರ ರೀತಿರಿವಾಜು-ಎಲ್ಲ ಸೇರಿ ಸಂಸ್ಕೃತಿ; ನಾವು ಹೊಂದಿರುವಂಥದು, ಪಡೆದಿರುವಂಥದು ನಾಗರಿಕತೆ, ಅಂತೆಯೇ ನಾಗರಿಕತೆ ಅನೇಕ ತೆರನಾಗಿ ಯಾಂತ್ರಿಕ-ತಾಂತ್ರಿಕ; ಸಂಸ್ಕೃತಿ ಸಜೀವ-ಸುಸ್ಥಿರ "ಅದು, ಒಂದು ನಾಡಿನ ಬಾಳಿನಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡು ಬಾಳನ್ನು ಶಿವಮುಖವಾಗಿ ನಡೆಸುತ ಕ್ರತುಶಕ್ತಿ ; ಒಂದು ದೇಶದ ಅನುಭವಿಗಳು ಮಥಿಸಿ ಮಥಿಸಿ ತೆಗೆದಿರಿಸಿರುವ ಜೀವನ ದರ್ಶನ"[1] ಎಂಬ ಸಂಸ್ಕೃತಿಯ ಬಗೆಗಿನ ಮಾತು ದಿಟವೆನ್ನಿಸುತ್ತದೆ. ವಚನ ಕೀರ್ತನ ಸಂಪದ ಇಂಥ ಸಂಸ್ಕೃತಿಯು ಅರಳಿಸಿದ ಸುಮಗಳು; ವಚನಸಾಹಿತ್ಯ-ದಾಸಸಾಹಿತ್ಯ ಆಗಿಯೇ ಬೆಳೆದು, ಕನ್ನಡ ಸಾಹಿತ್ಯೇತಿಹಾಸದಲ್ಲಿ ಪ್ರಮುಖವಾಗಿದೆ. ಇಲ್ಲಿ ಸಾಹಿತ್ಯವೂ ಉಂಟು ಸಂಸ್ಕೃತಿಯೂ ಉಂಟು, ಹಾಗೂ ಎರಡರ ಪ್ರಮುಖ ಉದ್ದೇಶ-ಭಕ್ತಿಯ ಮೂಲಕ ದೈವ ಸಾಕ್ಷಾತ್ಕಾರ. ಹಾಗೆಯೇ ಸಮಾಜ ಸುಧಾರಣೆ ಈ ದಿಸೆಯಲ್ಲಿ ಕನ್ನಡನಾಡಿನ ಧಾರ್ಮಿಕ-ಸಾಂಸ್ಕೃತಿಕ ಇತಿಹಾಸದಲ್ಲಿ ಶಿವಶರಣರ-ಹರಿದಾಸರ ಪಾತ್ರ ತುಂಬ ಹಿರಿದಾದದ್ದು

---

1 "ಪರಿಶೀಲನ"—ಡಾ|| ಜಿ. ಎಸ್. ಶಿವರುದ್ರಪ್ಪ

ಶ್ರೀ ಸಾಮಾನ್ಯ ಸಕ್ರಿಯವಾಗಿ ಪಾಲ್ಗೊಂಡ ವಚನಕಾರರ ಹಾಗೂ ದಾಸ ಪಂಥದ ವರ ಆಂದೋಲನಗಳು ಮಹತ್ವಪೂರ್ಣವಾಗಿವೆ. ತಮಿಳುನಾಡಿನ ಆಳ್ವಾರ್ (Alwar) ಸಂತರ–ನಾಯನ್ಮಾರರ (Nayanmarara), ಮಹಾರಾಷ್ಟ್ರದ ಅನುಭಾವಿ ಸಂತರ, ಸೈಂಟ್‌ಜಾನ್ (St.John), ಥಾಮಸ್ ಎ. ಕೆಂಪಿಸ್ (Thomas A. Kempis), ಅಗಸ್ಟೈನ್ ಮಹಾಶಯ (St. Augustone) ಮೊದಲಾದ ವಿಶ್ವ ವಿಖ್ಯಾತರ ಅಗ್ರಪಂಕ್ತಿಗೆ ಸೇರತಕ್ಕವರು ಕರ್ನಾಟಕದ ಶಿವಶರಣರು–ಹಾಗೂ ಹರಿದಾಸರು. ವಚನ–ಕೀರ್ತನಗಳು ಇಂದೂ ಜನ ಮನದಲ್ಲಿ ಅನುರಣಿಸುತ್ತಿರುವುದೂ ಅವರ ಖ್ಯಾತಿಗೆ ನಿದರ್ಶನವೆ. ಅಲ್ಲಿರುವುದೆಲ್ಲ ಮನುಜಕೋಟಿ ಬದುಕಿಗೆ ಬೇಕಾದ್ದೆ; ವೇದ, ಉಪನಿಷತ್ತು, ರಾಮಾಯಣ–ಭಾರತ–ಭಾಗವತಗಳ ಕಥೆಗಳ ಬೆಂಬಲ, ದಾಸರು ಪಡೆದಂತೆ ಶಿವಪಾರಮ್ಯ–ಉತ್ಕೃಷ್ಟತೆಯನ್ನು ವಚನಕಾರರು ಪ್ರತಿಪಾದಿಸಿದರು. ಒಂದು ಬಣದವರ ಧ್ಯೇಯ ಶಿವಪಾರಮ್ಯ–ಹರನಿಷ್ಠೆ. ಇನ್ನೊಂದರಲ್ಲಿ ಹರಿಪಾರಮ್ಯ–ಹರಿನಿಷ್ಠೆ ಜಂಗಮನಿಷ್ಠೆ–ಮಾಹೇಶ್ವರನಿಷ್ಠೆ, ದಾಸದಾಸೋಹಭಾವ–ಹರಿನಿಷ್ಠೆ. ಯಾವುದೆ ಜಾತಿ, ವಯಸ್ಸು, ಲಿಂಗಭೇದ ಇಲ್ಲದೆ ಎಲ್ಲರೂ ಒಂದಾಗಿ ಕಲೆತು ನಡೆಸಿದ ಆಂದೋಲನ (movement) ಅವರದ್ದು.

ಶಿವಶರಣರು (ವಚನಕಾರರ) ಮತ್ತು ಹರಿದಾಸರಿಂದ (ಕೀರ್ತನಕಾರರಿಂದ) ಪೋಷಿಸಲ್ಪಟ್ಟ ತತ್ವ–ವೇದಾಂತ-ಧರ್ಮಗಳ ಶಾಖೆ ಬೇರೆ ಬೇರೆ. ಮೊದಲಿನವರದು ಶಕ್ತಿ ವಿಶಿಷ್ಟದ್ವೈತ ತತ್ವ, ಎರಡನೆಯವರದು ಮಧ್ವಮತ-ಸಂಪ್ರದಾಯ, ತಾರತಮ್ಯ ತತ್ವ-ವೈದಿಕ ಧರ್ಮದಲ್ಲಿಯೇ ವಿಶ್ವಾಸವಿರಿಸಿದ್ದು.

೧) ಶರಣರು ವೈದಿಕ ಧರ್ಮವನ್ನು ಒಪ್ಪಲಿಲ್ಲ. ಹರಿದಾಸರು ವೈದಿಕ ಧರ್ಮದ ಅನುವರ್ತಿಗಳು, ಅದರಲ್ಲೂ ಭಾಗವತ ಧರ್ಮ ಅವರಿಗೆ ಪ್ರಿಯವೆನಿಸಿತು.

೨) ಶಿವಶರಣರ ಕ್ರಾಂತಿ, ವೈದಿಕ ಧರ್ಮದ ಆಚಾರ–ನಂಬುಗೆ, ಕಂದಾಚಾರಗಳನ್ನು ಖಂಡಿಸಿತು, ಕಿತ್ತೊಗೆಯಿತು. ಹರಿದಾಸರದ್ದು ಈ ದಿಸೆಯಲ್ಲಿ ಸಾಮ್ಯ ಮನೋಧರ್ಮ. ಅವರದ್ದೆ ಆದ ರೀತಿಯಲ್ಲಿ ಸಮಾಜದ ಓರೆ–ಕೋರೆಗಳನ್ನು ತಿದ್ದಲೆಳಸಿದರು. ಇಬ್ಬರು ಅನುಸರಿಸಿದ ಮಾರ್ಗಗಳು ಭಿನ್ನವಾಗಿದ್ದರೂ, ದೈವಸಾಕ್ಷಿ ತ್ಯಾಗವೇ ಅವರ ಏಕಮೇವ ಲಕ್ಷ್ಯ ಹಾಗೂ ತಮ್ಮ ಅನುಭವ ಸಮಾಜದ ಸಮಷ್ಟಿ ಸ್ವಾಸ್ಥ್ಯ–ಎರಡನ್ನೂ ಕಾಪಾಡುತ್ತ ಮುನ್ನಡೆಸುವ, ಜ್ಞಾನ ಪ್ರಸರಣ ಮಾಡುವ ಕಳಕಳಿ ಉಳ್ಳವರಾಗಿದ್ದರು.

೩) ಶರಣ ದಾಸರದು ಭಕ್ತಿ–ಪ್ರೇಮಗಳ ಆಂದೋಲನ ಆದರೂ, ಮೊದಲಿನವರ ಕಾಯಕ ತತ್ವ–"ಕಾಯಕವೇ ಕೈಲಾಸ" ಕೇವಲ ಮಂತ್ರ ಆಗಿದೆ, ಆಚರಣೆಯ

ಆಸ್ತ್ರ ಆಗಿ ಇನ್ನೂ ವಿಭಿನ್ನ ತಿರುವನ್ನು ವಚನ ಚಳುವಳಿಗೆ ನೀಡಿತೆಂಬುದು ಇತಿಹಾಸದ ಮಾತೆ ಆಗಿದೆ. ಹರಿದಾಸರದು ಮಧುಕರವೃತ್ತಿ—"ಅಸಂಗ್ರಹ-ಅಪರಿಗ್ರಹ-ನಿಸ್ವಾರ್ಥದ ಪರಾಕಾಷ್ಠೆ—

ಶಿವಶರಣರ ಶಿವಪಾರಮ್ಯ ವೀರಶೈವಧರ್ಮ ಪ್ರತಿಪಾದನೆ-ವಚನ ಸಂಪದದ ಮೂಲಕ ಆದಂತೆ, ಹರಿದಾಸರ ಹರಿಸರ್ವೋತ್ತಮತ್ವ-ವೈಷ್ಣವ ಧರ್ಮ ಪ್ರತಿಪಾದನೆ ಕೀರ್ತನ ಸಂಪದದ ಮೂಲಕ ಅಭಿವ್ಯಕ್ತಗೊಂಡಿವೆ. ಈ ಎರಡೂ ಆಂದೋಲನಗಳನ್ನು[2] ಕುರಿತಂತೆ, ಕೆಲವು ಅಂಶಗಳನ್ನು ಇಲ್ಲಿ ಪ್ರಸ್ತಾಪಿಸಬಹುದು :

೧) ಇಬ್ಬರದೂ ಪ್ರಧಾನ ಧ್ಯೇಯ-ಭಕ್ತಿ ಪ್ರಸರಣ, ಸಮಾಜದಲ್ಲಿರುವ ಪಿಡುಗಾದ ವರ್ಣಾಶ್ರಮ-ಜಾತಿ ವ್ಯವಸ್ಥೆಯ ವಿರುದ್ಧ ಪ್ರತಿಭಟನೆ-ಸಮಾಜ ಸುಧಾರಕ ಮನೋಧರ್ಮ.

೨) ತಮ್ಮ ತಮ್ಮ ಧ್ಯೇಯ-ಆದರ್ಶ ಸಾಧಿಸಲು ಶರಣರು-ದಾಸರು ಬಳಸಿದ್ದು ತಿಳಿಗನ್ನಡ-ವ್ಯಾವಹಾರಿಕ ಭಾಷೆ ಎಂಬುದು ಗಮನಾರ್ಹ.

೩) ವೇದೋಪನಿಷತ್ತು-ವೇದಾಂತತತ್ವ, ಧರ್ಮ ಮೊದಲಾದ ಗಹನವಾದ ವಿಚಾರಗಳನ್ನು ಹರಿದಾಸರು ತಿಳಿಗನ್ನಡ ನುಡಿಗಟ್ಟಿನ ಕೀರ್ತನೆಗಳ ಮೂಲಕ ಸಾಮಾನ್ಯನಿಗೂ ತಿಳಿಯುವ ರೀತಿ ಶ್ರುತಿ ಸುಲಭವಾಗಿ ಹಾಡಿ ತಿಳಿಸಿದರು. ಇಲ್ಲಿ ಮಾತ್ರ ವಚನಕಾರರ ನಿಲುವು ಭಿನ್ನ. ಅವರದ್ದು ಮಾಹೇಶ್ವರ ನಿಷ್ಠೆಯ ಬದುಕಾದರೂ, ವೈದಿಕ ಧರ್ಮವನ್ನೂ ಅನುಮೋದಿಸಲಿಲ್ಲ. ಇಲ್ಲಿನ ಗಮನೀಯ ಅಂಶವೆಂದರೆ, ಸಮಾಜದ ಸಾಮಾನ್ಯ ಜನರೂ ಮಾತಾಡುವ ಅವಕಾಶ ಪಡೆದದ್ದು. ಈ ನಿಟ್ಟಿನಿಂದ ದಾಸ-ಶರಣರ ಆಂದೋಲನ, ಚಳುವಳಿ-ಸರ್ವೋದಯ ಚಳುವಳಿ, ಜನತಾ ಆಂದೋಲನ, ಎನಿಸುತ್ತದೆ.

೪) 'ಬಸವಯುಗ'ವೆಂದು ಕನ್ನಡ ಸಾಹಿತ್ಯ ಚರಿತ್ರಕಾರರು ತಿಳಿಸುವಂತೆ, ಬಸವಣ್ಣನವರು ಶರಣರ ಚಳುವಳಿಯ ಪ್ರಮುಖ ಹರಿಕಾರರು. ಬಸವಣ್ಣನವರ ಕಾಲದಲ್ಲಿ ಧಾರ್ಮಿಕ-ಸಾಮಾಜಿಕ ಬದುಕಲ್ಲಿ ಕೆಲವು ಮೂಲಭೂತ ವ್ಯತ್ಯಾಸ, ಅದಕ್ಕೆ ವಿರೋಧಿ ಆದ ಪ್ರತಿಕ್ರಿಯೆ, ಸಂಘರ್ಷ-ಸಾಮರಸ್ಯ ಕಾಣಬಂದವು. ಇದು ಕನ್ನಡ ಸಾಹಿತ್ಯದ ಮೇಲೆಯೂ ಆಳವಾದ ಪ್ರಭಾವವನ್ನು ಬೀರಿತು. ಒಂದು ಹೊಸ ತೆರನಾದ ಆಧ್ಯಾತ್ಮಿಕ ತೇಜಸ್ಸು, ಧಾರ್ಮಿಕಶ್ರದ್ಧೆ, ಪ್ರಯೋಗಬುದ್ಧಿ ಕಾಣ

---

2. ಜಾಗತಿಕ ಆಂದೋಲನಗಳನ್ನು (ಭಾರತಾದ್ಯಂತ) ಕುರಿತಂತೆ, ಕಲ್ಕತ್ತೆಯ ಇತಿಹಾಸ ಸಂಶೋಧನ ಮಂಡಲ ಡಾ॥ ಸೆನ್ ಅವರ ಗ್ರಂಥ ಇಲ್ಲಿ ಉಲ್ಲೇಖನೀಯ.

ಬಂದಿತು. ಪಂಡಿತ ಕವಿಗಳು ಹೊಸೆದ ಕಗ್ಗದ ಜತೆ ಅನೇಕ ಆಧ್ಯಾತ್ಮಿಕ-ಅನುಭಾವಿಗಳು ಸಾಹಿತ್ಯ ಸೃಜಕರಾದರು.

ಕರ್ಣಾಟಕದಲ್ಲಿ ವೈದಿಕಪರವಾದ ಆರಾಧ್ಯ ಶೈವ, ಆಗಮನಿಷ್ಠ ಪಾಶುಪತ, ಕಾಶ್ಮೀರ, ತಮಿಳು-ತೆಲುಗು ಪ್ರದೇಶಗಳ ಶೈವ ಪ್ರಭೇದಗಳು, ಇವೆಲ್ಲವುಗಳ ಸಾರ ಹೀರಿ ಬಸವಾದಿಗಳಿಂದ ಉದಯವಾದದ್ದು 'ವೀರಶೈವ ಧರ್ಮ', ಮಾನವಪ್ರೇಮ, ನೀತಿ-ನಿಷ್ಠೆ-ಶಿವಭಕ್ತಿ, ಎಲ್ಲರೂ ಒಂದೇ ಎಂಬ ಸಮಾನಭಾವ—ಒಂದು ಹೊಸತಾದ ಜಾತ್ಯಾತೀತ ಸಮಾಜ ವ್ಯವಸ್ಥೆಯನ್ನೇ ನಿರ್ಮಿಸುವ ಉತ್ಸಾಹ, ಕಳಕಳಿಯ ತೀವ್ರತೆ ಬಸವ, ಅಲ್ಲಮಾದಿ ಶಿವಶರಣರದ್ದು.

ಸಾಹಿತ್ಯ ಸ್ವರೂಪದಲ್ಲಿ ಈ ಅವಧಿ—ಮಾರ್ಗ ಕಾವ್ಯದಿಂದ ಕನ್ನಡದೇಸಿಗೆ ಸಂಕ್ರಮಣ ಹೊಂದಿದ ಯುಗವೆಂದೆನ್ನಿಸಿತು. ಒಂದು ರೀತಿಯಲ್ಲಿ ಇದು, "ಅಭಿವ್ಯಕ್ತಿ ಸ್ವಾತಂತ್ರ್ಯಯುಗ." 'ವಚನ'ವೆಂಬ ಸಾಹಿತ್ಯ ಪ್ರಕಾರ, ಶಿವಶರಣರ ನಿತ್ಯನೂತನ ಕೊಡುಗೆ. ವಚನ-ಭಾವಗೀತೆ ಲಕ್ಷಣದಿಂದೊಡಗೂಡಿದ ಅನುಭಾವ ಗದ್ಯ. ಶಿವ ಶರಣರು ತಮ್ಮ ಅಂತರಂಗದ ಅನುಭವ-ತುಮುಲ-ಅಭೀಪ್ಸೆಗಳಿಗೆ ಹಿಡಿದ ಕನ್ನಡಿ. ವಚನದಲ್ಲಿ ನಡೆದಿರುವುದೇ ನಿರ್ಭಯವಾದ ಆತ್ಮನಿರೀಕ್ಷಣೆ.

೫) "ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದರೆ ವಚನಗಳು ಗದ್ಯಪದ್ಯದ ನಡುವಣ ಒಂದು ಮಾದರಿ........ವಚನಗಳಲ್ಲಿ ಗದ್ಯದ ನಿರರ್ಗಳತೆ ಇಲ್ಲದಿದ್ದರೂ ಅದರ ಸರಳತೆ ಇದೆ. ಪದ್ಯದ ಕ್ರಮಬದ್ಧ ಛಂದೋಗತಿ ಇರದಿದ್ದರೂ, ಅದರ ಲಯವಿದೆ.[3] ವಚನ ಸಾಹಿತ್ಯವೂ ಹೌದು, ಶಾಸ್ತ್ರವೂ ಹೌದು. ಅದು ಅನುಭಾವಿಗಳ ಆತ್ಮ-ಮಥನದಿಂದ ಹೊರಹೊಮ್ಮಿದ ಸಾಹಿತ್ಯ. "ವಚನಗಳು, 'ನಮ್ಮ ಕನ್ನಡನಾಡಿನ ಉಪನಿಷತ್ತುಗಳು',....ಸಾಹಿತ್ಯವೇ ದರ್ಶನ, ದರ್ಶನವೇ ಸಾಹಿತ್ಯ"[4] ಈ ಉದ್ಘೋಷದ ನಿಟ್ಟಿನಿಂದ ಗಮನಿಸುವಲ್ಲಿ, ಹರಿದಾಸ ಸಾಹಿತ್ಯವು ಬಾಯಿಂದ ಬಾಯಿಗೆ, ಪರಂಪರಾನುಗತವಾಗಿ ಹರಿದು ಬಂದದ್ದು, 'ಕಂಠಸ್ಥ ಸಾಹಿತ್ಯ' ಎನ್ನಿಸಿದೆ. ಇವು ಇಂದಿಗೂ ಉಳಿದುಬಂದಿರುವ ಪರಿ ಗಮನಿಸಿದಾಗ, ಇವೆರಡರ ಬಹುಜನ ಪ್ರಿಯತೆಯೂ ಮನದಟ್ಟಾಗುತ್ತದೆ. ಪುರಂದರದಾಸರು, ಶ್ರೀಪಾದರಾಜ, ವ್ಯಾಸ ರಾಯರು ಕಾಲ, ದೇಶ, ಮತ, ತತ್ವ ಮೀರಿದ ದೇವಜೀವಿಗಳಾಗಿ, ಸರ್ವಸಮ ದರ್ಶಿಗಳಾಗಿ ನಿಲ್ಲುತ್ತಾರೆ.

೬) ವಚನ ಪ್ರಕಾರದ ವಿಶಿಷ್ಟ ಕೊಡುಗೆಯಾದ 'ಬೆಡಗಿನ ವಚನ'[5]ಗಳಂತೆಯೆ

---

3. ವಚನ ಸಾಹಿತ್ಯ ಸಂಗ್ರಹ-ಶ್ರೀ ಶ್ರೀ ಬಸವನಾಳ

4. ವಚನ ಧರ್ಮಸಾರ—ಎಂ.ಆರ್.ಶ್ರೀ

5. ಒಗಟಿರುವಂಥ ವಚನಗಳು (ನೀಲಲೋಚನೆಯು ಬೆಡಗಿನ ವಚನಗಳು)

ಹರಿದಾಸ ಸಾಹಿತ್ಯದಲ್ಲೂ 'ಮುಂಡಿಗೆ'ಗಳ ರಚನೆಯಿದೆ. ಈ ವಚನ-ಕೀರ್ತನ ಗಳೆರಡೂ ಹೊರನೋಟಕ್ಕೆ ಒಗಟಾಗಿದ್ದು, ಅದನ್ನು ಅಧ್ಯಾತ್ಮ-ಬದುಕಿನ ಹಿನ್ನೆಲೆ ಯಲ್ಲಿ ಬಿಡಿಸಲು ಪ್ರಯತ್ನಿಸಬೇಕಾಗುತ್ತದೆ.

೭) ಹರಿದಾಸ ಸಾಹಿತ್ಯದ ಪ್ರಮುಖ ಕೊಡುಗೆ.[6] ಕೀರ್ತನೆ, ಸುಳಾದಿ-ಉಗಾಭೋಗ-ವೃತ್ತನಾಮಗಳೆಂಬ ವಿಶಿಷ್ಟ ಸಾಹಿತ್ಯಿಕ ಪ್ರಕಾರದಲ್ಲಿ ಹರಳು ಗಟ್ಟಿದ್ದರೂ, ಕನಕದಾಸರಂಥ ದಾಸಕವಿಗಳು, ಜಗನ್ನಾಥದಾಸರಂಥವರು ಷಟ್ಪದಿ ಸಾಂಗತ್ಯಗಳನ್ನೂ ಬಳಸಿ ಕಾವ್ಯ ರಚನೆಗೈದಿರುವುದು ವಿಶಿಷ್ಟತೆ. ಜತೆಗೇ ದಾಸ-ಸಾಹಿತ್ಯದ ಆದ್ಯ ಪ್ರವರ್ತಕರೆಂದ ಶ್ರೀ ಶ್ರೀಪಾದರಾಜರು ರಚಿಸಿರುವ[7] 'ಭೃಂಗಗೀತ', 'ವೇಣುಗೀತ', ವ್ಯಾಸರಾಯರ 'ವೇಣುಗೀತ', ವಾದಿರಾಜರ ತುಳು ಪದಗಳು-ಸುವ್ವಿಪದ, ಪ್ರಸನ್ನವೆಂಕಟದಾಸರ 'ಕೋಲುಪದ' ಇವೆಲ್ಲ ರಚನೆಯ ದೃಷ್ಟಿಯಿಂದ ವಿಶಿಷ್ಟವಾದವು.

ಇದಿಷ್ಟರ ಮಟ್ಟಿಗೆ ವಚನ, ಹರಿದಾಸ ಆಂದೋಲನದ ಬಗ್ಗೆ ಕೆಲವು ಎಳೆ ಗಳನ್ನು ಗುರುತಿಸಿದ ನಂತರ ಇವುಗಳನ್ನು ಕುರಿತಂತೆ ಕೆಲವು ವಿಷಯಗಳನ್ನು ತಿಳಿದು ಕೊಳ್ಳಬಹುದು.

೧) ಎರಡೂ ಬಣದವರ (ಧರ್ಮಾನುವರ್ತಿಗಳ) ಪ್ರಧಾನ ಧ್ಯೇಯ-ಭಕ್ತಿ ಪ್ರಸರಣ-ಆ ತೆರನಾದ ಭಕ್ತಿ ಕೂಡ-ದಾಸರಲ್ಲಿ ಅಭಿವ್ಯಕ್ತ ಆಗಿರುವ ಪರಿ ಹಾಗೂ ಸಮಾಜ ಸುಧಾರಣಾ ಮನೋಧರ್ಮದ ಬಗೆ.

೨) ಉಗಾಭೋಗ ಹಾಗೂ ವಚನಗಳಲ್ಲಿರುವ ಸಾದೃಶ ಭಾವ.

**೧. ಭಕ್ತಿ-ಪಂಥ, ಸಾಹಿತ್ಯ...**

'ಭಕ್ತಿ' ಎಂಬ ಎರಡಕ್ಷರದ ಪದ ಒಂದು ಮಾರ್ಗ, ಪಂಥ ಆಗಿಯೆ ಬೆಳೆದು, ಭಾಗವತ ಧರ್ಮವೆಂದು ಪ್ರಸಿದ್ಧ ಆಯಿತು. ಭಾರತೀಯ ಜಾಗತಿಕ ಸಾಹಿತ್ಯವೆಲ್ಲ ದರಲ್ಲೂ ಭಕ್ತಿಯ ಎಳೆಗಳಿಲ್ಲದಿಲ್ಲ. ಇಲ್ಲಿ ಶಿವಶರಣ, ಹರಿದಾಸರಿಬ್ಬರದೂ ಒಂದೇ ನಿಲುವು—'ದೇವನೊಬ್ಬ, ನಾಮ ಹಲವು', ಶಿವಭಕ್ತಿ, ಪಾರಮ್ಯ ಜಂಗಮ ನಿಷ್ಠೆ ಶರಣರನುಸರಿಸಿದ ವ್ರತ ಆದರೆ, ಹರಿಭಕ್ತಿ-ಪಾರಮ್ಯ ಭಾಗವತನಿಷ್ಠೆ-ಹರಿದಾಸರನು ಸರಿಸಿದ ನೋಂಪಿ. ಆದರೆ ಇದು ಅಭಿವ್ಯಕ್ತಗೊಂಡ ಪರಿ ಬೇರೆ ಬೇರೆಯಷ್ಟೆ.

---

6. ಇದರ ವಿವರ ಇಲ್ಲಿ ಅಪ್ರಸ್ತುತ
7. ಈ ಪ್ರಕಾರ ಹಿಂದಿ ಸಾಹಿತ್ಯದಲ್ಲಿ ತುಂಬ ಪ್ರಚಲಿತ. ಅದರಲ್ಲೂ ವಿಶೇಷವಾಗಿ ಸೂರದಾಸರ 'ಭೃಂಗಗೀತ'ಗಳು ಪ್ರಸಿದ್ಧ.

"ಭಕ್ತ-ಭಕ್ತಿ"-ಕಾಣದ ಅಪಾರ ಮಹಿಮಾನ್ವಿತ ಚೇತನನ-ಭಗವಂತನನ್ನು ಸರ್ವಶಕ್ತ, ಸರ್ವಂತರ್ಯಾಮಿ, ಸರ್ವವ್ಯಾಪ್ತ (omnipotent, omnipresent omniscient) ನೆಂದು ನಂಬಿದಾಗಲೆ ಟಂಕಿಸಿದ ಪದಗಳಿರಬೇಕು. ತಾನು ಬೇರೆ, ಭಗವಂತ-ತನಗಿಂತ ಅತ್ಯುನ್ನತ-ಅಪ್ರಮೇಯ ನೆಂಬ ದ್ವೈತ ಭಾವನೆ, ತನ್ನಲ್ಲಿ ಭಗವಂತ-ತನ್ನ ಉದ್ಧಾರ, ಉನ್ನತಿಗಾಗಿ, ಭಗವಂತನ "ಮಹತೋ ಮಹೀಯಾನ್" ಚೇತನಕ್ಕೆ ತಾನು ಸಂಪೂರ್ಣ ಅರ್ಪಿಸಿಕೊಂಬುವ "ಶರಣಾಗತಿ" ("ದಾಸ ದಾಸೋಹಂ")ಯೆ ಭಕ್ತಿಯ ವಿಶಿಷ್ಟ ಲಕ್ಷಣ.

'ನಾರದ ಭಕ್ತಿ ಸೂತ್ರ'—"ಸ್ಯಾತ್ವಸ್ಮಿನ್ ಪರಮಾ ಪ್ರೇಮ ರೂಪಾ
'ಅಮೃತ ಸ್ವರೂಪಾಚ' 'ಅಮೃತಮಯ ಆದ
ಪರಮ ಪ್ರೇಮವೇ ಭಕ್ತಿ' ಎನ್ನುತ್ತದೆ.
'ಶಾಂಡಿಲ್ಯ ಸೂತ್ರ'ದಂತೆ—"ಸಾ ಪರಮಾನು ರಕ್ತಿರೀಶ್ವರೇ ಭಕ್ತಿಃ ||
ಈಶ್ವರನಲ್ಲಿ ನಾವು ಕೋರಿಕೊಂಬ ಪರಮ ಅನು
ರಕ್ತಿಯೇ ಭಕ್ತಿ.

"ಭಜನುಭಕ್ತಿಃ" ಎಂಬುದು 'ಭಕ್ತಿ'ಯ ವ್ಯುತ್ಪತ್ತಿ. "ಭಜ" ಎಂದರೆ ಶರಣಾಗು, ಎಂದೂ ಅರ್ಥ. ಭಗವಂತನಲ್ಲಿ-ಪರವಸ್ತುವಿನಲ್ಲಿ-ಮನವನ್ನು ಸ್ಥಿರ ಆಗಿ ಇರಿಸಿಕೊಳ್ಳುವುದು ಭಕ್ತಿಯ ಲಕ್ಷಣ. ನಾರದಋಷಿ, ಮೇಲ್ಕಾಣಿಸಿದ ನಿರೂಣೆಯಲ್ಲದೆ, ವಿವಿಧ ರೀತಿಯ ಆಸಕ್ತಿಗಳನ್ನೂ ಭಕ್ತಿಯ ಲಕ್ಷಣಗಳೆಂದು ತಿಳಿಸುತ್ತಾರೆ. ಭಕ್ತಿಸಾಹಿತ್ಯದ ಪರಮ ಉತ್ಕೃಷ್ಟ ಕೃತಿ "ಭಾಗವತ" ಗ್ರಂಥ ನಿರೂಪಿಸುವ "ಭಕ್ತಿ"ಯ ನಿರೂಪಣೆ, ಭಕ್ತಿಪಂಥವು ಬೆಳೆದು ಬಂದದ್ದರ ಗುರುತೆನ್ನ ಬಹುದು. ಹಾಗೂ ಹರಿದಾಸರು ಅನುಸರಿಸಿದುದೂ ಈ ಪರಿಯನ್ನೆ :

"ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣರ ಪಾದಸೇವನಂ
ಅರ್ಚನಂ ವಂದನಂ ದಾಸ್ಯಂ ಸಖ್ಯಯಾತ್ಮನಿವೇದನಂ"

ಎನ್ನುವ ಶ್ಲೋಕದ ಪ್ರಕಾರ, ಭಕ್ತಿಯು ನವ ವಿಧ; ಹಾಗೂ ಭಕ್ತಿ-ಭಾಗವತ ಧರ್ಮ-ಸಾಹಿತ್ಯಕ್ಕೆ ಹೆಚ್ಚು ಪರಿಪುಷ್ಟಿ ದೊರತದ್ದು ಭಗವಂತನ ವಿವಿಧ ಅವತಾರ ಸ್ವರೂಪಗಳ ಅರಿವು-ಕಲ್ಪನೆ-ಸಾಕ್ಷಾತ್ಕರಿಸಿಕೊಂಬ ಹಂಬಲದಿಂದ.

ಭಾರತದಲ್ಲೀಕೆ, ಇಡೀ ಜಗತ್ತಿನಲ್ಲೇ ಭಕ್ತಿಮಾರ್ಗ ಸುಲಭ ಅನುಸರಣೀಯ ಮಾರ್ಗ. ಉಚ್ಚ-ನೀಚ ಭೇದವಿರದೆ ಸರ್ವರೂ ಮುಂದರಿಯಲು ಸುಲಭ ಪಥ. ಕಠಿನ ತಪ ಬೇಕಿಲ್ಲ, ಮೂಗು ಬಿಗಿ ಹಿಡಿದು ಕೂಡುವ ಹಠಯೋಗಬೇಡ, ಜಾತಿ

ಕೋಟಲೆಯಿಲ್ಲ, ವಯಸ್ಸು ಎಷ್ಟಾದರೇನು, ಗಂಡಾಗಲಿ, ಹೆಣ್ಣಾಗಲಿ" "ಶರಣಸತಿ ಲಿಂಗಪತಿ" ಭಾವನೆಯಿಂದ ನುತಿಸಿದರು ಶರಣರು, "ದಾಸ-ದಾಸೀಭಾವ" ಎಂದರು ಹರಿದಾಸರು. ಹಾಗೂ "ದಾಸೋಹಂ ತವದಾಸೋಹಂ ತವದಾಸೋಹಂ" ಎಂದೂ ಹಾಡಿದರು. ಭಕ್ತಿಯೇ ಮುಕ್ತಿಗೆ ಹಾದಿ. ಗೀತೆ ಹೇಳಿದ ಶ್ರೀಕೃಷ್ಣ, "ನನ್ನಲ್ಲೇ ಮನಸ್ಸಿಡು, ನನ್ನಲ್ಲಿ ಬುದ್ಧಿ ಇರಿಸು, ಆಗ ನೀನು ನನ್ನಲೇ ಇರುವಿ[8] ಎಂದದ್ದು ಒಂದು ಆಶ್ವಾಸನೆಯ ನುಡಿಕೂಡ. ಆದರೆ, ಇದು ಸತತ ಅಭ್ಯಾಸದಿಂದ ಮಾತ್ರ ಸಾಧ್ಯ[9].

ಭಕ್ತಿ ಜನಿಸಿದ್ದೇ ದ್ರಾವಿಡ ದೇಶದಲ್ಲಿ ಎನ್ನುತ್ತದೆ ಈ ಪದ್ಮಪುರಾಣದ ಈ

ಶ್ಲೋಕ : "ಉತ್ಪನ್ನೇ ದ್ರಾವಿಡೇ ಸಾಹಾ | **ವೃದ್ಧಿಂ ಕರ್ಣಾಟಕೇ ಗತಾ** ||
ಕ್ವಚಿತ್ ಮಹಾರಾಷ್ಟ್ರೇ | ಗೂರ್ಜರೇ ಜರ್ಜರಾಮ್ ಗತಾ ||"

ತಮಿಳುನಾಡಿನ ಸಂತರಾದ ಶ್ರೀ ವೈಷ್ಣವ ಆಳ್ವಾರ್ ಮಹನೀಯರು[10]ಗಳಿಂದ ಭಕ್ತಿ ಅವತರಿಸಿತು ನಾಯನ್ಮಾರರಿಂದ ಹಾಗೂ ತದನಂತರ ಬಂದ ವೀರಶೈವ ಧರ್ಮೀಯರಿಂದ ಶೈವಭಕ್ತಿ ಬೆಳೆಯಿತು. ರಾಮಾನುಜ-ಮಧ್ವ ಆಚಾರ್ಯರಿಂದ ಕರ್ಣಾಟಕದಲ್ಲಿ ಭಕ್ತಿ ವೃದ್ಧಿಸಿತು. ಮಹಾರಾಷ್ಟ್ರದಲ್ಲಿ ಕ್ವಚಿತ್ತಾಗಿ ಕ್ಷೀಣಿಸಿ ಗುಜರಾತದಲ್ಲಿ ಗತಾಸುವಾಗಿ ಬಿಟ್ಟಿತು. ಇದರ ಜತೆ ಕರ್ಣಾಟಕದ ವಿಶಿಷ್ಟತೆ[11]- ಧರ್ಮ ಸಾಮರಸ್ಯ-ಹರಿಹರ ಸಾಮರಸ್ಯ. ಶರಣ-ದಾಸರ ಮನೋಧರ್ಮ ಕೂಡ ಅನೇಕೆಡೆ ಇದೇ ಆಗಿ ಬಿಂಬಿತಗೊಂಡಿದೆ. ರಾಮಾನುಜ-ಬಸವ-ಮಧ್ವರಿಂದಾಗಿ ಭಕ್ತಿ ಪಂಥ ಉನ್ನತಿ ಪಡೆದಂತೆಯೇ, "ಹರಿಪಾರಮ್ಯ-ಹರ ಪಾರಮ್ಯಗಳ ನಡುವೆ ಹರಿಹರ ಭಕ್ತಿಯು ಒಂದು ನಡುವಣ ಭಕ್ತಿಮಾರ್ಗ ಆಗಿ ಉಗಮಕ್ಕೆ ಬಂತು."[12] ಎಂಬ ಹಿರಿಯರ ಮಾತು ಒಪ್ಪುತ್ತದೆ. ಆಚಾರ್ಯ ಮಧ್ವರು ಪ್ರತಿಪಾದಿಸಿದ್ದು ಜ್ಞಾನದಿಂದೊಡಗೂಡಿದ ಭಕ್ತಿ-ಕರ್ಮ ಜ್ಞಾನ ಭಕ್ತಿ-ಈ ತ್ರಯೀ ಮಾರ್ಗದ ಮೂಲಕ ಬದುಕು ಮುಕುತಿ ಪಥದತ್ತ ಕ್ರಮಿಸೀತು. "ಮಾಹಾತ್ಮ್ಯ ಜ್ಞಾನ ಪೂರ್ವಸ್ತು ಸ್ನೇಹಃ ಸುದೃಢಃ ಸರ್ವತ್ರೋऽಧಿಕಃ" ಇದಕ್ಕೆ ಶ್ರದ್ಧೆ, ಸಗುಣೋ ಪಾಸನೆ,[13] ಸಾಧನ. "ಅಂತರಂಗದಲಿ ಹರಿಯ ಕಾಣದವ ಹುಟ್ಟು ಕುರುಡನೋ"

---

8. "ಮನ್ಮನಾಭವ ಮದ್ಭಕ್ತೋ ಮದ್ಯಾಜೀಯಾಂ ನಮಸ್ಕುರು...." (ಗೀತೆ)
9. "ಆಲೋಢ್ಯಾನಿ ಅಲೋಕ್ಯಾನಿ ವಿಚಾರಾಂಶ್ಚ ಪುನಃ ಪುನಃ...."
10. ಹನ್ನೆರಡು ಜನ
11. ಬೇಲೂರಿನ "ಯಂಶೈವಾಸ್ಸಮುಪಾಸತೇ ಶಾಸನ ಉದಾಹರಣೆ
12. "ಸಾಹಿತ್ಯ ಸಾನಿಧ್ಯ"-ಡಾ|| ಜಿ. ವರದರಾಜರಾವ್
13. ಭಗವಂತನ ವಿವಿಧ ಅವತಾರ

ಎಂದು ಹರಿದಾಸರು ಸಾರಿದಂತೆಯೇ "ಮಾಡುವಾತ ನಾನಲ್ಲಯ್ಯ, ನೀಡುವಾತ ನಾನಲ್ಲಯ್ಯ" ಎಂಬ ಭಾವನೆಯೂ ಅವರಲ್ಲಿದೆ.

ಬಸವ ಅಲ್ಲಮ-ದೇವರದಾಸಿಮಯ್ಯ-ಚೆನ್ನಬಸವಣ್ಣ-ಮೊದಲಾದವರ ಅಭಿವ್ಯಕ್ತಿ ಅಭ್ಯಾಸ, ಸಾಧನೆಯ ಸಂವಾಹಕ ಮಾಧ್ಯಮ ಆದ ವಚನಗಳು, ವೀರ ಶೈವ ಧರ್ಮಕ್ಕೆ ಒಂದು ಉನ್ನತ ಸ್ಥಾನ ನೀಡಿದುವೆಂದರೆ ಉತ್ಪ್ರೇಕ್ಷೆಯಾಗದು. ಸಮಾಜದ ಪಿಡುಗಾದ ಜಾತಿಯನ್ನೇ ಇರದಂತೆ ನಿರ್ಮೂಲಗೊಳಿಸಿ, ಜಾತ್ಯಾತೀತ ಸಮಾಜದ ಕನಸು ಕಂಡ ಬಸವಣ್ಣ. ಅದಕ್ಕಾಗಿ ಆತ ನಡೆಸಿದ "ಜಂಗಮ ದಾಸೋಹ ಮುಂದೆ, ಒಂದು ವ್ರತವೇ ಆಯಿತು. ಇದರ ಜತೆ ವಚನಗಾರ್ತಿಯರು ಬಂದುದೂ ಈ ಚಳುವಳಿಯ[14] ವಿಶೇಷ. ಈ ರೀತಿ, ಹರಿದಾಸರೂ ಕೂಡ "ದಾಸೋಹ"ಕ್ಕೆ ಮಾನ್ಯತೆ ನೀಡಿದ್ದಾರೆ. ಅವರದ್ದು ತಾವಾಗಿಯೇ ಆರಿಸಿಕೊಂಡು ಅಪ್ಪಿದ ಬಡತನ-ಮಧುಕರ ವೃತ್ತಿ-ಅದೇ ಅವರ ಬದುಕಿನ ಪರಿ. ಶರಣರು 'ಕಾಯಕವೇ ಕೈಲಾಸ'ವೆಂಬುದರ ಮೂಲ ಹಾಕಿದ ಜಾಡು, ದಾಸರದ್ದು ಇದಾಗ ಇಬ್ಬರೂ ಬೇರೆ ತೆರನಾಗಿ ಮಿಡಿದದ್ದು ತಂಬೂರಿ-ಅದನ್ನು ಮೀಟಿದರ ಭವಾಬ್ಧಿದಾಟ ದವನೆಂದು ಘೋಷಿಸಿ ಅಮರ್ತ್ಯಕ್ಕೆ ದಾರಿ ತೋರಿದ್ದು.

ಜಗತ್ತು ಸತ್ಯ, ಬದುಕು ಮಿಥ್ಯ ಅಲ್ಲ. ಆದರೆ ಇಲ್ಲಿನ ಬದುಕನ್ನು ನಡೆಸುವ ಪರಿ ಅನುಸರಣೀಯ ಆಗಿರಬೇಕು. ದಾಸ-ಶರಣರಿಬ್ಬರೂ ಈ ಬಗ್ಗೆ ತಿಳಿಸಿಕೊಟ್ಟಿದ್ದಾರೆ. "ಈಸಬೇಕು, ಇದ್ದು ಜೈಸಬೇಕು", ಮಾನವ ಜನ್ಮ ದೊಡ್ಡದು ಇದನ್ನು ಹುಚ್ಚಪ್ಪರಾಗಿ ಹಾನಿ ಮಾಡಬಾರದು—ಎರಡೂ ಬಣದವರ ಅಭಿವ್ಯಕ್ತಿ ಇಲ್ಲಿ ಗಮನಾರ್ಹ. ಶಿವ ಶರಣರ ಭಕ್ತಿ ಪಥದಲ್ಲಿ ಆರು ಹಂತ-ಅದೇ ಷಟ್ಸ್ಥಲ ; ಇಹದ ವಸ್ತುಗಳ ಕಂಡರೆ ಇಷ್ಟ ಪಡದಿರುವಿಕೆ, ಇಷ್ಟಲಿಂಗ-ಪ್ರಾಣಲಿಂಗ ಪ್ರಾಪ್ತಿ, ಸಾಧಕನು ತನ್ನ ಸಾಧನೆಯ ಹಾದಿಯಲ್ಲಿ ಮುಂದರಿದಂತೆ, ಶಿಸ್ತುನಿಷ್ಠೆ-ಮನದ ತುಮುಲ ಕರಗಿ ದೈವ ಸಾಕ್ಷಾ ತ್ಕಾರದ ಮಜಲನ್ನು ತಲುಪುತ್ತಾನೆ. ಅದನ್ನೇ ಶರಣರು ಬಯಲು-ಶೂನ್ಯವೆಂದು ಕರೆದದ್ದು. ಅಲ್ಲಮ ಘೋಷಿಸುವಂತೆ, "ಭಕ್ತನಾಗು ಪ್ರೇಮದಿಂದ, ಮಹೇಶ ನಾಗು ನಿಷ್ಠೆಯಿಂದ, ಪ್ರಸಾದಿಯಾಗು ಸಾವಧಾನದಿಂದ, ಪ್ರಾಣಲಿಂಗಿಯಾಗು ಸ್ವಾನುಭವದಿಂದ". ಬಸವಣ್ಣ ಅದನ್ನೇ "ಅನುಭಾವವೆಂಬುದು ನೆಲದ ಮರೆಯ ನಿಧಾನ, ಕಾಣಿರೊ ಅಂತರಂಗದ ರತ್ನ" ಎಂದು ನುಡಿಯುತ್ತಾರೆ. ಶಿವಶರಣ ರದ್ದು ಅನುಭಾವ, ಷಟ್ಸ್ಥಲ ಪಥ ಆದರೆ, ಹರಿದಾಸರದ್ದು "ಅಪರೋಕ್ಷಾನುಭೂತಿ" ಪಡೆವ ಕಳಕಳಿ. ಅದಕ್ಕೆ ಅವರು ಅನುಸರಿಸುವುದು "ಬಿಂಬೋಪಾಸನೆ"ಯ

14. ನೀಲಲೋಚನೆ, ಮಹದೇವಿಯಕ್ಕ, ಮೊದಲಾದವರು.

ಹಾದಿಯನ್ನು "ಈಶಬಿಂಬ, ಜೀವ ಪ್ರತಿಬಿಂಬ", ಈಶ ನೀನು ದಾಸನಾನೆಂಬ ಭಾವ ದಿಂದ ಉಪಾಸನೆ, ಪಂಚಭೇದದ ತತ್ವದನುಸರಣೆ, ಅಂತೆಯೇ ಹರಿ ಸಾಕ್ಷಾತ್ಕಾರ ವನ್ನು ಸಗುಣೋಪಾಸಕರಾದ ಹರಿದಾಸರು ಪಡೆದು, ಅದನ್ನು ವೈಕುಂಠ, ಭಗವಂತನ ದಿವ್ಯ ಸಾನ್ನಿಧ್ಯವೆಂದು ಅನುಭವಿಸಿದರು.

ಆ) **ಸಮಾಜ ಸುಧಾರಣಾ ಮನೋಧರ್ಮ**

ವಚನಕಾರರಲ್ಲಿ ಕಾಣಬರುವ ಗುಣ ಕ್ರಾಂತಿಯಾದರೆ ಹರಿದಾಸರಲ್ಲಿ ಸಾತ್ವಿಕ, ಸೌಮ್ಯ ಆಂದೋಲನ ಗುಣ ಕಾಣಬರುತ್ತದೆ. ಮನುಷ್ಯ-ಸಮಾಜ ನಿರ್ಮಿಸಿದ ಜಾತಿ-ವರ್ಣಾಶ್ರಮ ವ್ಯವಸ್ಥೆಯ ಅಭೇದ್ಯ ಗೋಡೆಗಳನ್ನು ಹುಡಿಗುಟ್ಟಿ, ಜಾತ್ಯಾತೀತ ಮಾನವ ಸಮಾಜ ನಿರ್ಮಿಸುವ ಛಲ ಶರಣರದು. (ಆಯಾ ವಚನಕಾರರು ಅವರವರ ಹುಟ್ಟಿನ 'ಜಾತಿ'ಯ ಹೆಸರಲ್ಲೇ ಒಟ್ಟಾಗಿದ್ದಾರೆ—ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ, ಹೀಗೆ). ಇದಕ್ಕೆಂದೇ ಶರಣರು ಟಂಕಿಸಿದ್ದು "ಕಾಯಕ ತತ್ವ"- "ಕಾಯಕವೇ ಕೈಲಾಸ" ನುಡಿಗಟ್ಟು. ಕರ್ಮಯೋಗ, ಅದೇ ನಿಜವಾದ ಕೈಲಾಸ. ಕಬೀರನೊಂದೆಡೆ ಹಾಡುವಂತೆ, ನೀನು ಮೇಲುಜಾತಿಯವನಾದರೆ, ನಿನ್ನ ಮೈಯಲ್ಲಿ ಹಾಲು ಹರಿಯುತ್ತದೆಯೇ ?"

ವೈದಿಕ ಧರ್ಮದ ರೀತಿರಿವಾಜುಗಳನ್ನು ಶರಣರು ಖಂಡಿಸಿದ್ದಾರೆ. ಅರಿವೇ ಬೆಳಕು, ಜ್ಞಾನ, "ಮಾತೆಂಬುದು ಜ್ಯೋತಿರ್ಲಿಂಗ" ಎಂದು ಅಲ್ಲಮ ನುಡಿದು, "ವೇದವೆಂಬುದು ಓದಿನ ಮಾತು, ಶಾಸ್ತ್ರವೆಂಬುದು ಸಂತೆಯ ಸುದ್ದಿ, ಪುರಾಣ ವೆಂಬುದು ಪುಂಡರ ಗೋಷ್ಠಿ, ತರ್ಕವೆಂಬುದು ತಗರ ಹೋರಟೆ, ಭಕ್ತಿಯೆಂಬುದು ತೋರುಂಬ ಲಾಭ, ಗುಹೇಶ್ವರನೆಂಬುದು ಮೀರಿದ ಘನವು" ಎಂದು ಘೋಷಿಸು ತ್ತಾನೆ. ಇಲ್ಲಿ ಭಕ್ತಿ ಕುರಿತಂತೆ ಮಾತ್ರ ಅವನ ಉನ್ನತ ಭಾವನೆ, ವೈದಿಕ ಧರ್ಮದಲ್ಲಲ್ಲ ಎಂಬುದು ಸುಸ್ಪಷ್ಟ. ಬಸವಣ್ಣನವರೂ ಕೂಡಾ "ಭಕ್ತಿ ಪ್ರಿಯ ನಮ್ಮ ಕೂಡಲ ಸಂಗಮದೇವ"ನೆಂದರು. ಈ ದಿಸೆಯಲ್ಲಿ ಹರಿದಾಸರು ಭಕ್ತಿ ಕುರಿತಂತೆ—ಉನ್ನತ ಭಾವನೆ ವ್ಯಕ್ತ ಪಡಿಸಿದರೂ, ಅವರು ವೇದಾಗಮ-ಭಾಗವತ ಧರ್ಮಗಳನ್ನು ನಂಬಿಯೇ ನಡೆದರೆಂಬುದೂ ಸ್ಪಷ್ಟ. ಎರಡೂ ಬಣದವರ ಒಂದು ವಿಶಿಷ್ಟತೆ, ತಿಳಿಗನ್ನಡದೇನೆ, ಸಮಾಜದ ಮೇಲುಸ್ತರದವರು ಮಾಡುವ ಅರ್ಥಹೀನ ಮಡಿ ಮೈಲಿಗೆಯ ಡಾಂಭಿಕತೆ-ಬೂಟಾಟಿಕೆಗಳನ್ನು ಹರಿದಾಸರು ಖಂಡಿಸಿದ್ದಾರೆ. 'ಮಡಿ ಮಡಿಯೆಂದಡಿಗಡಿಗ್ಹಾರುವಿ ನಿನ್ನ ಮಡಿಯೆಲ್ಲಿ ಬಂತೊ ಬಿಕನಾಸಿ" ಎನ್ನುವುದ ರೊಂದಿಗೇ, ಕನಕದಾಸರ "ಕುಲ ಕುಲವೆಂದು ಹೊಡೆದಾಡುವಿರಿ ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರಾ" ಎಂಬುದು ಇನ್ನು ಶೇಷ ಪ್ರಶ್ನೆಯಾಗಿಯೆ ಉಳಿದಿದೆ. ನಡೆದೆಡೆ "ಮಡಿನೀರು ಹಾಕಿಕೊಂಡು ಹಾರುವ ಕರ್ಮಠರಿಗೆ ಮಡಿ ಅವರಿಗಾಯಿತೆ,

ಅಥವಾ ನೀರಿಗೆ, ಎಂದು ಕೇಳಬೇಕಾಗುತ್ತದೆ. ಇಂತಹ ಕಡೆಗಳಲ್ಲೆಲ್ಲ ಆಚಾರ, ಅರ್ಥವಿಹೀನವೆನಿಸುತ್ತದೆ. "ಅಲ್ಲದ ಧರ್ಮದ ಆಚರಿಸಿದವ ಕೆಟ್ಟನೆನ್ನುವುದು ಈ ಅರ್ಥದಲ್ಲೆ.

"ಕೊಲ್ಲುವನೆ ಮಾದಿಗ, ಹೊಲಸುತಿಂಬುವನೆ ಹೊಲೆಯ
ಕುಲವೇನೊ ಆವಂದಿರ ಕುಲವೇನೊ
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲ ಸಂಗನ ಶರಣರೇ ಕುಲಜರು" ಎಂಬ ವಚನದಂತೆಯೇ

"ಹೊಲೆಯ ಬಂದಾನೆಂದು ಒಳಗೆ ದೇವರಮಾಡಿ
ಘಣಘಣ ಘಂಟೆ ಬಾರಿಸುವರಯ್ಯ
ತನುವಿನ ಕೋಪ ಹೊಲೆಯಲ್ಲವೇನಯ್ಯಾ
ಮನಸಿಕ ವಂಚನೆ ಹೊಲೆಯಲ್ಲವೇನಯ್ಯಾ
ಇಂಥಾ ಹೊರಗಿದ್ದ ಹೊಲೆಯನ್ನ ಒಳಗೆ ತುಂಬಿಟ್ಟುಕೊಂಡು
ಇದಕೇನು ಮದ್ದೋ ಶ್ರೀಪುರಂದರ ವಿಠಲಾ"

ಎಂಬುವ ದಾಸರ ಕಳಕಳಿಯಲ್ಲಿ ಆಯಾಯ ನೆಲೆ ಬೆಲೆಯ ವಿಚಾರ ಮಾಡುವ ರೀತಿ ಗಮನಾರ್ಹ 'ಕಳಬೇಡ ಕೊಲಬೇಡ' ಎಂಬುವ ಶರಣರು,

"ಸತ್ಯದಲಿ ನಡೆವುದು ಶೀಲ
ಸತ್ಯದಲಿ ನುಡಿವುದು ಶೀಲ
ಸಜ್ಜನ ಸದಾಚಾರದಲ್ಲಿ ವರ್ತಿಸಿ
ಸತ್ಯವನರಿಯದೆ ಶೀಲ ಕಾಣಿರೇ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ" ಎಂದರೆ, ಹರಿದಾಸರು,

"ಸತ್ಯವೆಂಬುದೆ ಸ್ನಾನ ಉಪವಾಸ ಜಪನೇಮ |
ಸತ್ಯದಲಿ ಮಾಡದ ಕರ್ಮ ವ್ಯರ್ಥ" ವೆನ್ನುತ್ತಾರೆ.
'ಮನಶುದ್ಧಿಯಿಲ್ಲದವಗೆ ಮಂತ್ರದ ಫಲವೇನು'
ಎಂಬುದೂ ಇದೇ ಚಿಂತನೆಯೇ

ಇನ್ನು 'ಏಕದೇವೋಪಾಸನೆ'ಯ ಬಗ್ಗೆ, ಶಿವಶರಣರು ಕಂಡ ಶಿವ, ಹರಿದಾಸರು ವರ್ಣಿಸಿದ ಶ್ರೀಹರಿ, ಇಬ್ಬರಲ್ಲೂ ಒಬ್ಬನೆ ದೇವನೆಂಬ ನಿಷ್ಠೆ.

'ಇಬ್ಬರು ಮೂವರು ದೇವರೆಂದು
ಉಬ್ಬಿ ಮಾತನಾಡಬೇಡ
ದೇವನೊಬ್ಬನೆ ಕಾಣಿರೊ'

ಎಂಬುವುದು ಬಸವಣ್ಣನವರ ಧ್ವನಿಯಾದರೆ, "ನಮ್ಮದೇವ ನಿಮ್ಮ ದೇವ ತಮ್ಮದೇವನೆನಬೇಡಿ ಬೊಮ್ಮನ ಪಡೆದ ದೇವನೊಬ್ಬನೆ ಕಾಣಿಕೆ" ಎನ್ನುವವರು ಹರಿದಾಸರು.

'ಗುರುಭಕುತಿ–ಗುರುಕರುಣೆ' ಕುರಿತಂತೆ ಶರಣ–ದಾಸರಿಬ್ಬರೂ ಮನದುಂಬಿ ಹಾಡಿದಾರೆ.

"ತನ್ನ ತಾನರಿದವಂಗೆ ಅರಿವೆ ಗುರು" ಎಂದರು.
"ಗುರುವಚನದಿಂದಲ್ಲದೆ ಲಿಂಗವನರಿಯಬಾರದು,
ಗುರುವಚನದಿಂದಲ್ಲದೆ ಜಂಗಮವನರಿಯಬಾರದು,
ಪ್ರಸಾದವನರಿಯಬಾರದು" ಎನ್ನುತ್ತಾನೆ.

"ಆಜಗಣ್ಣ"ನೆಂಬ ಶರಣ, "ಗುರುವೆ ಪರತತ್ವವು ನೋಡಾ" ಎನ್ನುವ ಅಖಂಡೇಶ್ವರನಂತೆಯೆ ದೇವರ ದಾಸಿಮಯ್ಯ ನುಡಿವ ಪರಿಯೆ ಬೇರೆ

ಗುರು ಕರುಣಿಸಲು ಸಂಸಾರ ವಿಷಯ ಕೆಟ್ಟಿತ್ತು
ಮಾಯಾ ಪ್ರಪಂಚ ಬಿಟ್ಟಿತ್ತು
ಹುಟ್ಟೆಂತು ಹೋಯಿತ್ತು
ನೆಟ್ಟಗೆ ಗುರುಪಾದವ ಮುಟ್ಟ
ಭವಗೆಟ್ಟೆನು ಕಾಣಾ ರಾಮನಾಥಾ... ಹರಿದಾಸರ ಗುರು ಭಕುತಿ ಬಗ್ಗೆ ಹಿರಿಯರಾದ ಶ್ರೀ ಪುರಂದರದಾಸರು ತಮ್ಮ ಪ್ರಿಯಗುರು ಶ್ರೀ ವ್ಯಾಸರಾಯರ ಕರುಣೆ ಕುರಿತಂತೆ ಹಾಡುವ ಸಾಲು ಗಮನೀಯ :

ವ್ಯಾಸರಾಯರ ಚರಣ ಕಮಲ ದರುಶನವೆನಗೆ
ಏಸುಜನ್ಮದ ಸುಕೃತ ಫಲ ದೊರಕಿತೊ, ಎನ್ನ
ಸಾಸಿರ ಕುಲಕೋಟಿ ಪಾವನ್ನವಾಯಿತು
ಶ್ರೀಶನ್ನ ಭಜಿಸುವುದಕಧಿಕಾರಿ ನಾನಾದೆ
ದೋಷ ರಹಿತನಾದ ಪುರಂದರ ವಿಠಲನ
ದಾಸರ ಕರುಣವೆನ್ನ ಮೇಲೆ ಇರಲಾಗಿ....

ಕನಕದಾಸರಂತೂ, "ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ" ಎಂದು ಘೋಷಿಸಿದ್ದಾರೆ.

"ಅನುಭಾವ"–ಶರಣರು ಕಾಂಬ ನೆಮ್ಮದಿಯ, ಅಲೌಕಿಕ ಸೊಗದ ನೆಲೆ. ಹರಿದಾಸರು, ಅದನ್ನೆ "ಅಪರೋಕ್ಷಾನುಭೂತಿ" ಎಂದು ಕರೆದದ್ದು. ಹಿರಿಯ ಶರಣ ದೇವರ ದಾಸಿಮಯ್ಯ, ಒಂದೆಡೆ, ಆರ್ತತೆಯಿಂದ ನುಡಿಯುತ್ತಾನೆ :

"ಅನುಭಾವವಿಲ್ಲದ ಭಕ್ತಿ ತಲೆ ಕೆಳಗಪ್ಪುದಯ್ಯ
ಅನುಭಾವವೇ ಭಕ್ತಿಗಾಧಾರ,
ಅನುಭಾವವೇ ಭಕ್ತಿಗೆ ನೆಲೆವನೆ
ಅನುಭಾವವುಳ್ಳವರ ಕಂಡರೆ
ತೂರ್ಯಾ ತೂರ್ಯ ಸಂಭಾಷಣೆಯ ಮಾಡದಿರ್ದರೆ
ನರಕದಲ್ಲಿಕ್ಕಯ್ಯಾ ರಾಮನಾಥಾ"

"ಅಪರೋಕ್ಷಾನುಭೂತಿ"–ಒಂದು ಅನಿರ್ವಚನೀಯ ಸ್ಥಿತಿ. ಅಲ್ಲಿ ಬೌದ್ಧಿಕ ಲಕ್ಷಣ ಉಂಟು. ಹಾಗೂ ಮನದಲ್ಲಿ ಏನೊ ಅಸ್ಥಿರತೆ ಚಡ–ಪಡಿಕೆ ಹಾಗೂ ಆತ್ಮ ನಿವೇದನೆಯ ಅಳಲು ಇರುತ್ತದೆ. ಇದೆಲ್ಲದರ ಮೂಲಕ ಪಡೆಯುವ ನೆಮ್ಮದಿಯ ನೆಲೆ "ದಿವ್ಯಾನುಭವ"ವೆನಿಸಿಕೊಳ್ಳುತ್ತದೆ. ಈ ದೃಷ್ಟಿಯಿಂದ ಅನೇಕ ಹರಿದಾಸರ ರಚನೆಗಳು, 'ಅಂತಃಕರಣದ ನವನೀತ' ಆಗುತ್ತವೆ. ಅಂಥ ಸಾಲು ಒಂದಿದು:

"ಅನುಭವದಡುಗೆಯ ಮಾಡಿ, ಆದ
ಕ್ಕನುಭವಿಗಳು ಬಂದು ನೀವೆಲ್ಲ ಕೂಡಿ |
.........ಕರುಣೆಂಬೊ ಸಾಮಗ್ರಿಹೂಡಿ ಮೋಕ್ಷ
ಪರಿಕರವಾದಂಥ ಪಾಕವ ಮಾಡಿ
ಗುರು ಶರಣರು ಸವಿದಾಡಿ ನಮ್ಮ
ಪುರಂದರ ವಿಠಲನ ಬಿಡದೆ ಕೊಂಡಾಡಿ...."

ನಿಮ್ಮನು 'ಹಾಡಿ ನಾಲಿಗೆ ದಣಿಯದು, ಇನ್ನೊವೆ ನಿನ್ನೋವೆ' ನೆನ್ನುವ ಬಸವಾದಿಗಳಂತೆ, "ಹಾಡಿದರೆ ಎನ್ನೊಡೆಯನ ಹಾಡುವೆ" ಎಂಬ ದಿಟ್ಟ ನಿಲುವೂ ಹರಿದಾಸರದ್ದು.

ಇಷ್ಟಾಗಿ ದಿನನಿತ್ಯದ ಎಡರು ತೊಡರೆಷ್ಟು !

ಹಗಲು ಹಸಿವೆಗೆ ಕುದಿದು
ಇರುಳು ನಿದ್ರೆಗೆ ಕುದಿದು
ಉಳಿದೆಲ್ಲ ಹೊತ್ತೆಲ್ಲ ಅಶನವ್ಯಸನಕ್ಕೆ ಕುದಿದು
ಅಯ್ಯ ನಿಮ್ಮನರಿಯದ ಪಾಪಿನಾನಯ್ಯ |
ಅಯ್ಯ ನಿಮ್ಮನರಿಯದ ಕರ್ಮಿನಾನಯ್ಯ
ಮಹಾವೀರ ಕಲ್ಲೇಶ್ವರಾ
ಅಸು ನೀರಡಿಸಿ ಸತ್ತ
ತೆರನಾಯಿತ್ತೆನ್ನ ಯುಕ್ತಿ

ಎಂದರೆ, ಹರಿದಾಸರ ಹಲುಬುವಿಕೆಯೂ ಅದೇ |
ಹಗಲು ನಿನ್ನ ನೆನೆಯಲಿಲ್ಲ | ಹಸಿವು ತೃಷೆಯಿಂದ |
ಇರುಳು ನಿನ್ನ ನೆನೆಯಲಿಲ್ಲ | ನಿದ್ರೆ ಭರದಿಂದ |
ಈ ಎರಡರ ಬಾಧೆಗೆ ನಾನೊಳಗಾದೆನೊ
ಸಲಹೊ ಪುರಂದರ ವಿಠಲ.

ದೈವದ ಅನುಗ್ರಹಕ್ಕೆ ಪಾತ್ರ ಆಗಲು ಕಾತರಿಸುವ ಭಕ್ತರಿಗೆ ಪರೀಕ್ಷೆಗಳು ಹೆಚ್ಚು; ಅದನ್ನು ಬಲ್ಲವರು ದುಃಖಕ್ಕೆ ಕುಗ್ಗರು, ಹೆದರರು :

**೪) ಉಗಾಭೋಗಗಳು–ವಚನಗಳಲ್ಲಿ ಸಾದೃಶ**

ಪುರಂದರದಾಸರ ಉಗಾಭೋಗಗಳಲ್ಲಿ ಮತ್ತು ವಚನಕಾರರ ವಚನಗಳಲ್ಲಿ ಕಾಣಬರುವ ಸಾಮ್ಯ–ಸಾದೃಶ್ಯಗಳನ್ನು ಡಾ. ಎಂ. ಚಿದಾನಂದಮೂರ್ತಿಯವರು, ತಮ್ಮ ದೀರ್ಘ ಪ್ರಬಂಧದಲ್ಲಿ ಗುರುತಿಸಿದ್ದಾರೆ. ಇಲ್ಲಿ ವಚನಕಾರರ ಪ್ರಭಾವ ಹರಿದಾಸರ ಮೇಲಾಗಿರುವ ಸ್ಪಷ್ಟ ಕುರುಹು ಇವೆ. ಇದನ್ನು ಡಾ. ಎಂ. ವಿ. ಕೃಷ್ಣರಾವ್[15] ಅವರೂ ತಮ್ಮ ಗ್ರಂಥದಲ್ಲಿ ಗುರುತಿಸಿದ್ದಾರೆ. "ಮನೋಭಾವ ವನ್ನು ಗಮನಿಸಿ ಹೇಳುವುದಾದರೆ, "ಅವರೂ (ಪುರಂದರದಾಸರು) ಬಸವಣ್ಣನವರೂ ಒಂದೇ ಗೊಂಚಲ ಎರಡು ಹೂಗಳು. ಭಕ್ತಿ ವೃಕ್ಷದ ಎರಡು ಪಕ್ವ ಫಲಗಳು" ಎಂಬ ಮಾತು ಸಾರ್ವತ್ರಿಕ ಸತ್ಯ. ಇಲ್ಲಿ ಅಂಥ ಒಂದೆರಡು ನಿದರ್ಶನದೊಂದಿಗೆ ಗುರುತಿಸುವ ಪ್ರಯತ್ನ ಮಾಡಲಾಗಿದೆ.

i) ಉರಿಗಂಜೆ ಸೆರೆಗಂಜೆ ಶರೀರದ ಭಯಕಂಜೆ
ಹಾವಿಗಂಜೆ ಚೇಳಿಗಂಜೆ ಕತ್ತಿಯಧಾರೆಗಂಜೆ
ಇನ್ನೊಂದಕ್ಕಂಜುವೆ ಇನ್ನೊಂದಕ್ಕಳುಕುವೆ
ಪರಧನ ಪರಸತಿಗೆರಡಕ್ಕಂಜುವೆನಯ್ಯ
ಹಿಂದೆ ಕೌರವ ರಾವಣರೇನಾಗಿ ಹೋದರು
ಮುಂದೆ ಸಲಹೊ ಪುರಂದರವಿಠಲ

ಹರಿವ ಹಾವಿಗಂಜೆ ಉರಿಯ
ನಾಲಿಗೆಗಂಜೆ ಸುರಗಿಯ ಮೊನೆಗಂಜೆ

---

15. Purandara and Haridasa Movement, Pub. Karnatak University
16. "ಉಗಾಭೋಗಗಳು ಮತ್ತು ವಚನಗಳು"—ಡಾ|| ಎಂ. ಚಿದಾನಂದ ಮೂರ್ತಿ ಸಂಶೋಧನ ತರಂಗ

ಒಂದಕ್ಕಂಜುವೆ ಒಂದಕ್ಕಳುಕುವೆ
ಪರಸ್ತ್ರೀ ಪರಧನ ಲೋಭೀ ಜೂಬಿಂಗಂಜುವೆ
ಮುನ್ನಂಜದ ರಾವಣನೇ ವಿಧಿಯಾದ
ಅಂಜುವೆನಯ್ಯ ಕೂಡಲಸಂಗಮದೇವಾ.

ii) ಜಗವಸುತ್ತಿಹುದೆಲ್ಲ ನಿನ್ನ ಮಾಯವಯ್ಯ
ನಿನ್ನಸುತ್ತಿಹುದೆಲ್ಲ ಎನ್ನಮನವಯ್ಯ
ಜಗವು ನಿನ್ನೊಳಗೆ ನೀನು ನನ್ನೊಳಗೆ
ಜಗಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು
ಕರಿಯು ಕನ್ನಡಿಯೊಳು ಅಡಗಿಪ್ಪ ತೆರನಂತೆ
ನೀನು ಎನ್ನೊಳಗಿಪ್ಪೆ ಪುರಂದರ ವಿಠಲ

ಜಗವಸುತ್ತಿಹುದು ನಿನ್ನ ಮಾಯೆಯಯ್ಯ
ನಿನ್ನಸುತ್ತಿಹುದು ಎನ್ನ ಮನನೋಡಯ್ಯ
ನೀನು ಜಗಕೆ ಬಲ್ಲಿದನು ಆನು ನಿನಗೆ ಬಲ್ಲಿದನು ಕಂಡಯ್ಯ
ಕರಿಯು ಕನ್ನಡಿಯೊಳಗಡಗಿದ್ದಂತಯ್ಯ
ಎನ್ನೊಳಗೆ ನೀನಡಗಿಹೆ
ಕೂಡಲ ಸಂಗಮದೇವಾ

ಈ ತೌಲನಿಕ ವಿವಕ್ಷೆಯಲ್ಲಿ ವಚನಕಾರರ ಪ್ರಭಾವ ಅವರ ನಂತರ ಬಂದ ಹರಿದಾಸರ ಮೇಲಾಗಿರುವುದು ಸ್ಪಷ್ಟವೆನಿಸಿದರೂ Great Minds think alike ಎಂಬ ಮಾತನ್ನು ನಾವು ನೆನಸಿಕೊಳ್ಳಬೇಕಾಗುತ್ತದೆ. ಹಾಗೂ ಅಲ್ಲಿರುವ ಸಾರ್ವತ್ರಿಕ ಹಿತ ಬಯಸುವ ಕಳಕಳಿ, ಸಾರ್ವತ್ರಿಕ ಸಂದೇಶ, ಸಮಾಜದ ಸಮಸ್ತರ ಹಿತವನ್ನು ಬಯಸುವ ಉದಾರತೆ, ಎಲ್ಲದರಲ್ಲಿಯೂ ಹರಿದಾಸರ ಕೀರ್ತನ ಸಂಪದ ಆದರಣೀಯ ಎನಿಸುತ್ತದೆ, ವಚನಗಳು ಆಲೋಡನೀಯ ಎನಿಸುತ್ತವೆ.

ಗೀರ್ವಾಣಭಾಷೆ ಎನ್ನಿಸಿದ ಸಂಸ್ಕೃತದ ಶಾಸ್ತ್ರಗ್ರಂಥಗಳಲ್ಲಿ ಹುದುಗಿದ್ದ ಗಹನ ಆದ ಅನೇಕ ಧರ್ಮತತ್ವ ಸಂಗತಿಗಳನ್ನು ತಿಳಿಗನ್ನಡ ನುಡಿಗಟ್ಟಿನ ಮೂಲಕ ಎಲ್ಲರಿಗೂ ಶ್ರುತಿಸುಭಗ ರೀತಿಯಲ್ಲಿ ಮನಮುಟ್ಟಿಸಿ ಹಾಡಿದ ಹರಿದಾಸರು ಸಾಂಪ್ರದಾಯಿಕ ನಿಷ್ಠರ ದೃಷ್ಟಿಯಿಂದ ಕ್ರಾಂತಿಕಾರರೆನ್ನಿಸುತ್ತಾರೆ. ಅಲ್ಲಿಭಗವದ್ಭಕ್ತಿ, ಸಂಗೀತ, ಹರಿದಾಸ್ಯವೃತ್ತಿ ಇರುವಂತೆಯೇ ಅಧ್ಯಾತ್ಮಿಕ ನಿಷ್ಠೆ, ಸಾಹಿತ್ಯಿಕ ಮೌಲ್ಯವೂ ಇದೆ. ಮತದ ಛಲ ಕಣ್ಣು ಕುಕ್ಕುವುದಿಲ್ಲ. ನೀತಿಗೆ ಆದರವಿದ್ದರೂ,

ನುಡಿಪಂಕ್ತಿಕೆಯು ಹಠವಿಲ್ಲ, ತಮ್ಮ ತಾಯ್ನುಡಿಯಲ್ಲಿ ಎದೆಯಾಳದ ಭಾವನೆಗಳನ್ನು ಭಕ್ತಿಯ ಹೊನಲಲ್ಲಿ ಹೊರಹೊಮ್ಮಿಸಿದಾರಷ್ಟೆ. ಇದರಿಂದ ಭಗವಂತನ ಕುರಿತಾದ ಪ್ರೀತಿ-ಒಲವರಕ್ಕೆ ಏನೂ ಆತಂಕ ಬಾರದೆಂದೆ ದಾಸರ ಕಳಕಳಿ. ಹೀಗಾಗಿ ಹರಿದಾಸರ ಹಾಡೆಲ್ಲ ಕನ್ನಡದವೆ, ಕನ್ನಡವುಟ್ಟನವೇ ಕನ್ನಡ ನುಡಿಗಟ್ಟು ಉಳ್ಳವು ಹಾಗೂ ತಿರುಳು ಕನ್ನಡದ ಜಾಯಮಾನದ್ದೆ.

ವಚನಕಾರರಲ್ಲಿ ಅನೇಕರು 'ಕುರಿತೋದಿ'ರಲಿಲ್ಲ ವೆಂಬುದು ವಚನ ಸಾಹಿತ್ಯದ ಇತಿಹಾಸದಿಂದ ವೇದ್ಯ ಆಗುವಂತೆಯೆ ಹರಿದಾಸರಲ್ಲಿ ಕೆಲವರು ಸ್ವಾನುಭವಿಗಳು-ಪಂಡಿತರಲ್ಲ, ಭಕ್ತಿಯೇ ಉತ್ತಮ ಸಾಧನ ("ಅಮಲಾ ಭಕ್ತಿಶ್ಚ ತತ್ಸಾಧನಂ") ಎಂಬ ಪಟ್ಟು ಅವರದು. ಹರಿದಾಸರು ಭಾವುಕರು. ವಚನಕಾರರಂತೆ ಹರಿದಾಸರೂ ತಮ್ಮ ಬದುಕಿಡೀ ಶ್ರೀ ಹರಿ ಪ್ರೀತ್ಯರ್ಥ ಆಗಿಸಿದರು. ಅಲ್ಲಿ "ಆಳು ನಾನಿನ್ನೊಳು ನಿನ್ನಾಳು ನಾನು ನೀನು ತಂದೆ ನಿನ್ನ ಕಂದ ನಾನು" ಎಂಬುವುದೆ ಅವರ ಭಾವ-ಅಂತೆಯೆ ಅವರು ನುಡಿದ ಶಬ್ದಗಳೆಲ್ಲ ಹೂವುಗಳು, ನಡೆವುದೆಲ್ಲವು ನಾಟ್ಯಂಗಳು, ಅಂತರಂಗದಲಿ ಹರಿಯ ಕಾಣದವ ಹುಟ್ಟು ಕುರುಡನೆ",ಎಂದು ಉದ್ಘೋಷಿಸಿದ್ದು. ವಚನಕಾರರು ಹಿಡಿದ ದಾರಿ, ದಾಸರು ಮೀಟಿದ ತಂಬೂರಿ, ಅದೇ ಈ ಪರಿಯ ಸೊಬಗು.

**ಗ್ರಂಥಋಣ**


೧) ವಚನ ಸಾಹಿತ್ಯ ಸಂಗ್ರಹ—ಸಂ : ಶಿ. ಶಿ. ಬಸವನಾಳ

೨) ವಚನ ಧರ್ಮಸಾರ— ಎಂ. ಆರ್. ಶ್ರೀ.

೩) ಹರಿದಾಸ ಕೀರ್ತನ ತರಂಗಿಣಿ—ಸಂ. ಸುಬೋಧ ರಾಮರಾಯರು

೪) ಪುರಂದರದಾಸರ ಕೀರ್ತನಸಂಚಯ—ಪ್ರೊ|| ಎಸ್. ಕೆ. ರಾಮಚಂದ್ರ ರಾವ್

೫) ಸಾಹಿತ್ಯ ಸಾನ್ನಿಧ್ಯ—ಡಾ|| ಜಿ. ವರದರಾಜರಾವ್

೬) ಹರಿದಾಸ ಹೃದಯ—ಡಾ|| ಜಿ. ವರದರಾಜರಾರ್

೭) ಪರಿಶೀಲನ—ಡಾ|| ಜಿ. ಎಸ್. ಶಿವರುದ್ರಪ್ಪ

8) Purandara and The Haridasa Movement
ಡಾ|| ಎಂ. ವಿ. ಕೃಷ್ಣರಾವ್

೯) ಕನ್ನಡ ಸಾಹಿತ್ಯ ಚರಿತ್ರೆ—ರಂ. ಶ್ರೀ. ಮುಗಳಿ

೧೦) ನಾರದ ಭಕ್ತಿಸೂತ್ರಗಳು—ಸಂ : ಹರ್ಷಾನಂದಜಿ


○

ಶ್ರೀಮತಿ ಸುಲೋಚನಾ ನಾಗರಾಜ್

# ಕುಟುಂಬದ ಯಜಮಾನರಾಗಿ ಶ್ರೀ ನಾಗರಾಜ್

'ಮನೆಯ ಯಜಮಾನರಾಗಿ ಶ್ರೀ ನಾಗರಾಜ್' ಎಂದು ನಮ್ಮ ಕುಟುಂಬದ ಯಜಮಾನರಾದ ನಾಗರಾಜ್‌ರವರ ಬಗೆಗೆ ಅವರ ಧರ್ಮಪತ್ನಿಯಾಗಿರುವ ನಾನು ಯಜಮಾನ ಯಜಮಾನಿಯ ಮೇಲೆ ಯಜಮಾನಗಿರಿ ತೋರಿಸಿದ್ದು, ನನ್ನಿಚ್ಛೆಗೆ ಮೀರಿ ತಿರುಗಾಟ ನಡೆಸಿದ್ದು ಎಲ್ಲಾ ಬರೆದು ಬಿಡೋಣವೆಂದು ಬರೆಯುತ್ತಿದ್ದೇನೆ.

೩೦-೩೧ ವರ್ಷಗಳ ದಾಂಪತ್ಯ ನಡೆದು ಬಂದದ್ದನೆಲ್ಲಾ ನೆನಪಿಸಿಕೊಳ್ಳುತ್ತಾ ಹೊರಟೆ. ಹೆಣ್ಣು ನೋಡಲು ಬಂದಾಗ ಒಪ್ಪಿದ್ದೇ ನಿನ್ನ ದಿಟ್ಟತನವನ್ನು ನೋಡಿ ಎಂದಿದ್ದರು. ಕನ್ಯಾರ್ಥಿಗಳಾಗಿ ಬಂದವರ ಮುಂದೆಲ್ಲಾ ಕೂರಲು ಇಷ್ಟವಿಲ್ಲದ ಕಾರಣ, ಇವರೂ ಎಲ್ಲರ ಹಾಗೆ ಊರಿಗೆ ಹೋಗಿ ಕಾಗದ ಬರೆಯುತ್ತೇವೆ ಎಂದು ಹೇಳಿ ಹೋಗುವವರ ಜಾತಿಯೇ ಎಂಬ ಅನುಮಾನದಲ್ಲಿ ಬೇಕೆಂದೇ ನೇರವಾಗಿ ತಲೆಎತ್ತಿ [illegible] ನನ್ನ ನಾಗ[illegible]ನ್ನು, ದಿಟ್ಟತನದಿಂದಲೇ ಕೇಳಿದ ಪ್ರಶ್ನೆಗೆ ಉತ್ತರ ಕೊಟ್ಟಿದ್ದೆ. ನಿಜ, ಅಕ್ಷರಶಃ ನಿಜ, ನಾನು ದಿಟ್ಟೆ, ಛಲಗಾತಿ, ಧೈರ್ಯವಂತೆಯಾಗಿರದಿದ್ದರೆ ಕಾಲ, ವೇಳೆಯ ಪರಿವೆಯಿಲ್ಲದೆ ಊರೂರು ಹೋಗಿ ತಿರುಗಿ ಬರುವ ಇವರೊಂದಿಗೆ ಏಗುವುದು ಕಷ್ಟವೇ ಆಗುತ್ತಿತ್ತು. ಮದುವೆಯಾದ ಹೊಸತರಲ್ಲೇ ಪ್ರೌಢಶಾಲಾ ಉಪಾಧ್ಯಾಯರಾಗಿ ಶಿವಮೊಗ್ಗ ಡಿಸ್ಟ್ರಿಕ್ಟಿನ ಆಯನೂರು ಹೋಬಳಿಗೆ ಕರೆದೊಯ್ದರು. ಮಲೆನಾಡ ಸೆರಗಿನ ತಾಣ, ಬೆಳಗಿನ ಝಾವ ಸುಮಾರಿಗೆ ಎದ್ದು ಕಾಗದ ಪೆನ್ನು ಹಿಡಿದು, ಕಾಡು ಮೇಡು ಅಲೆಯುತ್ತಾ ಹೊರಟರೆ ಹೊತ್ತು ಹುಟ್ಟಿ ಹೊಟ್ಟೆಚುರ್ರೆಂದು, ಸರಕಾರೀ ಕಾಯಕದ ವೇಳೆ

ಸಮೀಪಿಸಿದಾಗಲೇ ಮನೆ ಸೇರುತ್ತಿದ್ದುದು. ಅಲ್ಲಿಂದ ಪ್ರಾರಂಭ ನಾನುಕಂಡಂತೆ ಕನ್ನಡದ ಚಟುವಟಿಕೆಗಳಿಗೆ, ಅನೇಕ ಕಥೆ, ಕವನ, ಪ್ರಬಂಧ, ನಾಟಕ ಸಾಹಿತ್ಯ ಸ್ಪರ್ಧೆಗಳಲ್ಲಿ ಭಾಗವಹಿಸಿ ಪ್ರಶಸ್ತಿಗಳನ್ನು ಪಡೆದುಕೊಂಡರು.

ಮುಂದೆ ನೇರ ರಾಮನಗರ ತಾಲ್ಲೂಕಿನ ಜಾಲಮಂಗಲಕ್ಕೆ ಬಂದಾಗ, ಅಲ್ಲಿಯ ಗುಡ್ಡ ಬೆಟ್ಟ ಹತ್ತಿ, ಆ ಊರಿನಲ್ಲಿ ಆಳಿ ಹೋಗಿದ್ದ ಅಣ್ಣಪ್ಪನಾಯಕನ ಜಾತಕ ವನ್ನೆಲ್ಲಾ ಜಾಲಾಡಿ, ಅವನ ಕುರಿತು ನಾಟಕ ರಚಿಸಿ, ಆ ಶಾಲೆಯ ಮಕ್ಕಳಿಂದಲೇ ನಾಟಕ ಆಡಿಸಿ ಊರಿನವರು ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂತೆ ಮಾಡಿದರು. ಜಾಲಮಂಗಲದ ಬದಿಯ ತಡಿಕವಾಗಿಲು ಗ್ರಾಮದ ಅಜ್ಜ ಅಜ್ಜಂದಿರ ಹುಟ್ಟು ಬೆಳವಣಿಗೆಯ ಕತೆಯೆಲ್ಲಾ ಬೇಕಿವರಿಗೆ. ಆ ಶಾಲೆಯಲ್ಲಿ ಕಲಿತು ಇಂದು ನಾನಾ ಕಡೆ ಕಾಯಕ ಮಾಡುತ್ತಿರುವ, ಸಂಸಾರವೊಂದಿಗರಾದ ಶಿಷ್ಯಂದಿರಿಂದ ಇಂದಿಗೂ ಕೇಳಿ ಬರುವ ಮಾತು ಲೆಕ್ಕ ಎಂದರೇನು ಎಂದು ತಿಳಿದದ್ದೇ ನಾಗರಾಜ್ ಮೇಸ್ಟ್ರಿಂದ ಎಂದು ಪದವಿ ಪಡೆದದ್ದು ಗಣಿತಶಾಸ್ತ್ರದಲ್ಲಾದರೂ ಮಾಡಿದ, ಮಾಡುತ್ತಿರುವ ಚಟುವಟಿಕೆಗಳೆಲ್ಲಾ ಕನ್ನಡಕ್ಕೆ ಸಂಬಂಧಿಸಿಯೇ. ಎರಡು ವರ್ಷಗಳಷ್ಟುಕಾಲ ಒಂದೆಡೆ ನಿಂತಿದ್ದೆಂದರೆ ಎಂ.ಎಸ್ಸಿ. ಓದಲು ಬೆಂಗಳೂರಿಗೆ ಬಂದಾಗ ಮಾತ್ರ. ನಂತರ ದೀರ್ಘಕಾಲ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿ ಸಂಘ ಕಟ್ಟಿ ತಮ್ಮ ಬಹುದಿನಗಳ ಅಂತರಂಗದ ಬಯಕೆಗಳನ್ನೆಲ್ಲಾ ಈಡೇರಿಸಿಕೊಂಡ ಕ್ಷೇತ್ರವೆಂದರೆ ರಾಮನಗರ. ಸ್ಥಳೀಯ ಕನ್ನಡ ಸಾಹಿತ್ಯ ಸಮಿತಿ, ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ಕಾರ್ಯದರ್ಶಿಗಳಾಗಿ ಕವಿಸಮ್ಮೇಳನ, ವಚನ-ದಾಸ ಸಮ್ಮೇಳನ, ವೈದ್ಯಕೀಯ ಸಮ್ಮೇಳನ, ಉರ್ದು-ಕನ್ನಡ ಸಮ್ಮೇಳನ, ಹೀಗೆ ನಾನಾ ಸಮ್ಮೇಳನ ಮತ್ತು ಸಾಹಿತ್ಯ ಸೇವೆಗಳನ್ನು ನಡೆಸಲು ಸಂಬಂಧ ಪಟ್ಟವರನ್ನೆಲ್ಲಾ ಕಲೆಹಾಕಿ, ಆ ಕಾರ್ಯದಲ್ಲಿ ಯಶಸ್ವಿಯಾಗಿ ರಾಮನಗರದ ಜನತೆಯ ಮನದಲ್ಲಿ ಅಚ್ಚಳಿಯದೆ ನಿಂತರು. ರಾಮನಗರದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳನ್ನು ಹುಟ್ಟು ಹಾಕಿದ ಕೀರ್ತಿ ಇವರದು ಎಂದೇ ಇಂದು ರಾಮನಗರದ ಮಿತ್ರರ, ಅಭಿಮಾನಿಗಳ ಬಳಗ ಅಪಾರ. ಇಪ್ಪತ್ತಮೂರು ವರ್ಷಗಳ ರಾಮನಗರದ ಬಾಂಧವ್ಯ ನಮ್ಮ ಹುಟ್ಟೂರೇ ಎನ್ನುವ ಮಟ್ಟಿಗೆ ಅಭಿಮಾನ ಮೂಡಿಸಿ ಸಾಕಿ ಸಲಹಿದ ಆದರಿಸಿದ ಕ್ಷೇತ್ರ. ಇಂದು ಇವರು ಕಟ್ಟಿದ ಸಂಘಗಳಿಂದ ಹತ್ತಾರು ಮಂದಿ ತರುಣರು ತರಬೇತಿ ಹೊಂದಿ ಇಂದು ತಾವೇ ಯಶಸ್ವೀ ಕಾರ್ಯಕ್ರಮಗಳನ್ನು ನಡೆಸಿಕೊಡುವಲ್ಲಿ ಸಮರ್ಥರಾಗಿದ್ದಾರೆ.

ಇಲ್ಲಿಂದ ಸರ್ಕಾರೀ ಕಿರಿಯಕಾಲೇಜಿನ ಉಪನ್ಯಾಸಕರಾಗಿ ಕೊಡಗುಜಿಲ್ಲೆಯ ಪೊನ್ನಂಪೇಟೆಯಲ್ಲಿ ಕಳೆದ ನಾಲ್ಕೂಮುಕ್ಕಾಲು ವರುಷಗಳು ಅವರ ಚಟುವಟಿಕೆ

ಯನ್ನು ಮತ್ತೊಂದು ದಿಕ್ಕಿಗೆ ತಿರುಗಿಸಿತು. ಇತಿಹಾಸ ಅರಿಯುವ, ಕೆದಕುವ ಗೀಳು ಬಹುಶಃ ಕೊಡಗಿನ ಬಗೆಗೆ ಅಲ್ಲಿನ ಸ್ಥಳೀಯರೇ ಅರಿಯದಷ್ಟು ವಿಷಯಗಳನ್ನು ಸಂಗ್ರಹಿಸಿ, ಕೊಡಗಿನ ಇತಿಹಾಸ, ಜನಪದ, ಶಾಸನ, ವೀರಗಲ್ಲುಗಳ ಬಗ್ಗೆ ಸಂಶೋಧನೆ ನಡೆಸಿದ್ದಾರೆ. ವಿಶೇಷವಾಗಿ ಕೊಡಗಿನ ಗ್ರಾಮದೇವತೆಗಳು ಮತ್ತು ಜನಪದ ಕಲೆಗಳ ಬಗ್ಗೆ ಸಂಶೋಧನೆ ನಡೆಸಿದ್ದಾರೆ.

ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ತೊಂದರೆಯಾಗದಿರಲೆಂದು ತಾವೊಬ್ಬರೇ ಪರಸ್ಥಳದಲ್ಲಿದ್ದುಕೊಂಡು ಸ್ವಯಂಪಾಕಮಾಡಿಕೊಂಡು ಸರ್ಕಾರೀ ಕಾರ್ಯಕ ಮುಗಿಯಿತೆಂದರೆ ಮಿಕ್ಕ ವೇಳೆಯಲ್ಲಿ ಕಾಡು ಮೇಡು ಸುತ್ತಿ, ಗುಡ್ಡ ಬೆಟ್ಟ ಹತ್ತಿ ಕೆದಕಿ ನಾನಾ ಶಾಸನಗಳನ್ನು ಅಧ್ಯಯನ ಮಾಡಿ ಬರೆವಣಿಗೆ ಮಾಡಿದ್ದು ಒಂದು ಹೆಮ್ಮೆ ಎನಿಸಿದರೆ ಮತ್ತೊಂದು ಬಗೆಯಲ್ಲಿ ಜಗಳವಾಡಿದ್ದು ಅದೆಷ್ಟುಬಾರಿಯೋ. ತಿಂಗಳಿಗೊಮ್ಮೆ ಎರಡು ದಿನಗಳ ಬಿಡುವು ಮಾಡಿಕೊಂಡು ನಮ್ಮೊಡನೆ ಇರಲು ರಾಮನಗರಕ್ಕೆ ಬರುತ್ತಿದ್ದುದು, ಕೆಲವೊಮ್ಮೆ ಅದೂ ಖೋತಾಆಗಿ ಕೇವಲ ಕೆಲವು ಗಂಟೆಗಳ ಭೇಟಿ ಕೊಟ್ಟದ್ದೂ ಇದೆ. ತಿಂಗಳಿಗೊಮ್ಮೆ ಬಂದು ಸಂಬಳ ತಂದು ಕೊಟ್ಟುಬಿಟ್ಟರೆ ಆಯಿತೇ, ಮಕ್ಕಳನ್ನು ಕಟ್ಟಿಕೊಂಡು ನಾನೊಬ್ಬಳೇ ಹೇಗೆ ಇರುವುದು ? ನಿಮಗೆ ಮನೆಬೇಡ, ಮಠ ಬೇಡ, ಹೀಗೆ ಅಲ್ಲಿ ಇಲ್ಲಿ ಸುತ್ತುವ ಬದಲು ನಾಲ್ಕು ಮಂದಿಗೆ ಪಾಠ ಹೇಳಿದ್ದರೆ ಇಂದು ನಾವು ತಲೆಯ ಮೇಲೊಂದು ಸೂರಾದರೂ ಮಾಡಿಕೊಳ್ಳಬಹುದಿತ್ತು ಎಂದು ಸ್ತ್ರೀ ಸಹಜ ಬಯಕೆಯಿಂದ ನಾನೊದರಿದ್ದೇ ಬಂತು. ಅದಕ್ಕೆ ನಾನಾ ಸಬೂಬು ಸಿದ್ಧ. ಆ ಶಾಸನ ನೋಡಬೇಕಿತ್ತು. ಈ ಸಂಘದ ಮೀಟಿಂಗಿತ್ತು. ಅದಾವುದೋ ಲೇಖನ ಬರೆದು ಮುಗಿಸಬೇಕಾಗಿತ್ತು. ನೀನು ತುಂಬಾ ಜಾಣೆ, ಮಕ್ಕಳನ್ನು ನೋಡಿಕೊಂಡು ಸಂಸಾರ ತೂಗಿಸಿಕೊಂಡು ಹೋಗಲು ಸಮರ್ಥಳಿದ್ದಿ ಎಂದು ತಲೆ ಸವರಿದರೆ ಯಾವ ಹೆಂಡತಿಗೆ ತಿಂಗಳಿಗೋ ತಿಂಗಳೆರಡಕ್ಕೊ ಬಂದು ಹೋಗುವ ಗಂಡನಿಗೆ ಬೇಸರ ಮಾಡಲು ಮನಸ್ಸಾದೀತು ? ಅಲ್ಲಿಗೆ ಮುಗಿಯಿತು ಆ ತಿಂಗಳ ಯುದ್ಧ ಯಥಾ ಪ್ರಕಾರ ಮರುತಿಂಗಳ ಶೀತಲ ಯುದ್ಧದ ಪುನರಾವರ್ತನೆ, ಇಂದಿಗೂ ಸರ್ಕಾರೀ ಕಾರ್ಯಕದಿಂದ ನಿವೃತ್ತರಾದಾಗ್ಯೂ ನಡದೇ ಇದೆ. ಹೊಟ್ಟೆ, ಮುಖ ಒಣಗಿಸಿ ಕೊಂಡು ಅಲೆದದ್ದು ಸಾಕು. ಇನ್ನಾದರೂ ನೆಮ್ಮದಿಯಾಗಿ ದೇವರು ಕೊಟ್ಟದ್ದನ್ನು ತಿಂದುಂಡು ಮಕ್ಕಳನ್ನು ನೋಡಿಕೊಂಡು ಹಾಯಾಗಿರಿ ಎಂದರೆ ಅದಕ್ಕೆ ವಿರುದ್ಧ ಉತ್ತರವೇ ಸೈ ನನಗೆ ಸಿಗುವುದು. "ಅದು ಯಾರೂ ಮಾಡುವ ಕೆಲಸ, ಸರ್ಕಾರಿ ಕಾರ್ಯಕದಿಂದ ನಿವೃತ್ತನಾದೆನೆಂದು ಮನೆಯಲ್ಲಿ ಸೋಮಾರಿಯಾಗಿ ಕುಳಿತು ಕೊಳ್ಳುವುದು ನನ್ನಿಂದಾಗದ ಕೆಲಸ, ನನ್ನ ತಿರುಗಾಟ ಚಟುವಟಿಕೆಗಳಿಂದ ನನ್ನ ಆರೋಗ್ಯ ಚೆನ್ನಾಗಿದೆ, ಸಂಶೋಧನಾ ಕೆಲಸದಿಂದ ನನಗೆ ಆನಂದಸಿಗುತ್ತದೆ,

ನೆಮ್ಮದಿ ಸಿಗುತ್ತದೆ, ಬರೀ ವಯಸ್ಸಿನಿಂದ ಯಾರೂ ಮುದುಕರಲ್ಲ, ನಮ್ಮ ಚಟುವಟಿಕೆ ನಮ್ಮ ಮಾನಸಿಕ ನೆಮ್ಮದಿಗಳಿಗನುಗುಣವಾಗಿ ನಮ್ಮ ವಯೋಮಾನ ಸ್ಪಂದಿಸುತ್ತದೆ ಮನೆಯನ್ನು ಮನೆಯ ಯಾಜಮಾನನನ್ನು ಮಕ್ಕಳನ್ನು ಸಮರ್ಪಕ ವಾಗಿ ನೋಡಿಕೊಳ್ಳಲು ನೀನಿದ್ದಿ, ಮಗ ಕೈಗೆ ಬಂದಿದ್ದಾನೆ. ಮನೆಯ ಜವಾಬ್ದಾರಿ ನೋಡಿಕೊಳ್ಳಬಲ್ಲ. ಮಗಳು ನೆಮ್ಮದಿಯಾಗಿ ಗಂಡನ ಮನೆಯಲ್ಲಿದ್ದಾಳೆ. ಮತ್ತಿನ್ನೇನು ಬೇಕು ? ನಿನ್ನ ಗಂಡ ಆರೋಗ್ಯವಂತನಾಗಿ, ಲವಲವಿಕೆಯಿಂದಿದ್ದಾನೆಂದು ನೀನೂ ಸಂತೋಷವಾಗಿರು. ನಿನ್ನ ಕೈ ಬರೆಹ ತುಂಬಾ ಚೆನ್ನಾಗಿದೆ. ಸಂಜೆ ನಾನು ಬರುವ ವೇಳೆಗೆ ಈ ಲೇಖನವನಷ್ಟು ಬರೆದಿಟ್ಟಿರು" ಎಂದು ಹೇಳುವ ಯಜಮಾನನೊಂದಿಗೆ ೩೦-೩೧ ವರ್ಷಗಳ ದಾಂಪತ್ಯ ನಡೆಸಿರುವ ನಡೆಸುತ್ತಿರುವ ನಾನು ದಿಟ್ಟೆ, ಛಲಗಾತಿಯಾಗಿರದಿದ್ದರೆ ನಮ್ಮ ಸಂಸಾರ ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು ಎಂಬಂತಾಗುತಿತ್ತು. ಹೀಗಾಗಿ ಗಂಡ ಹೆಂಡತಿ ಇಬ್ಬರೂ ಹೊರಗಿನ ಚಟುವಟಿಕೆಗಳಿಗೆ ಅಂಟಿಕೊಂಡರೆ ಮನೆ, ಮಕ್ಕಳಿಗೆ ಅರ್ಥವಿಲ್ಲವಾದೀತೆನಿಸಿ ನಾನು ನನ್ನೆಲ್ಲಾ ಚಟುವಟಿಕೆಗಳಿಗೆ ತಿಲಾಂಜಲಿ ಕೊಟ್ಟೆ.

ಕಿರಿಯ ಕಾಲೇಜಿನ ಪ್ರಾಂಶುಪಾಲರಾಗಿ ನೆಲಮಂಗಲ ತಾಲ್ಲೂಕು ತ್ಯಾಮ ಗೊಂಡ್ಲುವಿನಲ್ಲಿ ಅಧಿಕಾರ ವಹಿಸಿಕೊಂಡು ಒಳಗೆ ಅಡುಗೆ ಕೆಲಸ, ಹೊರಗೆ ನಿಯತ ಕಾಯಕಗಳ ನಡುವೆಯೂ ತಮ್ಮ ನಿರಂತರ ಚಟುವಟಿಕೆಗಳಿಗೆ ಬಿಡುವುಕೊಡಲಿಲ್ಲ. ರಾಜ್ಯ ನಾಟಕ ಅಕಾಡೆಮಿ ಏರ್ಪಡಿಸಿದ್ದ ನಾಟಕೋತ್ಸವಗಳ ತೀರ್ಪುಗಾರರಾಗಿದ್ದು ವಿಮರ್ಶೆಗಳನ್ನು ಪ್ರಕಟಿಸಿದ್ದಾರೆ ಹಾಗೂ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಕತೆ, ಕವನ, ನಾಟಕ, ಲೇಖನಗಳಲ್ಲಿ ಪ್ರಶಸ್ತಿ ಬಹುಮಾನಗಳನ್ನು ಪಡೆದು ಕಥಾಸಂಕಲನ 'ಪರಾಗ,' ಕವನ ಸಂಕಲನ 'ದನಿಗಳು' ಇವರ ಕತೆ ಕವನಗಳನ್ನೊಳಗೊಂಡಿವೆ. ರಾಮನಗರದಲ್ಲಿ ಏಳನೇ ಶತಮಾನದಿಂದ ಹಿಡಿದು ಹದಿನೆಂಟನೇ ಶತಮಾನದವರೆಗಿನ ಹೊಸ ಶಾಸನಗಳನ್ನು ಕಂಡು ಹಿಡಿದು ಶಾಸನತಜ್ಞರ ಸಮ್ಮೇಳನದಲ್ಲಿ ಮಂಡಿಸಿ ಪ್ರಕಟಿಸಿದ್ದನ್ನು ಕಂಡಿದ್ದೇನೆ. ಹೀಗೆಯೇ ಕೊಡಗು ಜಿಲ್ಲೆಯಲ್ಲಿ ಅನೇಕ ಶಾಸನ ಗಳು ಕಂಡು ಹಿಡಿದಿದ್ದಾರೆ. ಹೀಗೆಯೇ ಅವರ ಚಟುವಟಿಕೆ ವಿಸ್ತಾರ ಒಂದು ರೀತಿಯಲ್ಲಿ ನನಗೆ ಅಭಿಮಾನವೇ. ಹೀಗಾಗಿ ಸಂಸಾರದತ್ತ ನನ್ನ ಗಮನ ಕೇಂದ್ರೀಕೃತ ವಾಯಿತು. ಮನೆಗೆ ಬಂದ ಅತಿಥಿ ಅಭ್ಯಾಗತರನ್ನು ಮಿತ್ರರನ್ನು ಸತ್ಕರಿಸಿ ಆದರಿಸಿ ಬೀಳ್ಕೊಡುವ ಬಗೆಯೂ ಉನ್ನತಮಟ್ಟದ್ದೇ. ಇಂದು ಮದುವೆಯಾಗಿ ಗಂಡನ ಮನೆಯಲ್ಲಿರುವ ಮಗಳಿಗೂ ಅಪ್ಪನ ಚಾಳಿಯೇ ಬಂದಿದೆ. ತನ್ನ ಕವಿತಾ ರಚನೆ ಯಿಂದ ರಾಜ್ಯಮಟ್ಟದ ಕವನ ಸ್ಪರ್ಧೆಯಲ್ಲಿ ಬಹುಮಾನ ಪಡೆದು ಅನೇಕ ಕವನ ಸಂಕಲನಗಳಲ್ಲಿ ತನ್ನ ಕವನ ಪ್ರಕಟನೆ ಕಂಡ ಮಗಳ ಕವನ ಸಂಕಲನವೊಂದನ್ನು ಅವಳ ವಿವಾಹದ ಶುಭ ಸಂದರ್ಭದಲ್ಲಿ ಹೊರತಂದಿದ್ದಾರೆ. ಮಕ್ಕಳನ್ನು ಅಪಾರವಾಗಿ

ಪ್ರೀತಿಸುವ ಯಜಮಾನನಿಗೆ ಮಗಳ ಈ ಯಶಸ್ಸು ಕೋಡುತಂದಿದೆ. ಮಗಳ ಮದುವೆಯ ಸಂದರ್ಭದಲ್ಲಿ ಆಗಮಿಸಿದ್ದ ಅವರ ಬಾಲ್ಯಸ್ನೇಹಿತರೊಬ್ಬರ ಅಂಬೋಣ. 'ಇನ್ನವನನ್ನು ತಿದ್ದಲು ಹೋಗಬೇಡಿ. ಅವನ ಹವ್ಯಾಸಗಳಿಗೆ ಅವನನ್ನು ಬಿಟ್ಟುಬಿಡಿ. ಅವನೆಂದೂ ಇನ್ನು ತನ್ನ ಹವ್ಯಾಸದಿಂದ ಹಿಂದಿರುಗಿ ನೋಡಲಾರ' ಎಂದು. ಒಂದು ಭಾಗಕ್ಕೆ ಅವರಮಾತು ನಿಜವೇ. ಕೇವಲ ನನ್ನ ಮಾತಿಗೇ ಕಟ್ಟುಬಿದ್ದು ಮನೆ, ಮಠ ಹೆಂಡತಿ ಮಕ್ಕಳಿಂದು ಅಷ್ಟಕ್ಕೇ ಸೀಮಿತವಾಗಿ ತಮ್ಮ ಚಟುವಟಿಕೆಗಳನ್ನೆಲ್ಲಾ ಹಿಂದೊತ್ತಿದ್ದರೆ ಇಂದು ನಾನೀ ಲೇಖನ ಬರೆಯುವ ಆಗತ್ಯವಿರುತ್ತಿರಲಿಲ್ಲ. ಅವಕಾಶವೂ ಸಿಗುತ್ತಿರಲಿಲ್ಲ. ತಮ್ಮ ಸಾಮಾಜಿಕ ಸಾಹಿತ್ಯಕ ಚಟುವಟಿಕೆಗಳಿಂದ ಸಮಾಜದಲ್ಲಿಂದು ಎದ್ದು ಕಣ್ಣಿಗೆ ಕಾಣುವ ವ್ಯಕ್ತಿಯೊಬ್ಬರು ಮರೆಯಲ್ಲಿರುತ್ತಿದ್ದರು. ಕೇವಲ ಸಾಮಾನ್ಯ ವ್ಯಕ್ತಿ ನನ್ನ ಯಜಮಾನನಾಗಿರುತ್ತಿದ್ದರು, ಎನಿಸಿ ನಾನೂ ಈಗ ದೃಢ ಚಿತ್ತಳಾಗಿದ್ದೇನೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸಾಹಿತ್ಯ ಪರಿಷತ್ತಿನ ಅಂದಿನ ಅಧ್ಯಕ್ಷರಾಗಿದ್ದ ಶ್ರೀ ಟಿ. ಎಸ್. ಕುಮಾರಸ್ವಾಮಿಯವರೊಮ್ಮೆ ಹೇಳಿದ್ದರು. 'ನಿಮ್ಮದು ನಿಜಕ್ಕೂ ತ್ಯಾಗ' ಎಂದು. ಅಂಥಾ ದೊಡ್ಡ ಮಾತಿಗೆ ನಾನು ಅರ್ಹಳಲ್ಲ. ಸಮಾಜದಲ್ಲಿಂದು ನನ್ನ ಯಜಮಾನರು ನಾಲ್ಕು ಮಂದಿ ಗುರುತಿಸುವ ವ್ಯಕ್ತಿ ಯಾಗಿದ್ದಾರೆಂದರೆ ನನ್ನದೂ ಸ್ವಲ್ಪ ಸ್ವಾರ್ಥ ಅದರಲ್ಲಡಗಿದೆಯಲ್ಲ ? ಸಾಮಾನ್ಯಳೂ, ಅಲ್ಪತೃಪ್ತಳೂ ಆದ ನನಗೆ ಯಜಮಾನರ ಶ್ರೇಯಸ್ಸಿಗಿಂತ ಆರೋಗ್ಯಕ್ಕಿಂತ ಬೇರೇನು ಬೇಕು ? ಯಜಮಾನ ಈಗ ಹಿಡಿದಿರುವ ಅಧ್ಯಯನ ಮಾಡುತ್ತಿರುವ ಕಾರ್ಯದಲ್ಲಿ ಯಜಮಾನರಂತೆಯೇ ಮುಂದುವರೆಯಲಿ, ನಾನವರ ಹಿಂದಿನ ಯಜಮಾನಿಯಾಗಿ ಅವರ ನೆರಳಾಗಿಯೇ ಇರಲು ಆಶಿಸುತ್ತೇನೆ. ○

ಜಿ. ಯದುಮಣಿ

# ನಾ ಕಂಡ ನಾಗರಾಜ್

ಶ್ರೀ ಎಂ. ಜಿ. ನಾಗರಾಜ್....ಎಂ. ಜಿ. ನಾ....ಮೈ, ಗಂ. ನಾ.......ಅಥವಾ ಮೈ—ಗಮ–ನಾ ? ಅಲ್ಲ ಅಲ್ಲ.... ಮೈಯೆಲ್ಲಾ ಶಿಲೆಯದ್ದೇ ಗಮನಾ ?....ಹೀಗೂ ಅಲ್ಲ....ಶಿಲೆ ಯಂತಿಲ್ಲದೆ ಆತ್ಮೀಯತೆಯ ಸೆಲೆಯೇ ಆಗಿರುವ ಆ ಮನಸ್ಸು ಕೂಡ ಶಿಲಾ ಸೌಂದರ್ಯದ್ದೇ ನೆಲೆ ಎನಿಸಬಲ್ಲದಾದ್ದರಿಂದ ಆ ಕಡೆಗೇ ಮಿತ್ರರೆಲ್ಲರ ಗಮನ....

ಮಿತ್ರ ನಾಗರಾಜರಲ್ಲಿನ ಸಂಶೋಧನಾ ಪ್ರವೃತ್ತಿಯಲ್ಲಿ ನೂರಾರು ಸಾಹಸಮಯ ಪ್ರಸಂಗಗಳು ಶಿಲೆಯೋಪಾದಿಯಲ್ಲೇ ಉದ್ಭವಿಸಿಕೊಂಡಿದೆ. ಕೆತ್ತನೆಯ ಶಿಲ್ಪಿಯ ಶಿಲ್ಪದ ಸುತ್ತ ಲೆಲ್ಲ ಕಣ್ಣಾಡಿಸಿದ ಈ "ಮೂರ್ತಿ" ಶಿಲೆಗಳೊಂದಿಗೆ ಹೂವು ಹೃದಯದ ಗೆಳೆಕಾರನಾಗಿ ವರ್ತಿಸಲಿಲ್ಲ ಎಂದು ಕಲ್ಲು ಎಲ್ಲೂ ವಿರೋಧದ ಸೊಲ್ಲು ಎತ್ತಬಾರದು–ಹಾಗೆ ನಾಗರಾಜ್ ಅವರು ತಮ್ಮನ್ನು ಎತ್ತರದಲ್ಲಿ ಪರಿಸರಕ್ಕೆ ಪರಿಚಯಿಸಿಕೊಂಡಿದ್ದಾರೆ. ಎತ್ತರ ಎಂದರೆ ಶಿಲಾವಲೋಕನದ ಲೋಕದಲ್ಲಿ ತನ್ನ ಸುತ್ತ –ಮುತ್ತ, ಆಚೀಚೆಗೆ, ನಟ್ಟ ನಡುವೆಗೆ, ಮೊದಲು ಕೊನೆಗೆ, ಅಕ್ಕ ಪಕ್ಕಕ್ಕೆ ಬುಡ–ಶಿಖರಕ್ಕೆ, ಅತ್ತಿತ್ತಕ್ಕೆಲ್ಲ ಶಿಲೆಗಳನ್ನು ಕಟ್ಟಿಕೊಂಡು, ಗಟ್ಟಿಯಾಗಿ ಕುಳಿತ ಎತ್ತರ.ವಿಸ್ತಾರಗಳ ಪರ್ವತ ದಂತೆ ಒಲವು–ನಿಲವು ಬಿತ್ತರಿಸಿಕೊಂಡವರಿವರು.

ನಾಗರಾಜ ಅಂದರೆ ಸರ್ಪರಾಜ ! ಪೂಜಾರ್ಹನಾದ ಈ ರಾಜ ಅಡವಿಗಳಲ್ಲಿ ಗವಿಗಳಲ್ಲಿ, ಪೊದೆಗಳಲ್ಲಿ ಬೆಳೆಸಿಕೊಂಡ ಹುತ್ತ ದೊಳಗೆ ಅಡಗಿರುತ್ತಾನೆ ಹೇಗೋ ಹಾಗೆಯೇ, ಈ ನಾಗ ರಾಜರು ಕೂಡ ಎಲ್ಲೇ ಕಾಣುವ ಶಿಲೆ ಇರಲಿ, ಅಲ್ಲೆಲ್ಲ

ಶಾಸನಗಳಲ್ಲಿನ ಸಂಶಯದ ಸುಳಿಗಳನ್ನು ಕೆದಕುವ ತಮ್ಮ ವಿಚಾರ ಧಾರೆಗಳ ಮೂಲಕ ನೆಲೆ ಸಾಧಿಸಿಕೊಂಡಂಥವರು. ಈ "ನಾಗ"ನಿಗೆ ಇದಿರಾಗಿ ತಮ್ಮನ್ನು ಪರಿಚಯಿಸಿಕೊಳ್ಳಲು ಕಾತುರವಾಗಿ ನಿಂತಿರುವ, ಆ ಮೂಲಕ ಶಾಪವೆಂಬಂತೆ ತಮ್ಮ ಮೈಗಂಟಿದ ಮಣ್ಣಿನ ಕೊಳೆ ಕಳೆದು ಬೆಳಕಿಗೆ ತಂದು ನಿಲ್ಲಿಸಲ್ಪಡುವಂತಾಗಲಿ ಎಂದು ವರ ಬೇಡುವ ಶಿಲೆಗಳ ಸಂಖ್ಯೆ ಅನೆಷ್ಟೋ. ಈ "ರಾಜ"ನ ಸಾಮ್ರಾಜ್ಯದಲ್ಲಿ ವಿವಿಧ ಶಾಸನಗಳು, ಗುಡಿ ಗೋಪುರಗಳು, ಜನಪದ ವೈಭವದ ಪದ ಸಮುಚ್ಚಯಗಳು, ರಥ ಪಥದ ವೀಥಿಗಳು, ರಂಗೇರಿದ ರಂಗಭೂಮಿ ನೋಟಗಳು, ಇತಿಹಾಸದ ಮೆಲುಕು -ಇಣುಕುಗಳು, ಕ್ಷೇತ್ರ ದರ್ಶನದ ಸುವರ್ಣ ಕ್ಷಣಗಳು, ಶೈಕ್ಷಣಿಕ ರೀತಿ ರಿವಾಜು ಗಳು, ಸಂಸ್ಕೃತಿ-ಸಂಸ್ಕಾರಗಳ ಸಂಭ್ರಮೋಲ್ಲಾಸಭರಿತ ಕಥನಗಳು ಇವೆಲ್ಲ ಉತ್ತುಂಗ ಸ್ಥಾನಗಳಲ್ಲಿ ಮೇಳೈಸಿಕೊಂಡು ಜೀವ ತಳೆಯಬಲ್ಲದು.

**ಕೊಡಗು—ನಾಗರಾಜ್ ಹಾಗೂ ನಾನು**

ರಾಮನಗರದ ನಿವಾಸಿಯಾದ ನಾಗರಾಜ್ ಅವರು ಕೊಡಗಿನ ಪೊನ್ನಂ ಪೇಟೆಗೆ ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸುವ ಸಲುವಾಗಿ ೧೯೮೦ರ ದಶಕದ ಆರಂಭದಲ್ಲಿ ಬಂದು ನೆಲೆ ನಿಲ್ಲುವಂತಾದುದು ನನ್ನ ಮಟ್ಟಿಗಂತೂ ಒಂದು ಅಪೂರ್ವ ಲಾಭ ದಾಯಕ ಘಟನೆಯಾಗಿ ಪರಿಣಮಿಸಿತು ಎನ್ನಬಹುದು.

ಪೊನ್ನಂಪೇಟೆಯ ಸರಕಾರಿ ಕಿರಿಯ ಕಾಲೇಜಿನಲ್ಲಿ ಗಣಿತ ಉಪನ್ಯಾಸಕರಾಗಿ ಸೇವೆಗೆ ಬಂದಲ್ಲಿಂದ ಇವರು ಕೊಡಗು ಪತ್ರಿಕೆ "ಶಕ್ತಿ"ಯ ನಂಟು ಬಿಡದವರಾಗಿಯೇ ಉಳಿದಿದ್ದಾರೆ. ಪತ್ರಿಕೆಯಲ್ಲಿ ಇವರು ಪ್ರಕಟಿಸಿದ ಲೇಖನಗಳು ಲೆಕ್ಕಕ್ಕೆ ಸಿಕ್ಕದಾ ದವು. "ಶಕ್ತಿ" ಬಗ್ಗೆ ಇವರು ತಳೆದ ಆತ್ಮೀಯ ಅಭಿಪ್ರಾಯ, ಪ್ರತಿಷ್ಠಾಪಿತ ಶಿಲಾ ನ್ಯಾಸದಂತೆಯೇ, ಅಂದಿನಿಂದ ಈ ವರೆಗೂ ಅಚ್ಚೊತ್ತಿಕೊಂಡಿದೆ ಎನ್ನಬೇಕು. ಇತರ ಪತ್ರಿಕೆ, ನಿಯತ ಕಾಲಿಕಗಳಲ್ಲಾದರೂ ನಾಗರಾಜ್ ಅವರ ಸಂತ ಭಾಗಿತ್ವ ಗಣನೀಯವಾದುದು. ವೈಚಾರಿಕ ಬರಹಗಳು, ಕಥೆಗಳು, ಪ್ರಬಂಧಗಳು, ಕಲಾ ವಿಮರ್ಶೆಗಳು, ಸಮಾಜ ವ್ಯವಸ್ಥೆ ಕುರಿತಾದ ಚರ್ಚಾ ಲೇಖನಗಳು, ವರದಿ, ವಿಶೇಷ ಗಳು, ಕ್ಷೇತ್ರ ಮಹತ್ವದ ವಿಚಾರ ಸರಣಿಗಳು, ವ್ಯಕ್ತಿ ಪರಿಚಯ—ಗ್ರಂಥಾವ ಲೋಕನಗಳು, ಸಾಹಿತ್ಯಕ—ಸಂಶೋಧನಾತ್ಮಕ ಬರಹಗಳು ಮುಂತಾಗಿ ಸಾರಸ್ವತ ಲೋಕದಲ್ಲಿ ಇವರು ಸರಿ ಗುರಿದಾರಿಯತ್ತ ಹರಿಸಿದ ಹೆಜ್ಜೆಗಳು, ಕೊಡಗಿನ ಮಟ್ಟಿಗೆ ಒಂದು ಬೃಹತ್ ಸದುಪಯೋಗೀ ಕಾರ್ಯಾಚರಣೆಯಂತೆ ಕ್ರಾಂತಿ ಮಾಡಿದವೆನ್ನ ಬಹುದು.

"ಶಕ್ತಿ"—ನಾಗರಾಜ್ ಅವರ ನಂಟಿನ ನಡುವೆ ಮತ್ತೊಂದು ಅಷ್ಟೇ ದೊಡ್ಡ ದೊಂದು ಹೆಮ್ಮರವಾಗಿ ಬೆಳೆದು ನಿಂತುದು, ಯದುಮಣಿ—ನಾಗರಾಜ್ ಸಂಪರ್ಕ

ಸೇತುವೆ. ಕಳೆದ ಅನೇಕ ವರ್ಷಗಳಿಂದ, ಅಂದರೆ ಆಗ ನಾನು ಕೊಡಗಿನಲ್ಲಿದ್ದಾಗ-ಲಾಗಲಿ, ಈಗ ನಾನು ಬೆಂಗಳೂರಿನಲ್ಲಿ ವಾಸಿಸುತ್ತಿರುವ ಸಂದರ್ಭದಲ್ಲಾಗಲಿ ಮಿತ್ರ ನಾಗರಾಜ್ ಹಾಗೂ ನನ್ನ ನಡುವೆ ಅನೇಕಾನೇಕ ಆತ್ಮೀಯ ಪತ್ರಗಳು ಬೆಸೆದುಕೊಂಡವು. ಈ ಪರಸ್ಪರ ಪತ್ರವ್ಯವಹಾರ ನಮ್ಮಿಬ್ಬರಲ್ಲಿ ಆಯಾಯ ಸಮಯಗಳಲ್ಲಿನ ಎಲ್ಲ ಕಷ್ಟ-ನಷ್ಟಗಳನ್ನೂ ಹಂಚಿಕೊಳ್ಳುವ ಒಂದು ಸಮರ್ಥ ವೇದಿಕೆಯಂತಿತ್ತು.

ದಕ್ಷಿಣ ಕೊಡಗಿನ ಪೊನ್ನಂಪೇಟೆಯಲ್ಲಿ ಕನ್ನಡ ಸಾಹಿತ್ಯ-ಸಂಸ್ಕೃತಿ ಸಂಘದ ಮೂಲಕ ೧೯೮೬ನೇ ಏಪ್ರಿಲ್ ಆರಂದು ಸಂಘದ ಪ್ರಥಮ ಕಾಣಿಕೆಯಾಗಿ 'ಸಂಗೀತ ಸಂಧ್ಯಾ' ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸುವಂತಾದುದರ ಕೀರ್ತಿ ಶ್ರೀಯುತ ನಾಗರಾಜ್ ಅವರಿಗೆ ಸೇರಬೇಕು.

"ದುಡಿ ದುಡಿದು ಸತ್ತಾಗ, ನುಡಿದು ಬೇಸತ್ತಾಗ ಜನಕೆ ಹಿಗ್ಗಿನ ಹಾಡ ಹಾಡವಾ ss........"

ದ.ರಾ. ಬೇಂದ್ರೆ ಅವರ ಈ ನುಡಿಮುತ್ತು ಪೊನ್ನಂಪೇಟೆಯ ಕನ್ನಡ ಸಾಹಿತ್ಯ ಸಂಸ್ಕೃತಿ ಸಂಘದ ಸಂಸ್ಥಾಪಕರ ಸ್ಫೂರ್ತಿಯ ಕೂಗಾಗಿ, ಕೋಗಿಲೆಯ ಹಾಡಾಗಿ, ಶ್ರಾವ್ಯ ಧ್ವನಿಗಳಾಗಿ ಮೊಳಗಿ ಅನೇಕ ಮನೋಲ್ಲಾಸದಾಯಕ ಕಾರ್ಯಕ್ರಮಗಳಿಗೆ ನಾಂದಿ ಹಾಡಿದವು. ಅಡ್ಡಂಡ ಸಿ. ಕಾಶಿ ಅವರ ಅಧ್ಯಕ್ಷತೆಯಲ್ಲಿ ಎಂ.ಎಸ್.ನೊಣಪ್ಪ ಅವರು ಕೋಶಾಧಿಕಾರಿಯಾಗಿದ್ದ ಸಂಘದ ಕಾರ್ಯಕಾರಿ ಸಮಿತಿಯಲ್ಲಿ ಶ್ರೀ ನಾಗರಾಜ್‌ರವರು ಗೌ|| ಪ್ರಧಾನ ಕಾರ್ಯದರ್ಶಿಯಾಗಿ ಕಾರ್ಯಕ್ರಮಗಳ ಮುಂಚೂಣಿ ಸ್ಥಾನದಲ್ಲಿದ್ದುದರ ಹಿನ್ನೆಲೆಯಲ್ಲಿ ಕೊಡಗಿನಲ್ಲಿ ದಿನದಿನಕ್ಕೂ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಬೌದ್ಧಿಕ-ವಿಚಾರಗಳ ಪ್ರಚೋದಕ ಚಟುವಟಿಕೆಗಳು ನಡೆಯುವಂತಾಗಲು ಸಹಕಾರಿಯಾದವೆನ್ನಬಹುದು.

ಕನ್ನಡ ರಾಜ್ಯೋತ್ಸವ ಸಮಾರಂಭ ಸಂದರ್ಭಗಳಲ್ಲಿ ಕನ್ನಡ ಪ್ರಾಧ್ಯಾಪಕರು ಹಾಗೂ ಸಾರಸ್ವತ ಲೋಕದ ದಿಗ್ಗಜರನೇಕರನ್ನು ಉಪನ್ಯಾಸಕ್ಕಾಗಿ ಕರೆಸುವ ಮೂಲಕ, ಕವಿಗೋಷ್ಠಿ ಏರ್ಪಡಿಸುವ ಮೂಲಕ, ಕರ್ನಾಟಕ ಜನಪದ ಸಂಗೀತಕಲೆ ಬಿಂಬಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಅವಕಾಶ ನೀಡುವ ಮೂಲಕ ಕನ್ನಡದೊಂದಿಗೆ ಕೊಡವ ಭಾಷೆಯಲ್ಲೂ ಚರ್ಚಾಗೋಷ್ಠಿ ಏರ್ಪಡಿಸುವ ಮೂಲಕ ಪೊನ್ನಂಪೇಟೆಯ ಈ ಸಂಘ ಸಾಧನೆಯ ದೀವಿಗೆಗಳತ್ತ ಕೈಚಾಚಿಕೊಳ್ಳಲು ಅವಕಾಶವಾಯಿತೆನ್ನಬಹುದು.

೧೯೮೬ನೇ ಮಾರ್ಚ್ ೧೫ರಂದು ಸ್ಥಾಪನೆಗೊಂಡ ಪೊನ್ನಂಪೇಟೆಯ ಕನ್ನಡ ಸಾಹಿತ್ಯ-ಸಂಸ್ಕೃತಿ ಸಂಘದ ಪ್ರಥಮ ವಾರ್ಷಿಕೋತ್ಸವವು ೧೯೮೭ನೇ ಏಪ್ರಿಲ್

೧೦ರಂದು ಆಚರಿಸಲ್ಪಟ್ಟಿತು. ಆ ಸಂದರ್ಭದಲ್ಲಿ ಕವಿತ್ರಯ ಸ್ಮರಣೆ, ಪುರಂದರ ದಾಸರ ಜಯಂತಿ, ಹರಿಕಥೆ ಇತ್ಯಾದಿ ಅಂಗವಾಗಿ ನಡೆಸಲಾದ ಸಮಾರಂಭದಲ್ಲಿ ಮುಖ್ಯ ಅತಿಥಿಗಳಲ್ಲೊಬ್ಬನಾಗಿ ಭಾಗವಹಿಸುವ ಅವಕಾಶ ನನ್ನದಾಯಿತು. ಪುರಂದರ ದಾಸರ ಕುರಿತು ನಾನು ಮಾತನಾಡಿದರೆ, ಶ್ರೀ ನಾಗರಾಜ್ ಅವರು ಕವಿತ್ರಯ (ಮುದ್ದಣ, ಕಡೆಂಗೋಡ್ಲು, ಗೋವಿಂದ ಪೈ) ಸ್ಮರಣೆಯ ಭಾಷಣಕಾರಲ್ಲೊಬ್ಬರಾಗಿ ಅಂದು ಮಾತನಾಡಿದ್ದರು.

## ಹೊರಗೆ ಕೊಡಗಿನ ಪ್ರಚಾರ

ನಾಗರಾಜ್‌ರವರ ಕೊಡಗಿನ ಇತಿಹಾಸ ಸಂಬಂಧವಾದ ಚಟುವಟಿಕೆಗಳು ಕೊಡಗಿಗಷ್ಟೆ ಸೀಮಿತವಾಗಿರಲಿಲ್ಲ. ಬೆಂಗಳೂರಿನ ಬಸವ ಸಮಿತಿ ವತಿಯಿಂದ 'ಕೊಡಗಿನ ಇತಿಹಾಸ' ವಿಷಯ ಕುರಿತಂತೆ ಮಾತನಾಡಲು ಬೆಂಗಳೂರಿನ ಅನುಭವ ಮಂಟಪಕ್ಕೆ ತಾ. ೪-೭-೧೯೮೩ರಂದು ಶ್ರೀ ನಾಗರಾಜ್‌ರವರು ಆಹ್ವಾನಿಸಲ್ಪಟ್ಟ ವಿಚಾರದಿಂದ ಹಿಡಿದು ರಾಮನಗರದಲ್ಲಿ ಆಗಾಗ ಅನೇಕ ಕಾರ್ಯಕ್ರಮಗಳಲ್ಲಿ ಇವರು ಕೊಡಗಿನ ವಿಷಯದ ಭಾಷಣಕಾರರಾಗಿ ಭಾಗವಹಿಸುವುದರಲ್ಲಿನವರೆಗೆ ಇವರ ಈ ಕುರಿತಾದ ವ್ಯಾಪಕ ಚಟುವಟಿಕೆಗೆ ಅನೇಕ ನಿದರ್ಶನಗಳು ತೆರೆದುಕೊಳ್ಳುತ್ತಲೇ ಇವೆ. ಕನಕಪುರದಲ್ಲಿ ೧೯೮೩ನೇ ಮೇ ೧೮ರಂದು ನಡೆದ ಭಾಷಣ ಕಾರ್ಯಕ್ರಮದಲ್ಲಿ ತ್ಯಾಗರಾಜ್‌ರವರು 'ಕನ್ನಡನಾಡಿನ ಕೊಡವರ ಹಬ್ಬಗಳು' ಎಂಬ ವಿಷಯವಾಗಿ ಮಾತನಾಡಿದರೆಂದ ಮೇಲೆ ಕೊಡಗನ್ನು ಕುರಿತು ನಾಗರಾಜ್‌ರವರು ಅದೆಷ್ಟು ಆಳದ ಪರಿಚಯ ಪಡೆದಿದ್ದರು, ಇವರಿಂದ ಈ ಪುಟ್ಟ ನಾಡಿಗೆ ಎಲ್ಲೆಲ್ಲೂ ಅದೆಷ್ಟು ದೊಡ್ಡ ಪ್ರಚಾರ ದೊರಕುವಂತಾಯಿತು ಎಂದು ಯಾರೂ ಊಹಿಸಬಹುದು.

ಐತಿಹಾಸಿಕ ಮಹತ್ವಗಳನ್ನು ತಮ್ಮದೇ ಆದ ಶೈಲಿಯಲ್ಲಿ ಬಿಡಿಬಿಡಿಯಾಗಿ ವಿಷದೀಕರಿಸುವ ಇವರು ವಿಶೇಷವಾಗಿ ಕೊಡಗಿನ ಸಾಂಸ್ಕೃತಿಕ ಬದುಕನ್ನು ಬೆದಕು ಕಣ್ಣುಗಳಿಂದ ಕಂಡು ಅನೇಕ ವಿಸ್ಮಯಕಾರಿ ಅಂಶಗಳನ್ನು ಹೊರಗೆಡವಿರುವುದು ಕೊಡಗಿಗೆ ಇವರು ಕೊಟ್ಟ ಅತಿ ದೊಡ್ಡ ಕೊಡುಗೆ. ಈ ನಾಡಿನ ಇತಿಹಾಸವನ್ನು ಸೆರೆಹಿಡಿಯಬೇಕಾದರೆ ಇಲ್ಲಿನ ಎಲ್ಲ ಆಚ್ಛಾದಿತ, ನಿಗೂಢ ಐತಿಹಾಸಿಕ ಕಥಾನಕ ಗಳನ್ನೂ ನಾಗರಾಜ್‌ರವರು ತಮ್ಮ ತೀಕ್ಷ್ಣ ದೃಷ್ಟಿಕೋನದ ಬಲೆಗೆ ಬಿಳಿಸಿಕೊಂಡಿರ ಬೇಕು. ಹೀಗೆ ಬಲೆಗಳು ಬಲ ತುಂಬಿಸಿಕೊಂಡಾಗಲೆಲ್ಲ ಕೊಂಡಾಡಲು ಮುಂದಾದ ಕೊಡಗಿನ 'ಶಕ್ತಿ' ಪತ್ರಿಕೆ 'ಭಲೇ !' ಎಂದು ಇವರ ಶ್ರಮವನ್ನು ಗುರುತಿಸುವಲ್ಲಿ ಮುಂದಾಗಿದೆ ಎಂಬದೊಂದು ಸಮಾಧಾನದ ಅಂಶ. ಐತಿಹಾಸಿಕ ಸಂಶೋಧನೆ–ಅಧ್ಯಯನ ಇವುಗಳಲ್ಲೇ ತಮ್ಮ ಆಯುಷ್ಯದ ಬಹು ಭಾಗವನ್ನು ಕಳೆಯಲು ಹಿಂದೆ ಮುಂದೆ ನೋಡದವರಾದ ನಾಗರಾಜ್‌ರವರು ಸಂಶೋಧನೆ ಕಾಲದಲ್ಲಿ ಪ್ರತ್ಯಕ್ಷ

ವೀಕ್ಷಣೆಗಾಗಿ ಪಾದ ಬೆಳೆಸಲು ಮುಂದಾಗುವ ಊರುಗಳು, 'ನಡಿಗೆ'ಯನ್ನು ಉದ್ದ ವಾಗಿಸುವ ಆ 'ದೂರ'ಗಳು ಇವೆಲ್ಲ ಆಳೆಯಲು ಅಸದಳವೆನಿಸಿಕೊಂಡಿವೆ. ತಮ್ಮ ಸ್ವಂತ ಊರಾದ ರಾಮನಗರದ ಸಮಗ್ರ ಇತಿಹಾಸವನ್ನು ಪತ್ತೆ ಹಚ್ಚುವ ಕಾಯಕ ವನ್ನೂ ಕೈಗೊಂಡ ನಾಗರಾಜ್‌ರವರು ಇತ್ತೀಚಿಗಷ್ಟೆ ಬೆಂಗಳೂರಿನಲ್ಲಿ ಬಂದು ನೆಲೆಸಿ ದ್ದಾರೆ. ತ್ಯಾಮಗೊಂಡ್ಲುವಿನ ಜೂನಿಯರ್ ಕಾಲೇಜಿನ ಪ್ರಾಂಶುಪಾಲರಾಗಿ ನಿವೃತ್ತರಾದ ಇವರು ಈಗಲಂತೂ ಪೂರ್ತಿ ಅವಧಿಯ ಸಂಶೋಧಕರಾಗಿ ಮಾರ್ಪಟ್ಟಿ ದ್ದಾರೆ.

ಕೊಡಗು ಹಾಗೂ ಎಂ. ಜಿ. ನಾಗರಾಜ್ ಅವರಿಗೆ, 'ಶಕ್ತಿ' ಹಾಗೂ ಲೇಖಕ ನಾಗರಾಜ್ ಅವರಿಗೆ, 'ಶಕ್ತಿ ಬಳಗ' ಹಾಗೂ ಮಿತ್ರ ನಾಗರಾಜ್ ಅವರಿಗೆ ಆದೆಂಥ ಆಪ್ಪಟತನದ ನಂಟು ಎಂಬುದಕ್ಕೆ ಸಂಕ್ಷಿಪ್ತದಲ್ಲಿ ಉದಾಹರಣೆ ಕೊಡುತ್ತಾ ಹೋಗು ವುದಾದರೆ ಕೂಡ ಈ ಲೇಖನ ದೀರ್ಘವಾಗಿ ಬಿಡಬಹುದು. ಇಂಥ ವಿವರಣೆ ಅನಿವಾರ್ಯವಾದರೂ ಪ್ರಸ್ತುತವಲ್ಲದ ಕಾರಣ ಈ ಬಗ್ಗೆ ಕೆಲವು ವಿಚಾರ :

**ಕಲ್ಲು ಎಲ್ಲೋ ಅಲ್ಲಿ ಇವರು....**

ಕೊಡಗಿನಲ್ಲಿ ಹತ್ತನೇ ಶತಮಾನದಿಂದ ಹಿಡಿದು ೧೬ನೇ ಶತಮಾನದವರೆಗಿನ ಎಂಟು ಹೊಸ ಶಿಲಾಶಾಸನಗಳನ್ನು, ಪುಷ್ಪಗಿರಿಯಲ್ಲಿನ ಬಂಡೆ ಶಾಸನವನ್ನು ಕಂಡು ಹಿಡಿದಿರುವ ಶ್ರೀ ನಾಗರಾಜ್‌ರವರು ಈ ಪೈಕಿ ಮುಖ್ಯ ಶಾಸನವೆನ್ನಲಾದ ಗಂಗರ ಕಾಲದ ಕೊಡಗಿನ ಪ್ರಥಮ 'ವೀರ ವೇಳೆ ವಾಳ' ಶಾಸನವನ್ನು ಪತ್ತೆ ಹಚ್ಚಿರು ವುದೊಂದು ವಿಶೇಷವಾಗಿದೆ.

ಸೋಮವಾರಪೇಟೆ ತಾಲ್ಲೂಕು ಬೇಳೂರಿನ ಹುಚ್ಚ ಬಸವೇಶ್ವರರ ೯ಗುಲದ ಸಮೀಪದಲ್ಲಿ ಹತ್ತನೆಯ ಶತಮಾನದಲ್ಲಿ ಅಗ್ನಿಪ್ರವೇಶ ಮಾಡುತ್ತಿರುವ 'ವೀರವೇಳೆವಾಳ' ಶಿಲ್ಪ ಶಾಸನವನ್ನು ನಾಗರಾಜ್‌ರವರು ಪತ್ತೆಗೈದರು. ಬೇಳೂರು ಮಠದ ಶ್ರೀ ದಯಾನಂದ ಸ್ವಾಮೀಜಿ, ಶ್ರೀ ಜಿ. ವಿ. ಚೆನ್ನಯ್ಯ ಹಿರೇಮಠ, ಶ್ರೀ ಬಿ.ಇ. ವೀರರಾಜು ಹಾಗೂ ಕೊಡಗು ಆರಣ್ಯ ಇಲಾಖೆ ಅಧಿಕಾರಿಗಳಿಗೆ ತಮ್ಮ ಈ ಸಂಶೋಧನೆ ಕಾಲದಲ್ಲಿ ನೆರವಾದುದಕ್ಕಾಗಿ ೧೯೮೭ನೇ ಸೆಪ್ಟೆಂಬರ್ ಎರಡು 'ಶಕ್ತಿ'ಯಲ್ಲಿ ವೀರ ವೇಳೆ ವಾಳ ಶಾಸನ ಪತ್ತೆ ಕುರಿತಾಗಿ ನಾಗರಾಜ್ ಅವರು ಪ್ರಕಟಿಸಿದ ವಿಶೇಷ ವರದಿಯಲ್ಲಿ ತಮ್ಮ ಕೃತಜ್ಞತೆ ಸೂಚಿಸಿದ್ದಾರೆ.

ಈ ವರದಿಯ ಸಂಕ್ಷಿಪ್ತ ವಿವರ ಈ ಕೆಳಗಿನಂತಿದೆ.

'ವೀರವೇಳೆವಾಳ' ಶಾಸನ ಶಿಲ್ಪವು ಮೂರು ಹಂತಗಳಲ್ಲಿ ಇದ್ದು ನಡುವಿನ ಪಟ್ಟಿಕೆಗಳಲ್ಲಿ ಎಂಟು ಸಾಲುಗಳ ಶಾಸನ ಲಿಪಿಗಳಿದ್ದು, ಬಲ ಅಂಚಿನಲ್ಲಿಯೂ ಲಿಪಿ

ಕೆತ್ತಲ್ಪಟ್ಟಿದೆ. ಶಾಸನ ಪಾಠದ ರೀತ್ಯಾ ಶಕ ೮೩೩ನೆಯ ಪ್ರಮೋದೂತ ಸಂವತ್ಸರದಲ್ಲಿ ಗಂಗ ಎರೆಯಮ್ಮನ ಆಡಳಿತಕ್ಕೆ ಕೊಡಗು ಸೇರಿತ್ತು. ಆ ಸಮಯದಲ್ಲಿ ಬೊಪ್ಪಗಾಮುಂಡಿ ಎಂಬುವನಿಗೂ, ಎಟಿಗೆಳ್ಳಿಯ ರಾಚಮ್ಮನಿಗೂ ಯುದ್ಧ ನಡೆಯುತ್ತದೆ. ಬಹುಶಃ ಆಗ ಮಡಿದ ರಾಚಮ್ಮನಿಗೆ ವೇಳೆವಾಳಿಯಾಗಿದ್ದ ಯಳಿಗಳೆಯ (ಉಲುಗುಲಿ) ಶಕ್ರಮನ್ ಎಂಬುವನು ಅಗ್ನಿಪ್ರವೇಶ ಮಾಡುತ್ತಾನೆ. ಅವನಿಗಾಗಿ ಪರೋಕ್ಷ ವಿನಯದಲ್ಲಿ ದೇವಿರನು ಕಲ್ಲನ್ನು ಇರಿಸುತ್ತಾನೆ ಎಂಬ ಅಂಶಗಳು ತಿಳಿದುಬರುತ್ತವೆ.

ಇಲ್ಲಿ ಮಹತ್ವದ ಸಂಗತಿಯಾಗಿ ಬೆಳಕಿಗೆ ತರಲ್ಪಡುವ ಅಂಶಗಳು ಎಂದರೆ, ೧೦ನೇ ಶತಮಾನದಲ್ಲಿ 'ಉಲುಗುಲಿ'ಯ ಅಸ್ತಿತ್ವ, ಮೇಲೇರಿ ಕೊಂಡದ ಸಂಪ್ರದಾಯ, ಕೊಡಗಿನಲ್ಲಿ ಪ್ರಥಮ ವೀರವೇಳೆವಾಳೆಯ ಲಭ್ಯತೆ ಇವುಗಳೇ ಅಲ್ಲದೆ ಆ ಕಾಲದ ವೀರರ ಹೆಸರುಗಳು ಪ್ರಸ್ತುತ ಕಾಲದ ಹೆಸರುಗಳಿಗೆ ಸಮನ್ವಯವಾಗಿರುವುದು.

ಮೇಲಿನ ಗುಡಿಯ ಸಮೀಪದಲ್ಲಿ ಇನ್ನು ಅಪ್ರಕಟಿತ ಶಾಸನಗಳಿವೆ. ಇದೇ ರೀತಿ ಕುಸುಬೂರಿನಲ್ಲಿ ೧೧-೧೨ನೆಯ ಶತಮಾನದ ಕೊಂಗಾಳ್ವರ ಕೊನೆಯ ಅರಸ ವೀರಚೋಳ ಕೊಂಗಾಳ್ವನ ವೀರಶಾಸನ ಪತ್ತೆ ಆಗಿದೆ. ಶಾಸನರೀತ್ಯಾ 'ವಿಗಜಾಬ್ಬ', ಕೋಳಾಂಕಳ ಕೊಂಗ' ಎಂಬ ಬಿರುದುಗಳು ಅವನಿಗೆ ಇದ್ದ ಸಂಗತಿ. ವೀರ ಭಟನಾದ ನಿಜಮಾನನು ಗೋವುಗಳನ್ನು ವೈರಿಪಾಳ್ಯದಿಂದ ಬಿಡಿಸಿತಂದುದರ ಹಾಗೂ ಇಮದ್ದೇಯರಸನಾದ ಕುಂಞನೊಡನೆ ನಡೆದ ಯುದ್ಧದ ಸಂಗತಿಗಳು ತಿಳಿದುಬರುತ್ತವೆ.

ದುಬಾರೆ ಕಾಡು, ನಂಜರಾಯ ಪಟ್ಟಣ ಹಾಗೂ ಬೀಳುಗಂಬದ ಬಳಿಯೂ ೧೧-೧೨ನೇ ಶತಮಾನದ ಶಾಸನ ಪತ್ತೆ ಆಗಿವೆ.

ಶಾಸನಗಳಲ್ಲಿ ಶಿಲ್ಪ ಸಹಿತವೂ, ಶಿಲ್ಪ ರಹಿತವೂ ಆದ ಎರಡು ಬಗೆಗಳಿವೆ. ಶಿಲ್ಪ ರಹಿತ ಶಾಸನದಲ್ಲಿ ಬರೆಯಲಾಗದ ಅನೇಕ ವಿವರಗಳನ್ನು ಶಿಲ್ಪವು ಬಿಡಿಸಿ ಹೇಳುತ್ತದೆ.

ವೀರವೇಳೆವಾಳಿ ಶಾಸನವನ್ನೇ ತೆಗೆದುಕೊಂಡರೆ ಈ ಶಿಲ್ಪ ಶಾಸನ ಏನನ್ನೆಲ್ಲ ವಿವರಿಸುತ್ತದೆ ? ಶಿಲ್ಪದ ವಿವರಣೆ ಕೊಡಲು ಬಹುಶಃ ಶ್ರೀ ನಾಗರಾಜ್‌ರವರು ಮಾತ್ರ ಸಮರ್ಥರು. ಮೇಲಿನ ಶಾಸನ ಕುರಿತಂತೆ ಬೆಂಗಳೂರಿನ ಶ್ರೀ ಜ. ಚ. ನಿ. ಅಧ್ಯಯನ ಪೀಠ ಮತ್ತು ಸಂಶೋಧನಾ ಸಂಸ್ಥೆಯವರು ಹೊರ ತರುತ್ತಿರುವ, ಅಲ್ಲದೆ ಶ್ರೀ ನಾಗರಾಜ್‌ರವರೇ ಗೌ|| ಪ್ರಧಾನ ಸಂಪಾದಕರಾಗಿರುವ 'ಮಾವಿಂಡಿ'ಯ ವಿಶೇಷಾಂಕ ೧೫ರಲ್ಲಿ ಶ್ರೀ ನಾಗರಾಜ್‌ರವರು ಬಣ್ಣಿಸುವ ಈ ರೀತಿ ನೋಡಿ :

ಕೊಡಗಿನ ಗುಡಗೂರು ಹುಚ್ಚಬಸವೇಶ್ವರ ಗುಡಿ ಬಳಿಯ ಹೊಸ ವೀರವೇಳೆವಾಳಿ ಶಾಸನದ ಶಿಲ್ಪ ತುಂಬ ಸುಂದರವಾದ ಗಂಗರ ಕಾಲದ ಶಿಲ್ಪವಾಗಿದೆ. ಕೆಳಗಿನ ಹಂತದಲ್ಲಿನ ರಾಜ (ನಾಯಕ) ಅವನ ಹಿಂದೆ ರಾಜಗೊಡೆ, ನಾಯಕನ ಸರ್ವಾಂಗ ವೇಷಭೂಷ, ಕಾಲಿಗೆ ಕಡಗ, ಸೊಂಟಕ್ಕೆ ಪಟ್ಟಿ, ಅದರ ಬಲ ಬದಿಗೆ ಬಾಕುವಿನ ಹಿಡಿಪು, ಸೊಂಟದಿಂದ ಮೇಲ್ತೊಡೆವರೆಗಿನ ಅಂಗವಸ್ತ್ರ ಹಾಗೂ ಇಳಿಬಿದ್ದ ನೆಂಗೆ ವಸ್ತ್ರಗುಚ್ಛ, ತೋಳು ಹಾಗೂ ಮುಂಗೈ ಕಂಕಣ, ಕಂಠಹಾರ, ಕರ್ಣಕುಂಡಲ, ಶಿರೋವೇಷದ ಗರಿಗುಚ್ಛ–ಪ್ರಮಾಣಬದ್ಧವಾಗಿ ಬಿಡಾವಣೆ ಆಗಿವೆ. ಕೈಯಲ್ಲಿ ಹಿಡಿದಿರುವ ಬಾಕು, ಎಡಮಂಡಿ ತುಸು ಕಠಿಣ ಬಾಗಿಸಿ ಇಟ್ಟಿರುವ ದೃಢ ಹೆಜ್ಜೆ, ಅದಕ್ಕೆ ಅನುಗುಣವಾದ ಬಲಮಂಡಿಯ ಬಾಗು ಹಾಗೂ ಹೆಜ್ಜೆ, ದೇಹ ಹಾಗೂ ಮುಖ ಭಾವ ಕ್ರಿಯಾಭಂಗಿ—ಇವುಗಳು ಒಬ್ಬ ಹಿರಿಯ ಪ್ರೌಢ ವಯಸ್ಸಿನ ವೀರನನ್ನು ಸೂಚಿಸುವಂತಿವೆ.

ಈ ನಾಯಕನ ಎಡ ಮುಂಬದಿಯ ವೇದಿಕೆಯ ಮೇಲೆ ವೀರ ಪ್ರಣಾಮ ಮುದ್ರೆಯ ವೇಳೆವಾಳಿಯ ಸ್ನಾನಕ ಕ್ರಿಯಾಬಂಗಿಯ ಕೌಶಲ್ಯಪೂರ್ಣ ಶಿಲ್ಪವಿದೆ. ಈ ನಿಷ್ಠಾವಂತ ವೇಳೆವಾಳಿಯ ಎರಡೂ ತೋಳುಗಳಿಂದ ಹಸ್ತದವರೆಗೆಗಿನ ಪ್ರಣಾಮ ಭಂಗಿ, ಅವನು ಅಗ್ನಿಪ್ರವೇಶಕ್ಕೆ ಸಜ್ಜಾಗಿರುವ ಭಂಗಿ ; ಧನ್ಯಭಾವದ ಮೈ–ಮೊಗ, ಬಹುಶಃ ಗಾಳಿಯ ಬೀಸು ಸರಿಸುತ್ತಿರುವ ಆತನ ಶಿರೋವಸ್ತ್ರ, ಜಗಿಯುವ ಎಡ ಮಂಡಿ ಬಾಗಿಸಿ ಜಘನವನ್ನು ಎತ್ತರಿಸಿ ಇರುವ ಭಂಗಿ, ಅದಕ್ಕೇ ಅನುಗುಣ ಎತ್ತರ ಹಾಗೂ ಅಗಲದ ವೇದಿಕೆ ಅಚ್ಚುಕಟ್ಟಾಗಿ ಬಿಡಾವಣೆ ಆಗಿದೆ.

ಮುಂದಿರುವ ಬಹುಶಃ ಬೊಂಬುಗಳನ್ನು ನೇರ ನಿಲ್ಲಿಸಿ ಸಜ್ಜುಗೊಳಿಸಿದ ರಾಶಿ ಕೊಂಡ, ಕೊಂಡದ ಬೊಂಬುಗಳ ಮೇಲೂ ಜ್ವಾಲೆಯು ಗಾಳಿಯ ಬೀಸಿಗೆ ತುಸು ಬಾಗಿರುವುದೂ, ಆ ಸಮಯದಲ್ಲಿ ಪ್ರಚಲಿತ ಕೊಂಡದ ಮಾದರಿಯನ್ನಷ್ಟೇ ಅಲ್ಲ, ಆ ಸಂದರ್ಭದ ಪರಿಸರವನ್ನೂ ಶಿಲ್ಪದಲ್ಲಿ ಬಿಡಾವಣೆ ಮಾಡಲಾಗಿದೆ. ಅಲ್ಲದೆ, ಇಂದಿಗೂ ಕೊಡಗಿನ ಜನಪದದಲ್ಲಿ ಪ್ರಚಲಿತವಾಗಿರುವ 'ಮೇಲೇರಿಕೊಂಡ'ದ ಪ್ರಾಚೀನ ಮಾದರಿ ಆಗಿರುವಂತಿದೆ. ವೇಳೆವಾಳಿಯ ಅಂಗಸೌಷ್ಠವವು ಅವನು ಸುಂದರ ಶೂರ ಪುರುಷನೆಂದೂ ಹಾಗೂ ಶಾಸನಸ್ಥವಾಗಿರುವ ಅವನ ಹೆಸರು ಮುಂದೆ ೧೧ನೆಯ ಶತಮಾನದ ನೆರೆಯ ಗ್ರಾಮವೊಂದರ ಶಾಸನದಲ್ಲಿ ಬರುವ ವ್ಯಕ್ತಿಯ ಹೆಸರುಗಳನ್ನು ಗಮನಿಸುವಲ್ಲಿ ಅವನ ವಂಶೀಕ ವೇಳೆವಾಳಿಗಳು ಮುಂದುವರೆದು ಬಂದು ಆ ನೆರೆಯಲ್ಲಿ ಪ್ರಸಿದ್ಧರಾಗಿದ್ದರು ಎಂಬ ಅಂಶಕ್ಕೆ ಪೂರಕವಾಗಿದೆ.

ಶಾಸನದ ಎರಡನೆಯ ಹಂತದಲ್ಲಿ ವೀರನ ತೋಳುಗಳನ್ನು ಹಿಡಿದು ಸುರಲೋಕಕ್ಕೆ

ಒಯ್ಯುತ್ತಿರುವ ಚಾಮರಧಾರಿ ಅಪ್ಸರೆಯರು, ತುಂಬು ಅಂಗಸೌಷ್ಠವದ ಜವ್ವನೆಯರಾಗಿ ಬಾಗಿದ ಬಳುಕಿನ ಭಂಗಿಯಲ್ಲಿ ಆಕಾಶ ಗಮನೆಯರಾಗಿ, ಆಕರ್ಷಕ ಪ್ರಸಂಗವನ್ನು ನಿರ್ಮಿಸುವಂತೆ ಬಿಡಾವಣೆ ಆಗಿದ್ದಾರೆ. ಧನ್ಯ ಪ್ರಸನ್ನತೆಯು ಶಿಲ್ಪದಲ್ಲಿ ಕ್ರಿಯೆಯೊಡನೆ ಮಿಳಿತವಾಗಿ ಬಂದಿದೆ.

ಮೂರನೆಯ ಹಂತದಲ್ಲಿ ಸುರಲೋಕದಲ್ಲಿ ಪದ್ಮಾಸನಸ್ಥನಾಗಿ ಒಡ್ಡೋಲಗದಲ್ಲಿ, ಅಪ್ಸರಾ ನೃತ್ಯ, ಗೀತೆಗಳ ಸುಖ–ಸಮೃದ್ಧಿಗಳನ್ನು ಪಡೆಯುತ್ತಿರುವ ವೀರ ಬಲಗಾಲು ಇಳಿಬಿಟ್ಟು, ಬಲಗೈಯಲ್ಲಿ ಬಹುಶಃ ಕಮಲ (!) ಹಿಡಿದು ಅರೆ ನಿಮೀಲಿತ ಧ್ಯಾನಸ್ಥ ಭಂಗಿಯಲ್ಲೂ ಇದ್ದು ಭೂಮುಕ್ತನಾಗಿದ್ದಾನೆ ಎಂಬ ಭಾವ ಶಿಲ್ಪದಲ್ಲಿದೆ.

ಅಗ್ನಿಪ್ರವೇಶ ಮಾಡಿದ್ದು ರಾಜನ ಸತಿ ಎನ್ನುವ ಆಧಾರ ಶಿಲ್ಪದಲ್ಲಿ ಕಾಣದು. ಕಾರಣ, ರಾಜ ಹಾಗೂ ರಾಜನ ಸತಿಯು ಶಿಲ್ಪ ಎರಡು–ಮೂರನೇ ಹಂತಗಳಲ್ಲಿಲ್ಲ. ಅಂತಾಗಿ ವೀರವೇಳೆವಾಳಿಯ ಶಿಲ್ಪವೆಂದೇ ವಿದಿತವಾಗುತ್ತದೆ. ಇದಲ್ಲದೆ, ೧೦೯೫ರ ಯಡೂರು ಶಾಸನದಲ್ಲಿ ಬರುವ ಲೆಂಕರೂ, ಯಕ್ಕಟಿಗಾರರೂ, ಬಹುಶಃ ಈ ಶಾಸನದ ನೆಲೆಯ ಆಸುಪಾಸಿನ ಜನರೇ ಆಗಿದ್ದು ಕೊಡಗಿನ ಆ ಭಾಗದಲ್ಲಿ ವೇಳೆವಾಳಿಗಳ ವಂಶ ಸಾಕಷ್ಟು ಕಾಲ ವಾಸ್ತವ್ಯವಿತ್ತು ಎಂಬುದಕ್ಕೆ ಪೋಷಕವಾಗುತ್ತವೆ. ಕೊಡಗಿನ ಇಂದಿನ ಅನೇಕ ಜನಪದ ಸಂಪ್ರದಾಯಗಳಿಗೆ, ಸಾಂಸ್ಕೃತಿಕ ನಡಾವಳಿಗೆ ಈ ಶಾಸನ ಶಿಲ್ಪ ಸಂಗತಿಗಳು ಪ್ರಭಾವ ಪರಂಪರೆ ನೀಡಿವೆ ಎಂಬುದನ್ನೂ ಇಲ್ಲಿ ಗಮನಿಸಬೇಕು.

ಕೊಡಗಿನ ಕುಂದಗಿರಿಯ ಮಹಾದೇವನ ಜಾತ್ರೆ ಇರಲಿ, ಇನ್ನಿತರ ಯಾವುದೇ ಜಾತ್ರೆ–ಜನಪದ ಆಚರಣೆಗಳಿರಲಿ, ಶ್ರೀ ನಾಗರಾಜ್‌ರವರು ಅಲ್ಲಿಗೆಲ್ಲ ಹಾಜರು ತುಲಾ ಸಂಕ್ರಮಣದಲ್ಲಿ ಕೊಡಗಿನ ತಲಕಾವೇರಿಯಲ್ಲಿ ಕಾವೇರಿ ತೀರ್ಥದ ಉದ್ಭವ ; ಈ ವೈಭವ ಸೆಲೆಯಲ್ಲಿ ಕುಂದಗಿರಿಯ ಮಹತ್ವ ಹೊರಗಿನವರಿಗೆ ಹೆಚ್ಚಾಗಿ ಗೋಚರಿಸಿಲ್ಲ ಎಂದು ಹೇಳುವ ನಾಗರಾಜ್‌ರವರು ತೀರ್ಥೋದ್ಭವದ ಮೂರನೇ ದಿನ ಗೋಣಿಕೊಪ್ಪ, ಕೈಕೇರಿಯ ಹಾದಿಯಲ್ಲಿ ಸ್ಪಷ್ಟವಾಗಿ ಕಾಣಿಸುವ ಈ 'ಕುಂದಗಿರಿ' ಯಲ್ಲಿ ಜನಪದ ಆಚರಣೆ, ಉದ್ಭವ ತೀರ್ಥ ತಂದು ಮಹಾದೇವನಿಗೆ ಅಭಿಷೇಕ, ದೀಪಪೂಜೆ ಇತ್ಯಾದಿಗಳು ನಡೆಯುವುದನ್ನು ಪ್ರಸ್ತಾಪಿಸುತ್ತಾರೆ, ಸ್ಥಳಪುರಾಣರೀತ್ಯಾ ಪಾಂಡುವರು ಇಲ್ಲಿ ಶಿವಲಿಂಗ ಸ್ಥಾಪಿಸಿ ಒಂದೇ ರಾತ್ರಿಯಲ್ಲಿ ಗುಡಿಕಟ್ಟಿ, ವೇಳೆ ಆಗಲು ಬಾಗಿಲಿಡಲಾಗದೆ ಉದ್ಭವತೀರ್ಥದಿಂದ ಅಭಿಷೇಕ ಮಾಡಿದರಂತೆ. ಇದಲ್ಲದೆ, ಜಾನಪದರೀತ್ಯಾ. ಹಾಗೂ ಐತಿಹಾಸಿಕವಾಗಿಯೂ ಈ ಗುಡಿಗೆ ಮಹತ್ವವಿದೆ. ೧೮೩೪–೩೬ರಲ್ಲಿ ಈ ಗುಡಿಯು ಜೀರ್ಣೋದ್ಧಾರವಾದ ಬಗ್ಗೆ ಇಲ್ಲಿನ ಸ್ತಂಭಶಾಸನದಲ್ಲಿ ಉಲ್ಲೇಖವಿದೆ.

ಕೊಡವರ ಹುತ್ತರಿಹಬ್ಬ, ಕೋಲಾಟ ಮುಂತಾದುದರ ಕುರಿತು ಶ್ರೀ ನಾಗ–ರಾಜ್‌ರವರು ವಿಶೇಷ ರೂಪಕಗಳನ್ನು ರಚಿಸಿ 'ಕನ್ನಡನುಡಿ'ಯಲ್ಲಿ (ಮೇ ೧, ೧೯೮೩)

ಪ್ರಕಟಿಸಿದರಲ್ಲದೆ ಸ್ವತಃ ನಿರ್ದೇಶಿಸಲ್ಪಟ್ಟ ಈ ರೂಪಕಗಳನ್ನು ತಾ. ೧-೧೨-೧೯೮೨ ರಂದು ಬಾನುಲಿಯಲ್ಲಿ ಪ್ರಸಾರಗೊಳಿಸಿದರು.

'ಶಕ್ತಿ'ಯ ಬೆಳ್ಳಿಹಬ್ಬದ ಸಂಚಿಕೆಯಲ್ಲಿ ಈ ಪತ್ರಿಕೆ ಏರ್ಪಡಿಸಿದ್ದ ಕಥಾಸ್ಪರ್ಧೆಗೆ ಬಂದ ಒಟ್ಟು ೨೪ ಕಥೆಗಳ ಪೈಕಿ ಪ್ರಥಮ ಬಹುಮಾನ ಯಾವುದಕ್ಕೂ ಸಲ್ಲದಿದ್ದರೂ, ದ್ವಿತೀಯ ಬಹುಮಾನವನ್ನು ಶ್ರೀ ವೈ.ಗಂ.ನಾ. ಅವರ 'ಕವನಗಳ ನಡುವೆ' ಎಂಬ ಕೃತಿ ಪಡೆದುಕೊಂಡಿತು.

೧೯೮೧ನೇ ಡಿಸೆಂಬರ್ ೬ರ 'ಸಂಯುಕ್ತ ಕರ್ನಾಟಕ' ಪತ್ರಿಕೆಯ 'ಸಾಪ್ತಾಹಿಕ ಮಂಜರಿ' ವಿಭಾಗದಲ್ಲಿ ಇವರು 'ಕೈ ಮುಡಿಕೆಯ ಹುತ್ತರಿ ಕೋಲು' ಎಂಬ ಶೀರ್ಷಿಕೆ ಯಲ್ಲಿ ವಿಶೇಷ ಲೇಖನವೊಂದನ್ನು ಪ್ರಕಟಿಸಿದರು. ಇದರಲ್ಲಿ ಇವರು ಹುತ್ತರಿ ಕೋಲಾಟದ ಹಾಡುಗಳ ವೈಶಿಷ್ಟ್ಯವನ್ನು ವಿವರವಾಗಿ ವಿಶ್ಲೇಷಿಸಿದ್ದಾರೆ. ಕೇವಲ ದೇವರ ಮೇಲಿನ ಹಾಡುಗಳಿಗೆ, ರಾಮಾಯಣ-ಮಹಾಭಾರತ ಕಥೆಗಳಿಗೆ ಸೀಮಿತ ಗೊಳಿಸಿಕೊಂಡ ಕೋಲಾಟದ ಹಾಡುಗಳ ವೈಶಿಷ್ಟ್ಯಕ್ಕಿಂತ ಜೀವನದ ಜೊತೆ ನೇರ ವಾದ ಸಂಬಂಧ ಪಡೆದ ಕೈಮುಡಿಕೆಯ ಕೋಲಾಟದ ಹಾಡುಗಳು ವಿಶಿಷ್ಟತೆ ಪಡೆದಿವೆ ಎಂಬುದು, ಇವರು ತಮ್ಮ ಅಧ್ಯಯನದಿಂದ ಕಂಡುಕೊಂಡ ವಿಚಾರ. ಇದೀಗ ಕರ್ನಾಟಕ ಇತಿಹಾಸ ಅಕಾಡೆಮಿಯ ಉಪಾಧ್ಯಕ್ಷರಾಗಿರುವ ನಾಗರಾಜ್‌ರವರು ಐತಿಹಾಸಿಕ ಸಂಶೋಧಕರೆಂಬುದು ಜನಜನಿತ ವಿಚಾರ. ಆದರೆ ನಾಟಕ ಕಲೆಯಲ್ಲಿ ವಿಶಿಷ್ಟ ನೋಟಕನಾಗಿ ಇವರು ವಿಜೃಂಭಿಸಿದ್ದುಂಟು ಎಂಬುದು ಅನೇಕರಿಗೆ ತಿಳಿದಿರ ಲಾರದು. ಗೋಣಿಕೊಪ್ಪದ ಕಾವೇರಿ ಕಾಲೇಜಿನಲ್ಲಿ ರಾಜ್ಯ ನಾಟಕ ಅಕಾಡೆಮಿಯ ವತಿಯಿಂದ ೧೯೮೦ರಲ್ಲಿ ನಡೆಸಲಾದ ನಾಟಕೋತ್ಸವವನ್ನು ಇವರು 'ಗ್ರಾಮೀಣ ನೆಲೆಗಳತ್ತ ಹರಿದ ಕಲಾ ಸಂಘಟನೆ' ಎಂದು ಬಣ್ಣಿಸಿದರು. ಗೋಣಿಕೊಪ್ಪದ ಕಾವೇರಿ ಕಾಲೇಜಿನ 'ಸ್ಪಂದನ' ಸಂಸ್ಥೆಯ ಆಶ್ರಯದಲ್ಲಿ ಅಖಿಲ ಕರ್ನಾಟಕ ನಾಟಕ ಸ್ಪರ್ಧೆ ಏರ್ಪಟ್ಟಾಗ ನಾಗರಾಜ್‌ರವರೂ ತೀರ್ಪುಗಾರರಲ್ಲೊಬ್ಬರಾಗಿದ್ದರು.

ಜನಪದ ಮೂಲದಿಂದ ಎದ್ದು ಬಂದ ಬಹುತೇಕ ಪ್ರಸಿದ್ಧ ದೇವತೆಗಳ ಬಗ್ಗೆ ಶ್ರೀ ನಾಗರಾಜ್‌ರವರು ತಮ್ಮದೇ ಆದ ವಿಶಿಷ್ಟ ಶೈಲಿಯ, ಅವಿಸ್ಮೃತಿಯ ಅಭಿಪ್ರಾಯ ಹೊಂದಿದ್ದಾರೆನ್ನಬಹುದು. ವೀರಾಜಪೇಟೆ ತಾಲೂಕು ಹೆಗ್ಗಳದ ಬಳಿಯ ಪೆರುಮಾಳ್ಳೆ ಶಾಸ್ತಾವು ಕುರಿತು ಹಾಗೂ ಕೊಡಗಿನ ಇನ್ನಿತರ ಆಸಕ್ತಿದಾಯಕ ಶಾಸ್ತಾವುಗಳ ಕುರಿತಾಗಿ ಕೂಡ ಶ್ರೀ ನಾಗರಾಜ್‌ರವರು 'ಶಕ್ತಿ'ಯಲ್ಲಿ ಅನೇಕ ಲೇಖನಗಳನ್ನು ಪ್ರಕಟಿಸಿ ವಿಶಿಷ್ಟ ಮಾಹಿತಿ ಒದಗಿಸಿದ್ದಾರೆ. ಕೊಡಗಿನ ಜನಪದ 'ಪನ್ನಂಗಾಲತಮ್ಮೆ' ಕುರಿತಂತೆ 'ಶಕ್ತಿ'ಯಲ್ಲಿ ಲೇಖನ ಬರೆದ ಶ್ರೀ ನಾಗರಾಜ್‌ರವರು "ದಲಿತ ಸಮಾಜದ

ಸಂಕರ್ಷಣ ದೇವತೆಯಾದ ಪನ್ನಂಗಾಲತಮ್ಮೆ—ಸಾಂಸ್ಕೃತಿಕ ಪ್ರಜ್ಞೆಯ ಜೀವಂತ ಅಭಿವ್ಯಕ್ತಿ" ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಕೊಡಗಿನ ಜನತೆಯ ಬದುಕಿನಲ್ಲಿ ಹಾಸುಹೊಕ್ಕಾಗಿರುವ 'ಒಯಲ್ ಕಾಕುವ' ವನ್ನು ಸವಿಸ್ತಾರವಾಗಿ ಅಧ್ಯಯನ ಮಾಡಿ 'ಶಕ್ತಿ'ಯ ಓದುಗರಿಗೆ ನೀಡಿದ ಶ್ರೀ ನಾಗರಾಜ್‌ರವರು ಪ್ರತಿವರ್ಷ ಮಾರ್ಚ್ ಮಧ್ಯಾವಧಿಯಲ್ಲಿ ನಡೆಯುವ ಕೊಡಗಿನ ಇಷ್ಟ ದೈವ ಶ್ರೀ ಪಾಡಿ ಇಗ್ಗುತಪ್ಪ ಉತ್ಸವದ ಸಂದರ್ಭದಲ್ಲಿ ವಿಶೇಷ ಲೇಖನಗಳನ್ನು ಬರೆದಿದ್ದಾರೆ.

ಶ್ರೀ ಇಗ್ಗುತಪ್ಪ ಮಾಣಿಕ್ಯ, ಮಲೆನಾಡಿನಿಂದ ಕೊಡಗಿಗೆ ಬಂದ ಹಾದಿಯ ಕಥೆ ತಿಳಿಯದೆ, 'ಪಟ್ಟೋಲೆ ಪಳಮೆ ಎವ್ವಮುಕ್ಕ ದೇಟುವಡ ಪಾಟ್' ಅನ್ನು ಓದದೆ ಇರುವ ಬಹುತೇಕ ಮಂದಿಗೆ ಶ್ರೀ ನಾಗರಾಜ್‌ರವರು ಇವನ್ನೆಲ್ಲ ಅಧ್ಯಯನಪೂರ್ವಕವಾಗಿ ತಿಳಿದುಕೊಂಡು ತಿಳಿ ಹೇಳಿದ್ದಾರೆ ಎನ್ನುವುದು ಆಶ್ಚರ್ಯದ ಸಂಗತಿಯಲ್ಲವೆ?

ಮೀನ ಮಾಸದ ಹತ್ತನೆಯ ದಿನದಂದು (ಮಾ. ೨೪ರಿಂದ) ೫ ದಿನಗಳ ಕಾಲ ಕೊಡಗಿನ ವಿಶಿಷ್ಟ ದ್ವಿಲಕ್ಷಣಯುಕ್ತ, ಜನಪದ ಗ್ರಾಮದೇವತೆ 'ದಬ್ಬಚ್ಚವ್ವೆ'ಯ ಹಬ್ಬ ನಡೆಯುತ್ತದೆ. ಕುಂದಗಿರಿಯ ಮೇಲಿನ ಮಹಾದೇವ ಬೆಟ್ಟಯ್ಯಪ್ಪ ಹಾಗೂ ಕುಂದ ಗ್ರಾಮದ ಈಶ್ವರ ನಾಡಲ್ಲಯ್ಯಪ್ಪ ಏಕಶಕ್ತಿಯ ಅಂಶವಾದ ದಬ್ಬಚ್ಚವ್ವೆ ಕುರಿತು ವಿಶೇಷ ಸಂಶೋಧನಾತ್ಮಕ ಲೇಖನವನ್ನು ಶ್ರೀ ನಾಗರಾಜ್‌ರವರು 'ಶಕ್ತಿ'ಯಲ್ಲಿ ಬರೆದು ಪ್ರಕಟಿಸಿದ್ದಾರೆ.

ಶಿವರಾತ್ರಿಯ ದಿನ ಜನಜಾತ್ರೆ ಮೇಳೈಸುವ ಶಿವಕ್ಷೇತ್ರ ಇರ್ಪು ಕುರಿತಾಗಿಯೂ ಶ್ರೀ ನಾಗರಾಜ್‌ರವರು ಸಂಶೋಧನಾತ್ಮಕ ಲೇಖನವನ್ನು ಬರೆದಿದ್ದಾರೆ. ಈ ಹಿಂದೆ ವಿವರಿಸಲಾದ ಗಮನಾರ್ಹ ಗಿರಿಕ್ಷೇತ್ರವಾದ ಕುಂದಗಿರಿ ಕುರಿತು 'ಉದಯವಾಣಿ'ಯಲ್ಲಿ ಲೇಖನವನ್ನು ಬರೆದಿರುವ ಇವರು ಕುಂದಗಿರಿಯನ್ನು 'ದಕ್ಷಿಣ ಕೊಡಗಿನ ನಂದಿ' ಎಂದು ಕರೆದಿದ್ದಾರೆ.

ನಾಗರಾಜರಂಥ ಮಿತ್ರನ ಎಲ್ಲ ಕೆಲಸಗಳಿಗೂ ಒಳಿತಾಗಲಿ ಎಂದು ಹಾರೈಸುವುದು ನಾಗರಾಜರಿಗೆ ನಾವೆಲ್ಲ ಸಲ್ಲಿಸುವ ಅಭಿನಂದನೆ.

○

ಬೈರಮಂಗಲ ರಾಮೇಗೌಡ

# ಎಂ.ಜಿ. ನಾಗರಾಜ್ ಮತ್ತು ಅವರ ಬರಹಗಳ ಸುತ್ತಮುತ್ತ

ಶಿಷ್ಯಕೋಟಿ ಮತ್ತು ಸ್ನೇಹಿತರ ವಲಯದಲ್ಲಿ 'ಎಂ.ಜಿ.ಎನ್.' ಎಂದೇ ಪ್ರೀತಿಯಿಂದ ಗುರುತಿಸಲ್ಪಡುವ ಎಂ.ಜಿ. ನಾಗರಾಜ್ ವಯಸ್ಸಿನಲ್ಲಿ ನನಗಿಂತ ಇಪ್ಪತ್ತೈದು ವರ್ಷಗಳಷ್ಟು ಹಿರಿಯರು. ಹದಿನಾಲ್ಕು ವರ್ಷಗಳಷ್ಟು ಹಳೆಯದಾಗಿ ಮಾಗಿರುವ ನಮ್ಮ ಸ್ನೇಹ ವಯಸ್ಸಿನ ಅಂತರದ ಕಾರಣದಿಂದಾಗಿ ಎಂದೂ ನರಳಿಲ್ಲ, ಇಕ್ಕಟ್ಟು-ಬಿಕ್ಕಟ್ಟಿಗೆ ಸಿಲುಕಿಕೊಳ್ಳುವಂತೆ ಮಾಡಿಲ್ಲ ಎನ್ನುವುದೇ ಅವರ ಸ್ನೇಹಶೀಲ ಸ್ವಭಾವವನ್ನು ಅರ್ಥಪೂರ್ಣ ರೀತಿಯಲ್ಲಿ ಮನವರಿಕೆ ಮಾಡಿ ಕೊಡುತ್ತದೆ. ೧೯೮೨ರ ಜೂನ್ ತಿಂಗಳಲ್ಲಿ ರಾಮನಗರದ ಪುರಸಭಾ ಪ್ರಥಮ ದರ್ಜೆ ಕಾಲೇಜಿನಲ್ಲಿ ನಾನು ಕನ್ನಡ ಅಧ್ಯಾಪಕನಾಗಿ ಕೆಲಸಕ್ಕೆ ಸೇರಿಸಿಕೊಳ್ಳುವುದಕ್ಕೆ ಹತ್ತಾರು ವರ್ಷಗಳ ಮುಂಚೆಯೇ ಎಂ.ಜಿ.ಎನ್. ರಾಮನಗರದಲ್ಲಿ ನೆಲೆಸಿದ್ದರು. ಸರ್ಕಾರಿ ಪದವಿಪೂರ್ವ ಕಾಲೇಜಿನ ಗಣಿತ ಶಾಸ್ತ್ರದ ಅಧ್ಯಾಪಕರಾಗಿ ಯಾವ್ಯಾವುದೋ ಕೆರೆಯ ನೀರನ್ನು ಕುಡಿದುಕೊಂಡು ರಾಮನಗರಕ್ಕೆ ಬಂದರು. ಆ ಊರಿನ ನಡುವೆ ಮಳೆಗಾಲದಲ್ಲಿ ತುಂಬಿಕೊಂಡು ಬೇಸಿಗೆಯಲ್ಲಿ ಸೊರಗಿಕೊಂಡು ಹರಿಯುತ್ತಿದ್ದ ಅರ್ಕಾವತಿಯ ನೀರನ್ನು ಕುಡಿದು, ಯುಗ ಯುಗಗಳಿಂದ ಭಾವಸಮಾಧಿಯಲ್ಲಿ ಮುಳುಗಿಹೋಗಿರುವ ಯೋಗಿಗಳಂತೆ ಊರಿನ ಸುತ್ತ ಬಿದ್ದುಕೊಂಡಿರುವ ಬೃಹದಾಕಾರದ ಕಲ್ಲಿನ ಬೆಟ್ಟಗಳನ್ನು ಕಂಡು ಅವರಲ್ಲಿ ಧನ್ಯ ಭಾವ ಸ್ಫುರಿಸಿತೇನೋ ! ಮುಂದೆ ಅಲ್ಲಿಂದ ವರ್ಗಾವಣೆ ಯಾದರೂ ರಾಮನಗರದ ಸಂಪರ್ಕವನ್ನು ಮಾತ್ರ

ತೊರೆಯಲಿಲ್ಲ ; ಹೆಂಡತಿ-ಮಗ-ಮಗಳನ್ನು ರಾಮನಗರದಲ್ಲೇ ನೆಲೆಗೊಳಿಸಿ ತಾವು ಮಾತ್ರ ವರ್ಗಾವಣೆಯಾದ ಊರುಗಳಲ್ಲಿ ಸನ್ಯಾಸಿಯಂತೆ ಅಲೆಯುತ್ತ, ಯೋಗಿಯಂತೆ ಧ್ಯಾನಮಗ್ನವಾಗುತ್ತ ಆಯಾ ಊರಿನ ಸ್ಥಳಪುರಾಣ-ಐತಿಹ್ಯ-ಇತಿಹಾಸ-ಶಾಸನಗಳನ್ನು ಕೆದಕಿದರು, ತಮ್ಮ ಕಣ್ಣು ಕಿವಿ ಮನಸ್ಸು ಗ್ರಹಿಸಿದ ಹೊಸ ವಿಚಾರಗಳನ್ನು ಕುರಿತು ಭಾಷಣ ಮಾಡಿದರು, ವಿದ್ವತ್‌ಗೋಷ್ಠಿಗಳಲ್ಲಿ ಪ್ರಬಂಧ ಮಂಡಿಸಿದರು, ಪತ್ರಿಕೆಗಳಲ್ಲಿ ಲೇಖನ ಬರೆದರು, ಸಂಶೋಧನೆಯ ತೆಕ್ಕೆಗೆ ಇಡಿ ಇಡಿಯಾಗಿ ತಮ್ಮನ್ನು ಒಪ್ಪಿಸಿಕೊಂಡು ಅರಳುಮರುಳಾಗುವುದಕ್ಕೆ ಮುಂಚೆಯೇ ಸಾಕಷ್ಟು ತಲೆ ಕೆಡಿಸಿಕೊಂಡು ಧವಳಕೇಶಿಗಳಾದರು. ಅವರೊಳಗೆ ಹುದುಗಿದ್ದ ವಿದ್ವಾಂಸ ಗರಿಗೆದರಿಕೊಂಡು ತನ್ನ ನೈಜಸ್ವರೂಪದೊಂದಿಗೆ ಕಾಣಿಸಿಕೊಳ್ಳಲು ಈ ಸಂದರ್ಭ ಅವರಿಗೆ ವಿಪುಲ ಅವಕಾಶಗಳನ್ನು ದೊರಕಿಸಿಕೊಟ್ಟಿತು.

ಅಲ್ಲಿಲ್ಲಿ ಸುತ್ತಾಡಿ ರಾಮನಗರಕ್ಕೆ ಬಂದ ಹೊಸತರಲ್ಲೂ ನಾಗರಾಜ್ ಸುಮ್ಮನೇನೂ ಇರಲಿಲ್ಲ ; ಗಣಿತಶಾಸ್ತ್ರದಂಥ ಕಬ್ಬಿಣದ ಕಡಲೆಯನ್ನು ಕಡಲೆಪುರಿಯಂತೆ ಗರಿಗರಿಯಾಗಿಸಿ ರುಚಿರುಚಿಯಾಗಿಸಿ ಪ್ರೀತಿಯಿಂದ ಪಾಠ ಹೇಳುತ್ತ ಮೈಮರೆಯುವುದು, ಗಣಿತ ಇಷ್ಟೊಂದು ಸರಸವಾಗಿ ತಲೆಗೇರುವುದು ಸಾಧ್ಯವೇ ಎಂದು ವಿದ್ಯಾರ್ಥಿಗಳು ಸಂಭ್ರಮಿಸುವಂತೆ ಮಾಡುವುದು ಅವರ ಸ್ವಭಾವಕ್ಕೆ ಒಗ್ಗಿಹೋಗಿದ್ದ ಗುಣ. ಅವರಿಂದ ಪಾಠ ಹೇಳಿಸಿಕೊಂಡು ಬದುಕಿನ ವಿವಿಧ ಕವಲುಗಳಲ್ಲಿ ಹರಡಿಕೊಂಡಿರುವ ವಿದ್ಯಾರ್ಥಿಗಳು ಎಂ.ಜಿ.ಎನ್. ಜೊತೆಯಲ್ಲಿ ಪಾಠ ಹೇಳಿಕೊಡುತ್ತಿದ್ದ ಅನೇಕ ಅಧ್ಯಾಪಕರನ್ನು ಮರೆತಿರಬಹುದಾದರೂ ಇವರನ್ನು ಮಾತ್ರ ಮರೆತಿಲ್ಲ, ಮರೆಯಲು ಸಾಧ್ಯವಾಗಿಲ್ಲ ಎನ್ನುವುದು ಅನೇಕ ಸಂದರ್ಭಗಳಲ್ಲಿ ನನ್ನ ಗಮನಕ್ಕೇ ಬಂದಿದೆ. ಇದಕ್ಕೆ ಕಾರಣ ಎಂ.ಜಿ.ಎನ್. ಏನನ್ನೋ ಬಯಸಿ ಅದು ದಕ್ಕದೆ ಅಧ್ಯಾಪಕವೃತ್ತಿಗೆ ಆಕಸ್ಮಿಕವಾಗಿ ಬಂದವರಲ್ಲ ; ಈ ಕ್ಷೇತ್ರ ಅವರೇ ಪ್ರೀತಿಯಿಂದ ಆಯ್ಕೆ ಮಾಡಿಕೊಂಡದ್ದು. ಪಾಠದ ಬಗ್ಗೆ ಅವರಿಗಿದ್ದ ತೀವ್ರ ಆಸಕ್ತಿ, ಶಿಷ್ಯರ ಬಗ್ಗೆ ಗಾಢ ವಾತ್ಸಲ್ಯ, ಗಣಿತಕ್ಕೂ ಸಾಹಿತ್ಯದ ಸಂಪರ್ಕವನ್ನು-ಸವಿಯನ್ನು ಕಲ್ಪಿಸುತ್ತಿದ್ದ ರೀತಿ, ಪ್ರತಿಭಾವಂತ ವಿದ್ಯಾರ್ಥಿಗಳನ್ನು ಗುರುತಿಸಿ ಪ್ರೋತ್ಸಾಹಿಸುತ್ತಿದ್ದ ಬಗೆ, ಬಡ ಹುಡುಗರ ವಿಚಾರದಲ್ಲಿ ಸದಾ ಮಿಡಿಯುತ್ತ ಅವರ ಬದುಕಿನ ದಾರಿ ನೇರ್ಪುಗೊಳ್ಳಲು ಅವರು ಮಾಡುತ್ತಿದ್ದ ಸಹಾಯ, ಗುರು-ಶಿಷ್ಯರ ನಡುವಿನ ಕೃತಕ ಅಂತರವನ್ನು ದಾಟಿ ಎಲ್ಲರೊಂದಿಗೆ ಬಂಧುವಿನಂತೆ ಮಿಲನಗೊಳ್ಳುತ್ತಿದ್ದದ್ದು, ಕಾಲೇಜಿನ ನೀರಸ ಪಾಠ ಪ್ರವಚನಗಳ ನಡುವೆ ಸಾಹಿತ್ಯಕ-ಸಾಂಸ್ಕೃತಿಕ ಚಟುವಟಿಕೆಗಳನ್ನೇರ್ಪಡಿಸಿ ಆಹ್ಲಾದಕರ ಬದಲಾವಣೆಗಳನ್ನು ತರಲು ಮುಂದಾಗುತ್ತಿದ್ದುದು ಇತ್ಯಾದಿಗಳೇ ಪಾಠ ಕೇಳಿದ ವಿದ್ಯಾರ್ಥಿಗಳು ಎಂ.ಜಿ.ಎನ್. ಅವರನ್ನು

ಎಂದೂ ಮರೆಯಲಾಗದ ಮೇಷ್ಟರನ್ನಾಗಿ ರೂಪಿಸಲು ಕಾರಣವಾದ ಅಂಶಗಳು.

ಎಂ.ಜಿ.ಎನ್. ನನಗೆ ಪ್ರಿಯವಾಗಲು ಕಾರಣವಾದ ಮತ್ತೊಂದು ಅಂಶ ಇಲ್ಲಿ ಉಲ್ಲೇಖನಾರ್ಹ. ಒಬ್ಬ ಜನಪ್ರಿಯ ಅಧ್ಯಾಪಕನಿಗೆ, ಒಂದು ಸಂಸ್ಥೆಯ ಪ್ರಾಂಶುಪಾಲನಿಗೆ, ಸಾಹಿತಿಯಾಗಿ-ಸಂಶೋಧಕನಾಗಿ ಶ್ರೇಷ್ಠ ಕೆಲಸ ಮಾಡಿದವನಿಗೆ, ಸಂಘಟನೆಯೊಂದರ ಪದಾಧಿಕಾರಿಯಾಗಿ ಗಣನೀಯ ಸೇವೆ ಸಲ್ಲಿಸಿದವನಿಗೆ ಸಾಮಾನ್ಯ ವಾಗಿ ಇರುವ ಅಹಂಕಾರ, ಸೊಕ್ಕು, ಧಿಮಾಕುಗಳು ನಾಗರಾಜರ ಬಳಿ ಸುಳಿಯಲೇ ಇಲ್ಲ. ಕೀರ್ತಿಶನಿಯನ್ನು ಗಾವುದ ಗಾವುದಗಳಷ್ಟು ದೂರದಲ್ಲಿಟ್ಟೇ ತಮಗೆ ಪ್ರಿಯವಾದ ಕೆಲಸವನ್ನು ತಮ್ಮ ಪಾಡಿಗೆ ಮಾಡುತ್ತ ಬಂದರು. ಅವರ ಪುಸ್ತಕಗಳು-ಲೇಖನಗಳು ಪ್ರಕಟವಾದಾಗ, ವಿದ್ವಜ್ಜನರ ಸಭೆಯಲ್ಲಿ ಮಾಡಿದ ಭಾಷಣ-ಓದಿದ ಪ್ರಬಂಧಕ್ಕೆ ಪ್ರತಿಕ್ರಿಯೆಯಾಗಿ ಮೆಚ್ಚಿಗೆಯ ಮಾತುಗಳು ಕೇಳಿ ಬಂದಾಗ, ಮಗ ಎನ್. ದಿವಾಕರ ಗೌರವಾನ್ವಿತ ದರ್ಜೆಯಲ್ಲಿ ಇಂಜನಿಯರಿಂಗ್ ಪಾಸ್ ಮಾಡಿ ಪ್ರತಿಷ್ಠಿತ ಸಂಸ್ಥೆ ಯೊಂದರಲ್ಲಿ ಸ್ವಪ್ರತಿಭೆಯಿಂದಲೇ ಗಣ್ಯನೌಕರಿ ಗಿಟ್ಟಿಸಿದಾಗ, ತಂದೆಯ ಎಲ್ಲ ಸಾಹಿತ್ಯಕ ಪ್ರತಿಭೆಯನ್ನು ಮೈದುಂಬಿಕೊಂಡು ಕನ್ನಡದ ಪ್ರಮುಖ ಕವಯತ್ರಿ ಯರಲ್ಲೊಬ್ಬಳಾಗಿ ರೂಪುಗೊಳ್ಳುತ್ತಿರುವ ಮಗಳು ಎನ್. ಮಾಲಿನಿ “ನಾ ಹೇಳಲೇ ಬೇಕೆ ಗೆಳತಿ ?” ಕವನ ಸಂಕಲನ ಪ್ರಕಟಿಸಿ ಆಧುನಿಕ ಯುವತಿಯರ ಹೃದಯದ ತುಡಿತಗಳಿಗೆ ಲಗ್ಗೆ ಹಾಕಿದಾಗ, ಒತ್ತಾಯಪೂರ್ವಕ ಸನ್ಮಾನ ಸಮಾರಂಭಗಳಲ್ಲಿ ಹಾರ ತುರಾಯಿ ಶಾಲುಗಳು ಹೆಗಲಿಗೇರಿದಾಗ, ಹಿಂಬಾಗಿಲ ಪ್ರಯತ್ನದಲ್ಲಿದ್ದ ಅನೇಕರಿಗೆ ದಕ್ಕದ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿ ಸ್ಥಾನ ಅಯಾಚಿತವಾಗಿ ಇವರ ಮನೆಯ ಬಾಗಿಲು ಬಡಿದಾಗ....ಇಂಥ ಇನ್ನೂ ಅನೇಕ ಸಂದರ್ಭಗಳನ್ನು ಜೀವನದ ಸಹಜ ಗತಿಯಾಗಿ-ಲಯವಾಗಿ ಸ್ವೀಕರಿಸುವ ಸ್ಥಿತ ಪ್ರಜ್ಞತೆ ನಾಗರಾಜರಂಥ ಕೆಲವೇ ಮಂದಿಯಲ್ಲಿ ಕಾಣಿಸಿಕೊಳ್ಳುವ ವಿರಳ ಗುಣ. ನಾನು ಕಂಡಂತೆ ಅವರ ಪತ್ನಿ ಶ್ರೀಮತಿ ಸುಲೋಚನಾ ಮನೆಗಾಗಿ ಏನೂ ಮಾಡಲಿಲ್ಲ ಎಂದಾಗಲೀ, ಮೂರು ಹೊತ್ತೂ ಮನೆಯ ಹೊರಗೇ ಅಲೆಯುತ್ತೀರಲ್ಲ ಎಂದಾಗಲೀ ಎಂದೂ ದಬಾಯಿಸಿದವರಲ್ಲ; ಗೊಣಗಾಡಿದವರಲ್ಲ; ಬೇಸರ-ಅಸಮಾಧಾನ ಗಳನ್ನು ಯಾವುದೇ ರೂಪದಲ್ಲೂ ತೋರ್ಪಡಿಸಿದವರಲ್ಲ. ಅವರು ಮನೆಯ ಜವಾಬ್ದಾರಿಯನ್ನು ನೂರಕ್ಕೆನೂರರಷ್ಟು ತಮ್ಮ ತಲೆಯ ಮೇಲೆ ಹಾಕಿಕೊಂಡಿದ್ದ ರಿಂದಲೇ ನಾಗರಾಜರು ಬದುಕಿನಲ್ಲಿ ಗಮನಾರ್ಹ ಸಾಧನೆಗಳತ್ತ ಅಡಿಯಿಡುವುದು ಸಾಧ್ಯವಾಯಿತು. 'ಎಲ್ಲ ಯಶಸ್ವೀ ಪುರುಷರ ಹಿಂದೆ ಮಹಿಳೆಯೊಬ್ಬಳಿರುತ್ತಾಳೆ'ನ್ನು ವುದಕ್ಕೆ ನಾಗರಾಜ್-ಸುಲೋಚನಾ ಅವರ ದಾಂಪತ್ಯ ಜೀವನ ಒಂದು ಅತ್ಯುತ್ತಮ ಮಾದರಿಯಾಗಿದೆಯೆಂಬುದನ್ನು ನಾನು ಪ್ರತ್ಯಕ್ಷ ನೋಡಿ ಅರ್ಥಮಾಡಿಕೊಂಡಿದ್ದೇನೆ.

ಅವರಿಗೆ ಲಭ್ಯವಾಗಿರುವ ಕೌಟುಂಬಿಕ ಸಂತೃಪ್ತಿ, ಆದರ್ಶಪೂರ್ಣ ದಾಂಪತ್ಯ ಜೀವನವೇ ಅವರನ್ನು ಎತ್ತರದ ವ್ಯಕ್ತಿಯಾಗಿ ರೂಪಿಸಲು ಸಾಧ್ಯವಾಗಿರಬಹುದೆಂದು ನನಗನ್ನಿಸುತ್ತದೆ.

ಈ ಮೊದಲು ಉಲ್ಲೇಖಿಸಿದಂತೆ ನಾನು ರಾಮನಗರಕ್ಕೆ ಹೋಗುವ ವೇಳೆಗೆ ಎಂ. ಜಿ. ಎನ್. ರಾಮನಗರದಲ್ಲಿ ಎಷ್ಟೋ ವರ್ಷಗಳನ್ನು ಕಳೆದಿದ್ದರು. ಅಷ್ಟು ಹೊತ್ತಿಗಾಗಲೇ ರಾಮನಗರದಿಂದ ಮೂರು ಕಿಲೋಮೀಟರುಗಳ ದೂರದಲ್ಲಿರುವ, ನಾಡಿನ ಪ್ರಸಿಧ್ಧ ಏಕಶಿಲಾ ಬೆಟ್ಟಗಳಲ್ಲೊಂದಾಗಿರುವ, ಬೆಂಗಳೂರು ಮೈಸೂರು ರಸ್ತೆಯಲ್ಲಿ ರಾಮನಗರದ ಸಮೀಪ ಸಂಚರಿಸುವ ಎಲ್ಲರನ್ನೂ ತನ್ನ ದೈತ್ಯ ಗಾತ್ರದಿಂದ ಆಕರ್ಷಿಸುವ, ಸಿನಿಮಾ ಚಿತ್ರೀಕರಣ ತಾಣವಾಗಿರುವ ಶ್ರೀರಾಮದೇವರ ಬೆಟ್ಟ ಕುರಿತು "ಶಿವ-ಶ್ರೀರಾಮಗಿರಿ ಕ್ಷೇತ್ರದರ್ಶನ" ಎಂಬ ಪುಟ್ಟ ಪರಿಚಯಾತ್ಮಕ ಪುಸ್ತಕ ಪ್ರಕಟಿಸಿದ್ದರು. ಆ ಪುಸ್ತಕವನ್ನು ಓದಿಕೊಂಡಿದ್ದ ನಾನು ಎಂ. ಜಿ. ಎನ್. ಬಗ್ಗೆ ಸದಭಿಪ್ರಾಯ ಬೆಳೆಸಿಕೊಂಡಿದ್ದೆ. ಕ್ಷೇತ್ರ ದರ್ಶನಕ್ಕೆ ಬರುವವರಿಗೆ ಅಥವಾ ಕ್ಷೇತ್ರದ ಬಗ್ಗೆ ತಿಳಿದುಕೊಳ್ಳಲು ಆಸಕ್ತರಾದವರಿಗೆ ಕಾಟಾಚಾರದ ಊಹಾಪೋಹದ ಮಾಹಿತಿಯನ್ನು ನೀಡುವುದು ಬಹುಪಾಲು 'ದರ್ಶನ'ಗಳ ಹಣೆಬರಹ. ಆದರೆ 'ಶಿವ-ಶ್ರೀ ರಾಮಗಿರಿ ಕ್ಷೇತ್ರದರ್ಶನ' ನನಗೆ ಆಶ್ಚರ್ಯವೆನಿಸುವಂಥ, ಲೇಖಕರನ್ನು ಭಲೇ ಎನ್ನಬೇಕಾದಂಥ ಮಾಹಿತಿಯನ್ನೊಳಗೊಂಡಿತ್ತು. ಅವರು ಅನೇಕ ವರ್ಷಗಳ ಕಾಲ ಬೆಟ್ಟಕ್ಕೆ ಪಾದ ಸವೆಸಿದ್ದು, ಕಡಿದಾದ ಶಿಖರವನ್ನು ಏರಿಳಿದದ್ದು, ಬೆಟ್ಟದ ತಪ್ಪಲಿನಲ್ಲಿ ಮಳೆ ಚಳಿ ಬಿಸಿಲೆನ್ನದೆ ಬೆಳಗು ಸಂಜೆ ಎನ್ನದೆ ಅಲೆದದ್ದು, ಕರ್ನಾಟಕವನ್ನಾಳಿದ ಎಲ್ಲ ರಾಜರ ಪಾಳೆಯಗಾರರ ಸಾಮಂತರ ಇತಿಹಾಸಗಳನ್ನು ತಿರುವಿ ಅವರಿಗೂ ಈ ಬೆಟ್ಟಕ್ಕೂ ಅಲ್ಲಿರುವ ಕೋಟೆಗೂ ಇರುವ ಸಂಬಂಧವನ್ನು ಜಾಲಾಡಿದ್ದು, ಬೆಟ್ಟದ ಆಸುಪಾಸಿನ ಹಳ್ಳಿಗಳಲ್ಲಿರುವ ಹಿರಿಯ ತಲೆಗಳನ್ನು ಸಂದರ್ಶಿಸಿದ್ದು, ಜನಪದ ಸಾಹಿತ್ಯವನ್ನು ಆಲಿಸಿದ್ದು, ದಂತಕಥೆಗಳಲ್ಲಿ ಸಿಗಬಹುದಾದ ಹೊಳಹುಗಳಿಗಾಗಿ ಹುಡುಕಾಡಿದ್ದು, ಸಿಕ್ಕ ಸಾಮಗ್ರಿಯನ್ನೆಲ್ಲ ಅಚ್ಚುಕಟ್ಟಾಗಿ ಜೋಡಿಸಿ ಬಲ್ಲವರ ಜೊತೆಯಲ್ಲಿ ಚರ್ಚಿಸಿದ್ದು, ತಮಗೆ ನಿಖರವೆನಿಸಿದ ಮಾಹಿತಿಯನ್ನಷ್ಟೇ ಬಳಸಿಕೊಂಡು ಪುಸ್ತಕ ರೂಪಿಸಿದ್ದು-ಹೀಗೆ ಪುಸ್ತಕದುದ್ದಕ್ಕೂ ಒಬ್ಬ ನಿಜವಾದ ಸಂಶೋಧಕನ-ವಿದ್ವಾಂಸನ ಶಿಸ್ತು, ಒಳನೋಟ, ಅಧ್ಯಯನ, ಶ್ರಮ ಇವೆಲ್ಲ ಎದ್ದು ಕಾಣುತ್ತವೆ. ಲೇಖಕನನ್ನು ನೋಡದೆಯೇ ಇಂಥ ಪುಸ್ತಕ ಮತ್ತು ಅದನ್ನು ಬರೆದವರ ಬಗ್ಗೆ ಗೌರವ ಬೆಳೆಸಿಕೊಂಡಿದ್ದ ನಾನು ಎಂ. ಜಿ. ಎನ್. ಮಗಳು ಎನ್. ಮಾಲಿನಿ ಪ್ರಥಮ ಬಿಕಾಂಗೆ ನನ್ನ ವಿದ್ಯಾರ್ಥಿನಿಯಾಗಿ ಪ್ರವೇಶ ಪಡೆದಾಗ ಅವರನ್ನು ಭೇಟಿ ಮಾಡುವ, ಚರ್ಚಿಸುವ, ಹಬ್ಬ ಹರಿದಿನ ವಿಶೇಷ ಸಂದರ್ಭಗಳಲ್ಲಿ ಅವರ ಮನೆಗೆ ಹೋಗಿ ರುಚಿಕಟ್ಟಾದ ಭೋಜನ ಹೊಡೆಯುವ, ಒಟ್ಟಾಗಿ ಸಮಾರಂಭಗಳಲ್ಲಿ ಭಾಗ

ವಹಿಸುವ, ಒಡನಾಡುವ ಸಂದರ್ಭಗಳು ಪ್ರಾಪ್ತವಾಗಿ ನಮ್ಮ ಸ್ನೇಹವನ್ನು ನಿಕಟ ಗೊಳಿಸಲು ಕಾರಣವಾಯಿತು. ಬೆಟ್ಟಗುಡ್ಡಗಳಲ್ಲಿ ಅಲೆಯಬೇಕು, ಅಲ್ಲಿನ ಹೊಸ ಮಾಹಿತಿಯನ್ನು ಬೆಳಕಿಗೆ ತರಬೇಕು ಎನ್ನುವುದರಲ್ಲಿ ಆಸಕ್ತನಾಗಿದ್ದ ನಾನು ಎಂ. ಜಿ. ಎನ್. ಜೊತೆಯಲ್ಲಿ ರಾಮದೇವರ ಬೆಟ್ಟ, ರೇವಣಸಿದ್ಧೇಶ್ವರ ಬೆಟ್ಟ, ಜಲಸಿದ್ಧೇಶ್ವರ ಬೆಟ್ಟ, ಕೂಟಗಲ್ ಬೆಟ್ಟ ಮುಂತಾದ ಕಡೆಗಳಲ್ಲಿ ಅಲೆದಾಡಿದೆನಾದರೂ ಅವುಗಳನ್ನು ಕುರಿತ ಪೂರ್ಣ ಅಧ್ಯಯನಕ್ಕೆ ಅನಂತರ ಪ್ರಕಟಣೆಗೆ ಕೈ ಹಾಕುವ ಮುಂಚೆಯೇ ಎಂ. ಜಿ. ಎನ್. ಬೆಂಗಳೂರಿಗೆ ತಮ್ಮ ವಾಸ್ತವ್ಯವನ್ನು ಶಾಶ್ವತವಾಗಿ ಬದಲಾಯಿ ಸಿದ್ದರಿಂದ ಮತ್ತು ನನಗೆ ಮೂಲೂರಿಗೆ ವರ್ಗಾವಣೆಯಾದ್ದರಿಂದ ಆ ಸಾಹಸ, ಹುಡು ಕಾಟಗಳೆಲ್ಲ ಅಲ್ಲಿಗೇ ಮುಕ್ತಾಯ ಕಾಣುವಂತಾಯಿತು.

'ಶೆಟ್ಟಿ ಬಿಟ್ಟಲ್ಲೇ ಪಟ್ಟಣ' ಎನ್ನುವ ಮಾತನ್ನು ಜನಪದರು ಗಾದೆಯಾಗಿ ಬಳ ಕೆಗೆ ತರಲು ಎಂ. ಜಿ. ಎನ್. ಅಂಥವರ ನಡವಳಿಕೆಯೇ ಪ್ರೇರಣೆಯಾಗಿರಬಹುದು. ಯಾಕೆಂದರೆ ಎಂ. ಜಿ. ಎನ್. ಎಲ್ಲಿದ್ದರೂ ಸುಮ್ಮನಿರುವವರಲ್ಲ. ರಾಮನಗರದ ಬೆಟ್ಟಗುಡ್ಡಗಳಿಂದ ದೂರವಾದರೂ ಅವರು ಬೆಂಗಳೂರಿನಲ್ಲಿ ಎಡವಿದರೆ–ಮುಗ್ಗರಿಸಿ ದರೆ ಒಂದೊಂದರಂತೆ ಇರುವ ದೇವರ–ದೇವಸ್ಥಾನಗಳ ಸಮೀಪಕ್ಕೆ ಬಂದರು. ಬಹಿ ರಂಗ ಪ್ರದರ್ಶನದ ಮಟ್ಟಿಗೆ ಕಾಣಿಸಿಕೊಳ್ಳದಿದ್ದರೂ ದೈವಭಕ್ತಿ ದೈವಶ್ರದ್ಧೆಗಳಂತೂ ನಾಗರಾಜ್ ಅವರಲ್ಲಿವೆ. "ಉಳ್ಳವರು ಶಿವಾಲಯವ ಮಾಡುವರು" ಎಂದು ಪ್ರಾರಂಭವಾಗುವ ಬಸವಣ್ಣನ ವಚನದ ಭಾವನೆಗಳನ್ನು ತುಂಬಿಕೊಂಡು ದೇಹ ವನ್ನೇ ದೇಗುಲವಾಗಿಸಿಕೊಳ್ಳುವವರು ಕೆಲವರು ಮಾತ್ರ. ಬಹಳಷ್ಟು ಭಕ್ತರಿಗೆ ಸ್ಥಾವರ ಸ್ವರೂಪಿಯಾದ ದೇವಾಲಯವನ್ನೂ ದೇವರನ್ನೂ ಕಂಡಾಗಲೇ ಸಮಾಧಾನ; ತಮ್ಮ ಮನಸ್ಸಿನ ತೊಳಲಾಟ ಆತಂಕ ಬೇಡಿಕೆಗಳನ್ನು ಅಲ್ಲಿಗೆ ಹೋಗಿ ನಿವೇದಿಸಿ ಕೊಂಡಾಗಲೇ ತೃಪ್ತಿ. ಇಂಥ ಒಂದೊಂದು ದೇವಸ್ಥಾನ ನಿರ್ಮಾಣದ ಹಿನ್ನೆಲೆಯೂ ಒಂದೊಂದು ರೋಚಕ ಅನುಭವವನ್ನು ತೆರೆದಿಡುವಂಥ ಕಥೆಯನ್ನೊಳಗೊಂಡಿರುತ್ತದೆ. ವ್ಯಷ್ಟಿ ಸಮಷ್ಟಿಗಳನ್ನು ಮೀರಿ ನಿಂತಿರುವ ಶಕ್ತಿಯೊಂದಿದೆ ಎಂದು ಬಲವಾಗಿ ನಂಬಿ ರುವ ಎಂ. ಜಿ. ನಾಗರಾಜ್ ಅವರ ದೃಷ್ಟಿಯಲ್ಲಿ ದೇವರು–ದೇವಸ್ಥಾನಗಳಿಗಿರುವ ಅರ್ಥವೇನು ? ದೇಗುಲ ನಿರ್ಮಾಣಗಳ ದೃಷ್ಟಿಕೋನವನ್ನು ಅವರು ಹೇಗೆ ವಿಶದ ಪಡಿಸುತ್ತಾರೆ ? ಅಲ್ಲಿ ನಡೆಯುವ ವಿವಿಧ ಬಗೆಯ ಸೇವೆಗಳ ವಿವರಗಳೇನು ? ಎಂಬು ದನ್ನು ಅತ್ಯಂತ ಸರಳವಾಗಿ ಸೊಗಸಾಗಿ ಪರಿಚಯಿಸಿರುವುದನ್ನು ಅವರು ಫೆಬ್ರವರಿ ೧೯೯೦ರಲ್ಲಿ ಪ್ರಕಟಿಸಿದ 'ಶ್ರೀ ಗೌರೀಶಂಕರ ದರ್ಶನ' ಪುಸ್ತಕದಲ್ಲಿ ಗಮನಿಸ ಬಹುದಾಗಿದೆ. ಇವತ್ತು ಭಾರತೀಯ ಪರಿಸರದಲ್ಲಿ ದೇವರು–ಧರ್ಮಗಳನ್ನು ಪ್ರಶ್ನಾ ತೀತವಾಗಿ ಒಪ್ಪಿ ವಿಜೃಂಭಿಸುವ ಅಥವಾ ಪ್ರತಿಪಕ್ಷದ ಅಹವಾಲುಗಳನ್ನು ಕೇಳು ವುದಕ್ಕೇ ಸಿದ್ಧವಿಲ್ಲದೆ ನಿರಾಕರಿಸುವ ಎರಡು ಅತಿರೇಕದ ನೆಲೆಗಳಲ್ಲಿ ನರಳಿಸಲಾಗು ತ್ತದೆ. ವಿತಂಡವಾದಗಳನ್ನು ಬದಿಗಿಟ್ಟು ಎರಡೂ ಪಕ್ಷಗಳವರು ಮುಕ್ತ ಮನಸ್ಸಿನ

ಚರ್ಚೆಗಿಳಿಯುವುದರಿಂದ ಇವುಗಳಿಂದಾಗುತ್ತಿರುವ ದುರಂತಗಳನ್ನು ಸ್ವಲ್ಪಮಟ್ಟಿ ಗಾದರೂ ನಿವಾರಿಸುವುದು ಸಾಧ್ಯವಾಗಬಹುದೇನೋ ? ಈ ಆಲೋಚನೆಗೆ ಪೂರಕ ವಾದ ದಿಕ್ಕಿನಲ್ಲಿ ಕಡಿಮೆ ಪ್ರಮಾಣದ್ದಾದರೂ ಒಂದು ಸ್ತುತ್ಯ ಪ್ರಯತ್ನವಾಗಿ ಕಂಡು ಬರುವ ಪುಸ್ತಕ "ಗೌರೀಶಂಕರ ದರ್ಶನ". ಈ ಕೃತಿಯಲ್ಲಿ ಹರಡಿಕೊಂಡಿರುವ ಏಳು ಪ್ರಮುಖ ಅಧ್ಯಾಯಗಳಲ್ಲಿ 'ಗೌರೀಶಂಕರ' ಎನ್ನುವುದರ ಶಬ್ದಾರ್ಥ, ದೇವರ ತಾತ್ವಿಕ ಸ್ವರೂಪ, ಹಿನ್ನೆಲೆ, ದೇಗುಲ ನೆಲೆಯ ಇತಿಹಾಸ, ವಾಸ್ತುವಿನ್ಯಾಸ, ಶಿಲ್ಪ ನೆಲೆ, ಅಲ್ಲಿ ನೆಲೆಗೊಂಡಿರುವ ದೇವತೆಗಳು, ಮಹಾದ್ವಾರ ಗೋಪುರ-ವಿಮಾನ, ಶ್ರೀಚಕ್ರಗಳನ್ನು ಸಮೃದ್ಧ ವಿಷಯ-ಚರ್ಚೆಯ ಮೂಲಕ ಪರಿಚಯಿಸಿ ಎಂ. ಜಿ. ನಾಗರಾಜರೇ ರಚಿಸಿರುವ ಶ್ರೀ ಗೌರಿಶಂಕರ-ಮಾರಿಕಾಂಬಾ-ರಾಜರಾಜೇಶ್ವರಿ ಸುಪ್ರ ಭಾತವನ್ನು ಕೊಡಲಾಗಿದೆ. ಈ ಅಧ್ಯಾಯವನ್ನು ಅನುಸರಿಸಿಕೊಂಡು ಬಂದಿರುವ ಅನುಬಂಧಗಳು ದೇಗುಲ ನಿರ್ಮಾತೃಗಳ ಆತ್ಮ ನಿವೇದನೆ, ಗ್ರಾಮದೇವತೆ ಮಹೇಶ್ವರಮ್ಮ, ದೇವಾಲಯದ ವಿಶೇಷ ಪೂಜಾ ವಿವರದ ಫಲಕ, ದೇವಾಲಯ ಸ್ಥಾಪನೆಯ ಶಾಸನ, ಆ ಪರಿಸರದಲ್ಲಿರುವ ಮುಖ್ಯ ದೇವಾಲಯ ಸನ್ನಿಧಿಗಳು ಮುಂತಾದ ವಿವರಗಳನ್ನೊಳಗೊಂಡಿವೆ. ಭಕ್ತಾದಿಗಳಿಗೂ, ದೇವಾಲಯಗಳ ಬಗೆಗೆ ಆಸಕ್ತಿ ಹೊಂದಿರುವವರಿಗೂ, ಸಂಶೋಧಕರಿಗೂ ಪ್ರಿಯವಾಗುವಂತೆ-ಕುತೂ ಹಲಕಾರಿಯಾಗಿರುವಂತೆ ವಿಚಾರಗಳನ್ನು ನಿರೂಪಿಸಲಾಗಿದೆ. ಒಂದು ದೇವಾಲಯ ವನ್ನು ಕುರಿತಂತೆ ಶಿಸ್ತಿನಿಂದ ಕೂಡಿದ ಸಮಗ್ರ ಅಧ್ಯಯನಕ್ಕೆ 'ಗೌರೀಶಂಕರ ದರ್ಶನ' ಮಾದರಿಯಾಗಿದೆ.

ಕೊಡಗು ಜಿಲ್ಲೆಯ ಪೊನ್ನಂಪೇಟೆ ಸರ್ಕಾರಿ ಪದವಿಪೂರ್ವ ಕಾಲೇಜಿನಲ್ಲಿ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ನಡೆಸಿದ ಸುತ್ತಾಟದ ಫಲವಾಗಿ ಕೊಡಗನ್ನು ಕುರಿತ ಅನೇಕ ಸಂಶೋಧನ ಲೇಖನಗಳನ್ನು ಆ ಜಿಲ್ಲೆಯ ಪತ್ರಿಕೆ 'ಶಕ್ತಿ'ಯಲ್ಲಿ ಪ್ರಕಟಿಸಿದರು. ಕೊಡಗಿನ ಸಾಂಸ್ಕೃತಿಕ ಇತಿಹಾಸದ ಕನ್ನೆನೆಲವನ್ನು ಶ್ರಮಪೂರ್ಣವಾಗಿ ಉಳುಮೆ ಮಾಡಿ ಬಿತ್ತನೆ ನಡೆಸಿ ಫಲ ತೆಗೆಯುವ ಪ್ರಯತ್ನದಲ್ಲಿ ಯಶಸ್ವಿಯಾದರು. ಮುಂದೆ ಅವರು ಕೊಡಗನ್ನು ಬಿಟ್ಟರೂ ಕೊಡಗಿನ ಶ್ರೀಮಂತ ಸಂಸ್ಕೃತಿ, ರೋಚಕ ಇತಿಹಾಸ, ಸಂಶೋಧನೆಗಿರುವ ವಿಪುಲ ಅವಕಾಶದ ಆಕರ್ಷಣೆ ಯಿಂದ ಅವರು ಬಿಡಿಸಿಕೊಳ್ಳಲಾಗಲಿಲ್ಲ. ಕೊಡಗಿನ ಸಂಸ್ಕೃತಿ ಕುರಿತು ಅವರು ಕಂಡದ್ದನ್ನೆಲ್ಲ ಕೇಳಿದನ್ನೆಲ್ಲ ಬರೆದರು. ಬರೆಯುತ್ತ ಹೋದಂತೆ ಶೋಧನೆಯ ಅಳಕ್ಕಿಳಿದು ಅಪೂರ್ವ ವಿಚಾರಗಳನ್ನು ಹೆಕ್ಕತೊಡಗಿದರು. ಅವರಿಗೇ ಆಶ್ಚರ್ಯ ವಾಗುವಂತೆ ಕೊಡಗಿನ ಸಂಸ್ಕೃತಿ ಅವರನ್ನು ಆವರಿಸಿಕೊಂಡಿತು. ಇದರ ಪರಿಣಾಮ ವಾಗಿ ಕೊಡಗಿನ ಸಂಸ್ಕೃತಿಯ ಸಂಶೋಧನಾ ಮಾಲಿಕೆಯನ್ನೇ ಪ್ರಕಟಿಸಬೇಕೆನ್ನುವ ಯೋಜನೆ ರೂಪಿಸಿಕೊಂಡರು. ಈ ಮಾಲಿಕೆ ಅಲ್ಲಿನ ಶಾಸನ, ವೀರಗಲ್ಲು, ಇತಿಹಾಸ,

ಜಾನಪದ ಇತ್ಯಾದಿಗಳನ್ನೆಲ್ಲ ಒಳಗೊಂಡಿರಬೇಕೆಂದು ಅಂದಾಜು ಮಾಡಿಕೊಂಡರು. ಈ ಸಂಶೋಧನ ಮಾಲಿಕೆಯ ಪ್ರಥಮ ಕೃತಿಯೇ ಆಗಸ್ಟ್ ೧೯೬೮ರಲ್ಲಿ ಪ್ರಕಟವಾದ "ಕೊಡಗು ಜಿಲ್ಲೆಯ ಸುಗ್ಗಿಕಟ್ಟೆಗಳು". ಹಲವು ಜನಪದ ಕಥೆಗಳನ್ನು ತಮ್ಮೊಳಗೆ ಬೆಸೆದುಕೊಂಡಿರುವ ಸುಗ್ಗಿಕಟ್ಟೆಗಳು ಫಲವಂತಿಕೆ ಪಾವಿತ್ರ್ಯ ಸಮೃದ್ಧಿ ಸಂತೋಷಗಳ ಸಂಕೇತವಾಗಿರುವ ಬಗೆಯನ್ನು ನೂರು ಪುಟಗಳ ಈ ಪುಸ್ತಕದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಕೊಡಗಿನಾದ್ಯಂತ ಹರಡಿಕೊಂಡಿರುವ ಹಲವು ಸುಗ್ಗಿಕಟ್ಟೆಗಳ ಸ್ವರೂಪ ಮಹತ್ವ ಇತಿಹಾಸವನ್ನು ಪರಿಚಯಿಸಲಾಗಿದೆ. ಹತ್ತರಿಂದ ಹನ್ನೆರಡು ದಿನಗಳವರೆಗೆ ನಡೆಯುವ ವೈಶಿಷ್ಟ್ಯಪೂರ್ಣ ಆಚರಣೆಗಳನ್ನು ಉಲ್ಲೇಖಿಸಲಾಗಿದೆ. 'ಹೊನ್ನಾರು ಹಾಡು'ಗಳನ್ನು ಸಂಗ್ರಹಿಸಿ ಅವುಗಳ ಸವಿಯನ್ನುಣಿಸಲಾಗಿದೆ. ಸುಗ್ಗಿಕಟ್ಟೆ ಮತ್ತು ಸುಗ್ಗಿಹಬ್ಬದ ಆಚರಣೆಗೆ ಸಂಬಂಧಿಸಿದ ಇಪ್ಪತ್ತು ಚಿತ್ರಗಳು ಸುಗ್ಗಿಕಟ್ಟೆಗಳ ಸಮಗ್ರ ದರ್ಶನ ಮಾಡಿಸುವಲ್ಲಿ ಸಹಕಾರಿಯಾಗಿವೆ. ಎಂ. ಜಿ. ಎನ್. ಅವರ ವ್ಯಾಪಕ ಕ್ಷೇತ್ರಕಾರ್ಯ, ಅಧ್ಯಯನಾಸಕ್ತಿ, ದೂರದೃಷ್ಟಿ, ನಿರಂತರ ಪರಿಶ್ರಮ, ಸಂಶೋಧನೆಯ ಮೂಲಕ ಸತ್ಯದರ್ಶನ ಮಾಡಿಸಬೇಕೆನ್ನುವ ಪ್ರಾಮಾಣಿಕ ಹಟ ಇವುಗಳ ಪರಿಣಾಮವಾಗಿ ರೂಪುಗೊಂಡಿರುವ "ಕೊಡಗು ಜಿಲ್ಲೆಯ ಸುಗ್ಗಿಕಟ್ಟೆಗಳು" ಸಂಶೋಧಕರಿಗೂ ಆಸಕ್ತರಿಗೂ ಪ್ರಿಯವಾಗುವ ಮತ್ತು ಸಂಶೋಧನೆಗೆ ಹೊಸ ಹೊಳಹುಗಳನ್ನು–ತಿರುವುಗಳನ್ನು ಕೊಡುವ ಕೃತಿಯಾಗಿದೆ.

೧೯೬೯ರ ಜೂನ್ ತಿಂಗಳಲ್ಲಿ ಎಂ. ಜಿ. ಎನ್. ಅವರ ಮಗ ಎನ್. ದಿವಾಕರ್ ಮತ್ತು ಎಚ್. ಎಂ. ಸರ್ವಮಂಗಳಾ ಅವರ "ಮದುವೆಯ ಮಧುರ ನೆನಪಿಗೆ ಮತ್ತು ಆರತಿ–ಅಕ್ಷತೆಯ ಹಾರೈಕೆಗೆ ನುಡಿಬಾಗಿನ" ಎಂಬ ಹೆಸರಿನಲ್ಲಿ ಸಂಪಾದಿಸಿದ "ಮದುಮಕ್ಕಳಿಗೆ" ಒಂದು ವಿಶಿಷ್ಟ ಕೃತಿ. ದಾಂಪತ್ಯ ಜೀವನವನ್ನು ಆಯ್ಕೆ ಮಾಡಿಕೊಂಡ ಗಂಡು–ಹೆಣ್ಣುಗಳ ಪೂರ್ವೋತ್ತರ, ಸೃಷ್ಟಿಕಾರ್ಯ, ಸಂತಾನ, ಭವಿತವ್ಯದ ಎಚ್ಚರ ಮುಂತಾದವುಗಳ ಸ್ಥೂಲ ಪರಿಚಯ ಮಾಡಿಕೊಡುವ ಭಿನ್ನ ಭಿನ್ನ ಅಭಿಪ್ರಾಯಗಳನ್ನು ಮಂಡಿಸುವ, ಆಯಾ ಕ್ಷೇತ್ರದಲ್ಲಿ ಅಧಿಕೃತ ಅನುಭವ ಪಡೆದುಕೊಂಡವರಿಂದ ಬರೆಯಿಸಲಾದ ಲೇಖನಗಳ ಅಪೂರ್ವ ಸಂಗ್ರಹ. ಮದುವೆ : ಮಾನವೀಯತೆಯ ಸಂಕೇತ, ತಾಯಿ ಮತ್ತು ಮಗು, ಮದುವೆ ಮಕ್ಕಳು ಮತ್ತು ಕೆಲವು ಶಾಸನಗಳು, ಆಯುರ್ವೇದದ ದೃಷ್ಟಿಯಲ್ಲಿ ಮಾತೆ ಶಿಶುಪ್ರಸವ ಮತ್ತು ಎಚ್ಚರಿಕೆಗಳು, ಮದುಮಕ್ಕಳು ಮತ್ತು ದಾಂಪತ್ಯದ ಬದುಕು, ಜನಪದ ಸಾಹಿತ್ಯದಲ್ಲಿ ಮದುಮಕ್ಕಳು, ಅಮೆರಿಕಾದಲ್ಲಿ ತಾಯ್ತನ-ಒಂದು ಅನುಭವ, ಅಲೋಪತಿ ವೈದ್ಯದ ದೃಷ್ಟಿಯಲ್ಲಿ ವಿವಾಹ ಸಂಬಂಧ, ಸರಳ ವಿವಾಹ ಇತ್ಯಾದಿಯಾಗಿ ಉಪಯುಕ್ತ ಮಾಹಿತಿಗಳಿಂದ ಕೂಡಿದ ಲೇಖನಗಳಿರುವ ಈ ಪುಸ್ತಕದಲ್ಲಿ ಒಂದಷ್ಟು ಕವನ–ವಚನಗಳ ಹನಿಯನ್ನು ಉದುರಿಸಿರುವ ಎಂ. ಜಿ. ಎನ್. "ಗಂಡು–ಹೆಣ್ಣು, ಅವುಗಳ ಲೈಂಗಿಕ ಪಾತ್ರ" ಎಂಬ ಲೇಖನ

ವನ್ನು ಬರೆದಿದ್ದಾರೆ. ಸುತ್ತುವ-ಶೋಧನೆಗಳಲ್ಲಿ ಸದಾ ತೊಡಗಿಕೊಂಡು ಇಹ ಲೋಕದ ಪ್ರಜ್ಞಾನಲಯದಿಂದಲೇ ದೂರನಿಂತವರಂತೆ ಕಾಣಿಸುವ ನಾಗರಾಜ್ ಗಂಡು-ಹೆಣ್ಣಿನ ಲೈಂಗಿಕ ವ್ಯಾಪಾರವನ್ನು ಕುರಿತು ಎಷ್ಟೊಂದು ಆರೋಗ್ಯಪೂರ್ಣ ವಾಗಿ ಚಿಂತಿಸಬಲ್ಲರೆಂಬುದಕ್ಕೆ ಈ ಲೇಖನ ನಿದರ್ಶನವೊದಗಿಸುತ್ತದೆ. ಲೈಂಗಿಕ ಬದುಕಿನ ಅರ್ಥ-ಮಹತ್ವಗಳ ಪ್ರಜ್ಞೆಯಿಲ್ಲದ ಗಂಡು-ಹೆಣ್ಣುಗಳು ತಮ್ಮ ಜೀವನದಲ್ಲಿ ಎದುರುಗೊಳ್ಳುವ ಸೃಷ್ಟಿಮಾಡಿಕೊಳ್ಳುವ ಸಮಸ್ಯೆಗಳು, ಅದರಿಂದ ಅವರು ಅನುಭವಿಸುವ ಕೋಲಾಹಲಕಾರಿ ಕಷ್ಟಗಳು ಬಹುಶಃ ಈ ಲೇಖನ ಬರೆಯುವಂತೆ ಎಂ.ಜಿ.ಎನ್. ಅವರನ್ನು ಪ್ರಚೋದಿಸಿರಬಹುದು. ಗಂಡು-ಹೆಣ್ಣುಗಳ ಸ್ವಭಾವ ಮತ್ತು ಸ್ವಸ್ಥ ಲೈಂಗಿಕ ಜೀವನವನ್ನು ಕುರಿತು ವಿಶೇಷವಾಗಿ ಪ್ರಸ್ತಾಪಿಸುವ ಈ ಲೇಖನವನ್ನು ಪ್ರೇಮಕಾಮಗಳ ಲೋಕದಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತ ಅಪ್ರಬುದ್ಧ ಮುಗ್ಧತೆಯಿಂದ ಏನೋ ಮಾಡಲು ಹೋಗಿ ಏನೋ ಆಗಿ ತೊಳಲಾಡುವ ಮತ್ತು ದಾಂಪತ್ಯ ಜೀವನಕ್ಕೆ ಅಡಿಯಿರಿಸಲಿರುವ ಎಲ್ಲ ಹೆಣ್ಣು ಗಂಡುಗಳೂ ತಪ್ಪದೇ ಓದುವಂಥದ್ದಾಗಿದೆ.

ಸಂಶೋಧನೆ ಬಯಸುವ ಶಿಸ್ತಿನಿಂದ ಆ ಕ್ಷೇತ್ರಕ್ಕೆ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡಿರುವ ಎಂ. ಜಿ. ನಾಗರಾಜ್ ಇತ್ತೀಚಿನ ದಿನಗಳಲ್ಲಿ ಆ ಸಂಬಂಧ ಪಾದ ಚಿಂತನೆಗಳಲ್ಲಿ ಮುಳುಗಿಹೋಗಿರುವುದು ಅವರ ಒಡನಾಟದಲ್ಲಿರುವ ಎಲ್ಲರ ಗಮನಕ್ಕೂ ಬಂದಿರುವ ಸಂಗತಿ. ರಾಮನಗರದಲ್ಲಿದ್ದಾಗ ಕನ್ನಡ ಸಾಹಿತ್ಯ-ಸಂಸ್ಕೃತಿ ಸಂಘವನ್ನು ಚಾಲನೆಗೆ ತಂದು ಡಾ|| ಎಸ್. ಎಲ್. ತಿಮ್ಮಯ್ಯ, ಶಿವಾಜಿರಾವ್, ಶೇಷಗಿರಿ, ರವೀಂದ್ರ, ಶಾಂತಾಬಾಯಿಯರಂಥ ಉತ್ಸಾಹೀ ಕಾರ್ಯಕರ್ತರನ್ನು ಕಟ್ಟಿ ಕೊಂಡು ಸಾಹಿತ್ಯ-ಸಂಸ್ಕೃತಿ ಸಂಬಂಧವಾದ ಚಟುವಟಿಕೆಗಳ ದೃಷ್ಟಿಯಿಂದ ಬರಡಾಗಿದ್ದ ಆ ಭೂಮಿಯಲ್ಲಿ ಜನ ಬಯಸುವ-ಜನರನ್ನು ಚಿಂತನೆಗೆ ಹಚ್ಚುವ ಅತ್ಯುತ್ತಮ ಕಾರ್ಯಕ್ರಮಗಳನ್ನು ನಿಯೋಜಿಸಿದರು. ಕರ್ನಾಟಕ ಇತಿಹಾಸ ಅಕಾಡೆಮಿಯ ಪ್ರಧಾನ ಕಾರ್ಯದರ್ಶಿಯಾಗಿ ತಮ್ಮ ಕರ್ತೃತ್ವ ಶಕ್ತಿಯನ್ನು ಸಂಪೂರ್ಣವಾಗಿ ಧಾರೆ ಯೆರೆದು ಅಕಾಡೆಮಿ ಸರ್ವವ್ಯಾಪಿ ಮನ್ನಣೆ ಪಡೆದುಕೊಳ್ಳಲು ಮತ್ತು ಅದರ ಚಟುವಟಿಕೆಗಳ ಜಾಲ ವಿಸ್ತಾರವಾದ ನೆಲೆಗೆ ಹರಡಿಕೊಳ್ಳಲು ಕಾರಣರಾದವರು ಎಂ.ಜಿ. ನಾಗರಾಜ್. ಈಗ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿ ಸ್ಥಾನದ ಮುಳ್ಳಿನ ಕುರ್ಚಿಯ ಮೇಲೆ ಕುಳಿತಿರುವ ಅವರು ಈ ಮೊದಲು ದೂರದಲ್ಲಿ ನಿಂತು ಸಾಹಿತ್ಯ ಪರಿಷತ್ತು ಹೇಗೆ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕು, ಸಾಹಿತಿಗಳ- ಸಾಹಿತ್ಯಾಭಿಮಾನಿಗಳ ವಿಶ್ವಾಸಕ್ಕೆ ಪಾತ್ರವಾಗಬೇಕು, ಪರಿಷತ್ತಿನ ಸುಧಾರಣೆಯ ಕೆಲಸ ಯಾವ ಹಂತದಿಂದ ಪ್ರಾರಂಭವಾಗಿ ಎಲ್ಲಿಗೆ ಮುಗಿಯಬೇಕು ಎಂದೆಲ್ಲ ಕನಸು ಕಾಣುತ್ತಿದ್ದರೋ ಗೆಳೆಯರೊಡನೆ ಚರ್ಚಿಸುತ್ತಿದ್ದರೋ ಅವನ್ನೆಲ್ಲ ಬಡಿವಾರವಿಲ್ಲದೆಯೇ

ಹಲವು ಮಿತಿಗಳ ಇಕ್ಕಟ್ಟಿನಲ್ಲಿ ಕಾರ್ಯಾನುಷ್ಠಾನಗೊಳಿಸುವ ಮಹಾನ ಪ್ರಯತ್ನ ದಲ್ಲಿದ್ದಾರೆ. ಆ ಪ್ರಯತ್ನ ಎಷ್ಟರ ಮಟ್ಟಿಗೆ ಫಲಕಾರಿಯಾಗುತ್ತದೆಂಬುದು ಭವಿಷ್ಯಕ್ಕೆ ಬಿಟ್ಟದ್ದು.

"ಕರ್ಮಣ್ಯೇ ವಾಧಿಕಾರಸ್ತೇ...." ತತ್ವದಲ್ಲಿ ನಂಬಿಕೆಯನ್ನಿಟ್ಟು ತಮ್ಮ ಪಾಡಿಗೆ ತಮ್ಮ ಮನವೊಪ್ಪುವ ಕೆಲಸವನ್ನು ಮಾಡುತ್ತ ಹೋಗುವ ಎಂ. ಜಿ. ಎನ್. ನಮ್ಮ ನಡುವೆ ಬೆರಳಲ್ಲೆಣಿಸಬಹುದಾದಷ್ಟು ಸಂಖ್ಯೆಯಲ್ಲಿರುವ 'ಸಂಶೋಧಕ'ರಲ್ಲಿ, 'ವಿದ್ವಾಂಸ'ರಲ್ಲಿ ಬಬ್ಬರು. ನಮ್ಮ ಸರ್ಕಾರಕ್ಕೆ, ಸರ್ಕಾರವನ್ನು ಪ್ರತಿನಿಧಿಸುವ ಆಯ್ಕೆ ಸಮಿತಿ ಸದಸ್ಯರುಗಳಿಗೆ 'ಸಂಶೋಧನೆ'ಯ ನಿಜವಾದ ಅರ್ಥವೇನು ? ಅದರಲ್ಲಿ ತಮ್ಮನ್ನು ಪ್ರಾಮಾಣಿಕವಾಗಿ ತೊಡಗಿಸಿಕೊಂಡು ಎಲೆಮರೆಯ ಹೂವಂತೆ ಕೆಲಸ ಮಾಡುತ್ತಿರುವವರಾರು ? ಎಂಬ ವಿವೇಚನಾ ಜ್ಞಾನ ಇದ್ದಿದ್ದ ಪಕ್ಷದಲ್ಲಿ ಎಂ. ಜಿ. ನಾಗರಾಜರಿಗೂ ಅವರಂಥವರಿಗೂ ಸರ್ಕಾರದ ಪ್ರಶಸ್ತಿ, ಗೌರವ, ಸನ್ಮಾನಗಳು ಎಂದೋ ಲಭಿಸಬೇಕಿತ್ತು. ಈ ಕೊರಗು ಎಂ. ಜಿ. ಎನ್. ಅವರನ್ನು ಎಂದೂ ಬಾಧಿಸಿಲ್ಲವಾದರೂ ಅವರ ಕರ್ತವ್ಯ ಪಾರಾಯಣತೆಯನ್ನು–ಸಾಧನೆಯನ್ನು ನೋಡು ತ್ತಿರುವ ಅಭಿಮಾನಿಗಳನ್ನಂತೂ ಬಾಧಿಸುತ್ತಿದೆ. ನಾಗರಾಜರಂಥವರ ಅಮೂಲ್ಯ ಸೇವೆಯನ್ನು ಗುರುತಿಸಿ ಸರ್ಕಾರ ಕೊಡುವ ಪ್ರಶಸ್ತಿ ಅದರ ಮೌಲ್ಯವನ್ನು ಹೆಚ್ಚಿಸು ತ್ತದೆ ; ಆ ಮೂಲಕ ಸರ್ಕಾರವೇ ತನ್ನನ್ನು ಗೌರವಿಸಿಕೊಂಡಂತೆ ಆಗುತ್ತದೆ. ಇಂಥ ದಿನಗಳು ಎಂ. ಜಿ. ಎನ್. ಅವರ ಬದುಕಿನಲ್ಲಿ ಬೇಗ ಬರಲಿ, ಅವರ ಅಭಿಮಾನಿಗಳಿಗೆಲ್ಲ ಆದರಿಂದ ಸಂತೋಷವಾಗಲಿ, ಅರವತ್ತನ್ನು ದಾಟಿ ಉತ್ಸಾಹದ ಬುಗ್ಗೆಯಾಗಿ ಮುನ್ನಡೆಯುತ್ತಿರುವ ಎಂ. ಜಿ. ನಾಗರಾಜರಲ್ಲಿ ಹುದುಗಿರುವ ವಿದ್ವಾಂಸ ತನ್ನೆಲ್ಲ ಸಾಮರ್ಥ್ಯದೊಂದಿಗೆ ಪ್ರಕಟವಾಗಲಿ ಎಂದು ಮನಃಪೂರ್ವಕವಾಗಿ ಹಾರೈಸುತ್ತೇನೆ. ○



# ಲೇಖಕರ ವಿಳಾಸಗಳು

**ಡಾ|| ಬಾ. ರಾ. ಗೋಪಾಲ್**
ಇಲ 'ಜಾನಕೀ', ೪ನೇ ಮುಖ್ಯರಸ್ತೆ, ಸರಸ್ವತೀಪುರಂ
ಮೈಸೂರು ೫೭೦ ೦೦೯

**ಅಲ್ಲ ಚಿರಂಜೀವಿ**
೯೩೫, 'ಸಪ್ತಗಿರಿ', ಶ್ರೀನಗರ ಬಡಾವಣೆ, ಬನಶಂಕರಿ ೧ನೇ ಹಂತ
ಬೆಂಗಳೂರು-೫೬೦ ೦೫೦

**ಕೆ. ಬಿ. ಶಿವತಾರಕ್**
ಇತಿಹಾಸ ಉಪನ್ಯಾಸಕರು, ಎಸ್. ಎಂ. ಎಸ್. ಕಾಲೇಜು, ಬ್ರಹ್ಮಾವರ
ದ. ಕ. ಜಿಲ್ಲೆ-೫೭೬೨೧೩

**ಡಾ|| ಸೂರ್ಯನಾಥ ಕಾಮತ್**
ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಝೆಟಿಯರ್ ಇಲಾಖೆ, ೪ನೇ
ಮಹಡಿ, ಕಾವೇರಿ ಭವನ (ಜಲಮಂಡಳಿ ಕಟ್ಟಡ), ಬೆಂಗಳೂರು-೫೬೦ ೦೦೯

**ಪಿ. ವಿ. ಕೃಷ್ಣಮೂರ್ತಿ**
ಜಿ. ಬಿ. ಜೆ. ೫೧೦, ೧೭ನೇ ಅಡ್ಡರಸ್ತೆ, ಎಚ್. ಎ. ಎಲ್. ಕಾಲೋನಿ,
ಮಾರತ್‌ಹಳ್ಳಿ ಬೆಂಗಳೂರು-೫೬೦ ೦೩೭

**ಡಾ|| ಹೆಚ್. ಎಸ್. ಗೋಪಾಲರಾವ್**
'ಸ್ವಸ್ತಿ ಶ್ರೀಸ್ಕಂದ', ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು
ಗ್ರಾಮಾಂತರ ಜಿಲ್ಲೆ-೫೬೭೧೭೩

**ಆರ್. ವೆಂಕಟೇಶ ಮೂರ್ತಿ**
೭೫೩, ೪ನೇ ಮುಖ್ಯರಸ್ತೆ, ಕೆಂಪೇಗೌಡನಗರ,
ಬೆಂಗಳೂರು-೫೬೦ ೦೧೯

**ವಸಂತಲಕ್ಷ್ಮೀ ಕೆ.**
೧೬೪೩, ೭೧ನೇ ಮುಖ್ಯರಸ್ತೆ, ಬನಶಂಕರಿ ಮೊದಲನೇ ಹಂತ,
ಬೆಂಗಳೂರು-೫೬೦ ೦೫೦

ಡಾ|| ಎಚ್. ಆರ್. ರಘುನಾಥ ಭಟ್
ಪ್ರವಾಚಕರು, ಪ್ರಾಚೀನ ಭಾರತೀಯ ಇತಿಹಾಸನ ಮತ್ತು ಶಾಸನ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩

ಡಾ|| ಜಿ. ಎಸ್. ದೀಕ್ಷಿತ್
ಬಿ-೧ ಕೈಲಾಸ್ ಅಪಾರ್ಟ್‌ಮೆಂಟ್ಸ್, ೭ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ ಮಲ್ಲೇಶ್ವರಂ, ಬೆಂಗಳೂರು-೫೬೦ ೦೦೩

ಡಾ|| ಡಿ. ವಿ. ದೇವರಾಜ್
ನಿರ್ದೇಶಕರು, ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಅರಮನೆ ಆವರಣ, ಮೈಸೂರು-೫೭೦ ೦೦೧

ಸೀತಾರಾಮ ಜಾಗೀರ್‌ದಾರ್
೪೦೬/ಬಿ, 'ಕಲ್ಪ', ೩ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ, ಸರಸ್ವತೀಪುರಂ, ಮೈಸೂರು-೫೭೦ ೦೦೯

ಬಿ. ರಾಜಶೇಖರಪ್ಪ
ಪರವಾಗಿ ಶ್ರೀ ಟಿ. ಪುಟ್ಟಸ್ವಾಮಿ, ಪಿ. ಡಬ್ಲ್ಯು. ಡಿ. ಕಂಟ್ರಾಕ್ಟರ್, ಒಂದನೆಯ ಕ್ರಾಸ್, ಜೆ. ಸಿ. ಬಡಾವಣೆ, ಚಿತ್ರದುರ್ಗ-೫೭೭ ೫೦೧

ಎಸ್. ರಾಜೇಂದ್ರಪ್ಪ
ಸಂಪಾದಕರು, ಕರ್ನಾಟಕ ರಾಜ್ಯ ಗ್ಯಾಝೆಟಿಯರ್ ಇಲಾಖೆ, ೮ನೇ ಮಹಡಿ ಕಾವೇರಿಭವನ (ಜಲಮಂಡಳಿ ಕಟ್ಟಡ) ಬೆಂಗಳೂರು-೫೬೦ ೦೦೯

ಡಾ|| ಎಂ. ಎಸ್. ಕೃಷ್ಣಮೂರ್ತಿ
ಪ್ರವಾಚಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು-೫೭೦ ೦೦೬

ಡಾ|| ಎಂ. ವಿ. ಶ್ರೀನಿವಾಸ್
ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಮಾನಸಗಂಗೋತ್ರಿ, ಮೈಸೂರು-೫೭೦ ೦೦೬

ಡಾ|| ಶ್ರೀನಿವಾಸ ಪಾಡಿಗಾರ್
ಪ್ರವಾಚಕರು, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩

ಕ್ಯಾತನಹಳ್ಳಿ ರಾಮಣ್ಣ
ಜಾನಪದ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-೫೭೦ ೦೦೬

**ಡಾ|| ಕೃಷ್ಣಮೂರ್ತಿ ಹನೂರು**

೫೨, ಜಿ. ಬ್ಲಾಕ್, ರಾಮಕೃಷ್ಣನಗರ, ಮೈಸೂರು-೫೭೦ ೦೨೩

**ಡಾ|| ಎ. ಜಿ. ಈಶ್ವರಪ್ಪ**

ಡಿ. ಆರ್. ಎಂ. ವಿಜ್ಞಾನ ಕಾಲೇಜು, ದಾವಣಗೆರೆ-೫೭೭ ೦೦೪

**ಎಂ. ಎನ್. ಪ್ರಭಾಕರ್**

೨೦೫, ೭ನೇ ಅಡ್ಡರಸ್ತೆ, ಮೈಸೂರು ಬ್ಯಾಂಕ್ ಕಾಲೋನಿ, ಬನಶಂಕರಿ
ಒಂದನೇ ಹಂತ, ಬೆಂಗಳೂರು-೫೬೦ ೦೫೦

**ಕೂ. ಸ. ಅಪರ್ಣ**

೧೬೪೩, ೨೧ನೇ ಮುಖ್ಯರಸ್ತೆ, ಬನಶಂಕರಿ ಮೊದಲನೇ ಹಂತ,
ಬೆಂಗಳೂರು-೫೬೦ ೦೫೦

**ಡಾ|| ದೇವರಕೊಂಡಾರೆಡ್ಡಿ**

ಅನ್ವೇಷಕರು, ಕರ್ನಾಟಕ ರಾಜ್ಯ ಗ್ಯಾಝೆಟಿಯರ್ ಇಲಾಖೆ, ೮ನೇ ಮಹಡಿ,
ಕಾವೇರಿಭವನ (ಜಲಮಂಡಳಿ ಕಟ್ಟಡ), ಬೆಂಗಳೂರು-೫೬೦ ೦೦೯

**ಅ. ಲ. ನರಸಿಂಹನ್**

ಅನ್ವೇಷಕರು, ಕರ್ನಾಟಕ ರಾಜ್ಯ ಗ್ಯಾಝೆಟಿಯರ್ ಇಲಾಖೆ, ೮ನೇ ಮಹಡಿ
ಕಾವೇರಿಭವನ (ಜಲಮಂಡಳಿ ಕಟ್ಟಡ), ಬೆಂಗಳೂರು-೫೬೦ ೦೦೯

**ಡಾ|| ರು. ಮ. ಷಡಕ್ಷರಯ್ಯ**

ನಿರ್ದೇಶಕರು, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ-೫೮೦ ೦೦೩

**ಲಕ್ಷ್ಮಣ್ ತೆಲಗಾವಿ**

ರೀಡರ್, ಇತಿಹಾಸ ವಿಭಾಗ, ಸಮಾಜ ವಿಜ್ಞಾನಗಳ ನಿಕಾಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩೨೧೧

**ವೇಣುಗೋಪಾಲ ಸೊರಬ**

೨೬, ೨ನೇ ಮೆಯ್ನ್, ೧ನೇ ಬ್ಲಾಕ್, ಬನಶಂಕರಿ ೩ನೇ ಹಂತ, ೩ನೇ ಘಟ್ಟ
ಬೆಂಗಳೂರು-೫೬೦ ೦೮೫

**ಡಾ|| ನೀ. ಕೃ. ರಾಮಶೇಷನ್**

೧೪, ಬೀಮಾ ಜ್ಯೋತಿ ಹೌಸಿಂಗ್ ಕೋ ಆಪರೇಟಿವ್ ಸೊಸೈಟಿ,
ಎಲ್. ಐ. ಸಿ. ಕಾಲೋನಿ ವೆಸ್ಟ್ ಆಫ್ ಕಾರ್ಡ್‌ರೋಡ್,
ಬೆಂಗಳೂರು-೫೬೦ ೦೮೬

**ಸುಲೋಚನಾ ನಾಗರಾಜ್**

೨೯ (ಮಹಡಿ), ೨ನೇ ಕ್ರಾಸ್, ಶ್ರೀರಾಮನಗರ, ಮಹಾಲಕ್ಷ್ಮೀಪುರಂ,
ಬೆಂಗಳೂರು-೫೬೦ ೦೮೬

**ಜಿ. ಯದುಮಣಿ**

ಕೊಡಗಿನ ‘ಶಕ್ತಿ’ ಪತ್ರಿಕೆಯ ಸಂಪಾದಕರಾಗಿದ್ದ ಶ್ರೀಯುತರು ಈಗ ದಿವಂಗತರಾಗಿದ್ದಾರೆ.

**ಬೈರಮಂಗಲ ರಾಮೇಗೌಡ**

೧೩೨೫, ೪ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ, ಶ್ರೀನಿವಾಸನಗರ, ಬನಶಂಕರಿ ೧ನೇ ಹಂತ, ೨ನೇ ಘಟ್ಟ, ಬೆಂಗಳೂರು-೫೬೦ ೦೫೦

○




## ಅಭಿನಂದಿತ ಶ್ರೀ ಎಂ. ಜಿ. ನಾಗರಾಜ್ ಅವರ ಬದುಕಿನ ಸ್ಥೂಲ ಪರಿಚಯ

ಜನನ : ೧೦-೮-೧೯೩೦, ಬೆಂಗಳೂರು

ತಂದೆ : ಶ್ರೀ ಗಂಗಾಧರಯ್ಯ, ತಾಯಿ : ಶ್ರೀಮತಿ ಗೌರಮ್ಮ

ವಿದ್ಯಾಭ್ಯಾಸ : ಎಂ.ಎಸ್‌ಸಿ., ಎಂ.ಎಡ್., ಎಂ.ಎ., ಶಾಸನಶಾಸ್ತ್ರ ಪ್ರೌಢಪರೀಕ್ಷೆ (ಕ.ಸಾ.ಪ)

ವೃತ್ತಿ : ಪ್ರೌಢಶಾಲಾ ಗಣಿತ ಶಿಕ್ಷಕರಾಗಿ ಆರಂಭ (ಹೆಚ್ಚಿನ ಪಾಲು ರಾಮನಗರ ಮತ್ತು ಪೊನ್ನಂಪೇಟೆಗಳಲ್ಲಿ ಸೇವೆ) ಜೂನಿಯರ್ ಕಾಲೇಜಿನ ಪ್ರಾಂಶುಪಾಲರಾಗಿ ನಿವೃತ್ತಿ (ತ್ಯಾಮಗೊಂಡಲು ಜೂನಿಯರ್ ಕಾಲೇಜಿನಲ್ಲಿದ್ದಾಗ)

ಆಸಕ್ತಿ : ಸಾಹಿತ್ಯರಚನೆ, ಸಂಶೋಧನೆ, ಸಂಗೀತ, ನಾಟಕ, ಜಾನಪದ ಇತ್ಯಾದಿ

ಚಟುವಟಿಕೆಗಳು (ಈ ಹಿಂದೆ) : ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿ
ಕರ್ನಾಟಕ ಇತಿಹಾಸ ಅಕಾಡೆಮಿಯ ಪ್ರಧಾನ ಕಾರ್ಯದರ್ಶಿ
ಅನೇಕ ಕನ್ನಡಪರ ಸಂಘ-ಸಂಸ್ಥೆಗಳಲ್ಲಿ ವಿವಿಧ ಹುದ್ದೆಗಳು

ಈಗ : ಕರ್ನಾಟಕ ಇತಿಹಾಸ ಅಕಾಡೆಮಿಯ ಉಪಾಧ್ಯಕ್ಷರಲ್ಲೊಬ್ಬರು ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಲ್ಲೊಬ್ಬರು. ನಿಡುಮಾಮಿಡಿ ಸಂಸ್ಥಾನದ 'ಮಾಮಿಡಿ' ಪತ್ರಿಕೆಯ ಸಂಪಾದಕತ್ವ

ಪ್ರಕಟಿತ ಕೃತಿಗಳು : ಅಂಬಾರಿ (ಸಂಪಾದನೆ)
ವೀರಗಲ್ಲು ಶಿಲ್ಪಗಳು
ಕೊಡಗು ಜಿಲ್ಲೆಯ ಸುಗ್ಗಿ ಕಟ್ಟೆಗಳು
ಶ್ರೀ ಗೌರೀಶಂಕರ ದರ್ಶನ (ಸಂಪಾದನೆ)
ಶಿವ-ಶ್ರೀರಾಮಗಿರಿ ಕ್ಷೇತ್ರ ದರ್ಶನ ( „ )
ಮದುಮಕ್ಕಳಿಗೆ ( „ )
ಮತ್ತಿನ್ನೂ ಅನೇಕ ಸಂಶೋಧನ ಲೇಖನಗಳು

ಕನ್ನಡ ಸಾಹಿತ್ಯ ಮತ್ತು ಸಂಶೋಧನಾ ವಲಯದಲ್ಲಿ ಶ್ರೀ ಎಂ.ಜಿ. ನಾಗರಾಜ್ ಸುಪರಿಚಿತರು. ದೀರ್ಘ ಕಾಲದ ಅಧ್ಯಾಪನ ವೃತ್ತಿಯ ನಡುವೆಯೂ ನಿಷ್ಠಾವಂತ ವಿದ್ಯಾರ್ಥಿಯಂತೆಯೇ ಸಾಹಿತ್ಯ ಮತ್ತು ಸಂಶೋಧನೆಗಳ ಬೆನ್ನುಹತ್ತಿದ ಶ್ರೀ ಎಂ. ಜಿ. ನಾಗರಾಜ್ ಅವರು ಕಿರಿಯ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲರಾಗಿ ವೃತ್ತಿ ಜೀವನದಿಂದ ನಿವೃತ್ತರಾಗಿದ್ದರೂ, ಸಾಹಿತಿಯಾಗಿ ಮತ್ತು ಸಂಶೋಧಕರಾಗಿ ಈಗ ಮೊದಲಿಗಿಂತ ಹೆಚ್ಚು ಕ್ರಿಯಾಶೀಲರಾಗಿದ್ದಾರೆ. "ಮಾಮಿಡಿ" ನಿಯತಕಾಲಿಕದ ಗೌರವ ಸಂಪಾದಕರೂ ಆಗಿದ್ದಾರೆ.

ಈಗ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಲ್ಲೊಬ್ಬರಾಗಿ ಮತ್ತು ಕರ್ನಾಟಕ ಇತಿಹಾಸ ಅಕಾಡೆಮಿಯ ಉಪಾಧ್ಯಕ್ಷರಲ್ಲೊಬ್ಬರಾಗಿ ಸಾರ್ಥಕ ಸೇವೆ ಸಲ್ಲಿಸುತ್ತಿರುವ ಶ್ರೀ ಎಂ. ಜಿ. ನಾಗರಾಜ್ ಅವರ ಮಿತ್ರವೃಂದ ದೊಡ್ಡದು, ಅಂತೆಯೇ ಅವರ ಶಿಷ್ಯ ಬಳಗ ಕೂಡಾ.

ಹಲವಾರು ಹೊಸ ಶಾಸನಗಳನ್ನು ಪ್ರಕಟಿಸಿ, ಸಂಶೋಧನ ಲೇಖನಗಳನ್ನು ರಚಿಸಿ,. ಕೆಲವು ಉತ್ತಮ ಕೃತಿಗಳನ್ನು ಕನ್ನಡಿಗರಿಗೆ ನೀಡಿರುವ ಶ್ರೀ ನಾಗರಾಜ್ ಅವರು ಕೊಡಗು ಜಿಲ್ಲೆ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳ ಬಗೆಗೆ ವಿಶೇಷ ಅಧ್ಯಯನ ಮಾಡಿದ್ದಾರೆ. ಅರವತ್ತು ದಾಟಿದ ನಂತರವೂ ಹರೆಯದ ಹುರುಪಿನಿಂದ ಸಾಹಿತ್ಯ ಮತ್ತು ಸಂಶೋಧನಾ ಕ್ಷೇತ್ರದಲ್ಲಿ ಶ್ರೀ ಎಂ.ಜಿ. ನಾಗರಾಜ್ ಕಾರ್ಯಸಾಧನೆ ಮಾಡುತ್ತಿದ್ದಾರೆ.